

**MANA MANTHANA :** By **Dr. M. Sivaram.** A Book on Psychiatry in Kannada with illustrative case records; Published by **Manu Baligar**, Director, Department of Kannada and Culture, Kannada Bhavana, J.C.Road, Bengaluru - 560 002.



ಮುದ್ರಿತ ವರ್ಷ : ೨೦೧೧

ಪ್ರತಿಗಳು : ೧೦೦೦

ಪುಟಗಳು : xxii + ೪೪೯

ಬೆಲೆ : ರೂ. ೧೦೦/–

ರಕ್ಷಾಪುಟ ವಿನ್ಯಾಸ : **ಕೆ. ಚಂದ್ರನಾಥ ಆಚಾರ್ಯ**

ಮುದ್ರಕರು :

**ಮೆ॥ ಮಯೂರ ಪ್ರಿಂಟ್ ಆ್ಯಡ್ಸ್**

ನಂ. ೬೯, ಸುಬೇದಾರ್ ಛತ್ರಂ ರೋಡ್

ಬೆಂಗಳೂರು – ೫೬೦ ೦೨೦ ದೂ : ೨೩೩೪೨೭೨೪

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು


ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು ೫೬೦ ೦೦೧

ಸಿಎಂ/ಪಿಎಸ್/೨೬/೧೧

# ಶುಭ ಸಂದೇಶ

ವಿಶ್ವ ಕನ್ನಡ ಸಮ್ಮೇಳನದ ಸಂಭ್ರಮಾಚರಣೆಯ ಸಂದರ್ಭದಲ್ಲಿ ಕನ್ನಡ ನಾಡು ಏಕೀಕರಣಗೊಂಡು ೫೫ನೇ ವರ್ಷಕ್ಕೆ ಹೆಜ್ಜೆಯನ್ನಿಟ್ಟಿದೆ. ಈ ಸಂದರ್ಭವನ್ನು ರಚನಾತ್ಮಕವಾಗಿ ದಾಖಲಿಸಿ ಸ್ಮರಣೀಯಗೊಳಿಸಬೇಕೆಂಬುದು ಸರ್ಕಾರದ ಮಹದಾಶಯ. ಅದಕ್ಕಾಗಿ ಬೆಳಗಾವಿಯಲ್ಲಿ **"ವಿಶ್ವ ಕನ್ನಡ ಸಮ್ಮೇಳನ"** ವನ್ನು ಇದೇ ಮಾರ್ಚ್ ತಿಂಗಳಿನಲ್ಲಿ ಆಯೋಜಿಸಲಾಗಿದೆ. ಇದನ್ನು ಅತ್ಯಂತ ಅರ್ಥಪೂರ್ಣವಾಗಿ ಆಚರಿಸುವುದು ಕರ್ನಾಟಕ ಸರ್ಕಾರದ ಆಶಯವಾಗಿದೆ. ಇದರ ಅಂಗವಾಗಿ ನಾಡಿನ ವಿವಿಧ ಕ್ಷೇತ್ರಗಳಲ್ಲಾಗಿರುವ ಪ್ರಗತಿಯ ಆತ್ಮಾವಲೋಕನದ ಜೊತೆಗೆ ಕನ್ನಡ ಸಾಹಿತ್ಯದ ಸೃಜನಶೀಲ ಮತ್ತು ಸೃಜನೇತರ ಪ್ರಕಾರಗಳ ೧೦೦ ಕೃತಿಗಳನ್ನು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಪ್ರಕಟಿಸಲಾಗುತ್ತಿದೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಯಲ್ಲಿ ಸಾಹಿತ್ಯಾಸಕ್ತರಿಗೆ ಒದಗಿಸುವ ಹಂಬಲ ನಮ್ಮದು.

ಈ ಸಾಹಿತ್ಯ ಮಾಲಿಕೆಯಲ್ಲಿನ ಕೃತಿರತ್ನಗಳನ್ನು ಕನ್ನಡಿಗರು ಸಹೃದಯತೆಯಿಂದ ಸ್ವಾಗತಿಸುವ ಮೂಲಕ ಇವುಗಳ ಪ್ರಯೋಜನವನ್ನು ಪಡೆದುಕೊಂಡರೆ ಸರ್ಕಾರದ ಈ ಯೋಜನೆ ಸಾರ್ಥಕವಾಗುತ್ತದೆ ಎಂದು ಭಾವಿಸುತ್ತೇನೆ.

ದಿನಾಂಕ ೨೪.೦೧.೨೦೧೧

**(ಬಿ.ಎಸ್. ಯಡಿಯೂರಪ್ಪ)**


ಕರ್ನಾಟಕ ಸರ್ಕಾರ

**ಗೋವಿಂದ ಎಂ. ಕಾರಜೋಳ**
ಕನ್ನಡ ಮತ್ತು ಸಂಸ್ಕೃತಿ,
ಸಣ್ಣ ನೀರಾವರಿ ಹಾಗೂ ಜವಳಿ ಸಚಿವರು

ವಿಧಾನಸೌಧ
ಬೆಂಗಳೂರು – ೦೧

# ಚೆನ್ನುಡಿ

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಸುಮಾರು ೧೦೦ ಕನ್ನಡದ ಮೇರುಕೃತಿಗಳನ್ನು ಮರುಮುದ್ರಿಸಲು ಉದ್ದೇಶಿಸಿರುತ್ತದೆ.

ಈ ಯೋಜನೆಯಡಿ ಕನ್ನಡ ಸಾಹಿತ್ಯದ ಬೇರೆ ಬೇರೆ ಕಾಲಘಟ್ಟಗಳಲ್ಲಿ ರಚನೆಗೊಂಡ ಕಥೆ, ಕಾದಂಬರಿ, ವಿಚಾರ ಸಾಹಿತ್ಯ, ಪ್ರಬಂಧ, ವಿಮರ್ಶೆ, ನಾಟಕ, ಕವನ ಸಂಕಲನ– ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳ ಕೆಲವು ಪ್ರಾತಿನಿಧಿಕ ಕೃತಿಗಳನ್ನು ಪ್ರಕಟಿಸಲಾಗುತ್ತಿದೆ. ಈ ಪ್ರಾತಿನಿಧಿಕ ಕೃತಿಗಳನ್ನು ಸರ್ಕಾರದಿಂದ ರಚಿತವಾದ ಆಯ್ಕೆ ಸಮಿತಿಯು ಮುದ್ರಣಕ್ಕೆ ಆಯ್ಕೆ ಮಾಡಿರುತ್ತದೆ. ಈ ಕೃತಿಗಳನ್ನು ಮುದ್ರಣಕ್ಕೆ ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಎಲ್ಲಾ ವಿದ್ವಾಂಸರಿಗೂ ನನ್ನ ಧನ್ಯವಾದಗಳು. ಈ ಮಹತ್ವದ ಕೃತಿಗಳನ್ನು ಸಹೃದಯ ಕನ್ನಡಿಗರಿಗೆ ಸುಲಭ ಬೆಲೆಯಲ್ಲಿ ತಲುಪಿಸಬೇಕೆಂಬುದು ನಮ್ಮ ಹೆಗ್ಗುರಿಯಾಗಿರುತ್ತದೆ. ಕನ್ನಡ ಸಾಹಿತ್ಯದ ಮೈಲಿಗಲ್ಲುಗಳಾಗಿರುವ ಈ ಪುಸ್ತಕಗಳು ಭಾವಿ ಪೀಳಿಗೆಯವರಿಗೆ ದಾರಿದೀಪಗಳಾಗಿವೆ. ಈ ಕೃತಿಗಳ ಪ್ರಯೋಜನವನ್ನು ಕನ್ನಡ ಜನತೆ ಹಾಗೂ ವಿದ್ಯಾರ್ಥಿಗಳು ಪಡೆದರೆ ನಮ್ಮ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

ದಿನಾಂಕ ೧೮.೦೧.೨೦೧೧

**(ಗೋವಿಂದ ಎಂ. ಕಾರಜೋಳ)**



# ಅಧ್ಯಕ್ಷರ ಮಾತು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡದ ಮೇರುಕೃತಿಗಳನ್ನು ಪುನರ್‌ಮುದ್ರಣ ಮಾಡಲು ಒಂದು ಯೋಜನೆಯನ್ನು ಕೈಗೊಂಡಿತು. ಕೃತಿಗಳ ಆಯ್ಕೆಗಾಗಿ ಸರ್ಕಾರವು ಒಂದು ಸಮಿತಿಯನ್ನು ರಚಿಸಿತು. ಈ ಮಹತ್ವದ ಯೋಜನೆಯ ಸಮಿತಿಯ ಅಧ್ಯಕ್ಷನಾಗಿ ಕಾರ್ಯನಿರ್ವಹಿಸುವ ಸುಯೋಗ ನನ್ನದಾಯಿತು.

ಈ ಯೋಜನೆಯ ಮಹತ್ವವನ್ನು ನಾನು ವಿವರಿಸುವ ಅಗತ್ಯವಿಲ್ಲ. ಕನ್ನಡದ ಶ್ರೇಷ್ಠ ಕೃತಿಗಳನ್ನು ಸುಲಭ ಬೆಲೆಗೆ ಕನ್ನಡಿಗರ ಕೈಗಳಲ್ಲಿರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹಲವು ಯೋಜನೆಗಳನ್ನು ಕೈಗೊಂಡಿರುವುದಕ್ಕಾಗಿ ಸರ್ಕಾರವನ್ನೂ ಇಲಾಖೆಯನ್ನೂ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಕನ್ನಡ ಸಂಸ್ಕೃತಿಗೆ ಈ ಯೋಜನೆಗಳು ಮಹತ್ವದ ಕೊಡುಗೆಯನ್ನು ನೀಡುತ್ತವೆ.

ಕನ್ನಡದ ಮೇರುಕೃತಿಗಳನ್ನು ಆರಿಸುವುದು ಸುಲಭದ ಕೆಲಸವಲ್ಲ. ಇಂತಹ ಆಯ್ಕೆಯಲ್ಲಿ ಬೇರೆ ಬೇರೆ ಅಭಿಪ್ರಾಯಗಳಿಗೆ ಸಾಧಾರವಾಗಿಯೇ ಅವಕಾಶವಿರುತ್ತದೆ. ಕನ್ನಡ ನಾಡಿನ ಶ್ರೇಷ್ಠ ಸಾಹಿತಿಗಳು ಈ ಸಮಿತಿಯ ಸದಸ್ಯರಾಗಿದ್ದದ್ದು ಸುದೈವದ ಸಂಗತಿ. ಕೃತಿಗಳನ್ನು ಚರ್ಚಿಸಿ ಮಹತ್ವದ ನಿರ್ಧಾರಕ್ಕೆ ಬಂದ ಸಮಿತಿಯು ಕಷ್ಟಸಾಧ್ಯವಾದ ಕಾರ್ಯವನ್ನು ಸಾಧಿಸಿದೆ. ಇದಕ್ಕಾಗಿ ನಾನು ಸಮಿತಿಯ ಎಲ್ಲ ಸದಸ್ಯರಿಗೂ ಕೃತಜ್ಞನಾಗಿದ್ದೇನೆ.

ಈ ಕಾರ್ಯದ ನಿರ್ವಹಣೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರು ನೆರವಾಗಿದ್ದಾರೆ. ಅವರ ಮತ್ತು ಅವರ ಸಿಬ್ಬಂದಿಯವರ ಅಮೂಲ್ಯ ಸಹಕಾರಕ್ಕೆ ನಾನು ಕೃತಜ್ಞ.

ಕನ್ನಡ ನಾಡಿನ ಮನೆಮನೆಗಳಲ್ಲಿ ಸಾಹಿತ್ಯದ ಮಂಗಳ ದೀಪದ ಬೆಳಕನ್ನು ಹರಡುವ ಈ ಯೋಜನೆಯ ಪೂರ್ಣಪ್ರಯೋಜನವನ್ನು ಕನ್ನಡಿಗರು ಪಡೆದುಕೊಳ್ಳಲಿ ಎಂದು ಹಾರೈಸುತ್ತೇನೆ.

ಸಿರಿಗನ್ನಡಂ ಗೆಲ್ಗೆ!

**ಎಲ್.ಎಸ್. ಶೇಷಗಿರಿ ರಾವ್**
ಅಧ್ಯಕ್ಷ
ಕನ್ನಡದ ಮೇರುಕೃತಿಗಳ ಆಯ್ಕೆ ಸಮಿತಿ

ದಿನಾಂಕ ೧೬.೧೨.೨೦೧೦

# ಹೊನ್ನುಡಿ

ನಾಡಿನ ಭಾಷೆ, ಸಂಸ್ಕೃತಿ ಮತ್ತು ಜನಜೀವನದ ಪರಿಮಾಣವನ್ನು ಅಳೆಯುವುದರಲ್ಲಿ ಅಲ್ಲಿನ ಸಾಹಿತ್ಯದ ಕೃತಿಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಸುಮಾರು ಎರಡು ಸಾವಿರದ ಐದನೂರು ವರ್ಷಗಳಿಗೂ ದೀರ್ಘವಾದ ಐತಿಹಾಸಿಕ ಪರಂಪರೆ ಚೆಲುವ ಕನ್ನಡ ನಾಡಿನದು. ಹಾಗೆಯೇ ಅದರ ಸಾಹಿತ್ಯ ಕೂಡ ಪಂಪ, ಕುಮಾರವ್ಯಾಸ, ಶರಣರು, ದಾಸರು ಮೊದಲಾದವರಿಂದ ಸಮೃದ್ಧವಾಗಿ ಬೆಳೆದಿದೆ. ಅದರ ಸಮೃದ್ಧತೆಗೆ ಏಳು ಜ್ಞಾನಪೀಠಗಳ ಗರಿಮೆಯೇ ಸಾಕ್ಷಿ.

ಕರ್ನಾಟಕವು ಏಕೀಕರಣಗೊಂಡು ೫೫ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ಈ ಸಂದರ್ಭದಲ್ಲಿ ಬೆಳಗಾವಿಯಲ್ಲಿ ವಿಶ್ವ ಕನ್ನಡ ಸಮ್ಮೇಳನವನ್ನು ಆಚರಿಸುತ್ತಿರುವುದು ಒಂದು ಐತಿಹಾಸಿಕವೂ ಹಾಗೂ ಮಹತ್ವಪೂರ್ಣವೂ ಆದ ವಿಶಿಷ್ಟ ಘಟನೆ.

ವಿಶ್ವ ಕನ್ನಡ ಸಮ್ಮೇಳನದ ಸಂಭ್ರಮಾಚರಣೆಯ ಅಂಗವಾಗಿ ಹಲವಾರು ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ. ಕನ್ನಡ ನಾಡಿನ ವಿವಿಧ ಕ್ಷೇತ್ರಗಳಲ್ಲಾಗಿರುವ ಪ್ರಗತಿಯ ಆತ್ಮಾವಲೋಕನದ ಜೊತೆಗೆ ಕನ್ನಡ ಸಾಹಿತ್ಯದ ಸೃಜನಶೀಲ ಹಾಗೂ ಸೃಜನೇತರ ಪ್ರಕಾರದ ೧೦೧ ಕೃತಿಗಳನ್ನು, ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಪ್ರಕಟಿಸಲಾಗುತ್ತಿದೆ.

ಈ ವಿಶಿಷ್ಟ ಕೃತಿಗಳನ್ನು ಆಯ್ಕೆ ಮಾಡಿದ ಆಯ್ಕೆ ಸಮಿತಿ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ನನ್ನ ವಂದನೆಗಳು. ಈ ಸಾಹಿತ್ಯ ಮಾಲಿಕೆಯನ್ನು ಸಾಹಿತ್ಯಾಭಿಮಾನಿಗಳು ಸ್ವಾಗತಿಸುವ ಮೂಲಕ ಈ ಕೃತಿಗಳ ಸದುಪಯೋಗ ಪಡೆದುಕೊಳ್ಳುತ್ತಾರೆಂದು ಭಾವಿಸಿದ್ದೇನೆ.

**(ಐ.ಎಂ. ವಿಠ್ಠಲಮೂರ್ತಿ)**
ವಿಶೇಷಾಧಿಕಾರಿಗಳು
ವಿಶ್ವ ಕನ್ನಡ ಸಮ್ಮೇಳನ

# ಎರಡು ನುಡಿ

ಕರ್ನಾಟಕ ಸರ್ಕಾರವು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ 'ವಿಶ್ವ ಕನ್ನಡ ಸಮ್ಮೇಳನ'ದ ಅಂಗವಾಗಿ ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿರುವ ಸಾಹಿತಿಗಳ ಮಹತ್ವದ ಕೃತಿಗಳನ್ನು ಓದುಗರಿಗೆ ಒದಗಿಸಬೇಕೆಂಬ ಸದಾಶಯ ಹೊಂದಿರುತ್ತದೆ. ಈ ಯೋಜನೆಯಡಿ ಸುಮಾರು ೧೦೦ ಕೃತಿಗಳನ್ನು ಪ್ರಕಟಿಸಲು ಉದ್ದೇಶಿಸಿದೆ.

ಈ ಕೃತಿಗಳನ್ನು ಆಯ್ಕೆಮಾಡಲು ಖ್ಯಾತ ವಿದ್ವಾಂಸರಾದ ಪ್ರೊ. ಎಲ್.ಎಸ್. ಶೇಷಗಿರಿರಾವ್‌ರವರ ಅಧ್ಯಕ್ಷತೆಯಲ್ಲಿ ನಾಡಿನ ಹೆಸರಾಂತ ಸಾಹಿತಿ / ವಿದ್ವಾಂಸರುಗಳನ್ನೊಳಗೊಂಡ ಆಯ್ಕೆ ಸಮಿತಿಯನ್ನು ರಚಿಸಿದೆ. ಈ ಆಯ್ಕೆ ಸಮಿತಿಯು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಗೆ ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳಲ್ಲಿ ಬಂದ ಪ್ರಾತಿನಿಧಿಕ ಕೃತಿಗಳನ್ನು ಆಯ್ಕೆ ಮಾಡಿರುತ್ತದೆ. ಆಯ್ಕೆ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರಿಗೆ ಸರ್ಕಾರದ ಪರವಾಗಿ ವಂದನೆಗಳು ಸಲ್ಲುತ್ತವೆ. ಈ ಪುಸ್ತಕಗಳನ್ನು ಹೊರತರಲು ಅನುಮತಿ ನೀಡಿ ಸಹಕರಿಸಿದ ಎಲ್ಲಾ ಲೇಖಕರು ಹಾಗೂ ಹಕ್ಕುದಾರರುಗಳಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಕನ್ನಡದ ಮೇರುಕೃತಿ ಸಾಹಿತ್ಯ ಮಾಲಿಕೆಯನ್ನು ಓದುಗರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ದಿನಾಂಕ ೧೭.೦೧.೨೦೧೧

**(ರಮೇಶ್ ಬಿ.ಝುಳಕಿ)**
ಸರ್ಕಾರದ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

# ಪ್ರಕಾಶಕರ ಮಾತು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ 'ವಿಶ್ವ ಕನ್ನಡ ಸಮ್ಮೇಳನ'ದ ಅಂಗವಾಗಿ ಸುಮಾರು ನೂರು ಪುಸ್ತಕಗಳನ್ನು ಪ್ರಕಟಿಸಲು ಉದ್ದೇಶಿಸಿರುತ್ತದೆ. ಈ ಯೋಜನೆಯಡಿ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಈ ಮೂರೂ ಕಾಲಘಟ್ಟಗಳಲ್ಲಿ ರಚನೆಗೊಂಡ, ಕನ್ನಡದಲ್ಲಿ ಮಹತ್ವದ ಕೃತಿಗಳೆಂದು ಪರಿಗಣಿತವಾಗಿರುವ ಪುಸ್ತಕಗಳನ್ನು ಸರ್ಕಾರವು ನೇಮಿಸಿರುವ ಆಯ್ಕೆ ಸಮಿತಿಯು ಮರುಮುದ್ರಣಕ್ಕೆ ಆಯ್ಕೆ ಮಾಡಿರುತ್ತದೆ. ಈ ಸಾಹಿತ್ಯ ಮಾಲೆಯಲ್ಲಿ ಈಗಾಗಲೇ ಇಲಾಖೆಯು ಸಮಗ್ರ ಸಾಹಿತ್ಯ ಪ್ರಕಟಣೆಯಡಿ ಪ್ರಕಟಿಸಿರುವ ಲೇಖಕರ ಕೃತಿಗಳನ್ನು ಪರಿಗಣಿಸಿರುವುದಿಲ್ಲ.

ಕನ್ನಡದ ಮೇರುಕೃತಿಗಳ ಮರುಮುದ್ರಣಕ್ಕೆ ಪುಸ್ತಕಗಳನ್ನು ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಅಧ್ಯಕ್ಷರಾದ ಪ್ರೊ. ಎಲ್.ಎಸ್. ಶೇಷಗಿರಿ ರಾವ್‌ರವರಿಗೆ ಹಾಗೂ ಸಮಿತಿಯು ಸದಸ್ಯರುಗಳಾದ ಡಾ. ಚಂದ್ರಶೇಖರ ಕಂಬಾರ, ಡಾ. ಹಂಪ ನಾಗರಾಜಯ್ಯ, ಡಾ. ಎಂ.ಎಂ.ಕಲಬುರ್ಗಿ, ಡಾ. ದೊಡ್ಡರಂಗೇಗೌಡ, ಡಾ. ಎಚ್.ಜೆ. ಲಕ್ಕಪ್ಪಗೌಡ, ಡಾ. ಅರವಿಂದ ಮಾಲಗತ್ತಿ, ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಡಾ. ಪಿ.ಎಸ್. ಶಂಕರ್, ಶ್ರೀಮತಿ ಸಾರಾ ಅಬೂಬಕ್ಕರ್, ಡಾ. ಪ್ರಧಾನ್ ಗುರುದತ್ತ ಇವರುಗಳಿಗೆ ನನ್ನ ಕೃತಜ್ಞತೆಗಳು. ಈ ಯೋಜನೆಯಡಿ ಮರುಮುದ್ರಣಕ್ಕೆ ಆಯ್ಕೆಯಾಗಿರುವ ಪುಸ್ತಕಗಳ ಮುದ್ರಣಕ್ಕೆ ಅನುಮತಿ ನೀಡಿದ ಎಲ್ಲ ಲೇಖಕರಿಗೂ, ಹಕ್ಕುದಾರರಿಗೂ ಮತ್ತು ಕರಡಚ್ಚು ತಿದ್ದಿದವರಿಗೂ ನನ್ನ ವಂದನೆಗಳು.

ಸದರಿ ಪ್ರಕಟಣಾ ಯೋಜನೆಯ ಪುಸ್ತಕಗಳನ್ನು ಹೊರತರಲು ಸಹಕರಿಸಿದ ಶ್ರೀ ಎಚ್. ಶಂಕರಪ್ಪ, ಜಂಟಿ ನಿರ್ದೇಶಕರು, (ಸು.ಕ.), ಶ್ರೀಮತಿ ವೈ.ಎಸ್.ವಿಜಯಲಕ್ಷ್ಮಿ, ಸಹಾಯಕ ನಿರ್ದೇಶಕರು ಹಾಗೂ ಪ್ರಕಟಣಾ ಶಾಖೆಯ ಸಿಬ್ಬಂದಿಗೆ ನನ್ನ ನೆನಕೆಗಳು. ವಿಶ್ವ ಕನ್ನಡ ಸಮ್ಮೇಳನದ ಲಾಂಛನವನ್ನು ಸಿದ್ಧಪಡಿಸಿಕೊಟ್ಟ ಹಿರಿಯಕಲಾವಿದರಾದ ಶ್ರೀ ಸಿ. ಚಂದ್ರಶೇಖರ ಅವರಿಗೂ ನನ್ನ ನೆನಕೆಗಳು ಹಾಗೂ ಈ ಪುಸ್ತಕಗಳನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರಾದ

ಶ್ರೀ ಬಿ.ಎಲ್. ಶ್ರೀನಿವಾಸ್ ಮತ್ತು ಸಿಬ್ಬಂದಿ ವರ್ಗದವರಿಗೂ ನನ್ನ ನೆನಕೆಗಳು.

ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಕನ್ನಡ ಓದುಗರಿಗೆ ಹಲವಾರು ವರ್ಷಗಳಿಂದ ದೊರಕದೇ ಇದ್ದ ಎಷ್ಟೋ ಪುಸ್ತಕಗಳು ಲಭ್ಯವಾಗುತ್ತಿರುವುದು ಹೆಮ್ಮೆಯ ಸಂಗತಿ. ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಸಾಹಿತ್ಯಾಭಿಮಾನಿಗಳಿಗೆ ಅಕ್ಷರದಾಸೋಹ ನಡೆಸುವ ಆಶಯ ನಮ್ಮದು. ಈ ಕೃತಿಗಳನ್ನು ಕನ್ನಡಿಗರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ಮನು ಬಳಿಗಾರ್
ದಿನಾಂಕ ೧೧.೦೧.೨೦೧೧ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ



# ಕನ್ನಡದ ಮೇರುಕೃತಿಗಳ ಆಯ್ಕೆ ಸಮಿತಿ

**ಅಧ್ಯಕ್ಷರು**
ಪ್ರೊ. ಎಲ್.ಎಸ್. ಶೇಷಗಿರಿ ರಾವ್

**ಸದಸ್ಯರು**
ಡಾ॥ ಚಂದ್ರಶೇಖರ ಕಂಬಾರ
ಡಾ॥ ಎಂ.ಎಂ. ಕಲಬುರ್ಗಿ
ಡಾ॥ ದೊಡ್ಡರಂಗೇಗೌಡ
ಡಾ॥ ಅರವಿಂದ ಮಾಲಗತ್ತಿ
ಡಾ॥ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ
ಡಾ॥ ಪ್ರಧಾನ್ ಗುರುದತ್ತ
ಡಾ॥ ಹಂಪ ನಾಗರಾಜಯ್ಯ
ಡಾ॥ ಎಚ್.ಜೆ. ಲಕ್ಕಪ್ಪಗೌಡ
ಶ್ರೀಮತಿ ಸಾರಾ ಅಬೂಬಕ್ಕರ್
ಡಾ॥ ಪಿ.ಎಸ್. ಶಂಕರ್

**ಸದಸ್ಯ ಕಾರ್ಯದರ್ಶಿ**
ಶ್ರೀ ಮನು ಬಳಿಗಾರ್, ಕ.ಆ.ಸೇ.
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಮುನ್ನುಡಿ

'ಮನಮಂಥನ' ಮಾನಸಿಕ ಬೇನೆಗಳ ಪರಿಚಯ, ಮತ್ತು ಮನಸ್ಸಿನ ಸ್ಥೂಲ ಪರಿಚಯ ಮಾಡಿಕೊಡುವ ಒಂದು ಉಪಯುಕ್ತ ಮತ್ತು ಮೌಲಿಕ ಪುಸ್ತಕ. 'ಮನಸ್ಸು ಗಟ್ಟಿ ಮಾಡಬೇಕು' ಎನ್ನುವ ಮಾತನ್ನು ಕೇಳುತ್ತೇವೆ. ಈ ಚಂಚಲ ಸ್ವಭಾವದ ಮೃದು ಮತ್ತು ಮೆದುವಾದ ಮನಸ್ಸಿನ ರಕ್ಷಣೆ ಹೇಗೆ ಮಾಡಬೇಕೆಂಬುದೇ ಒಂದು ಶಾಸ್ತ್ರ, ಒಂದು ಅಭ್ಯಾಸ. ನಮ್ಮ ಋಷಿಗಳು, ಧರ್ಮಶಾಸ್ತ್ರಕಾರರು ಈ ದಿಸೆಯಲ್ಲಿ ಕೆಲಸ ಮಾಡಿದ್ದಾರೆ. ತಾವು ಕಂಡ ದರ್ಶನವನ್ನು ನಮಗೆ ನೀಡಿದ್ದಾರೆ. ಅದರ ವಿವರಗಳನ್ನು ಇಂದು ನಾವು ನಾಗರಿಕ ಗಾಜಿನ ಕಣ್ಣಿನಿಂದ ನೋಡುತ್ತೇವೆ. ಅದರಿಂದ ಕಣ್ಣಿಗೆ ದೃಷ್ಟಿಗೆ ಸ್ವಚ್ಛತೆ ಬರದೆ 'ಪರೆ' ಎಳೆದಂತಾಗಿದೆ. ಆದರೆ ವೈಜ್ಞಾನಿಕ ದೃಷ್ಟಿಯಿಂದ ಮಾನಸಿಕ ಚರ್ಯೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಹಿಂದಿನ ಸಂಪ್ರದಾಯಕ್ಕೆ ಹೋಲಿಸಿ ವಿವೇಚಿಸಿದರೆ ಅದರ ಸತ್ಯತೆ ಕಂಡುಬರುತ್ತದೆ; ಸತ್ಯ ಒಂದೇ ಆದರೆ ಹೇಳುವ ರೀತಿ ಮತ್ತು ಕ್ರಮ ಬೇರೆ ಎಂಬುದು ಹುಚ್ಚು, ಬೆಪ್ಪು, ಶಿವಲೀಲೆಗಳಾಗಲಿ, ಭೂತ, ಪಿಶಾಚಿ, ಭಯ ಮುಂತಾದ ಅಗೋಚರ ಪರ ಪೀಡನೆಗಳಾಗಲಿ ನಮ್ಮ ಮಾನಸಿಕ ರೋಗಗಳಲ್ಲದೆ ಬೇರೆಯಲ್ಲ ಎಂಬುದು ವೇದ್ಯವಾಗದೆ ಇರಲಾರದು. ಆದರೆ ಇವುಗಳಿಗೆ ನಮ್ಮ ಸಮಾಜದ ಪದ್ಧತಿಗಳು, ಆರ್ಷೇಯ ನಂಬಿಕೆಗಳು, ಬೆಳೆದ ವಾತಾವರಣ, ಪರಂಪರಾಗತವಾದ ರೋಗಾಂಶಗಳು, ಕಂಡ ದೃಶ್ಯ, ಕೇಳಿದ ಕಥೆ, ಕಲ್ಪಿಸಿದ ಭಯ, ಊಹಿಸಿಕೊಂಡ ರೋಗಗಳೇ ಮೂಲ ಹೇತುಗಳಾಗುವುದರಲ್ಲಿ ಸಂದೇಹವಿಲ್ಲ. ಭೂತೋಚ್ಚಾಟನೆ, ಮಂತ್ರ ಪರಿಹಾರ, ಸೇವಾ ಮನಸ್ಸು ಮುಂತಾದ ಚಿಕಿತ್ಸೆಯ ಅಂಥ ಕ್ರಮ, ರೂಢಮೂಲವಾದ ನಂಬಿಕೆಯ ಪದ್ಧತಿಗಳು ಇಂದು ನಮಗೆ ಮೂಢನಂಬಿಕೆಗಳಾಗಿ ಕಾಣಿಸಬಹುದು. ಆದರೂ ಒಂದು ಕಾಲಕ್ಕೆ ಅವು ರೋಗಚಿಕಿತ್ಸಾ ಕ್ರಮಗಳೇ.

ವಿಜ್ಞಾನದೃಷ್ಟಿ ಬೆಳೆದಂತೆ ಇವುಗಳ ಮೌಲ್ಯವೂ ಕಡಮೆಯಾಗಿ, ಅವುಗಳಲ್ಲಿ ನಂಬಿಕೆಯೂ ಹೋಗಿ ಅವು ಹುಚ್ಚು ಕಲ್ಪನೆಗಳಂತಾಗಿವೆ. ಬೆಳೆಯುವ ಸಮಾಜದಲ್ಲಿ ಅವು ಹಾಗಾಗುವುದು ಸಹಜ, ಸಮಕಲ ಕಾಸು ಚಲಾವಣೆಗೆ ಹೇಗೆ ಬರುವುದಿಲ್ಲವೋ ಹಾಗೆ. ಅಂದರೆ ಅವುಗಳನ್ನು ಈಗ ಆಚರಣೆಗೆ ತರಬೇಕೆಂಬುದಲ್ಲ. ಅವುಗಳ

ಹಿಂದಿನ ಸತ್ಯಾಂಶವನ್ನು ಪರೀಕ್ಷಿಸಿದರೆ ಇಂದಿನ ಮಾನಸಿಕ ರೋಗಗಳಿಗೆ ಸಂಬಂಧಿಸಿದಂತೆ ನಡೆದಿರುವ ವೈದ್ಯಕೀಯ ವೈಜ್ಞಾನಿಕ ಸಂಶೋಧನೆಗೆ ಅವು ಎಷ್ಟು ಹತ್ತಿರವಾಗಿವೆ ಎಂದು ತೋರದೆ ಇರದು. ಈ ಒಂದು ವಿಶ್ಲೇಷಣೆಯ ಪ್ರಯತ್ನ ಈ ಪುಸ್ತಕದಲ್ಲಿ ನಡೆದಿದೆ; ಎಂದರೆ ಈ ಪುಸ್ತಕದಲ್ಲಿರುವುದು ಹಳೆಯ ಮತ್ತು ಹೊಸ ವಿಚಾರಗಳ ಪರಿಶೀಲನೆ ಅಷ್ಟೆ ಎಂದು ಮಾತ್ರ ಊಹಿಸಬಾರದು.

'ಮನ ಮಂಥನ' ಒಂದು ಮಾನಸಿಕ ರೋಗಶಾಸ್ತ್ರಗ್ರಂಥವೂ ಹೌದು. ರೋಗಶಾಸ್ತ್ರವನ್ನು ಕಾದಂಬರಿಯಂತೆ ಓದಿ 'ಕಾಂತಾ ಸಮಿತಿ' ಯಂತೆ ಅರ್ಥಮಾಡಿಕೊಳ್ಳುವ 'ರಸಸಾಹಿತ್ಯ' ಗ್ರಂಥವೂ ಹೌದು. ಗ್ರಂಥದ ಮೊದಲ ಭಾಗ ದೃಷ್ಟಾಂತಗಳ ಸರಪಣಿ. ಒಂದೊಂದು ದೃಷ್ಟಾಂತವೂ ಒಂದೊಂದು ಕೊಂಡಿ. ಕೊಂಡಿ ಸೇರಿದ ಸರಪಣಿ, ಒಂದು ಅಪೂರ್ವವಾದ ಬಲಿಷ್ಠ ಶಾಸ್ತ್ರ. ಒಂದೊಂದು ಉದಾಹರಣೆಯೂ ಒಂದೊಂದು ಕಥೆ. ಒಂದೊಂದು ಕಥೆಯೂ ಒಂದೊಂದು ರೋಗದ ಚಿಹ್ನೆ. ಆ ರೋಗ ಅನುಭವಿಸಿದವರು ನಮ್ಮನಮ್ಮವರೆ, ಆಸ್ಪತ್ರೆಯಲ್ಲಿರುವವರಲ್ಲ; ಆಸ್ಪತ್ರೆಗೆ ಹೋಗಬೇಕಾದವರು. ರೋಗನಿವಾರಣೆ ಮಾಡಿಕೊಳ್ಳಬಲ್ಲ ರೋಗಗ್ರಸ್ತರು. ಆ ಕಥೆಗಳನ್ನು ಓದುತ್ತಿದ್ದರೆ ನಾವು ಇಲ್ಲಿರುವ ಯಾವುದಾದರೂ ರೋಗಕ್ಕೆ ತುತ್ತಾಗಿದ್ದೇವೆಯೇ ಎಂಬಂಥ ಭ್ರಾಂತಿ ಹುಟ್ಟಿಸುವಂಥ ರೋಗಗಳ ವಿವರಣೆಯೇ ಅಲ್ಲಿ ಕಥಿತವಾಗಿರುವುದು. ಆದ್ದರಿಂದಲೇ ಗ್ರಂಥಕರ್ತರು 'ಬಿನ್ನಹ' ದಲ್ಲಿ "ಓದುಗನ ಮನಸ್ಸಿನಲ್ಲಿ 'ನನಗೂ ಈ ರೋಗ ಬಂದಿರುವ ಸೂಚನೆಗಳಿವೆಯೋ' ಎನ್ನುವ ಅನುಮಾನವು ಸಾಮಾನ್ಯವಾಗಿ ಉಂಟಾಗುತ್ತದೆ" ಎನ್ನುತ್ತಾರೆ. ಇಂಥ ಬರವಣಿಗೆ ಓದುಗನ ಮನಸ್ಸಿಗೆ ನೇರ ಮುಟ್ಟುತ್ತದೆ; ವಿಚಾರ ಅರ್ಥವಾಗುತ್ತದೆ ; ಓದಿದ್ದು ಸಾರ್ಥಕವಾಗುತ್ತದೆ.

ಸಾರ್ಥಕವಾದ ಬರವಣಿಗೆಯಿಂದ ಮನಸ್ಸನ್ನು ಡಾ. ಎಂ. ಶಿವರಾಂ ಅವರು 'ಮನಮಂಥನ'ದಲ್ಲಿ ಮಥಿಸಿದ್ದಾರೆ. ಮೊದಲನೆಯ ಭಾಗ ದೃಷ್ಟಾಂತಗಳ ಸರಪಣಿಯಾದರೆ ಅವುಗಳ ಹಿಂದಡಗಿರುವ ಮೂಲಾಂಶದ ವಿವೇಚನೆ ವಿವರ, ವೈದ್ಯರ ಸಂಶೋಧನೆ, ದಾರ್ಶನಿಕರ ತತ್ತ್ವ ವಿಚಾರ, ದೇಹ ಮನಸ್ಸುಗಳ ಸಂಬಂಧ, ಅಹಂಕಾರದ ಕಲ್ಪನೆ ಮೊದಲಾದ ಅಂಶಗಳು ನಡೆದು 'ಗಟ್ಟಿಮನಸ್ಸು' ಯಾವುದು ಎಂಬುದರ 'ಸ್ಥೂಲರೂಪ' ಕಣ್ಣಮುಂದೆ ನಿಲ್ಲುತ್ತದೆ. ಜೊತೆಗೆ ಅಮೃತಮಂಥನದಿಂದ ಜನಿಸಿದ ವಿಷ ಮತ್ತು ಅಮೃತ ಅಲ್ಲದೆ ಅವುಗಳ ಜನನದ ಮಧ್ಯಂತರದಲ್ಲಿ ಹುಟ್ಟಿದ ಇತರ ವಸ್ತುಗಳು 'ಮನಮಂಥನ'ದಲ್ಲೂ ಹೇಗೆ ಅನ್ವಯವಾಗುತ್ತವೆಯೆಂಬುದನ್ನು ಬಹು ಸೂಕ್ಷ್ಮವಾಗಿ ಹೊಂದಿಸಿದ್ದಾರೆ.

ಸರಳವಾದ ಬರವಣಿಗೆ, ಕಥೆ ಹೇಳುವ ಜಾಣತನ, ಕಹಿ ಔಷಧಕ್ಕೆ ಲೇಪಿಸುವ ಮಧುವಿನಂತೆ ಸತ್ಯನಿರೂಪಣೆಯಲ್ಲಿ ಹಾಸ್ಯದ ಚಟಾಕಿ, ಗಂಭೀರ ವಿಷಯವನ್ನು ಮನಮೆಚ್ಚುವಂತೆ ಬಿಡಿಸಿ ಹೇಳುವ ಚಾಕಚಕ್ಯತೆ ಡಾ. ಎಂ. ಶಿವರಾಂ ಅವರಲ್ಲಿ ಮನೆಮಾಡಿಕೊಂಡಿವೆ. ಅವು ಈ ಗ್ರಂಥದಲ್ಲಿ ರೂಪತಾಳಿವೆ. ಪರಿಷತ್ತಿನ ಮೇಲಿನ ಅಭಿಮಾನದಿಂದ ಅವರು ಈ ಪುಸ್ತಕವನ್ನು ಬರೆದು ಪರಿಷತ್ತು ಪ್ರಕಟಿಸಲು ಒಪ್ಪಿ ಉಪಕರಿಸಿದ್ದಾರೆ.

ಮನಮಂಥನದ ಮೊದಲ ಮುದ್ರಣ ಪ್ರತಿಗಳು ಮುಗಿದು ಹೋಗಿ ಈಗಾಗಲೆ ವರ್ಷದ ಮೇಲೆ ಆಯಿತು. ಈಗ ಎರಡನೆಯ ಮುದ್ರಣವಾಗಿದೆ. ಕನ್ನಡದಲ್ಲಿ ಒಂದು ಶಾಸ್ತ್ರೀಯ ಗ್ರಂಥ ಇಷ್ಟು ಬೇಗನೆ ದ್ವಿತೀಯ ಮುದ್ರಣ ಕಾಣುವುದು ಸ್ವಲ್ಪ ಆಶ್ಚರ್ಯವೂ ಹೌದು, ಅಪೂರ್ವವೂ ಹೌದು.

ಪುಸ್ತಕದ ಬಗ್ಗೆ ಹಿಂದಿನ ಮುದ್ರಣದ ಮುನ್ನುಡಿಯಲ್ಲಿ ಡಾ. ರಂ. ಶ್ರೀ ಮುಗಳಿಯವರು ಹೇಳಿದ ಮಾತುಗಳು ಯಥಾರ್ಥವಾಗಿವೆ. ಆದ್ದರಿಂದ ಆ ಮಾತುಗಳನ್ನು ಪ್ರಾರಂಭದಲ್ಲಿ ಕೊಟ್ಟಿದೆ.

'ಮನಮಂಥನ'ಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿಗಳು ಪ್ರಶಸ್ತಿ ನೀಡಿವೆ. ಹೆಚ್ಚಾಗಿ ಕನ್ನಡದ ಜನ ಪುಸ್ತಕವನ್ನು ಕೊಂಡು ಓದಿ ಪ್ರಶಸ್ತಿ ನೀಡಿದೆ. ಈ ಕಾರಣ ಪುಸ್ತಕದ ಜನಪ್ರಿಯತೆಯನ್ನೂ ಮೌಲ್ಯವನ್ನೂ ನಾವು ಕಾಣಬಹುದು.

ಡಾ. ಶಿವರಾಂ ಅವರಿಗೆ, ಈ ಪುಸ್ತಕವನ್ನು ಪರಿಷತ್ತಿನಿಂದ ಪ್ರಕಟಿಸಲು ಎರಡನೆಯ ಸಲವೂ ನೆರವಾದದ್ದರಿಂದ ನನ್ನ ಹಾರ್ದಿಕ ವಂದನೆಗಳನ್ನು ಈ ಮೂಲಕ ಸಲ್ಲಿಸುತ್ತೇನೆ.

ಬೆಂಗಳೂರು — **ಹಂಪ. ನಾಗರಾಜಯ್ಯ**

೨೧-೦೩-೧೯೭೬ — ಅಧ್ಯಕ್ಷ

# ಬಿನ್ನಹ

ರೋಗಗಳ ವಿಚಾರ ಮಾಡಿ ಶ್ರೀ ಸಾಮಾನ್ಯರಿಗೆ ತಿಳಿಯುವಂತೆ ಯಾವ ಲೇಖನವನ್ನು ಎಷ್ಟೇ ವಿರಳವಾಗಿ ಹಾಗೂ ಸರಳವಾಗಿ ಬರೆದರೂ ; ಓದುಗನ ಮನಸ್ಸಿನಲ್ಲಿ 'ನನಗೂ ಈ ರೋಗ ಬಂದಿರುವ ಸೂಚನೆಗಳಿವೆಯೋ?' ಎನ್ನುವ ಅನುಮಾನವು ಸಾಮಾನ್ಯವಾಗಿ ಉಂಟಾಗುತ್ತದೆ. ಆದುದರಿಂದಲೇ ವೈದ್ಯರುಗಳು ರೋಗಿಗಳೊಂದಿಗೆ ಸ್ವಲ್ಪ ಮುಗುಮ್ಮಾಗಿರುವುದು. ಏನನ್ನಾದರೂ ವಿವರಿಸ ಹೋದರೆ ಅಪಾರ್ಥವನ್ನು ಮಾಡಿಕೊಂಡು ಇನ್ನೂ ಹೆಚ್ಚು ನರಳುತ್ತಾರೆಯೋ ಎಂಬ ಸಂಶಯವು ಕಾಡುತ್ತದೆ.

ಆದರೂ ಮಾನಸಿಕ ಬೇನೆಗಳ ಮೊದಮೊದಲ ಹಂತದ ಸ್ಥೂಲ ಪರಿಚಯವನ್ನು ಇಲ್ಲಿ ಮಾಡಲೆತ್ನಿಸಿದೆ. ಕಾರಣ ಇಷ್ಟೇ !

ಕ್ಯಾನ್ಸರ್, ಕ್ಷಯ, ಪ್ಲೇಗು, ಕಾಲರಾ, ದೊಡ್ಡ ಸಿಡುಬು, ಇವೆಲ್ಲಾ ಘೋರ ಕಾಯಿಲೆಗಳು. ಇವೆಲ್ಲವೂ ಉಗ್ರವಾದಾಗ ಪ್ರಾಣಕ್ಕೇ ಸಂಚು ತರಬಹುದು. ಆದರೆ ಇವೆಲ್ಲಾ ಒಂದು ವ್ಯಕ್ತಿಯನ್ನು ನರಳಿಸುತ್ತವೆ. ನಮ್ಮ ಇಷ್ಟನಿಗೆ, ನೆಂಟನಿಗೆ ಹೀಗಾಯಿತಲ್ಲ ಎಂದು ಮನೆಯವರು ಕೊರಗುತ್ತಾರೆ, ದಿಟ. ಆದರೆ ಅವರುಗಳ ನಿತ್ಯ ಜೀವನಕ್ಕೆ ನೆಂಟನ ಕಾಯಿಲೆಯು ಕಂಟಕ ಪ್ರಾಯವಾಗುವುದಿಲ್ಲ, ಸಾಮಾನ್ಯವಾಗಿ.

ಆದರೆ ಮನೆಯಲ್ಲಿ ಒಬ್ಬನಿಗೆ ಅಥವಾ ಒಬ್ಬಳಿಗೆ ಹುಚ್ಚೋ ಬೆಪ್ಪೋ ಶಿವ ಲೀಲೆಯೋ ಬಡಿದರೆ, ಮನೆಯವರೆಲ್ಲರೂ ಮುಳ್ಳಿನ ಮೇಲೆ ಇದ್ದಂತಾಗುತ್ತದೆ. ಎಲ್ಲರ ನೆಮ್ಮದಿಯೂ ಕೆಡುತ್ತದೆ. ಎಲ್ಲರಿಗೂ ಒಂದಲ್ಲ ಒಂದು ಹಂತದಲ್ಲಿ ಆತಂಕವಿರುತ್ತದೆ. ಸಂಸಾರದ ಎಲ್ಲರ ಕಾರ್ಯನಿರ್ವಹಣಾ ಚಾಕಚಕ್ಯತೆಯು ಮೊಂಡಾಗುತ್ತದೆ. ಅಂದರೆ ಸಂಸಾರಕ್ಕೆ ಸಂಸಾರವೇ ಕುಂಟುವಂತಾಗುತ್ತದೆ.

ಮಾನಸಿಕ ಬೇನೆಗಳು ಬರುವುದಕ್ಕಿಂತ, ಕಂಡು ತಿಳಿದ ದೈಹಿಕ ಬೇನೆಗಳು ಬಂದರೆ ಪರವಾಗಿಲ್ಲ ; ಹೇಗೋ ಸುಧಾರಿಸಿಕೊಳ್ಳಬಹುದು, ಎನ್ನುವಂತಾಗುತ್ತದೆ.

ಮಾನಸಿಕ ಬೇನೆಗಳು ಬೇರೂರಿದ ಮೇಲೆ ಅವುಗಳ ಚಿಕಿತ್ಸೆಯು ಪೂರ್ತಿ ಯಶಸ್ವಿಯಾಗುವುದು ದುಸ್ಸಾಧ್ಯ. ಅಲ್ಪಸ್ವಲ್ಪ ಆದರೂ ಗಮನಿಸುವಂತಹ ರೋಗದ ಅವಶೇಷಗಳು ಉಳಿದಿರುತ್ತವೆ. ಹಾಗೂ ಬೇರೂರಿದ ಮಾನಸಿಕ ಬೇನೆಗಳು ಗುಣ

ಹೊಂದಲು ದೀರ್ಘಕಾಲ ಹಿಡಿಯುತ್ತದೆ. ಮೊದಮೊದಲ ಹಂತದಲ್ಲಿ ಮಾನಸಿಕ ಬೇನೆಗಳನ್ನು ಗುರುತಿಸಿ ಪತ್ತೆಹಚ್ಚಿ, ಸೂಕ್ತ ಚಿಕಿತ್ಸೆಯನ್ನು ನಡಸಿದರೆ, ರೋಗವು ಗುಣವಾಗುವುದೂ ಸುಲಭ ; ನಿಶ್ಶೇಶವಾಗಿ ಗುಣವಾಗುವುದೂ ಸಾಧ್ಯ. ಆದಕಾರಣ ಮಾನಸಿಕ ಬೇನೆಗಳನ್ನು ಆದಷ್ಟು ಬೇಗ ಮೊದಮೊದಲ ಹಂತದಲ್ಲೇ ಪತ್ತೆ ಹಚ್ಚಬೇಕು. ಎಲ್ಲಾ ರೋಗಗಳಿಗೂ ಈ ನಿಯಮವು ಅನ್ವಯಿಸುತ್ತದೆ; ಆದರೆ ಮಾನಸಿಕ ಬೇನೆಗಳಲ್ಲಿ ಅತ್ಯಗತ್ಯವಾದುದು.

ಈ ವಿಷಯದಲ್ಲೇ ತಾಪತ್ರಯವು ಶುರುವಾಗುವುದು. ಮಾನಸಿಕ ಬೇನೆಗಳ ಮೊದಮೊದಲ ಹಂತದಲ್ಲಿ ರೋಗಿಯು ನಡವಳಿಕೆಯು ಸ್ವಲ್ಪ ಮಟ್ಟಿಗೆ ವಿಚಿತ್ರವಾಗಿರುತ್ತದೆ. ಆದರೆ ಎಷ್ಟೋ ಜನರ ಸ್ವಾಭಾವಿಕ ನಡವಳಿಕೆಯೂ ತುಸು ವಿಚಿತ್ರವಾಗಿರುತ್ತದೆ. ಯಾವುದು ಸ್ವಾಭಾವಿಕ ನಡವಳಿಕೆ, ಯಾವುದು ಬೇನೆಯ ಮೊದಲ ಸೂಚನೆ ಎಂದು ನಿರ್ಧರಿಸುವುದು ಕಷ್ಟ.

ಸ್ವಾಭಾವಿಕವಾದ ತುಸು ವಿಚಿತ್ರವಾದ ನಡವಳಿಕೆಯು ಒಂದೇ ಪ್ರಮಾಣದಲ್ಲಿ ಮುಂದುವರೆಯುತ್ತದೆ. ಆದರೆ ಬೇನೆಯ ಚಿಹ್ನೆಯಾಗಿದ್ದರೆ, ನಡವಳಿಕೆಯು ಹೆಚ್ಚು ಹೆಚ್ಚು ವಿಚಿತ್ರವಾಗುತ್ತದೆ. ಅಲ್ಲದೆ ಇತರ ಮನಸಿಕ ಬೇನೆಗಳೂ ಅಸಾಮಾನ್ಯ ವರ್ತನೆಗಳೂ ಕಾಣಬರುತ್ತವೆ. ಇವುಗಳನ್ನು ಮೊದಲು ಕಾಣುವವರು ಮನೆಯವರು. ಈ ವಿಷಯಗಳನ್ನು ಮನೆಯವರು ಸಾಕಷ್ಟು ತಿಳಿದಿದ್ದರೆ, ಆಗ ಇವನ್ನು ಗಮನಿಸುವುದು ಸುಲಭ ಸಾಧ್ಯ. ಆದಕಾರಣ ಜನ ಸಾಮಾನ್ಯರಲ್ಲಿ ಈ ವಿಷಯದ ಪ್ರಚಾರವನ್ನು ಅಗತ್ಯವಾಗಿ ಮಾಡಬೇಕು. ಅವರಿಗೆ ಅರ್ಥವಾಗುವಂತೆ ಸರಳವಾಗಿ ಹಾಗೂ ಸುಲಭವಾಗಿ ಬರೆಯಬೇಕು.

ವಿಷಯವನ್ನು ಸ್ಪಷ್ಟವಾಗಿ ವಿವರಿಸುವಾಗ, ಭಾಷೆಯೂ ನಿಖರವಾಗಿರಬೇಕು. ಆಗ ಸರಳ ಭಾಷೆಯು ನೆರವಾಗುವುದಿಲ್ಲ. ವಿರುದ್ಧವಾದ ಈ ಎರಡೂ ಧ್ಯೇಯಗಳನ್ನು ಸಮನ್ವಯಗೊಳಿಸಲು ಶ್ರಮವಹಿಸಿದ್ದೇನೆ, ತಕ್ಕಮಟ್ಟಿಗೆ ಕಷ್ಟವನ್ನೂ ಪಟ್ಟಿದ್ದೇನೆ. ಆಸಕ್ತಿಯಿಂದ ಓದ ಬಯಸುವ ಕೆಲವರಿಗೂ ಕಷ್ಟವಾಗಬಹುದು ಎನ್ನುವುದು ನನಗೆ ತಿಳಿದಿದೆ. ಕಷ್ಟಪಟ್ಟರೆ ಸುಖವುಂಟು. ಸ್ವಲ್ಪ ಶ್ರಮ ತೆಗೆದುಕೊಂಡರೆ ಹೆಚ್ಚು ನೆಮ್ಮದಿ ದೊರಕಿತು. ಈ ವಿಶ್ವಾಸದಿಂದ ಕನ್ನಡ ಜನತೆಯ ಮುಂದೆ ಈ ಹೊತ್ತಗೆಯನ್ನು ಕಾಣಿಕೆಯಾಗಿ ನೀಡುತ್ತಿದ್ದೇನೆ.

**ಎಂ. ಶಿವರಾಂ**

# ಕೃತಜ್ಞತೆ

ಈ ಲೇಖನಗಳನ್ನು ಬರೆಯಲು ಒತ್ತಾಯಪಡಿಸಿದ, ಚಿ॥ ವೈಕುಂಠರಾಜುವಿಗೂ ಮತ್ತು ಒಲವಿನಿಂದ ಪ್ರೋತ್ಸಾಹಿಸಿದ, ಚಿ॥ ಟಿ. ಎಸ್. ರಾಮಚಂದ್ರನಿಗೂ ಮತ್ತು ಅವರುಗಳ ಮುಖವಾಡವಾದ 'ಪ್ರಜಾವಾಣಿ'ಗೂ ಚೊಚ್ಚಲ ಕೃತಜ್ಞತೆ.

*　　　*　　　*

ಪುಸ್ತಕ ರೂಪದಲ್ಲಿ ಪ್ರಕಟಿಸಲು, ಉತ್ಸಾಹವನ್ನು ತುಂಬಿದ, ಕನ್ನಡ ಪರಿಷತ್ ಉತ್ಸಾಹೀ ಅಧ್ಯಕ್ಷ ಶ್ರೀ ಜಿ. ನಾರಾಯಣ ; ಮತ್ತು ಅವರ ಬಲ–ತೋಳಾದ ಶ್ರೀ ಆರ್.ಎಸ್. ರಾಮರಾಯರಿಗೂ ಮರುಚಲ ಕೃತಜ್ಞತಾರ್ಪಣೆ.

*　　　*　　　*

ಅಚ್ಚು–ಕಟ್ಟಾಗಿ, ಶ್ರದ್ಧೆ ಮತ್ತು ಆದರದಿಂದ, ಮೊದಲ ಮುದ್ರಣದಂತೆಯೇ ಅಂದವಾಗಿ ಅಚ್ಚುಮಾಡಿದ ಬಿ. ಎಂ. ಶ್ರೀಕಂಠಯ್ಯ ಅಚ್ಚು ಕೂಟ ಅವರಿಗೆ ಕೃತಜ್ಞ ಎಂದರೆ ಅವರಿಗೆ ಬೇಸರವಾಗುತ್ತದೆಯೇನೋ ಎಂಬ ಅನುಮಾನ. ಕಾರಣ ಅವರಿಗೆ ಧನ್ಯವಾದಗಳು.

*　　　*　　　*

ಸುಮಾರು ಮೂರು ಕೋಟಿ ಸಂಖ್ಯೆಯ ಕನ್ನಡಿಗರಲ್ಲಿ, ಮೂವರಾದರೂ ಈ ಪುಸ್ತಕವನ್ನು ಓದಬಹುದು. ಬಹಳ ಕಷ್ಟಪಟ್ಟು ಓದಬಹುದು. ಆ ಮೂವರಿಗೂ ಕೃತಜ್ಞ.

*　　　*　　　*

ಪುಸ್ತಕವನ್ನು ಓದಿ, 'ಇದೇನು ಈ ಮುದುಕ । ಮಕ್ಕಳ ಹಾಗೆ ಬರೆದಿದ್ದಾನೆ; ಇದಕ್ಕಿಂತ ಅತಿ ಸೊಗಸಾಗಿ, ಸರಳವಾಗಿ, ಮುಂದುವರೆಯುತ್ತಿರುವ ಈ ವೈಜ್ಞಾನಿಕ ಅರಿವನ್ನು ಪ್ರಚಾರ ಮಾಡುತ್ತೇನೆ' ಎಂದು ನನ್ನ ಸಹೋದ್ಯೋಗಿಗಳಲ್ಲಿ ಯಾರಾದರೂ ರೇಗಿ ನಕ್ಕು, ಸಮಕಾಲೀನ ಪ್ರಜ್ಞೆಯಿಂದ ಹೊಸ ಪುಸ್ತಕವನ್ನು ಬರೆಯುವಂತಾದರೆ, ಅತ್ಯಂತ ಕೃತಜ್ಞ.

**ಎಂ. ಶಿವರಾಂ**

# ಪರಿವಿಡಿ

# ೧. ಆತಂಕ

## Anxiety Syndromes

ಆತಂಕವು ಅತಿಯಾದಾಗ ಅಂತಕನು ಹತ್ತಿರ ಬರುತ್ತಾನೆ ಎನ್ನುವ ನಾಣ್ನುಡಿಯಿದೆ. ಅಕ್ಷರಗಳ ಪಲ್ಲಟದಿಂದಲೇ ಒಂದರ ಮೇಲೆ ಇನ್ನೊಂದರ ಪರಿಣಾಮವನ್ನು ಲಕ್ಷಣವಾಗಿ ಸೂಚಿಸಬಹುದು. ಸುಸೂತ್ರವಾಗಿ ಯಾವ ಕೆಲಸವನ್ನಾಗಲೀ ಯೋಜಿಸಿದಂತೆ ಮಾಡಲಾಗದಿದ್ದರೆ, ಆತಂಕವುಂಟಾಗುತ್ತದೆ. ಆಗ ಮನಸ್ಸು ಎನ್ನುವುದು ಒಂದಿದೆ ಎನ್ನುವ ಅರಿವೂ ಉಂಟಾಗುತ್ತದೆ. ಯೋಚನೆಗಳು ಸುಸೂತ್ರವಾಗಿ ರೂಪುಗೊಂಡು, ಎಣಿಸಿದಂತೆಯೇ ಕೆಲಸವು ಆಗುವಾಗ, ಮನಸ್ಸು ಇದೆ ಎಂಬ ಅರಿವೇ ಬರುವುದಿಲ್ಲ. ಹಸಿವಾದಾಗಲೇ ಹೊಟ್ಟೆ ಎಂದೊಂದು ಅಂಗವಿದೆ ಎನ್ನುವುದು ನಮ್ಮ ಗಮನಕ್ಕೆ ಎದ್ದು ಬರುತ್ತದೆ. ಹಾಗೆಯೇ ಮನಸ್ಸು ಕೂಡ. ಬಯಸಿದಂತೆ ಬಾಳಲು ಸಾಧ್ಯವೇ ? ಯೋಚಿಸಿದಂತೆ ನಡೆಯಲು ಪರಿಸರವೂ ತೊಡಕಿಕೊಳ್ಳದೇ ಇರಬೇಕು. ಪರಿಸರದ ಮೇಲೆ ನಮ್ಮ ಪೂರ್ಣ ಹತೋಟಿ ಇರಲು ಸಾಧ್ಯವೇ ಇಲ್ಲ. ಹೀಗಾಗಿ ಆತಂಕವು ಸರ್ವವ್ಯಾಪಿಯಾಗಿದೆ.

ಆದರೆ ಮನಸ್ಸಿನಲ್ಲಿ ಆತಂಕವು ಕಂಡುಬರುವಂತೆ ಪ್ರಕೃತಿಯು ಏಕೆ ವ್ಯವಸ್ಥೆಯನ್ನು ಮಾಡಿತು? ಇದರಿಂದ ಮನಸ್ಸಿಗೆ ಯಾವುದಾದರೂ ಲಾಭವಾಗುತ್ತದೆಯೇ ? ಅನುಕೂಲವೇನಾದರೂ ಉಂಟೆ ? ವಿಚಾರ ಮಾಡೋಣ.

'ಒಂಭತ್ತು ಗಂಟೆಗೆ ಸರಿಯಾಗಿ ತಟ್ಟೆ ಹಾಕಿ ಊಟವನ್ನು ಬಡಿಸ್ತೀನಿ. ಅಲ್ಲಿನ ತನಕ ಅಡಿಗೆಯ ಮನೆಯ ಬಾಗಿಲ ಹತ್ತಿರ ಸುಳಿಯಬೇಡಿ, ಅಂದ್ರೆ. ಐದೈದು ನಿಮಿಷಗಳಿಗೂ ಅಡಿಗೆ ಮನೆಯ ಬಾಗಿಲಲ್ಲಿ ಇಣುಕಿ, ಆಯ್ತೇನೆ ಅಡಿಗೆ? ಎಂದು ಕೇಳ್ತಾ ಇದ್ದರೆ, ಮನಸ್ಸಿಗೆ ಚಿಟ್ಟು ಹಿಡಿದು ಹೋಗುತ್ತೆ. ಆಗ ಮಾಡಿದ ಅಡಿಗೆಯು ಕೆಟ್ಟೂಹೋಗುತ್ತೆ' ಎಂದು ಅವಸರ ಸ್ವಭಾವದ ಗಂಡನನ್ನು, ಹೆಂಡತಿಯು ಹತೋಟಿಯಲ್ಲಿಡಹೋಗುವುದು, ಎಲ್ಲರ ಅನುಭವಕ್ಕೂ ಬಂದ ಸರ್ವೇ ಸಾಮಾನ್ಯ ವಿಷಯ. ತಲೆಗೆ ಚಿಟ್ಟು ಹಿಡಿಯಿತು ಎಂದರೆ ಆತಂಕವಾಯಿತು ಎಂದು.

ಅವಸರ ಸ್ವಭಾವದ ಗಂಡ 'ನಿನ್ನ ಜಾಯಮಾನವನ್ನು ಕಂಡಿಲ್ಲವೇನೇ ? ಮೇಲಿಂದ ಮೇಲೆ ಹೀಗೆ ಹುಷಾರ್ ಕೊಡದೆ ಹೋದರೆ, ಹತ್ತು ಗಂಟೆ ಬಡಿದ ಮೇಲೆ ಸಾರಿಗೆ ಒಗ್ಗರಣೆ ಹಾಕುತ್ತೀ. ಹೊತ್ತು ಗೊತ್ತು ಅಂತ ಏನಾದರೂ ಲೆಕ್ಕ ಇದೆಯೇ ನಿನಗೆ!'ಅಂತ ಹೆಂಡತಿಯನ್ನು ಮರುಭುಡಾಯಿಸುತ್ತಾನೆ. ಇದೂ ದಿಟವೇ. ಸ್ವಲ್ಪ ಆತಂಕಹತ್ತುವಂತೆ, ಮನಸ್ಸನ್ನು ಕೆರಳಿಸಿದರೆ ಆಗ ಹಿಡಿದ ಕೆಲಸವನ್ನು ಬೇಗ ಮಾಡಲು ಅನುಕೂಲವಾಗುತ್ತದೆ.

ಇವೆರಡೂ ಟೀಕೆಗಳು, ಪರಸ್ಪರ ವಿರುದ್ಧವಾಗಿ ಕಂಡರೂ, ನಿಜವೇ. ಆತಂಕದಿಂದ ಕೆಲಸ ಕೆಡುತ್ತದೆ, ಎಂದು ಹೆಂಡತಿ ಅಂದರೆ, ಅದರಿಂದಲೇ ಅಡಿಗೆಯನ್ನು ಬೇಗ ಮಾಡಬಹುದು ಎಂದ ಗಂಡ ಅನ್ನುತ್ತಾನೆ. ಇದು ಹೇಗಾಯಿತು? ಆತಂಕವು ಅಲ್ಪ ಪ್ರಮಾಣದ್ದಾದರೆ ಮಾಡಬೇಕಾದ ಕೆಲಸಕ್ಕೆ ಕುಮ್ಮಕ್ಕು ಕೊಟ್ಟಂತಾಗುತ್ತದೆ. ಆದರೆ ಆತಂಕವು ಒಂದು ಮಿತಿಯನ್ನು ಮೀರಿದರೆ, ಆಗ ಕೆಲಸಕ್ಕೆ ಅಡಚಣೆಯೂ ಆಗುತ್ತದೆ, ವಿಳಂಬವೂ ಆಗುತ್ತದೆ, ಕೆಟ್ಟೂ ಹೋಗಬಹುದು.

ನಾಗರಿಕತೆಯು ಹರಡಿದ ಮೇಲೆ ಆತಂಕವು ಈ ರೀತಿ ಮನುಷ್ಯರನ್ನು ಕಾಡುತ್ತದೆಯೇ ? ಅಥವಾ ಆದಿಮಾನವನ ಕಾಲದಿಂದಲೂ ಈ ಪರಿಸ್ಥಿತಿಯು ಕಾಣಿಸಿ ಕೊಂಡಿದೆಯೇ? ಅರಣ್ಯಗಳಲ್ಲಿ ವನ್ಯಮೃಗಗಳ ಜತೆಗೆ ಸಹವಾಸವನ್ನು ಮಾಡಿಕೊಂಡಿದ್ದ ಆದಿಮಾನವನಿಗೆ, ಕಚೇರಿಗೆ ಇಷ್ಟು ಹೊತ್ತಿಗೆ ಹೋಗಬೇಕು, ಆ ವೇಳೆಗೆ ಅಡಿಗೆ ಸಿದ್ಧವಾಗಿರಬೇಕು ಎನ್ನುವ ಯಾವ ಕಟ್ಟುನಿಟ್ಟುಗಳೂ ಇರಲಿಲ್ಲ. ಹಸಿವಾದಾಗ ಬೇಟೆಗೆ ಹೋಗುವುದು, ಸಿಕ್ಕಿದ್ದನ್ನು ದಕ್ಕಿಸಿಕೊಳ್ಳುವುದು; ನಾಳೆಗೆ ಎಂದು ಕೂಡಿಡುವ ಚಿಂತೆಯಿಲ್ಲ. ಕಾಲದ ಎಣಿಕೆಯ ಕಟ್ಟುಪಾಡುಗಳಿರದೆ ಇದ್ದ ಆದಿ ಮಾನವನಿಗೆ ಆತಂಕವು ಇರುತ್ತಿತ್ತೇ? ಅಗತ್ಯವಾಗಿತ್ತೆ? ಯೋಚಿಸೋಣ.

ಹೊಟ್ಟೆಯು ಚುರುಚುರು ಎಂದಾಗ ಆದಿಮಾನವನು ಬೇಟೆಗೆ ಹೋದ ಎನ್ನಿ. ಇನ್ನೇನು ಮೊಲವೊಂದನ್ನು ಪೊದೆಯಲ್ಲಿ ಹಿಡಿಯಬೇಕು ! ಆಗ ಪೊದೆಯಿಂದ ಘಟಸರ್ಪವು ಬುಸುಗುಟ್ಟಿತು ಎನ್ನಿ. ಆಗ ಆದಿಮಾನವ ಬೆದರಿ ಹಿಂದೋಡುತ್ತಾನೆ. ಬಾಯಿಗೆ ಬರಬಹುದಾಗಿದ್ದ ತುತ್ತು ಕೈಗೇ ಬರಲಿಲ್ಲ ! ಅನಿರೀಕ್ಷಿತವಾದ ಘಟ ಸರ್ಪದಿಂದ ಅವನಿಗೆ ಮೊದಲು ಉಂಟಾದುದು, ಭಯ. ಭಯವುಂಟಾದ ಮೇಲೆ ಅದರ ಹಿಂದೆಯೇ ಕಾತರ ಅಥವಾ ಆತಂಕವೂ ನೆರಳಿನಂತೆ ಹಿಂಬಾಲಿಸುತ್ತದೆ. ಆನಂತರ ಆತಂಕವು ಮನಸ್ಸನ್ನು 'ಮುಂಜಾಗ್ರತೆಯನ್ನು ತೆಗೆದುಕೋ' ಎನ್ನುವಂತೆ ಪ್ರೇರೇಪಿಸುತ್ತದೆ. ಮತ್ತೊಂದು ಸಲ ಅವನು

ಪೊದೆಯಲ್ಲಿರುವ ಮೊಲವನ್ನು ಹಿಡಿಯಲು ಹೋಗುವಾಗ ಭಾರೀ ದೊಣ್ಣೆಯನ್ನು ಸಿದ್ಧಮಾಡಿಕೊಂಡು ಹೋಗುತ್ತಾನೆ. ಘಟ ಸರ್ಪಏನಾದರೂ ಇದ್ದರೆ ಅದನ್ನು ಬಡಿದು ಹಾಕಲು ಸಿದ್ಧನಾಗಿರುತ್ತಾನೆ. ಅಂದರೆ, ಭಯ, ಭಯದಿಂದ ಹುಟ್ಟಿದ ಆತಂಕ, ಇವು ಸಂಭವಿಸಬಹುದಾದ ಆಪತ್ತುಗಳ ವಿರುದ್ಧ ಮುಂಜಾಗ್ರತಾ ಕ್ರಮವನ್ನು ಸಿದ್ಧಪಡಿಸಿಕೊಳ್ಳಲು ಪ್ರೇರಕವಾದುವು. ಕಾಡಿನ ವೈರ ಪರಿಸರದಲ್ಲಿ ಬದುಕಿ ಬಾಳಲು ಆತಂಕವು ಅಗತ್ಯವೂ ಪ್ರಯೋಜನಕಾರಿಯೂ ಆಗಿತ್ತು ಎಂದು ಊಹಿಸಲು ಸಾಕಾದಷ್ಟು ಸಾಕ್ಷ್ಯಗಳು ಇವೆ.

ಆತಂಕ, ಕಾತರ, ತವಕ, ತಲ್ಲಣ, ತಳಮಳ ಇವೆಲ್ಲಾ ವಾಕ್ಕುಗಳು ನಿಘಂಟಿನ ಪ್ರಕಾರ ಒಂದೇ ಅರ್ಥವನ್ನು ಸೂಚಿಸುತ್ತವೆ. Anxiety-worry-perturbed-uneasy–ಇವೆಲ್ಲ ಪದಗಳೂ ಸೂಚಿಸುವ ಅರ್ಥ. ಹಾಗಿದ್ದರೂ ಆತಂಕದ ಹಂತವನ್ನು ಸೂಚಿಸಲು ಈ ಮಾತುಗಳನ್ನು ಬಳಕೆಗೆ ತರುವುದು ಒಳ್ಳೆಯದು. ಆತಂಕಕ್ಕಿಂತ, ಕಾತರ, ಅದಕ್ಕಿಂತಲೂ ಹೆಚ್ಚಾದಾಗ, ತವಕ, ತಲ್ಲಣ ಮತ್ತೂ ಹೆಚ್ಚಾದಾಗ ತಳಮಳ ಎಂದು ಬಳಸಿದರೆ ಶಬ್ದಭಾಂಡಾರವನ್ನು ಮತ್ತಷ್ಟು ಸ್ಪಷ್ಟಮಾಡಿದಂತಾಗುತ್ತದೆ.

ವಸ್ತುವಿನ ಜ್ಞಾನವು ಹೆಚ್ಚು ಹೆಚ್ಚು ಆದಂತೆಲ್ಲಾ ನಿಖರವಾಗಿ ಇತರರಿಗೆ ಆ ಜ್ಞಾನವನ್ನು ಪ್ರಸಾರಮಾಡುವಾಗ ಸ್ಪಷ್ಟವಾದ ಅರ್ಥವನ್ನು ಕೊಡುವ ಮಾತುಗಳು ಅಗತ್ಯ. ಆದಕಾರಣ ಇನ್ನು ಮುಂದೆ ಈ ಮಾತುಗಳನ್ನು ಹಂತ ಹಂತದ ಆತಂಕವನ್ನು ಸೂಚಿಸಲು ಬಳಸಲಾಗುತ್ತದೆ.

ಆತಂಕವು ಮನಸ್ಸಿನಲ್ಲಿ ಕಾಣಬರುವ ಒಂದು ಪರಿಸ್ಥಿತಿ. ಈ ಸ್ಥಿತಿಯಲ್ಲಿ ಮನಸ್ಸಿಗೆ ಯಾವ ನೆಮ್ಮದಿಯೂ ಇರುವುದಿಲ್ಲ; ಯಾವ ಸುಖವೂ ಇರುವುದಿಲ್ಲ. ಬದಲು ದುಃಖದ ಛಾಯೆಯನ್ನು ಹೊಂದಿದ ಮನೋಭಾವವು, ಅಪ್ರಿಯವಾದ ಮನೋಭಾವವು ಇರುತ್ತದೆ. ಆತಂಕವಿದ್ದಾಗ ಬಾಳಿನಲ್ಲಿ ಉತ್ಸಾಹವು ಕಡಿಮೆಯಾಗಿ ಬೇಸರವು ಮೂಡುತ್ತದೆ. ಆತಂಕವನ್ನು ಹೇಗಾದರೂ ಮಾಡಿ ನಿವಾರಿಸಿಕೊಳ್ಳಬೇಕು ಎನ್ನುವ ಕಾತರವೂ ಜತೆ ಜತೆಯಲ್ಲಿ ಮೂಡುತ್ತದೆ. ಮನಸ್ಸು ಈ ರೀತಿ ಚಡಪಡಿಸುವಾಗ ದೇಹವೂ ಅದಕ್ಕನುಗುಣವಾಗಿ ಸೆಟೆದುಕೊಳ್ಳುತ್ತದೆ. ಅನುದಿನವೂ ನಡೆಯುವ ದೇಹದ ಸಾಮಾನ್ಯ ಕಾರ್ಯಗಳು ಕುಂಟುತ್ತವೆ. ಉದಾ–ಹಸಿವು ಕಡಿಮೆಯಾಗುತ್ತದೆ. ಸುಖವಾಗಿ ಊಟಮಾಡಬೇಕು ಎನ್ನುವ ಸಹಜ ಚಪಲವು ಕುಗ್ಗುತ್ತದೆ. ಮನೆಯವರು ಬಲವಂತ ಮಾಡಿದರೆ ಶಾಸ್ತ್ರಕ್ಕೆ ಅಂತ ಊಟಕ್ಕೆ ಕೂರುವುದು, ಅಷ್ಟೋ ಇಷ್ಟೋ ತಿನ್ನುವುದು, ಕೈ ತೊಳೆಯುವುದು. ಅಥವಾ

ಊಟಕ್ಕೆ ಕೂತರೆ ಯಾವ ಉತ್ಸಾಹವು ಇರದಿದ್ದರೂ ಗಿಡಿದು ಗಿಡಿದು ತಿನ್ನುತ್ತಲೇ ಇರುವುದು, ಹೀಗೂ ಆಗಬಹುದು. ಅಗತ್ಯವಾದ ದೇಹದ ಇತರ ಬೇಡಿಕೆಗಳಿಗೂ ಇದೇ ನೀತಿಯು, ಇದೇ ರೀತಿಯು ಅನ್ವಯಿಸುತ್ತದೆ.

ಆತಂಕವು ಮುತ್ತಿಕೊಂಡಾಗ, ಮುಂದೆ ಇನ್ನೂ ಹೆಚ್ಚು ಕೆಡುಕು ಸಂಭವಿಸಬಹುದು ಎನ್ನುವ ದುರ್ಭವಿಷ್ಯದ ಯೋಚನೆಗಳು ಮೂಡುತ್ತವೆ. ಆಶಾದಾಯಕವಾದ ಉತ್ತಮಗೊಳ್ಳುವ ಭವಿಷ್ಯದ ಯೋಚನೆಗಳು ಬರುವುದು ಕಡಿಮೆ. ಆಶಾದಾಯಕವಾದ ಯೋಚನೆಗಳು ಬರುವಂತಾದರೆ ಆತಂಕವು ಕಡಿಮೆಯಾಗುತ್ತಿದೆ ಎಂದು ನಿರ್ಧರಿಸಬಹುದು. ಆತಂಕದಿಂದ ಅನುಮಾನಪಡುವುದೂ, ಸಂಶಯಾತ್ಮಕರಾಗುವುದೂ ಸಾಮಾನ್ಯ.

ಆತಂಕದಿಂದ ನರಳುತ್ತಿರುವವನಲ್ಲಿ ಇನ್ನೊಂದು ವಿಚಿತ್ರ ನಡವಳಿಕೆಯನ್ನು ಕಾಣಬಹುದು, ಷಹರಿನ ರಸ್ತೆಯಲ್ಲಿ, ಸ್ವೇಚ್ಛಾ ಚಲಿಸುವ ವಾಹನಗಳಿಂದ ಅಪಘಾತಗಳಾಗುವ ಸಂದರ್ಭಗಳು ಬಹಳ. ಹಠಾತ್ತನೆ ಹತೋಟಿ ಮೀರಿದ ಆಟೋರಿಕ್ಷಾ ಬಂದು ಆತಂಕಗ್ರಸ್ತ ಪಾದಚಾರಿಯ ಬಳಿಗೆ ಹಾಯಿತು ಎನ್ನಿ. ಯೋಚನೆಯನ್ನು ಮಾಡಿ ಸೂಕ್ತ ಕ್ರಮವನ್ನನುಸರಿಸಿ ಅಪಘಾತದಿಂದ ಪಾರಾಗಲು ಕಾಲಾವಕಾಶವಿರುವುದಿಲ್ಲ. ಆದರೂ ಜನ್ಮಜನ್ಮಾಂತರಗಳಿಂದ ಸ್ವಸಂರಕ್ಷಣೆಯ ಜಾಣತನವು 'ಝುಕ್! ಎಂದು ಹಾರು, ಪಾರಾಗು' ಎಂದು ದೇಹವನ್ನು, ತೋರ ಮನಸ್ಸಿಗೆ ತಾರದೆಯೇ ನಡೆಸುತ್ತದೆ. ಛಂಗಿ ಹಾರಿ ಆತಂಕಗ್ರಸ್ತನೂ ಅಪಘಾತದಿಂದ ಪಾರಾಗುತ್ತಾನೆ; ಪುಣ್ಯ ಇದ್ದರೆ. ಆದರೆ ಅಪಘಾತವು ತಪ್ಪಿದ ಮೇಲೆ, ಸುರಕ್ಷಿತನಾದ ಮೇಲೆ, ಮರುಕ್ಷಣ ಥರಥರ ನಡುಗಲಾರಂಭಿಸುತ್ತಾನೆ. ಆಗ ಆತಂಕವು ಮನಸ್ಸನ್ನು ತುಂಬಾ ಕದಡುತ್ತದೆ. ರಭಸವಾಗಿ ನಡೆಯುವ ಪರಿಸರದ ಘಟನೆಗಳಿಂದ, ಪ್ರಚೋದಿತವಾದ ದೇಹದ ಪ್ರತಿಕ್ರಿಯೆಗಳು ಅವಶ್ಯಕ ರೀತಿಯಲ್ಲಿ ನಡೆದುಹೋಗುತ್ತವೆ. ಮತ್ತು ಅವಶ್ಯಕಕ್ಕಿಂತ ಹೆಚ್ಚು ಪ್ರಮಾಣದಲ್ಲಿ ನಡೆದು ಹೋಗುತ್ತವೆ. ಆದಕಾರಣ ಅಪಘಾತವು ನಿವಾರಣೆಯಾದ ಮೇಲೂ ಆತಂಕದಿಂದಾಗುವ ದೈಹಿಕ ಚಿಹ್ನೆಗಳು ಕಾಣಬರುತ್ತವೆ. 'ತಲೆಯೇ ಒಡೆದು ಹೋಗುತ್ತಿತ್ತಲ್ಲಪ್ಪ ; ಸದ್ಯ ! ತಪ್ಪಿತಲ್ಲಪ್ಪ !' ಎನ್ನುವ ಸಮಾಧಾನದ ಹಿಂದೆಯೇ ತಲೆಯೊಡೆದು ಸಾಯುತ್ತಿದ್ದೆನಲ್ಲ ! ಆಗ ಹೆಂಡತಿ ಮಕ್ಕಳ ಗತಿಯೇನು? ಎನ್ನುವ ಭೀಕರ ಕಲ್ಪನೆಯು ಕಾತರವನ್ನುಂಟುಮಾಡುತ್ತದೆ. ಮಗು ಸತ್ತ ಮೇಲೆ ಸೂತಕ ಕಾಡುತ್ತದೆ ಎನ್ನುವ ಗಾದೆಯಂತೆಯೇ, ಆತಂಕದ ಕಾಷ್ಠವ್ಯಸನಗಳು.

ಒಟ್ಟಿನಲ್ಲಿ ಆತಂಕವು ಮನಸ್ಸಿಗೆ ಒಲ್ಲದ, ಹಿತವಿರದ ಒಂದು ಪರಿಸ್ಥಿತಿ.

ಬಾಳಿ ಬದುಕುವುದಕ್ಕೆ ಇದರ ಅಗತ್ಯವು ಇರಬಹುದು. ಆದರೆ ಹಂತಹಂತವಾಗಿ ಇದು ಹೆಚ್ಚಿದಂತೆಲ್ಲಾ ಮನುಷ್ಯನನ್ನು ಹೆಚ್ಚುಹೆಚ್ಚಾಗಿ ನರಳಿಸಿ, ಅವನ ಚಾಕಚಕ್ಯತೆಯನ್ನು ಕಡಿಮೆ ಮಾಡುತ್ತದೆ. ಮಾನಸಿಕ ನರಳುವಿಕೆಗೆ, ಮಾನಸಿಕ ಅಸ್ವಾಸ್ಥ್ಯದಲ್ಲಿ, ಆತಂಕವು ಹಿರಿಯ ಪಾತ್ರವನ್ನು ವಹಿಸುತ್ತದೆ. ವಿಧವಿಧವಾದ ಇತರ ಮಾನಸಿಕ ಬೇನೆಗಳೊಂದಿಗೆ ಆತಂಕವೂ ಸಮ್ಮಿಶ್ರವಾಗಿರುತ್ತದೆ. ಅವುಗಳ ಕಾಟವನ್ನು ಹೆಚ್ಚಿಸುತ್ತದೆ.

ನಮ್ಮ ನಾಡಿನಲ್ಲಿ ನಮ್ಮ ಇಂದಿನ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಪರಿಸ್ಥಿತಿಯಲ್ಲಿ ಯಾರೊಬ್ಬರಾದರೂ ಆತಂಕದಿಂದ ನರಳದೇ ಇರುವುದು ಸಾಧ್ಯವೇ? ಹಾಗಾಗಿ ಆತಂಕದ ಕಾರಣಗಳನ್ನೂ ಅದರ ರೂಪರೇಷೆಗಳನ್ನೂ, ಅದರ ಅವತಾರ–ಅಪರಾವತಾರಗಳನ್ನೂ ವಿವರವಾಗಿ ತಿಳಿದುಕೊಳ್ಳಬೇಕು. ಅಂತಹ ತಿಳಿವಿನಿಂದ, ಆತಂಕವನ್ನು ಆದಷ್ಟು ಮಟ್ಟಿಗೆ ಹತೋಟಿಯಲ್ಲಿಡಲು ಸಾಧ್ಯವಾಗುತ್ತದೆ. ವಸ್ತುವಿನ ಅಥವಾ ವಿಷಯ ಒಂದರ ಪರಿಚಯದಿಂದ ಮತ್ತು ಪರಿಜ್ಞಾನದಿಂದ ಅದರಿಂದುಂಟಾಗುವ ಭಯವನ್ನಾದರೂ ನಿವಾರಿಸಬಹುದು.

೨

**ಉಸಿರಾಟದ ಅವ್ಯವಸ್ಥೆಗಳು**

ಆತಂಕದ ಪರಿಣಾಮವಾಗಿ ದೇಹದ ವಿವಿಧ ಅಂಗಗಳಲ್ಲಿ ಅವ್ಯವಸ್ಥೆಯು ತಲೆದೋರಬಹುದು. ಅದರಲ್ಲಿಯೂ ಉಸಿರಾಡುವ ಕಾರ್ಯದ ಮೇಲೆ ಆತಂಕದ ಪ್ರಭಾವವು ಹೆಚ್ಚಾಗಿರುತ್ತದೆ. ಉಸಿರಾಡುವುದರಲ್ಲಿ ಅಸ್ತವ್ಯಸ್ತವಾದರೆ ಪ್ರಾಣಕ್ಕೆ ಸಂಚು ಎಂದು ಎಲ್ಲರಿಗೂ ತಿಳಿದಿದೆ. ಆದುದರಿಂದ ಉಸಿರಾಡುವ ಕಾರ್ಯದಲ್ಲಿ ಯಾವುದಾದರೂ ವ್ಯತ್ಯಾಸವಾದರೆ, ಅದನ್ನು ಗಮನಿಸಿದವನಿಗೆ ಪ್ರಾಣಭಯವೂ ಉಂಟಾಗುತ್ತದೆ. ಆಳ ಮನಸ್ಸಿನ ಆತಂಕದಿಂದಲೇ ಉಸಿರಾಡುವ ಕಾರ್ಯದಲ್ಲಿ ವ್ಯತ್ಯಾಸವಾಗಿದೆ ಎಂದು ರೋಗಿಗೆ ಅನಿಸುವುದಿಲ್ಲ. ಆಳಮನಸ್ಸಿನಲ್ಲಿ ಆತಂಕವಿರುವುದೂ ಅವನ ತೋರ ಮನಸ್ಸಿಗೆ ಕಂಡಿರುವುದಿಲ್ಲ. 'ನನಗೇನೂ ಆತಂಕವೇ ಇಲ್ಲವಲ್ಲ ; ವಿನಾಕಾರಣ ಕಾಳಜಿ ಮಾಡುವಷ್ಟು ಹೆಡ್ಡನಲ್ಲ ನಾನು' ಎಂದೇ ಅವನು ದೃಢವಾಗಿ ನಂಬಿರುತ್ತಾನೆ. ಆದಕಾರಣ ಉಸಿರಾಟದಲ್ಲಿ ಅವ್ಯವಸ್ಥೆಯನ್ನು ಗಮನಿಸಿದಾಗ, ಭಯವುಂಟಾಗುತ್ತದೆ. ಅದರ ಹಿಂದೆಯೇ, ನಾಯಿಯ ಹಿಂದೆ ಬಾಲ, ಎಂಬಂತೆ ಆತಂಕವು ತೋರಮನಸ್ಸಿನಲ್ಲಿಯೂ ಕಾಣಿಸಿಕೊಳ್ಳುತ್ತದೆ. ಇದರಿಂದಾಗಿ ಉಸಿರಾಟದ ಅವ್ಯವಸ್ಥೆಯು ಇನ್ನೂ

ಅತಿಯಾದಂತೆ ಭಾಸವಾಗುತ್ತದೆ. ಚೇಳನ್ನೇ ದಿಟ್ಟಿಸಿ ನೋಡುತ್ತಾ ಇದ್ದರೆ, ಒಮ್ಮೊಮ್ಮೆ ಅದು ನಮ್ಮ ಕಣ್ಣೆದುರಿಗೇ ದೊಡ್ಡದಾಗುತ್ತಿರುವಂತೆ ಭಾಸವಾಗುವುದಿಲ್ಲವೇ ? ಹಾಗೆಯೇ. ಉಸಿರಾಡುವ ಕಾರ್ಯದಲ್ಲಿ ಆತಂಕವು ಯಾವ ಯಾವ ರೀತಿಯಲ್ಲಿ ಎಂತೆಂತಹ ವ್ಯತ್ಯಾಸಗಳನ್ನು ಕಾಣಿಸಬಹುದು ಎಂಬುದನ್ನು ನಿದರ್ಶನಗಳೊಂದಿಗೆ ಪರಿಶೀಲಿಸೋಣ.

**೧. ಸಿಕ್ಕಿಕೊಂಡ ಉಸಿರು**

ಎಷ್ಟು ಚೆನ್ನಾಗಿ ಬೆಳೆದಿದ್ದ, ಅಂತ. ಸುಮಾರು ೧೮ರ ಪ್ರಾಯ. ಗರಡಿ ಮನೆಯ ವಸ್ತಾದ್‌ನಂತಿದ್ದ. ಅಂದರೆ ಠೊಣಪ ಅಂತಲ್ಲ. ಗ್ರೀಕೋ ರೋಮನ್ ಸ್ಟೈಲ್ ಕುಸ್ತಿ ಮಾಡುತ್ತಾರಲ್ಲ, ಅಂತಹ ಜಟ್ಟಿಗಳ ಮೈಕಟ್ಟು. ತೋಳನ್ನು ಅವ ಬಿಗಿದು, ಬೈಸೆಪ್ಸ್ ಮಾಂಸಖಂಡಗಳನ್ನು, ಎಳೆಎಳೆಯಾಗಿ, ಕಂತೆಕಂತೆಗಳಾಗಿ ಕುಣಿಸುತ್ತಿದ್ದ. ಕಾಲೇಜಿನಲ್ಲಿ ಓದುತ್ತಿದ್ದ ಹುಡುಗ. ಆಟ ಅಥ್ಲೆಟಿಕ್ಸ್‌ಗಳಲ್ಲಿ ಆಸಕ್ತಿ ಇದ್ದವ. ಗರಡಿಯ ಮನೆಗೆ ಹೋಗದೇ ಇದ್ದರೂ ಕಡೆದ ಪ್ರತಿಮೆಯಂತಹ ದೇಹವನ್ನು ಪಡೆದಿದ್ದ.

ಮನೆಯಲ್ಲಿ ನಾಲ್ಕು ಹೆಣ್ಣು ಮಕ್ಕಳ ಮಧ್ಯೆ ಇವನೊಬ್ಬನೇ ಗಂಡು ಮಗ. ಏಕೈಕ ಕುಮಾರ ಕಂಠೀರವ–ತುಂಬಾ ಆರೈಕೆಯನ್ನು ಮಾಡಿ ಆದರದಿಂದ ಪಿಳಿಪಿಳಿ ನೋಡುವ ತಾಯಿ. ಮಗನನ್ನು ಕಂಡು ಹೆಮ್ಮೆ ಪಡುವ ತಂದೆ. ಅಕ್ಕತಂಗಿಯರ ಅಕ್ಕರೆಯನ್ನು ಕೇಳಬೇಕೆ?

ತೋಳ ಬೆಳೆದ ಹಾಗೆ ಬೆಳೆದಿದ್ದ. ಬಯಸಿದ್ದನ್ನೆಲ್ಲಾ ಪಡೆಯುತ್ತಿದ್ದ.

ಇಂತಹ ಯುವಕ ಅಪ್ಪನನ್ನು ಕರೆದುಕೊಂಡು ದವಾಖಾನೆಗೆ ಬಂದಾಗ, ನಗು ನಗುತ್ತಲೇ ಇದ್ದ. ಬೇನೆ ಬಿದ್ದವನ ಹಾಗೆ ಇವನೇನೂ ಕಾಣಿಸುವುದಿಲ್ಲವೆ! ಯಾವುದಾದರೂ ಕಾಲೇಜಿನಲ್ಲಿ ಪ್ರವೇಶವನ್ನು ದೊರಕಿಸಿಕೊಳ್ಳಲು ನನ್ನ ಪ್ರಭಾವ ಅಗತ್ಯ ಎಂದೇನಾದರೂ ಬಂದಿದ್ದಾನೋ ಎಂದು ಅರೆಕ್ಷಣ ಅನ್ನಿಸಿತು.

ಅಷ್ಟರಲ್ಲಿ ಅವನ ತಂದೆಯೇ ಪ್ರಾರಂಭಿಸಿದರು. 'ನೋಡಿ, ಡಾಕ್ಟರೇ ! ಕಳೆದ ಆರು ತಿಂಗಳುಗಳಿಂದ ಮನೆಯಲ್ಲಿ ಎಲ್ಲರ ಪ್ರಾಣವನ್ನೂ ತೆಗೀತಿದ್ದಾನೆ. ಅದಕ್ಕೆ ಮೊದಲು ಇಂತಹ ಒಳ್ಳೆಯಮಗ ಯಾರಿಗೆ ತಾನೆ ಇದ್ದಾನೆ ಎಂದು ಹೆಮ್ಮೆಪಟ್ಟುಕೊಳ್ಳುತ್ತಿದ್ದೆವು. ನನ್ನ ಕೈಲಾದ ಚಿಕಿತ್ಸೆಗಳನ್ನೆಲ್ಲಾ ಮಾಡಿಸಿದೆ. ಎಷ್ಟೋ ಹಣವನ್ನು ಖರ್ಚುಮಾಡಿದೆ. ಒಂದು ಎಳ್ಳು ಕಾಳಷ್ಟು ಪ್ರಯೋಜನವಾಗಲಿಲ್ಲ. ನನಗೆ ಎಳ್ಳುನೀರು ಬಿಟ್ಟಮೇಲೆಯೇ ಇವನಿಗೆ ಸರಿಹೋಗುವುದು ಅಂತ ಕಾಣಿಸುತ್ತೆ.'

ಎಂದು ಹೇಳಿದರು.

ಅತಿ ಬೇಸರದಿಂದ ತಂದೆ ಈ ರೀತಿ ಪರಿಚಯ ಮಾಡತೊಡಗಿದರೆ, ಬೆಳೆದ ಮಗನಿಗೂ ಬೇಜಾರಾಗಬೇಕು, ಖಿನ್ನನಾಗಬೇಕು. ಆದರೆ ಅವನ ಮುಖದ ಮೇಲೆ ಕಿರುನಗೆಯು ಇದ್ದೇ ಇತ್ತು. ಅಪ್ಪನ ಬಾಯಿಂದ ಇಂತಹ ಮಾತುಗಳನ್ನು ಕೇಳಿ ಅಭ್ಯಾಸವಾಗಿಬಿಟ್ಟಿರಬಹುದು ಎಂದುಕೊಂಡೆ. ಆದರೆ ಅಪ್ಪನು ಅಪರಿಚಿತನಾದ ನನ್ನ ಮುಂದೆ, ಈ ರೀತಿ ಮಾತನಾಡಿದ್ದು ನನ್ನನ್ನು ಕೆರಳಿಸಿತು. 'ಇದು ವಾಸಿಯಾಗುವ ಕಾಯಿಲೆ ಅಲ್ಲ ; ನೀವಿರುವತನಕ, ಅಂತ ನೀವು ನಿರ್ಧಾರವನ್ನು ಮಾಡಿಬಿಟ್ಟಿದ್ದಾದರೆ, ಈಗ ಇಲ್ಲಿಗೆ ಯಾಕೆ ಕರೆದುಕೊಂಡು ಬಂದಿರಿ ?' ಎಂದು ದಬಾಯಿಸಿದೆ.

'ಕೋಪಿಸಿಕೊಳ್ಳಬೇಡಿ, ಡಾಕ್ಟರೆ ! ಪಡಬಾರದ ಪಾಡನ್ನೆಲ್ಲ ಇವನಿಂದ ಪಟ್ಟಿದ್ದೇನೆ. ತಾಳ್ಮೆಯೇ ಹೋಗಿಬಿಟ್ಟಿದೆ. ಇರುವವನೊಬ್ಬ ಹೀಗಾದನಲ್ಲ, ಈ ವಯಸ್ಸಿನಲ್ಲಿ ಅಂತ ಕೊರಗ್ತಾ ಇದೀನಿ. ಇದು ವಾಸಿಯಾಗುತ್ತೆ ಎನ್ನುವ ಆಸೆಯನ್ನು ಬಿಟ್ಟ ಹಾಗೇನೇ. ಏನೂ ಮಾಡುಕ್ಕೆ ತೋಚದೆ, ಇದು ಹೇಗೆ ಪರ್ಯವಸನವಾಗಬಹುದು ಎಂದು ಜೋಯಿಸರ ಹತ್ತಿರ ಪ್ರಶ್ನೆ ಕೇಳಿ ತಿಳಿದುಕೊಳ್ಳೋಣ ಅಂತ ಹೋಗಿದ್ದೆ. ಕವಡೆ ಹಾಕಿ ನೋಡಿ, ಈಶಾನ್ಯ ದಿಕ್ಕಿನಲ್ಲಿ ಮೂರು ಫರ್ಲಾಂಗ್ ನಡೆದು ಹೋಗಿ, ಅಲ್ಲಿ ವಿಚಾರಿಸಿದರೆ ಅನುಕೂಲವಾಗುತ್ತೆ ಎಂದರು. ಹಾಗೆ ಮಾಡಿದರೆ ಬಹುಶಃ ದೇವಸ್ಥಾನವು ಸಿಗಬಹುದು. ದೇವರ ಸೇವೆಯನ್ನು ಇನ್ನೊಂದು ಸರ್ತಿ ಮಾಡಿಸೋಣ ಅಂತ ಇತ್ತ ಬಂದೆ. ಅವರು ಸೂಚಿಸಿದ ಸ್ಥಳದಲ್ಲಿ ದೇವಸ್ಥಾನವೂ ಇರಲಿಲ್ಲ, ದೇವರೂ ಸಿಗಲಿಲ್ಲ. ಜನನಿಬಿಡಪೇಟೆ ಮಧ್ಯದ ಸ್ಥಳ, ನಾಲ್ಕು ಕ್ಷೌರದ ಅಂಗಡಿಗಳು, ಮೂರು ದೋಭಿ ಸೆಲೂನುಗಳು, ಆರು ಹೋಟಲುಗಳೂ ಸಿಕ್ಕಿದುವು. ಇವುಗಳ ಮಧ್ಯ ಕೌಸ್ತುಭಮಣಿಯಂತೆ ದವಾಖಾನೆಯ ಬೋರ್ಡು ಕಾಣಿಸಿತು. ಅದೃಷ್ಟ ಪರೀಕ್ಷೆಯನ್ನು ಇಲ್ಲಿಯೂ ಮಾಡಿ ನೋಡೋಣ ಅಂತ ಬಂದೆ.' ಎಂದು ಇದ್ದುದನ್ನು ಇದ್ದ ಹಾಗೆಯೇ ಹೇಳಿದರು, ನನ್ನ ಕೀರ್ತಿಯನ್ನು ಕೇಳಿ ಹುಡುಕಿಕೊಂಡು ಬಂದರು ಎಂದು ಒಳಗೊಳಗೇ ತುಸು ಹೆಮ್ಮೆ ಪಡುತ್ತಿದ್ದ ನನಗೆ ದಬ್ಬಳದಲ್ಲಿ ಹೊಟ್ಟೆಯನ್ನು ಚುಚ್ಚಿದ ಹಾಗಾಯಿತು. ಆದರೆ ಹೊಟ್ಟೆಪಾಡಿಗಾಗಿ ಎಂತೆಂತಹ ಅವಮಾನವನ್ನೂ ಅನುಭವಿಸಬೇಕಲ್ಲ. ಸೌಟಿನಿಂದ ತಲೆಯ ಮೇಲೆ 'ಅನ್ನಪೂರ್ಣೆ' ಚಚ್ಚಿದರೂ ತೆಪ್ಪಗಿರಲೇಬೇಕು.

ರೋಗಿಯ ಕಡೆಗೆ ತಿರುಗಿದೆ. ನಿನ್ನೊಂದಿಗೆ ಸಹಾನುಭೂತಿ ಇದೆ ಎನ್ನುವಂತೆ

ಮಾತಾಡಲಾರಂಭಿಸಿದೆ. 'ಏನಾಗುತ್ತಪ್ಪ ನಿನಗೆ, ಎಷ್ಟು ದಿನಗಳಿಂದ ? ನೋಡುವುದಕ್ಕೇನೋ ತೋಳನ ಹಾಗೆಯೇ ಇದಿ. ರಹಸ್ಯವಾಗಿ ಮಾತಾಡಬೇಕು ಎನಿಸಿದರೆ ಒಳಕೊಠಡಿಗೆ ಹೋಗೋಣ' ಎಂದೆ.

ನನ್ನ ಈ ಪ್ರಶ್ನೆಗೂ ರೋಗಿಯ ಮುಖದಲ್ಲಿ ಕಿರುನಗೆಯೇ ಪ್ರತಿಕ್ರಿಯೆ. 'ಎಲಾ, ಇವನ ! ಇದರೊಳಗೇನೋ ಗೂಢಾರ್ಥದ ಮರ್ಮವಿರಬೇಕು' ಎಂದೆನಿಸಿತು. 'ಬಾಪ್ಪ, ಒಳಕ್ಕೆ ಹೋಗೋಣ, ಪರೀಕ್ಷೆಯನ್ನು ಮಾಡ್ತೀನಿ' ಎಂದು ಹೇಳುತ್ತಾ ಒಳಕೊಠಡಿಗೆ ಕರೆದುಕೊಂಡು ಹೋದೆ. ತನಗಾದುದನ್ನೂ ಆಗುತ್ತಿರುವುದನ್ನೂ ಅವ ವಿವರಿಸಿದ.

ಅವನ ಕಷ್ಟವೆಲ್ಲಾ ಉಸಿರಾಡುವುದರಲ್ಲಿ. ಕಾಲೇಜಿಗೆ ಸೈಕಲ್ ಮೇಲೆ ಹೋಗುತ್ತಿರುತ್ತಾನೆ. ಮುಕ್ಕಾಲು ದಾರಿ ಹೋದ ಮೇಲೆ ಉಸಿರು ನಿಂತು ಹೋಗುತ್ತಂತೆ. ಉಸಿರು ನಿಂತಿದ್ದರೂ ಒಂದೆರಡು ಫರ್ಲಾಂಗ್ ಸೈಕಲ್ ತುಳಿಯುತ್ತಾನಂತೆ. ಅಲ್ಲಿಗೂ ಮೇಲಿನ ಉಸಿರು ಮೇಲೆ, ಕೆಳಗಿನ ಉಸಿರು ಕೆಳಗಡೆಯೇ ಇದ್ದು ಬಿಡುತ್ತಂತೆ. ಉಸಿರು ಆಡುವುದೇ ಇಲ್ಲವಂತೆ. ಹೀಗೆಯೇ ಇದ್ದರೆ ಸತ್ತು ಹೋಗುತ್ತೇನಲ್ಲಾ, ಎಂದು ಹೆದರಿಕೆಯಾಗುವುದಂತೆ. ರಸ್ತೆಯಲ್ಲಿ ಸತ್ತು ಬಿದ್ದರೆ ಎಷ್ಟು ಅವಮಾನವಾಗುತ್ತೆ ಎಂದು ಅನಿಸಿ ನಾಚಿಕೆಯಾಗುತ್ತದಂತೆ. ಆಗ ಮನೆಗೆ ಹಿಂತಿರುಗಿಬಿಡುತ್ತಾನಂತೆ. ಮನೆಯಲ್ಲಿ ಹಾಸಿಗೆಯ ಮೇಲೆ ಬಿದ್ದುಕೊಂಡು, ತುಂಬಾ ಶ್ರಮಪಟ್ಟ ಮೇಲೆ, ಉಸಿರು ಆಡಲು ಸಾಧ್ಯವಾಗುವುದಂತೆ, ಕೆಲವು ವೇಳೆ ಎದೆಯು ಡವ ಡವ ಹೊಡೆದುಕೊಳ್ಳುವುದಂತೆ. ಮನಸ್ಸೇ ಸ್ತಿಮಿತದಲ್ಲಿರುವುದಿಲ್ಲವಂತೆ. ಎಲ್ಲಾದರೂ ಓಡಿಹೋಗೋಣ ಅಂತ ಅನ್ನಿಸುತ್ತದಂತೆ.

ಇವೆಲ್ಲಾ ಹೇಗೆ ಪ್ರಾರಂಭವಾಯಿತೋ, ಅದು ಅವನಿಗೆ ನಿಖರವಾಗಿ ತಿಳಿಯದು. ಎಷ್ಟು ದಿವಸಗಳಿಂದ ಎನ್ನುವುದೂ ಸರಿಯಾಗಿ ಗೊತ್ತಿಲ್ಲ. ಆದರೆ ಕಳೆದ ಆರೇಳು ತಿಂಗಳುಗಳಿಂದ ಉಸಿರಾಟದ ಕಾಟವು ಅತಿಯಾಗಿ ಕಾಡಲಾರಂಭಿಸಿದೆ ಎಂದು ಹೇಳುತ್ತಾನೆ. ವಿದ್ಯಾಭ್ಯಾಸಕ್ಕೆ ಅಡಚಣೆಯುಂಟುಮಾಡುತ್ತಿದೆ ಎಂದವನಿಗೆ ಗೊತ್ತು. ಆದರೂ ಅದರ ಕಾಳಜಿಯು ವಿಶೇಷವಾಗಿಯೇನೂ ಇಲ್ಲ. ಆದರೆ ಹಠಾತ್ತನೆ ಉಸಿರು ಸಿಕ್ಕಿಕೊಳ್ಳುವುದರಿಂದ, ಜಟ್ಟಂತ ಯಾವ ಮುನ್ಸೂಚನೆಯೂ ಇಲ್ಲದೆ ಸತ್ತು ಹೋಗುತ್ತೇನೆ ಎನ್ನುವ ಭಯವು ವಿಪರೀತವಾಗಿದೆ.

ಶೈಶವ, ಬಾಲ್ಯ, ಆತನಕದ ಕೌಮಾರ್ಯದ ವಯಸ್ಸುಗಳಲ್ಲಿ, ಯಾವುದೊಂದು ವಿಚಿತ್ರವಾದ, ಅಥವಾ ಭಯ ಹುಟ್ಟಿಸುವಂತಹ ಅನುಭವಗಳೂ ಆಗಿದ್ದ ನೆನಪಿರಲಿಲ್ಲ.

ದೇಹಾರೋಗ್ಯವು ಸಮರ್ಪಕವಾಗಿತ್ತು. ಶಾಲೆಯಲ್ಲಿ ಯಾವ ಮೆಹನತ್ತನ್ನು ಪಡೆಯದೆ ಇದ್ದರೂ, ನಲವತ್ತು, ನಲವತ್ತೈದು, ಅಂಕಿಗಳನ್ನು ಪಡೆದು ಪ್ಯಾಸ್ ಆಗುತ್ತಿದ್ದ. ಹತ್ತನೇ ಸ್ಟಾಂಡರ್ಡ್‌ನಲ್ಲಿ ಒಮ್ಮೆ ಕುಂಟಿದ್ದ. ಆದರೆ ಆ ಪರೀಕ್ಷೆಯ ಕಾಲದಲ್ಲಿ ಅವನ ತಾಯಿಗೆ ಭಯಂಕರ ಸ್ವರೂಪದ ನ್ಯೂಮೋನಿಯಾ ತಾಕಿತ್ತು. ಎರಡು ದಿನ ಆಕೆ ಇತ್ತಲೋ ಅತ್ತಲೋ ಎನ್ನುವಂತೆ, ನರಳಿದ್ದಳು. ಕಫ ಕಟ್ಟಿಕೊಂಡು ಗೊರ್ ಗೊರ್ ಶಬ್ದವು ಕೇಳಿಸುತ್ತಿತ್ತು ; ದೂರದಲ್ಲಿ ನಿಂತವರಿಗೂ ಕೂಡ. ಭಗವಂತನ ಕೃಪೆಯಿಂದ ಆಕೆಗೆ ಗುಣವೇನೋ ಆಯಿತು. ಆದರೆ ಇವನ ಓದಿಗೆ ಅಡ್ಡಿಯಾಯಿತು. ಆ ವರ್ಷ ನಪಾಸಾಗಿದ್ದ. ಅನಂತರ ಎರಡು ಮೂರು ವರ್ಷ ಚೆನ್ನಾಗಿಯೇ ಇದ್ದ. ಯಾವ ಮಾಯದಲ್ಲೋ ಈ ಬೇನೆಯು ಬಂದು ಅಮರಿಕೊಂಡಿತು. ದಿನದಲ್ಲಿ ಮೂರು ನಾಲ್ಕು ಬಾರಿ, ಅರ್ಧ ಗಂಟೆಯಿಂದ ಒಂದು ಗಂಟೆಯ ತನಕ ಹೀಗೆ ಕಾಡುತ್ತದೆ. ಮಿಕ್ಕ ವೇಳೆಯಲ್ಲಿ ಆರೋಗ್ಯವಾಗಿಯೇ ಇರುತ್ತಾನೆ. ಆದರೂ ತಿರುಗಿ ಯಾವಾಗ ಹಾಗೆ ಆಗುತ್ತದೋ ಎನ್ನುವ ಹೆದರಿಕೆಯು ಇದ್ದೇ ಇರುತ್ತದೆ.

'ನಿತ್ಯ ಸಾಯುವವರಿಗೆ ಅಳೋರು ಯಾರು ?' ಎನ್ನುವ ಹಾಗೆ, ಈಗೀಗ ನನ್ನನ್ನು ಕಂಡರೆ ಮನೆಯವರಿಗೆಲ್ಲಾ ತಾತ್ಸಾರ ಹುಟ್ಟಿದೆ. 'ಉಸಿರು ನಿಂತು ಹೋದರೆ, ಹೋಗಲಿ ಬಿಡು, ಅಂತ ಅಪಹಾಸ್ಯ ಮಾಡುತ್ತಾರೆ,' ಎಂದು ಹೇಳಿದ, ಅರೆ ಕ್ಷಣದಲ್ಲಿ ಅವನ ಮುಖದಲ್ಲಿ ಉದ್ದುದ್ದ ಗೆರೆಗಳು ಮೂಡಿದವು.

'ನೋಡಿ ಡಾಕ್ಟರೇ ! ಈಗ ಉಸಿರು ನಿಂತೇ ಹೋಗಿದೆ' ಎಂದ. ನೋಡುತ್ತಲೇ ಇದ್ದೆ. ಅವನು ಉಸಿರು ಆಡುತ್ತಲೇ ಇದ್ದ. ನಿಟ್ಟುಸಿರನ್ನು ಕಷ್ಟದಿಂದ ಎಳೆದುಕೊಂಡು ಬಿಡುವವರಂತೆ ಸದ್ದು ಮಾಡುತ್ತಾ ಉಸಿರಾಡುತ್ತಿದ್ದ. ಹಣೆಯ ಮೇಲೆ ಕಿರು ಬೆವರು ಹನಿಗಳು ಮಣಿಗಟ್ಟಿದುವು. ಆದರೆ ಅವನ ಮಾತುಗಳಲ್ಲಿ ಯಾಗಲೀ, ನಡವಳಿಕೆಯಲ್ಲಾಗಲೀ, ಪೆಚ್ಚುತನವಾಗಲೀ, ಅಸಂಬದ್ಧವಾಗಲೀ ಇರಲಿಲ್ಲ. ತಲೆ ತಿರುಗಿ ಭೌಳಿ ಬರುವುದಾಗಲೀ, ಕೈಕಾಲು ಕುಸಿದಂತೆ ಆಗುವುದಾಗಲೀ, ಯಾವುದೂ ಸಂಭವಿಸಿರಲಿಲ್ಲ.

ದೇಹಾರೋಗ್ಯವು ಸಾಕಷ್ಟು ಸಮರ್ಪಕವಾಗಿರುವ ಈ ಯುವಕನಿಗೆ ಆತಂಕವು ಅಲೆಯಲೆಯಾಗಿ ಬಡಿದು, ಈ ರೀತಿ ಉಸಿರಾಟದ ಭ್ರಮಾ ಕಷ್ಟವನ್ನು ಕೊಟ್ಟು ಏಕೆ ಕಾಡುತ್ತಿದೆ?

ಹೊರನೋಟಕ್ಕೆ ದೇಹಾರೋಗ್ಯವು ಸಮರ್ಪಕವಾಗಿ ಕಂಡರೂ, ಇನ್ನೂ ವ್ಯಕ್ತವಾಗದೆ ಇರುವ ಎಂಡೋಕ್ರೀನ್ ಗ್ರಂಥಿಗಳ ಏರುಪೇರಿನಿಂದ

ಹೀಗಾಗುತ್ತಿರಬಹುದೇ? ಇದನ್ನು ಬಲು ಎಚ್ಚರದಿಂದ ಪರಿಶೀಲಿಸಬೇಕು, ಎಂದುಕೊಂಡೆ. 'ನಾಳೆಯ ಬೆಳಗ್ಗೆ ಬಾಪ್ಪ, ಸದ್ಯಕ್ಕೆ ಈ ಔಷಧಿಯನ್ನು ಸೇವಿಸು, ಇದರಿಂದ ಎಷ್ಟು ಗುಣವಾಗುತ್ತದೆ ನೋಡಿಕೊಂಡು, ಚಿಕಿತ್ಸೆಯನ್ನು ಮುಂದುವರಿಸೋಣ. ನಿನ್ನ ಬೇನೆಯು ತುಂಬಾ ಅಲ್ಪವಾದುದು. ಬೇಗ ಗುಣವೂ ಆಗುತ್ತೆ. ಆದರೆ ನರಳುತ್ತಿರುವ ನಿನಗೆ ಘೋರವಾಗಿ ಕಾಣಿಸುತ್ತೆ' ಎಂದು ಧೈರ್ಯವನ್ನು ಹೇಳಿ, ರೋಗಿಯನ್ನೂ ಅವನ ತಂದೆಯನ್ನೂ ಕಳಿಸಿಕೊಟ್ಟೆ. ಸಂಜೆ ಮನೆಯಲ್ಲಿ ಈ ಬೇನೆಯ ವಿಷಯದಲ್ಲಿ ವೈದ್ಯ ಪತ್ರಿಕೆಗಳಲ್ಲಿ ಪ್ರಕಟಿಸಿರುವ ಇತ್ತೀಚಿನ ಲೇಖನಗಳನ್ನು ವ್ಯಾಸಂಗ ಮಾಡಿದರೆ, ನಾಳೆ ರೋಗಿಯನ್ನು ಪುನಃ ಪರೀಕ್ಷಿಸುವಾಗ ಹೆಚ್ಚು ಉಪಯೋಗವಾಗಬಹುದು ಎಂದು ಯೋಚಿಸಿದೆ.

ಮಾರನೆಯ ದಿನ ರೋಗಿಯು ಬಂದಾಗ, ಸೂಕ್ಷ್ಮವಾಗಿ ಪರೀಕ್ಷೆ ಮಾಡಲು, ಸಕಲ ಸಿದ್ಧತೆಗಳನ್ನೂ ಮಾಡಿಕೊಂಡಿದ್ದೆ. ಯಾವ ಬೇನೆಯ ಚಿಕಿತ್ಸೆಗಾಗಲೀ ರೋಗಿಯು ವೈದ್ಯನ ಬಳಿಗೆ ಹೋದಾಗ, ಅತ್ಯಗತ್ಯವಾದುದು, ವೈದ್ಯನ ಸಹಾನುಭೂತಿ ಮತ್ತು ಅನುಕಂಪ. ಎಲ್ಲ ವೈದ್ಯರಲ್ಲಿಯೂ ಇವೆರಡೂ ಅಧಿಕ ಪ್ರಮಾಣದಲ್ಲಿ ಇದ್ದೇ ಇರುತ್ತವೆ. ಆದರೆ ಇದನ್ನು ರೋಗಿಗೆ ಮನತಟ್ಟುವಂತೆ ಪ್ರದರ್ಶಿಸುವುದೂ ಅತ್ಯವಶ್ಯಕ. ಹೀಗೆ ಮಾಡಬೇಕಾದರೆ ಸಾವಧಾನವಾಗಿ ವೈದ್ಯನು ಮಾತನಾಡಬೇಕು. ಅವಸರವಿಲ್ಲದೇ ಮಾತನಾಡಬೇಕು. ನಮ್ಮ ದೇಶದ ಇಂದಿನ ಸ್ಥಿತಿಯಲ್ಲಿ ಇಷ್ಟು ವ್ಯವಧಾನವು ಯಾವ ವೈದ್ಯನಿಗೂ ಇರುವುದಿಲ್ಲ. ಆದರೂ ಸಾಧ್ಯವಾದಷ್ಟು ಹಿತವಾಗಿ ಮಾತನಾಡಿದರೆ, ಸಾಕಷ್ಟು ಗುಣವಾಗುತ್ತದೆ; ಏಕೆಂದರೆ, ದೈಹಿಕ ಏರುಪೇರುಗಳನ್ನು ಔಷಧವು ಸರಿಪಡಿಸುವುದರಿಂದ.

ಆದರೆ ಮಾನಸಿಕ ಬೇನೆಗಳಿಂದ ನರಳುತ್ತಿರುವವನಿಗೆ, ವೈದ್ಯರ ಸಹಾನುಭೂತಿ ಮತ್ತು ಅನುಕಂಪದ ಪ್ರದರ್ಶನವೂ ಅತ್ಯಗತ್ಯ. ಸಹಾನುಭೂತಿಯಾಗಲೀ ಅನುಕಂಪವಾಗಲೀ ವೈದ್ಯನ ಮನಸ್ಸಿನಲ್ಲಿ ಇರಲಿ, ಇಲ್ಲದೇ ಬರೀ ಬೇಸರವೇ ತುಂಬಿರಲಿ, ಅದು ಮುಖ್ಯವಲ್ಲ, ಸಹಾನುಭೂತಿಯಿದೆ ಎಂದು ಲಕ್ಷಣವಾಗಿ ನಟಿಸಿದರೂ ಆಯಿತು. ಆಗ ರೋಗಿಯ ಮನಸ್ಸಿನಲ್ಲಿ 'ವೈದ್ಯನಿಗೆ ನನ್ನ ಮೇಲೆ ತುಂಬಾ ವಿಶ್ವಾಸವಿದೆ, ನನಗಾಗಿ ಶ್ರಮವಹಿಸುತ್ತಿದ್ದಾರೆ' ಎಂಬ ನಂಬಿಕೆಯು ಉಂಟಾದರೆ ಸಾಕು, ಸ್ವಲ್ಪ ಪಲ್ಲಟವಾಗುತ್ತಿರುವ ರೋಗಿಯ ಮನಸ್ಸು, ಈ ನಂಬಿಕೆಯನ್ನು ದೃಢವಾದ ಊರೆಗೋಲನ್ನಾಗಿ ಮಾಡಿಕೊಂಡು ಸ್ತಿಮಿತಕ್ಕೆ ಬರಲು ಯತ್ನಿಸುತ್ತದೆ. ಬಹುತೇಕ ಈ ಯತ್ನವು ಜಯವನ್ನು ಗಳಿಸುತ್ತದೆ.

ಆದಕಾರಣ ನಾಟಕೀಯವಾಗಿ ರೋಗಿಯನ್ನು ಮಾತನಾಡಿಸಲಾರಂಭಿಸಿದೆ.

ತಾಯ್ತಂದೆಯರ, ಅಕ್ಕತಂಗಿಯರ, ಅಣ್ಣತಮ್ಮಂದಿರ ಆರೋಗ್ಯವನ್ನೂ ಜಾಯಮಾನವನ್ನೂ ವಿಚಾರಿಸಿದೆ. ಬಾಲ್ಯದಿಂದಲೂ ಇದ್ದ ರೋಗಿಯ ಸ್ವಭಾವ, ಅನುಭವಿಸಿದ್ದ ಬೇನೆಗಳು ಎಲ್ಲವನ್ನೂ ಗುರುತಿಸಿಕೊಂಡೆ. ದೇಹದ ವಿವಿಧ ಅಂಗಗಳ ವಿವರ ಪರೀಕ್ಷೆಯನ್ನೂ ಶಾಸ್ತ್ರೋಕ್ತವಾಗಿ ಮಾಡಿ ಮುಗಿಸಿದೆ. ಶ್ವಾಸಕೋಶಗಳಲ್ಲಿ ಆತಂಕವು ಮನೆಮಾಡಿಕೊಂಡಿತ್ತಾದ್ದರಿಂದ, ಜಾಗರೂಕತೆಯಿಂದ ಅದನ್ನು ಪರೀಕ್ಷಿಸಿದೆ. ಮೂಗು ಕಿವಿ ಗಂಟಲುಗಳ ಪರೀಕ್ಷೆಯೂ ಆಯಿತು. ನನ್ನ ವಿಚಾರದಲ್ಲಿ ವೈದ್ಯರಿಗೆ ಎಷ್ಟು ಶ್ರದ್ಧೆ ಎಂದು ರೋಗಿಗೆ ಖಂಡಿತವಾಗಿರಲೇಬೇಕು. ದೇಹದಲ್ಲಿ ಯಾವ ಖಾಯಿಲೆಯು ಇರುವ ಸೂಚನೆಯೂ ನನಗೆ ದೊರಕಲಿಲ್ಲ. ಮೊದಲೇ ಊಹಿಸಿದ್ದಂತೆ, ಇದು ಆತಂಕದ ಮಾನಸಿಕ ಬೇನೆ ಎನ್ನುವುದು ಖಂಡಿತವಾಯಿತು.

ರೋಗಿಯ ಪೌಗಂಡ ವಯಸ್ಸಿನಲ್ಲಿ ಕಣ್ಣಿಗೆ ಕಂಡ ಸೆರಗೆಲ್ಲವೂ, ಅಪ್ಸರೆಯದೇ ಎನ್ನುವ ಭ್ರಾಂತಿಯು ಮೂಡುವುದು ಸ್ವಾಭಾವಿಕ. ಉದಾತ್ತ ಧ್ಯೇಯಗಳೂ ಅದೇ ವಯಸ್ಸಿನಲ್ಲಿ ತೀವ್ರವೂ ಆಗಿರುತ್ತವೆ. ಆ ಕಾರಣದಿಂದ ಮನಸ್ಸಿನಲ್ಲಿ ಮೂಡಿದ ಆ ತೆರನ ಭ್ರಾಂತಿಗಳನ್ನು, ಅವ ಹಠದಿಂದ ಮೆಟ್ಟುತ್ತಾನೆ. ತೋರ ಮನಸ್ಸಿನಿಂದಾಚೆಗೆ ಅಂತಹ ಯೋಚನೆಗಳನ್ನು ದಬ್ಬಲು ಯತ್ನಿಸುತ್ತಾನೆ. ಆಗ ಅಂತಹ ಭ್ರಾಂತಿ ರೂಪಿನ ಯೋಚನೆಗಳು ಆಳ ಮನಸ್ಸಿನ ಹಗೇವುಗಳಲ್ಲಿ ಶೇಖರವಾಗುತ್ತವೆ. ತೋರಮನಸ್ಸು ನಿರ್ಮಲವೇನೋ ಆಗುತ್ತದೆ. ಯುವಕನಿಗೆ ನೆಮ್ಮದಿಯೂ ತಾತ್ಕಾಲಿಕವಾಗಿ ದೊರಕುತ್ತದೆ.

ಕೊಠಡಿಯನ್ನು ಗುಡಿಸಿ, ಕಸವನ್ನೆಲ್ಲಾ ಹಾಸಿದ ಜಮಖಾನದ ತಳಕ್ಕೆ, ಜವಾನನು ದಬ್ಬುತ್ತಾನೆ. ಕೊಠಡಿಯು ಸ್ವಚ್ಛವಾಗಿದೆ ಎಂದು ಮನೆಯೊಡತಿಯು ಹಿಗ್ಗುತ್ತಾಳೆ. ಅದೇ ರೀತಿಯಲ್ಲಿ ಪೌಗಂಡ ವಯಸ್ಸಿನವರ ಸಹಜ ಭ್ರಾಂತಿಯ ಯೋಚನೆಗಳು. ಜಮಖಾನದ ಕೆಳಗಿನ ಕಸದಂತೆ, ಆಳ ಮನಸ್ಸಿನ ಹಗೇವುಗಳಲ್ಲಿ ಭ್ರಾಂತಿಯ ಯೋಚನೆಗಳು ತುಂಬಲ್ಪಡುತ್ತವೆ.

ಜಮಖಾನದ ಕೆಳಗೆ ದೂಡಲ್ಪಟ್ಟ ಕಸವು, ಎಂದಾದರೊಮ್ಮೆ ಒಡತಿಯ ಗಮನಕ್ಕೆ ಬರಬಹುದು. ಆದರೆ ಆಳ ಮನಸ್ಸಿನಲ್ಲಿ ಅದುಮಲ್ಪಟ್ಟ ಭ್ರಾಂತಿಯ ಕಸವು, ಚಿತ್ರವಿಚಿತ್ರ ವೇಷಗಳನ್ನು ಧರಿಸಿ, ದೆವ್ವಗಳಂತೆ ರೋಗಿಯನ್ನು ಬೆದರಿಸುತ್ತಲೇ ಇರುತ್ತವೆ. ಈ ಒಂದು ಕಾರಣದಿಂದಲೂ ಆತಂಕವೂ ಕಾತರವೂ ಹುಟ್ಟಿಕೊಳ್ಳುತ್ತದೆ. ತನ್ನ ಆತಂಕದ ಮೂಲ ಕಾರಣವು ರೋಗಿಗೆ ನಿಜವಾಗಲೂ ತಿಳಿದಿರುವುದೇ ಇಲ್ಲ. ಈ ತೆರನ ಯೋಚನೆಗಳು ಮನಸ್ಸಿನ ನೆಮ್ಮದಿಯನ್ನು ಕದಡುತ್ತವೆ ಎಂದಲ್ಲವೇ

ಅವನ್ನು ಮನಸ್ಸಿನ ಹಗೇವುಗಳಿಗೆ ಪ್ರಕೃತಿಯ ಸ್ವಸ್ವಭಾವದಿಂದ ದೂಡಿದ್ದು ! ಆದುದರಿಂದಲೇ ರೋಗಿಗೆ ಈ ವಿಷಯವನ್ನು ವೈದ್ಯನು ವಿವರಿಸಿದರೆ, ಅವ ತಿರುಗಿಬೀಳುತ್ತಾನೆ.

'ನೀತಿ ನಿಯಮಗಳನ್ನು ಅರಿಯದ ಜಾತಿಗೆಟ್ಟ ಡಾಕ್ಟರು ; ಅಲ್ಲಸಲ್ಲದ ಕೆಟ್ಟ ಆಸೆಗಳು ಅವನ ಮನಸ್ಸನ್ನು ಕಾಡುತ್ತಿವೆಯೇನೋ? ಅವನ್ನೆಲ್ಲಾ ನನಗೆ ವರ್ಗಾಯಿಸುತ್ತಿದ್ದಾನೆ. ನನ್ನಂತಹ ಧೀರೋದಾತ್ತನಿಗೆ! ನನ್ನಂತಹ ನೀತಿ ಮೂರ್ತಿಗೆ! ತಪ್ಪದೆ ಸಂಧ್ಯಾವಂದನೆಯನ್ನು ಮಾಡುವ, ದೇವಸ್ಥಾನಕ್ಕೆ ಆಗಿಂದಾಗ್ಗೆ ಹೋಗಿ ಸೇವೆ ಮಾಡುವ, ನನ್ನಂತಹ ದೈವಭಕ್ತನಿಗೆ, ದೈವಭೀರುವಿಗೆ ಇಂತಹ ಕೆಟ್ಟ ಯೋಚನೆಗಳು ಹೇಗೆ ತಾನೆ ಬರಲು ಸಾಧ್ಯ !' ಹೀಗೆ ಅವನ ಜಾಣ ಮತ್ತು ತೋರ ಮನಸ್ಸು ನುಡಿಯುತ್ತದೆ. ಆ ತನಕ ಬೆಳೆಸಿಕೊಂಡು ಬಂದಿರುವ ವೈದ್ಯನಲ್ಲಿನ ನಂಬಿಕೆಯು ಸಡಿಲವಾಗುತ್ತದೆ. ಆದಕಾರಣ ಬಿಚ್ಚು ಮಾತುಗಳಲ್ಲಿ ವೈದ್ಯನು ಇವನ್ನು ಹೇಳುವಂತಿಲ್ಲ. ಎಳ್ಳಂಬಳಸೆಯಾಗಿ ಪ್ರಶ್ನೆಗಳನ್ನು ಕೇಳಿ, ಬಂದ ಉತ್ತರಗಳಿಂದ ಅಗತ್ಯವಾದ ವಿಷಯಗಳನ್ನು ಸಂಗ್ರಹಿಸಬೇಕು.

ಉಸಿರು ಸಿಕ್ಕಿಕೊಂಡ ನಮ್ಮ ತರುಣ, ಈ ರೀತಿ ಎಳ್ಳಂಬಳಸೆ ಸಂಭಾಷಣೆಯನ್ನು ಮಾಡಿದಾಗ ಹೇಳಿದ:–

'ನನ್ನ ಕ್ಲಾಸ್ ಮೇಟ್ ಒಬ್ಬ ಇದಾನೆ, ಸಾರ್ ! ಎಂತಹ ದುರ್ಮಾರ್ಗೀ ಅಂತ ! ಅವನ ಹತ್ತಿರ ಮಾತನಾಡುವುದಿರಲಿ, ಅವನ ಮುಖವನ್ನು ನೋಡುವುದಕ್ಕೂ ನನಗೆ ಬೇಸರ. ಕ್ಲಾಸಿಗೆ ಚಕ್ಕರ್ ಕೊಟ್ಟು, ಮಧ್ಯಾಹ್ನದ ಮ್ಯಾಟನಿಗೆ, ಹುಡುಗಿಯ ಜತೆಗೆ ಹೋಗಿಬಿಡುತ್ತಾನೆ, ಸಾರ್ ! ಎಂಥಹ ರೌರವಾದಿ ನರಕ ಅವನಿಗೆ ಮೀಸಲಾಗಿದೆಯೋ ಕಾಣೆ !' ಎಂದು ಹೇಳಿ ಗಹಗಹಿಸಿ ನಕ್ಕ.

'ಅಷ್ಟರ ಕೀಳು ಮಟ್ಟಕ್ಕೆ ನಿಮ್ಮ ಕಾಲೇಜು ಈಗ ಇಳಿದಿದೆಯೇ?' ಎಂದು ಸಹಾನುಭೂತಿಯನ್ನು ತೋರಿಸಿದೆ. ಹಾಗೆ ಮಾಡುವಾಗ ಅವನ ನಿಷ್ಠೆಯನ್ನೂ ಹೊಗಳಿದಂತಾಯಿತು. ಅವನೂ ತುಸು Relax ಆದ. ಬಿಚ್ಚು ಮನಸ್ಸಿನಿಂದ ಮಾತನಾಡತೊಡಗಿದ.

ಪೌಗಂಡ ವಯಸ್ಸಿನಲ್ಲಿ ಸಹಜವೂ ಸ್ವಾಭಾವಿಕವೂ ಆದ ಇಂತಹ ಭ್ರಾಂತಿಗಳು ಒಂದು ದೃಷ್ಟಿಯಲ್ಲಿ ಅಗತ್ಯವೂ ಹೌದು. ನಿಷ್ಠಾಧ್ಯೇಯದವರು, ಇಂತಹ ಭ್ರಾಂತಿಗಳನ್ನು ಕಠಿಣ ಶಿಕ್ಷೆಗೆ ಒಳಪಡಿಸುವಂತೆ, ಆಳ ಮನಸ್ಸಿನ ಹಗೇವುಗಳಿಗೆ ದೂಡುತ್ತಾರೆ. ಮಲಗಿ ನಿದ್ರಿಸುವಾಗ ನಿಷ್ಠಾವಂತ ಮನಸ್ಸಿನ ಹತೋಟಿಯು ಮಸುಕಾಗುತ್ತದೆ. ಆಗ ಅದುಮಲ್ಪಟ್ಟ ಭ್ರಾಂತಿಯೋಚನೆಗಳೂ ಕನಸುಗಳಾಗಿ

ವೇಷ ಧರಿಸಿಕೊಂಡು ನಿದ್ರಿಸುವವನ ಮನಸ್ಸಿನಲ್ಲಿ ಚಲನಚಿತ್ರದಂತೆ ಪ್ರದರ್ಶನವನ್ನು ನಡೆಸುತ್ತವೆ. ವಯಸ್ಸಿನ ಸ್ವಾಭಾವಿಕ ಒತ್ತಡವನ್ನು ಕನಸಿನಲ್ಲಿ ನೆನೆಸಿ, ಇಳಿಸುತ್ತದೆ. ಮನಸ್ಸಿನ ಈ ವರ್ತನೆಯನ್ನು ಎಳ್ಳಂಬಳಸೆಯಾಗಿ ವಿವರಿಸಿದಾಗ, ಅವನೇ ಹೇಳಿದ :–

'ಕೆಲವೊಮ್ಮೆ, ನನಗೂ ಯಾವ ಪ್ರೇರಣೆಯು ಇರದೆ ಇದ್ದರೂ, ಅಸಹ್ಯವಾದ ಕನಸುಗಳು ಬೀಳುತ್ತವೆ. ಎಚ್ಚರವಾಗುವ ಹೊತ್ತಿಗೆ ಮೈಲಿಗೆಯಾಗಿ ಬಿಟ್ಟಿರುತ್ತೇನೆ. ಮನಸ್ಸಿಗೆ ತುಂಬಾ ಬೇಸರವೂ ಜುಗುಪ್ಸೆಯೂ ಆಗುತ್ತದೆ, ಆಗ. ಇದನ್ನು ತಪ್ಪಿಸುವಂತೆ ಔಷಧಿಗಳನ್ನು ಕೊಡಿ, ಸಾರ್' ಎಂದು.

ಹೀಗಾಗುವುದು ಯೌವನದ ಸಹಜ ಪ್ರವೃತ್ತಿ ಎಂದವನಿಗೆ ತಿಳಿದಿದ್ದರೆ, ಹೀಗಾಗುತ್ತಲ್ಲ ಎನ್ನುವ ಹೇಯ ಮನೋಭಾವವು ಉಂಟಾಗುತ್ತಿರಲಿಲ್ಲ. ಕೊರಗುತ್ತಲೂ ಇರಲಿಲ್ಲ. ಇನ್ನೂ ಒಂದು ಭಯಂಕರ ಪಿಶಾಚಿಯು ಅವನನ್ನು ಕಾಡುತ್ತದೆ. 'ಹೀಗೆಯೇ ಮುಂದೆಯೂ ಆಗುತ್ತ ಹೋದರೆ, ನನ್ನ ದೇಹವು ಶಿಥಿಲವಾಗುತ್ತದೆ. ಮದುವೆಯಾಗುವ ಹೊತ್ತಿಗೆ ಬೃಹನ್ನಳೆಯಾಗಿ ಬಿಡುತ್ತೇನೆ. ನನ್ನ ಬಾಳಭವಿಷ್ಯವೇ ಹಾಳಾಗಿ ಹೋಗುತ್ತದೆ' ಎನ್ನುವ ಪಿಶಾಚಿಯು ಅವನ ಮನಸ್ಸನ್ನು ಕಾಡತೊಡಗುತ್ತದೆ. ಪತ್ರಿಕೆಗಳಲ್ಲಿ ಬರುವ ಜಾಹಿರಾತುಗಳು, ವಿಧವಿಧ ಮುರಬ್ಬಾಗಳೂ ಈ ಪಿಶಾಚಿಗಳನ್ನು ಹೊರವಾಗಿ ಬೆಳೆಸುತ್ತವೆ. ಜತೆ ವಯಸ್ಸಿನ ಗೆಳೆಯರು ಹೇಳುವ ಘೋರ ವಿವರಗಳೂ ಇಂತಹ ಪಿಶಾಚಿಗೆ ಕುಮ್ಮಕ್ಕು ಕೊಡುತ್ತವೆ. ಪತ್ರಿಕೆಗಳಲ್ಲಿ ಬರುವ ಲೇಖನಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ, ಅರ್ಥಂಬರ್ಥ ಅಪಾರ್ಥ ಮಾಡಿಕೊಳ್ಳುವುದರಿಂದಲೂ ಷಂಡತ್ವದ ಭಯವು ಅತಿಯಾಗುತ್ತದೆ. ಈ ವಿಷಯವನ್ನೆಲ್ಲಾ ಬಿಡಿಬಿಡಿಯಾಗಿ, ಮೇಲಿಂದಮೇಲೆ ಒತ್ತಿಒತ್ತಿ ಹೇಳಿದೆ. 'ಬಹುಪಾಲು ಜನರಿಗೆ ಪೌಗಂಡ ವಯಸ್ಸಿನಲ್ಲಿ ಹೀಗಾಗುವುದು ಸರ್ವೇ ಸಾಮಾನ್ಯ ಮತ್ತು ಸ್ವಾಭಾವಿಕ. ಹಲವಾರು ಯುವಕರು, ಕನಸಿಗಾಗಿ ಕಾಯದೆ, ಸ್ವಸಹಾಯವನ್ನು ಪಡೆದು ಒತ್ತಡವನ್ನಿಳಿಸಿಕೊಳ್ಳುತ್ತಾರೆ. ಇದರಿಂದಾಗಿ ಯಾವ ದುಷ್ಪರಿಣಾಮವೂ ದೇಹದ ಮೇಲೆ ಆಗುವುದಿಲ್ಲ. ದೇಹವನ್ನು ಮುಂದೆ, ಯಾವ ರೀತಿಯಲ್ಲೂ ಕುಂಟಿಸುವುದಿಲ್ಲ. ಉದ್ವೇಗವು ಅಧಿಕವಾದಾಗ ಮತ್ತು ಅತ್ಯುತ್ಕಟವಾದಾಗ, ಹೀಗೆ ಆಗುತ್ತದೆ. ಆಗಲೂ ಉಸಿರು ವೇಗವೇಗವಾಗಿ, ಹುಚ್ಚು ರೇಗಿದ ತಿದಿಯಂತೆ ಆಡುತ್ತದೆ.

'ನಿಷ್ಠಾವಂತ ಪ್ರವೃತ್ತಿಯ ಯುವಕರು, ಈ ವಯಸ್ಸಿನ ಪ್ರಾಯದಲ್ಲಿ Super Ego ವನ್ನು ಬಲಪಡಿಸಿಕೊಳ್ಳುತ್ತಾರೆ. ಅಂತಹ ಮಾನಸಿಕ ಪರಿಸ್ಥಿತಿಯಲ್ಲಿ, ದೇಹದ

ಒತ್ತಡದಿಂದ ಸ್ವಯಂಕೃತವಾಗಿಯೋ ಕನಸಿನ ಮೂಲಕವೋ ನಿಷ್ಠೆಯು ಸಡಿಲವಾದರೆ, ' ಮಾಡಬಾರದುದನ್ನು ಮಾಡಿದೆ, ಅಂದ ಮೇಲೆ ಆಗಬಾರದುದು ಆಗಿಬಿಡುತ್ತೆ' ಎನ್ನುವ ಮನೋಭಾವವುಂಟಾಗುತ್ತದೆ. ಹೀಗಾಯಿತಲ್ಲ ಎನ್ನುವ ಆತಂಕ. ಮುಂದೆ ಆಗಬಾರದ್ದು ಆಗುತ್ತೆ ಎನ್ನುವ ಭಯ. ಇಂತಹ ಮನಃಸ್ಥಿತಿಯಲ್ಲಿ ಆತಂಕ ಮತ್ತು ಭಯ ಇವೆರಡೂ ಒಂದಕ್ಕೊಂದು ಬೆಂಬಲವಾಗಿ, ಎರಡೂ ಅಧಿಕವಾಗುತ್ತದೆ. ನಿನ್ನಲ್ಲಿ ಹೀಗಾಗಿದೆ.

'ಮನಸ್ಸಿನ ಆತಂಕವು ದೇಹಕ್ಕೆ ಹರಡಿ, ಶ್ವಾಸಕೋಶಗಳಲ್ಲಿ ಮನೆ ಮಾಡಿ ಕೊಂಡಿದೆ. ಉಸಿರಾಟದ ಏರುಪೇರು, ಉಸಿರು ಸಿಕ್ಕಿಕೊಂಡಹಾಗಾಗುವುದು; ನಿಂತೇಹೋಯಿತು, ಸತ್ತೇಹೋಗುತ್ತೇನೆ, ಎನ್ನುವ ಭಯ, ಇವೆಲ್ಲವೂ ನೀ ತಪ್ಪು ಮಾಡಿದೆ ಎನ್ನುಕೊಳ್ಳುವುದರಿಂದ ಉಂಟಾದ ಅಪರಾಧಕ್ಕೆ–ನಿನ್ನ ಮನಸ್ಸೇ ವಿಧಿಸುವ ಶಿಕ್ಷೆ. ಈ ಶಿಕ್ಷೆಯೂ ಮಾಯಾ ರೂಪಿನದೇ! ಏಕೆಂದರೆ ನಿನ್ನ ಉಸಿರಾಟದಲ್ಲಿ ಯಾವ ತೆರನ ವ್ಯತ್ಯಾಸವು, ಪ್ರಾಣಕ್ಕೆ ಸಂಚು ತರಬಹುದಾದಂತಹ ವ್ಯತ್ಯಾಸವೂ, ಕಂಡು ಬಂದೇ ಇಲ್ಲ. ತಪ್ಪು ಮಾಡಿದೆ ಎನ್ನುವ ಭಾವನೆಯೂ ಅಜ್ಞಾನ ದೋಷದಿಂದ ಉಂಟಾದುದು; ಅರ್ಧಮರ್ಧ ಓದಿನಿಂದ ಉಂಟಾದುದು. ಆದಕಾರಣ ಈ ಸಂಕಟದಿಂದ ಪಾರಾಗಬೇಕಾದರೆ, ಇದರ ವಿಷಯದ ವೈದ್ಯವಿಜ್ಞಾನವನ್ನು ಆದಷ್ಟು ಪೂರ್ಣವಾಗಿ ಅರಿತುಕೊಳ್ಳಬೇಕು.'

ಎಂದು ಎಳೆಎಳೆಯಾಗಿ ಸುಲಭವಾಗಿ ಅರ್ಥವಾಗುವಂತೆ, ಉದಾಹರಣೆಗಳನ್ನು ಕೊಟ್ಟು, ಸರಳವಾಗಿ ವಿವರಿಸಿದೆ.

'ತುಂಬಾ ಥ್ಯಾಂಕ್ಸ್ ಸಾರ್' ಎಂದ. 'ಎಲ್ಲವೂ ಅರ್ಥವಾಯಿತು. ಇನ್ನು ಮೇಲೆ ಉಸಿರು ನಿಂತು ಹೋದರೂ ಹೋಗಲೀ ಅಂತ, ಮಾಡುತ್ತಿದ್ದ ಕೆಲಸವನ್ನು ಮುಂದುವರೆಸುತ್ತೇನೆ. ಪಾಪದ ಕೆಲಸವು ಆಗಿಹೋಯಿತು, ಮಾಡಬಾರದ್ದನ್ನು ಮಾಡಿದೆ ಎಂದು ವೃಥಾ ಕೊರಗುವುದಿಲ್ಲ.' ಎಂದು ಭರವಸೆಯನ್ನು ಕೊಟ್ಟ. 'ನೀವು ಹೇಳಿದ್ದು ಅರ್ಥವಾಯಿತು, ಸಾರ್ ! ಆದರೆ ಮನಸ್ಸನ್ನು ದೃಢಪಡಿಸಿ, ಮಾಡುತ್ತಿರುವ ಕೆಲಸವನ್ನು, ಉಸಿರು ಸಿಕ್ಕಿಹಾಕಿಕೊಂಡರೂ, ಮುಂದುವರೆಸುವಂತೆ ಸಹಾಯಮಾಡುವ ಔಷಧಿಗಳನ್ನೋ ಟಾನಿಕ್ಕನ್ನೋ ಕೊಡುತ್ತೀರಾ' ಎಂದು ಕೇಳಿದ.

ಪ್ರಶ್ನೆಯು ನ್ಯಾಯವಾಗಿತ್ತು : ಸಮಂಜಸವಾಗಿತ್ತು. ಔಷಧಿಗಳು ಈವರೆಗೆ ಯಾವುದೂ ಕಂಡುಬಂದಿಲ್ಲ, ಎಂದು ಇದ್ದ ಯಥಾರ್ಥವನ್ನು ಹೇಳಲು ಮನಸ್ಸು ಹಿಂಜರಿಯಿತು. ಇಂತಹ ಸನ್ನಿವೇಶಗಳಲ್ಲಿ ನಿರುಪದ್ರವಿಯಾದ ಹಾಗೂ

ಉಪಯೋಗಕ್ಕೂ ಬರುವಂತಹ ಪುಟ್ಟ ಸುಳ್ಳನ್ನು ಹೇಳುವುದು ನ್ಯಾಯ ಎನ್ನಿಸಿತು. ಆದಕಾರಣ ಆತಂಕಶಮನಕಾರಕ ಔಷಧಿಗಳಲ್ಲಿ ತುಂಬಾ ಲಘುವಾದುದೊಂದನ್ನು ಬರೆದುಕೊಟ್ಟು ಕಳುಹಿಸಿದೆ. ಆಗ ಹೋದ ರೋಗಿ, ತಿರುಗಿ ಬರಲೇ ಇಲ್ಲ.

ಹೇಳಿದುದನ್ನೆಲ್ಲಾ ಕೇಳಿಕೊಂಡು ಅರ್ಥಮಾಡಿಕೊಂಡು ಪೂರ್ಣಗುಣಹೊಂದಿರುವುದರಿಂದ, ನನ್ನ ಬಳಿಗೆ ಪುನಃ ಬರಲಿಲ್ಲ ಎಂದು ನಾನಂದುಕೊಳ್ಳುವುದು, ಬರೀ ಹುಸಿ ಆಸೆ. ಈ ತೆರನ ಬೇನೆಗಳು ಬೇಗ ಗುಣವಾಗುವುದಿಲ್ಲ. ಕೆಲವು ತಿಂಗಳುಗಳಾದರೂ ಕಾಡುತ್ತವೆ. ಆದುದರಿಂದ ಪ್ರಾಯಶಃ ಈ ರೋಗಿಯು, ಹತ್ತಾರು ವೈದ್ಯರುಗಳ ಬಳಿಗೆ, ಆರೆಂಟು ಆಸ್ಪತ್ರೆಗಳ ಮೊರೆಹೊಕ್ಕು, ನರಳುತ್ತಲೇ ಇರಬಹುದು. ಅವನ ಮೇಲೆ ನನ್ನ ವಿವರಣೆಯ ಪ್ರಭಾವವು, ಗೊರ್ಕಲ್ಲ ಮೇಲೆ ಮಳೆಗರೆದಂತೆಯೇ ಆಗಿರಬಹುದು.

ನರಳುತ್ತಿರುವ ರೋಗಿಗಳಿಗೆ, ಹೀಗಾಗುವುದು ಸಹಜ. ಅವರುಗಳ ಮನಸ್ಸು ಸ್ತಿಮಿತದಲ್ಲಿರುವುದಿಲ್ಲ. ಆತಂಕ, ಭಯಗಳ ನಡುವೆ ಸಿಕ್ಕಿಕೊಂಡು ಡೋಲಾಯಿಸುತ್ತಿರುತ್ತದೆ. ಆದರೆ ರೋಗಿಯ ತಾಯ್ತಂದೆಯರು, ನೆಂಟರಿಷ್ಟರು, ಈ ಹೊತ್ತಗೆಯನ್ನು ಓದಿ ಅರ್ಥಮಾಡಿಕೊಂಡರೆ, ಆಗ ರೋಗಿಯು ಏಕೆ ಹಾಗೆ ಅಸಂಬದ್ಧವಾಗಿ ಆಡುತ್ತಾನೆ, ಉಸಿರು ನಿಂತೇ ಹೋಗಿದೆ ಎಂದು ಉಸಿರಾಡುತ್ತಿದ್ದರೂ ಹೇಳುತ್ತಿದ್ದಾನೆ, ಎನ್ನುವುದು ತಿಳಿಯುತ್ತದೆ. ಹೀಗೆ ಏಕೆ ಪೆಚ್ಚುಪೆಚ್ಚಾಗಿ ಆಡ್ತೀ, ತಲೇಲಿ ಬುದ್ಧಿ ಇಲ್ಲವೇ ಎಂದು ಅವನ ಮೇಲೆ ರೇಗುವುದಾದರೂ ತಪ್ಪುತ್ತೆ. ಹಾಗೆ ಹಿರಿಯರು ರೇಗುವುದರಿಂದ ಅವನ ಮನಸ್ಸು ಇನ್ನೂ ಮೊಂಡು ಹಿಡಿಯುತ್ತೆ, ಇನ್ನೂ ಬೆದರುತ್ತೆ, ಬದಲು ಅನುಕಂಪವನ್ನು ತೋರಿಸಿದರೆ, ಮನಸ್ಸು ಸರಳವಾಗುತ್ತದೆ. ಹೆಚ್ಚು ಪ್ರಸನ್ನವಾಗುತ್ತದೆ, ಅಂದರೆ ಗುಣ ಹೊಂದಲು ಹೆಚ್ಚು ಅನುಕೂಲವೂ ಆಗುತ್ತದೆ.

ಒಬ್ಬರ ಮನೆಯ ದೋಸೆ ತೂತಾದರೆ ಇನ್ನೊಬ್ಬರ ಮನೆಯ ಕಾವಲಿಯೇ ತೂತು ಎನ್ನುವಂತೆ, ಈ ತೆರನ ರೋಗಿಗಳು ಒಂದಲ್ಲ ಒಂದು ಹಂತದಲ್ಲಿ ಎಲ್ಲ ಮನೆಗಳಲ್ಲಿಯೂ ಇರುತ್ತಾರೆ. ಅಂದರೆ ಎಲ್ಲರಿಗೂ ಅಗತ್ಯವಾಗಿ ತಿಳಿದಿರಬೇಕಾದ ವಿಷಯಗಳಿವು. ಸಮಾಜದಲ್ಲಿ ದೇಹಾರೋಗ್ಯವು ಇರಬೇಕು; ಮನಸ್ವಾಸ್ಥ್ಯವೂ ಇರಬೇಕು ಎಂದು ಬಯಸುವವರೆಲ್ಲರೂ ಈ ವಿಷಯವನ್ನು ಮನಗಾಣಬೇಕು.

**೨. ಕಟ್ಟಿಬಿಡುವ ಉಸಿರು**

ಕಳೆದ ಐದಾರು ತಿಂಗಳುಗಳಿಂದ ಆಕೆಯು ನರಳಲಾರಂಭಿಸಿದ್ದಳು.

'ನೋಡುವುದಕ್ಕೇನೋ ಕಟ್ಟುಮಸ್ತಾಗಿದ್ದೀನಿ, ಡಾಕ್ಟರೆ ; ಆದರೆ Sudden ಆಗಿ ಉಸಿರು ಕಟ್ಟಿಬಿಡುತ್ತೆ. ಹೊತ್ತುಗೊತ್ತು ಏನೂ ಇಲ್ಲ, ಎಲ್ಲಿದ್ದರೂ ಅದು ಒರಗುತ್ತೆ. ಊಟ ಮುಗಿಸಿ ಸ್ಕೂಲಿಗೆ ಹೋಗುವಾಗ ಆರೋಗ್ಯವಾಗಿಯೇ ಇರುತ್ತೇನೆ. ನಮ್ಮ ಮನೆಯಿಂದ ಸ್ಕೂಲಿಗೆ ಕೇವಲ ಇಪ್ಪತ್ತು ನಿಮಿಷಗಳ ನಡಿಗೆ. ಅಷ್ಟೇ ! ಆದರೆ ಹೊರಟ ಐದಾರು ನಿಮಿಷಗಳಲ್ಲೇ ಒಮ್ಮೊಮ್ಮೆ ಉಸಿರು ಕಟ್ಟಿಬಿಡುತ್ತದೆ. ಆಗ ತುಂಬಾ ಗಾಬರಿಯಾಗುತ್ತದೆ. ಎಲ್ಲಾದರೂ ಸತ್ತುಹೋದರೆ; ಅದರಲ್ಲೂ ನಡುರಸ್ತೆಯಲ್ಲಿ ! ಎಷ್ಟು ಅವಮಾನ ಆಗುತ್ತೆ ? ಆಗ ಮನೆಗೆ ಹಿಂತಿರುಗಿ ಓಡಿಬಿಡುತ್ತೇನೆ. ಪಟ್ಟು ಹಿಡಿದು ಮುಸುಕು ಎಳೆದುಕೊಂಡು ಮಲಗಿಬಿಡುತ್ತೇನೆ. 'ಉಸಿರಾಡುತ್ತಲೇ ಇದೀಯಲ್ಲೇ, ಅದೆಲ್ಲಿ ಕಟ್ಟಿಹೋಗಿದೆ' ಎಂದು ಅಮ್ಮ ರೇಗಿ ಬಯ್ಯುತ್ತಾರೆ. ನನ್ನ ಕಷ್ಟ ಅವರಿಗೆ ತಿಳಿಯೋದೇ ಇಲ್ಲ. ಅವರ ಹತ್ತಿರ ಈಚೀಚೆಗೆ ನನಗಾಗುವುದನ್ನು ಹೇಳಿಕೊಳ್ಳುವುದೇ ಇಲ್ಲ. ಗೋಡೆಗೆ ಮುಖ ಮಾಡಿಕೊಂಡು ಮಲಗಿಬಿಡುತ್ತೇನೆ. ಅವರೇನಾದರೂ ಅಂದುಕೊಳ್ಳಲಿ ಅಂತ ತೆಪ್ಪಗಿರುತ್ತೇನೆ. ಒಂದರ್ಧ ಗಂಟೆಯ ತರುವಾಯ ತನ್ನಷ್ಟಕ್ಕೆ ತಾನೇ ಉಸಿರು ಸರಾಗವಾಗುತ್ತದೆ' ಎಂದು ತನ್ನ ಗೋಳನ್ನು ಉಮಾಕುಮಾರಿ ತವಕ ಪಡುತ್ತಾ ಹೇಳಿಕೊಂಡಳು.

ಇಪ್ಪತ್ತು ಇಪ್ಪತ್ತೆರಡರ ತುಂಬು ಪ್ರಾಯ. ಮಾಸಲ ಬಣ್ಣವಾದರೂ ಮುಖದಲ್ಲಿ ಕಳೆಯಿತ್ತು. ಆದರೆ ತುಸು ಕಾತರವೂ ಮುಖದಲ್ಲಿ ಗೆರೆಗಳನ್ನು ಮೂಡಿಸಿದ್ದುವು. ಅವಳ ತಂದೆಯು ನನ್ನ ಹಳೆಯ ಗೆಳೆಯ. ಹಾಗಾಗಿ ಬಿಚ್ಚು ಮಾತನ್ನಾಡಲು ಅಡ್ಡಿಯೇನೂ ಇರಲಿಲ್ಲ. ಬಿ.ಎಸ್‌ಸಿ., ಪರೀಕ್ಷೆಯನ್ನು ಹೈಸೆಕೆಂಡ್ ಕ್ಲಾಸಿನಲ್ಲಿ ಪಾಸು ಮಾಡಿದ್ದಳು. ಸಂಗೀತದಲ್ಲಿ ಸ್ವಲ್ಪ ಅಭಿರುಚಿ ಇತ್ತು. ಆದುದರಿಂದ, ಸಂಪ್ರದಾಯಸ್ಥನಾದರೂ, ತಂದೆಯು, ಆಕೆಗೆ ಪ್ರಸಿದ್ಧ ಭಾಗವತರಲ್ಲಿ ಸಂಗೀತ ಪಾಠಕ್ಕೆ ಏರ್ಪಾಡು ಮಾಡಿದ್ದ. ಸುಮಾರು ಖರ್ಚೂ ಆಗುತ್ತಿತ್ತು. ಶುರುಮಾಡಿದ ಐದಾರು ತಿಂಗಳುಗಳಲ್ಲಿಯೇ ಉಮಾಕುಮಾರಿಗೆ ಸಂಗೀತದಲ್ಲಿ ಬೇಸರ ಹುಟ್ಟಿತು. ಸಂಗೀತದ ಪಾಠಗಳಿಗೆ ಹೋಗುವುದನ್ನು ನಿಲ್ಲಿಸಿದಳು. 'ನಿನಗಿಷ್ಟವಿರದಿದ್ದರೆ ಬೇಡ. ಐದಾರು ತಿಂಗಳುಗಳಿಂದ ಆರೇಳು ನೂರು ಕೈ ಬಿಟ್ಟಿತು ಅಂತ ವ್ಯಥೆ ಪಡಬೇಡ. ಆದರೆ ಸುಮ್ಮನೆ ಮನೆಯಲ್ಲಿ ಕುಳಿತು ಹೇಗೆ ಕಾಲ ಕಳೆಯುತ್ತೀ ಷಾರ್ಟ್‌ಹ್ಯಾಂಡ್, ಟೈಪ್‌ರೈಟಿಂಗ್ ಆದರೂ ಕಲಿತುಕೊ, ಮುಂದಕ್ಕೆ ಪ್ರಯೋಜನಕ್ಕೆ ಬರಬಹುದು ಎಂದು ತಂದೆ ಹೇಳಿದ್ದರು.

'ಓದುವುದು ಸಾಕು. ಮುಂದೆ ಕಲಿಯುವುದು ಬೇಡ. ಮನೆಕೆಲಸದಲ್ಲಿ ನನಗೆ ನೆರವಾಗಲಿ. ಬೆಳೆದ ಹುಡುಗಿ ಅಲ್ಲಿ ಇಲ್ಲಿ ಪುಣಕ್ ಪುಣಕ್ ಅಂತ

ಓಡಾಡುವುದು ಚೆನ್ನಲ್ಲ. ಆದಷ್ಟು ಬೇಗ ಅನುಕೂಲವಾದ ಗಂಡನ್ನು ಹಿಡಿದು ಮದುವೆ ಮಾಡಿಬಿಟ್ಟರೆ, ನಮ್ಮ ಹೊಣೆ ತೀರಿತು' ಎಂದು ತಾಯಿ ಖಡಾಖಂಡಿತವಾಗಿ ನುಡಿದಿದ್ದಳು. ಆಡಿದ ಮಾತುಗಳಿಗಿಂತ, ತೋರಿದ ಧೋರಣೆಯು, ಮಗಳನ್ನು ರೇಗಿಸಿತ್ತು. ಅಮ್ಮನ ಮೇಲೆ ಸೇಡು ತೀರಿಸಿಕೊಳ್ಳಬೇಕು ಎಂದೋ ಏನೋ ಆಕೆ B.Ed., ಗೆ ಸೇರಿದ್ದಳು. ಆ ಪರೀಕ್ಷೆಗೆ ಕೂರಬೇಕು ಎಂದು ಆಸಕ್ತಿಯೇನೂ ಇರಲಿಲ್ಲ. ಎಳೆಯ ಮಕ್ಕಳನ್ನು ಕೂರಿಸಿಕೊಂಡು, ಅವಕ್ಕೆ ಕಲಿಸಬೇಕು ಎನ್ನುವ  ಹಂಬಲವನಕ ಸುತರಾಂ ಇರಲಿಲ್ಲ. ಆದರೂ ಹತ್ತಿರವೇ B.Ed., ಕಾಲೇಜಿದೆ ಎಂದು ಸೇರಿದ್ದಳು. ಅದನ್ನೂ ಪ್ಯಾಸು ಮಾಡಾಗಿತ್ತು.

ಈ ಮಧ್ಯೆ ಮದುವೆಯ ಸನ್ನಾಹಗಳೂ ನಡೆಯುತ್ತಲೇ ಇದ್ದವು. ನೋಡಲು ಬಂದಿದ್ದ ಗಂಡುಗಳಲ್ಲಿ ಹಲವು ಆಕೆಯನ್ನು ಮೆಚ್ಚಿರಲಿಲ್ಲ. ಕೆಲವನ್ನು ಇವಳು ಒಪ್ಪಲಿಲ್ಲ. ಹಾಗಾಗಿ ಮದುವೆಯು ನಿಷ್ಕರ್ಷೆಯಾಗಿರಲಿಲ್ಲ. ಅನ್ಯ ಮಾರ್ಗವಿಲ್ಲದೆ, ಖಾಸಗಿ ಶಾಲೆಯೊಂದರಲ್ಲಿ ಮಾಸ್ತರಿಣಿಯಾಗಿ ಕೆಲಸಕ್ಕೆ ಸೇರಿಕೊಂಡಳು. ಮನೆಯ ಹತ್ತಿರವೇ ಶಾಲೆ ಇದ್ದುದರಿಂದ, ಅಮ್ಮನೂ ಅಡ್ಡಿ ಬರಲಿಲ್ಲ. ಹೆಚ್ಚು ಆಸಕ್ತಿಯು ಮೊದಮೊದಲು ಇರದಿದ್ದರೂ, ಕ್ರಮೇಣ ಚಿಕ್ಕ ಮಕ್ಕಳಿಗೆ ಪಾಠ ಕಲಿಸುವುದರಲ್ಲಿ ಉತ್ಸಾಹವು ಮೂಡಲಾರಂಭಿಸಿತು. ಒಂದೆರಡು ವರ್ಷ ಸುಖವಾಗಿಯೇ ಇದ್ದಳು. ಆದರೆ ಕಳೆದ ಐದಾರು ತಿಂಗಳುಗಳಿಂದ ಉಸಿರಾಟದ ಈ ಕಾಟವು ಪ್ರಾರಂಭವಾಗಿತ್ತು. ದಿನದಿನಕ್ಕೂ ಇದರ ಅವಾಂತರವು ಹೆಚ್ಚಾಗುತ್ತಿತ್ತು.

ಈ ವಿಚಾರಗಳನ್ನೆಲ್ಲ ಆಕೆಯು ಲಕ್ಷಣವಾಗಿ ಸಮಂಜಸವಾಗಿ ಹೇಳಿದಳು. ನಂತರ ಕೇಳಿದಳು :– 'ಏನಾದರೂ ಆಸ್ತ್ಮ ಬಂದುಬಿಟ್ಟಿದೆಯೇ, ಡಾಕ್ಟರೆ ! ನಮ್ಮ ಸೋದರತ್ತೇಗೆ ಆಸ್ತ್ಮಾ ತುಂಬ ಕಠಿಣವಾಗಿತ್ತು. ಅವಳ ಹಾಗೆಯೇ ನನಗೂ ಆಸ್ತ್ಮ ಬಂದೂ ಬಂದೂ ಗೂನು ಬೆನ್ನಾಗಿ ಬಿಡುತ್ತೋ ?' ಎಂದು.

ಉಮಾಕುಮಾರಿಯ ದೇಹಾರೋಗ್ಯದಲ್ಲಿ ಯಾವ ಲೋಪ ದೋಷಗಳೂ ಕಾಣಬರಲಿಲ್ಲ. ಅಂದರೆ ಆಕೆಯ ಕಾತರಕ್ಕೆ ಮಾನಸಿಕ ಕಾರಣಗಳೇ ಮೂಲವಾಗಿರಬೇಕು. ಬೆಳೆದ ಹೆಣ್ಣಿಗೆ ಸಕಾಲದಲ್ಲಿ ಜತೆ ಸಿಗದೆ ಇದ್ದರೆ, ದಿನಗಳು ಕಳೆದಂತೆಲ್ಲ, ಒಪ್ಪು ಜೋಡಿಯು ದೊರಕುವುದು ಹೆಚ್ಚು ಕಷ್ಟವಾಗುತ್ತದೆ. ಆದರೆ ಸಿಕ್ಕಿತು ಅಂತ ಯಾವುದನ್ನಾದರೂ ಕಟ್ಟಿಕೊಳ್ಳುವುದಕ್ಕೆ ಆಗುತ್ತದೆಯೆ? ಓದಿದ ಹುಡುಗಿ, ಷಹರಿನ ಸುಸಂಸ್ಕೃತ ತರುಣಿ, ಯಃಕಶ್ಚಿತ್ ಗಂಡನೊಂದಿಗೆ ಸಿನಿಮಾಕ್ಕೆ ಎಲ್ಲರೆದುರಿಗೂ ಹೋಗಲು ಸಾಧ್ಯವೇ? ಹಾಗೆ ಮಾಡಿದರೆ ಅವಮಾನವಾಗುವುದಿಲ್ಲವೇ? ಈ ರೀತಿಯ ಆತಂಕವು ಆ ವಯಸ್ಸಿನ

ತರುಣಿಯರಿಗೆಲ್ಲಾ ಇದ್ದೇ ಇರುತ್ತದೆ. ಆದರೆ ಉಮಾಕುಮಾರಿಗೆ, ಆತಂಕವು ಉಲ್ಬಣಗೊಂಡು, ಶ್ವಾಸಕೋಶಗಳ ಮೇಲೆ ಏಕೆ ವಕ್ರಿಸಿತು ? ವಿರಳವಾಗಿ ಹೀಗೆ ಆಗುತ್ತದೆ, ದಿಟ. ಆದರೆ ಆಗುವುದಾದರೂ ಏಕೆ?

ಆದರದಿಂದ ಮಗಳನ್ನು ತಂದೆಯು ಬೆಳೆಸಿದ್ದ. ಆದರೆ ಅವನದು ಮೆದು ಸ್ವಭಾವ. ಮನೆಯಲ್ಲಿ ಜಬರ್ದಸ್ತಿ ಮಾಡುವ ಜಾಯಮಾನವಲ್ಲ. ತಾಯಿಯು ಹಳ್ಳಿ ಕಡೆಯ ಪೆದ್ದು. ಪೆದ್ದಾದುದರಿಂದಲೇ ಮೊಂಡು ಹಿಡಿಯುವ ಹಠ ಸಾಧಿಸುವ ಚಂಡಿ ಸ್ವಭಾವ. ಆಕೆಯದೇ ಮನೆಯಲ್ಲಿ ಮೇಲುಗೈ. ಮಗಳು ಎನ್ನುವ ಹುಟ್ಟು ಆದರವು ಇದ್ದರೂ, ನಡವಳಿಕೆಯಲ್ಲಿ ತಾತ್ಸಾರದ ಭಾವನೆಯಿತ್ತು.

'ನಿಮ್ಮಪ್ಪನ ಹಾಗೆಯೇ ಕಪ್ಪು ಕಪ್ಪಾಗಿದ್ದಿ. ನನ್ನನ್ನಾದರೂ ಹೋತುಕೋ ಬಾರದಾಗಿತ್ತೆ ?ಆಗ ಒಳ್ಳೆಯ ಗಂಡ ಸುಲಭವಾಗಿ ಸಿಗುತ್ತಿದ್ದ' ಎಂದು ಆಗಿಂದಾಗ್ಗೆ ಮೂದಲಿಸುತ್ತಲೇ ಇದ್ದಳು. ಬಾಲ್ಯದಲ್ಲಿ ಎಣ್ಣೆ ನೀರು ಹಾಕಿಸಿಕೊಂಡಾಗಲೂ ಉಮಾಕುಮಾರಿಯು ಈ ಮಾತುಗಳನ್ನು ಕೇಳುತ್ತಿದ್ದಳು. ಬೆಳೆದ ಮೇಲೆ ಅಪ್ಪ ನೊಡನೆ ಕಾಲೇಜು ಪಾಠಗಳ ವಿಷಯದಲ್ಲಿ ಸರಸ ಸಂಭಾಷಣೆ ಮಾಡಿದರನಕ, ತಾಯಿಯು ಅನ್ನುವುದೂ ಹೆಚ್ಚಾಗುತ್ತಿತ್ತು. 'ನೀನ್ಯಾಕೆ ಮತ್ತೆ ಅಪ್ಪನ್ನ ಮದುವೆ ಯಾದೆ ? ನೀನೇನೂ ನನ್ನ ಗಂಡನ್ನ ಹುಡುಕಬೇಡ. ನಾನು ಮದುವೆಯೇ ಆಗುಲ್ಲ. ನನ್ನ ಜೀವನ ನಾನು ಸಂಪಾದಿಸಿಕೊಂಡು ನನ್ನ ಪಾಡಿಗೆ ನಾನಿರ್ತೀನಿ. ನೀನೇನೂ ನನ್ನ ಸಂರಕ್ಷಣೆ ಮಾಡಬೇಕಾಗಿಲ್ಲ' ಎಂದೊಮ್ಮೆ ಅಮ್ಮನ ಮೇಲೆ ಉಮಾಕುಮಾರಿಯು ರೇಗಿ ಬಿದ್ದಿದ್ದಳು. ಮನೆಯ ಮಗ, ಇವಳ ತಮ್ಮ, ತಾಯಿಯಂತೆ ಬೆಳ್ಳಗಿದ್ದುದು ಬಾಲ್ಯದಿಂದಲೂ ಉಮಾಕುಮಾರಿಯ ಹೊಟ್ಟೆಯನ್ನು ಉರಿಸುತ್ತಿತ್ತು. ಹುಟ್ಟಿ ಬೆಳೆದ ಮನೆಯ ವಾತಾವರಣ ಈ ತೆರನಾದುದು.

ಶಾಲೆಯಲ್ಲಿ ಕಲಿಯುವಾಗ ಜತೆಗಾರ್ತಿಯರು ಕಲೆಯುತ್ತಾರೆ. ಮೂರುನಾಲ್ಕು ಹುಡುಗಿಯರು ಗುಂಪು ಕಟ್ಟಿಕೊಳ್ಳುವುದೂ ಸ್ವಾಭಾವಿಕ. ಗೆಳೆತನವು ಈ ಗುಂಪಿನಲ್ಲಿ ಅತಿಯಾಗಿರುತ್ತದೆ. ವಯಸ್ಸೂ ಅಂತದೇ, ಉಮಾಕುಮಾರಿಯ ಗುಂಪಿನಲ್ಲಿದ್ದ ಇಬ್ಬರು ಹುಡುಗಿಯರು ಗಂಡುಬೀರಿಯರು. Facts of life ಕುರಿತು ಲಕ್ಷಣವಾಗಿ ಮಾತನಾಡಬಲ್ಲರು. ಆಡಿದುದನ್ನು ಮಾಡಿತೋರಿಸುವ ಬಿಚ್ಚೆದೆಯರು. ಮನೆಯಲ್ಲಿ ಅಮ್ಮನಿಂದ ತಿರಸ್ಕೃತವಾದುದರಿಂದಲೋ ಏನೋ ಉಮಾಕುಮಾರಿಗೆ ಗುಂಪಿನಲ್ಲಿ ಹೆಚ್ಚು ಒಲವು ಮೂಡಿತು. ಆದರೆ ಹುಟ್ಟುಗುಣ, ಮನೆಯ ಶಿಸ್ತು, ಉಮಾಕುಮಾರಿಯನ್ನು ಬಿಗಿಯಾದ ಹತೋಟಿಯಲ್ಲಿಟ್ಟಿತು. ಇಬ್ಬರು ಗೆಳತಿಯರು ಹದಿನೈದು ಹದಿನಾರರ ವೇಳೆಗೆ ಮೋಜು ಬಾಳನ್ನು

ಗುಟ್ಟಾಗಿ ನಡೆಸುವುದನ್ನು ಕಂಡು ಉಮಾಕುಮಾರಿಗೆ, ಒಂದೆಡೆ ಅತಿಮತ್ಸರ, ಇನ್ನೊಂದೆಡೆ ಅತಿ ಬೇಸರ, ಜುಗುಪ್ಸೆ.

ಕಾಲೇಜಿನ ಓದು ಮುಗಿಸುವಾಗ ಪ್ರೌಢ ವಯಸ್ಸು ಬಂದಿದ್ದುದರಿಂದ, ವಿಷಯದ ಪರಿಚಯವು ಸಾಕಷ್ಟು ಇದ್ದುದರಿಂದ, ಆಸೆ ಆಚಾರ–ಬಯಕೆ ಬಂಧನ–ಇಷ್ಟ ಅನಿಷ್ಟ–ಇವೆಲ್ಲ ದ್ವಂದ್ವಗಳೂ ಕಾಡಲಾರಂಭಿಸಿದ್ದುವು. ಆದರೆ ಓದು, ಡಿಗ್ರಿ ಪಡೆಯಬೇಕು, ಕ್ಲಾಸ್ ಗಿಟ್ಟಿಸಬೇಕು ಎನ್ನುವ ಧ್ಯೇಯಗಳೂ ಮನಸ್ಸನ್ನು ಹಿಡಿದಿದ್ದುವು. ಆದಕಾರಣ ದ್ವಂದ್ವವಾದ ಆಸೆ ಆಚಾರ ಇತ್ಯಾದಿಗಳು ಮನಸ್ಸಿನ ಹಗೇವುಗಳಲ್ಲಿ ದೂಡಲ್ಪಟ್ಟಿದ್ದುವು.

B.Sc., ಆಯಿತು. ಸಂಗೀತದ ಪ್ರಯತ್ನವೂ ಆಯಿತು. B. Ed. ಕೂಡ ಆಯಿತು. ಮಕ್ಕಳಿಗೆ ಪಾಠವನ್ನು ಕಲಿಸುವ ಕೆಲಸವು ಬರಬರುತ್ತ ಇಷ್ಟವಾಗಿದ್ದಿದ್ದರೂ, ಮನಸ್ಸನ್ನು ಸೆರೆಹಿಡಿಯುವಂತಹ ಧ್ಯೇಯವಾಗಿರಲಿಲ್ಲ. ಇಂತಹ ಉಮಾಕುಮಾರಿಯ ಮನಸ್ಸಿನಲ್ಲಿ, ಆತನಕ ಮನಸ್ಸಿನ ಹಗೇವುಗಳಲ್ಲಿ ಮರೆಮಾಚಲ್ಪಟ್ಟಿದ್ದ ದ್ವಂದ್ವ ಆಸೆ–ಆಚಾರ ಇತ್ಯಾದಿಗಳು ಎದ್ದು ಬಂದು ಬುದ್ಧಿಯನ್ನು ಒಡೆಯಲಾರಂಭಿಸಿದುವು. ಈ ವಯಸ್ಸಿನ ತರುಣಿಯರಿಗೆ ಆ ಪರಿಸ್ಥಿತಿಯಲ್ಲಿ ಸ್ವಾಭಾವಿಕವಾಗಿ ಇರುವ ಆತಂಕವು, ಉಗ್ರವಾಯಿತು; ತಳಮಳವಾಯಿತು.

ಸೋದರತ್ತೆಯು ಆಸ್ತ್ಮದಿಂದ ನರಳುತ್ತಿರುವುದನ್ನು ಚಿಕ್ಕಂದಿನಿಂದಲೂ ಕಂಡಿದ್ದಳು. ಬೆನ್ನು ಬಾಗಿಸಿ ಮೂಲೆ ಹಿಡಿದು ಅಸಹಾಯಳಾಗಿ ಘೂರಲು ಕೆಮ್ಮುತ್ತಿದ್ದ ಮುದುಕಿಯು, ಉಮಾಕುಮಾರಿಯ ಮನಸ್ಸಿನಲ್ಲಿ ನಾಟಿ, ಭಯ ಮತ್ತು ಬೇಸರವನ್ನು ಹುಟ್ಟಿಸಿರಲೇಬೇಕು. ಬಾಲ್ಯದ ಆ ನೆನಪು ಹಸಿರಾಗಿಯೇ ಉಳಿದಿದ್ದು, ಮನಸ್ಸಿನ ಆತಂಕವು ದೇಹದ ಅಂಗಗಳಿಗೆ ವಕ್ರಿಸುವಾಗ, ಶ್ವಾಸಕೋಶವನ್ನು ಆರಿಸಿರಲು ಸಾಧ್ಯ. ಆಗ ಮನಸ್ಸಿನ ಆತಂಕವು ಮೂಲ ಕಾರಣಗಳನ್ನು ಬದಿಗಿಟ್ಟು, ಶ್ವಾಸಕೋಶವನ್ನು ಭದ್ರವಾಗಿ ಪಟ್ಟು ಹಿಡಿದವು. ಮೂಲ ಕಾರಣದಿಂದ ಉಂಟಾದ ಆತಂಕಕ್ಕೆ ಶಮನ ಮಾಡುವ ಮಾರ್ಗವು ಇರಲಿಲ್ಲ. ಆದರೆ ಶ್ವಾಸಕೋಶಕ್ಕೆ ಆತಂಕವು ತಗುಲಿಕೊಂಡು ಕಾಡಿದರೆ, ಇದರಿಂದ ಹೀಗಾಗಿದೆ ಎನ್ನುವುದು ತಿಳಿಯುತ್ತದೆ. ಶ್ವಾಸಕೋಶದ ಏರುಪೇರು ಕಾರ್ಯವು ಆತಂಕವನ್ನು ಹಗುರು ಮಾಡುತ್ತದೆ. ಏಕೆಂದರೆ ತಿಳಿಯದೆ ಇದ್ದಾಗ, ಹಗ್ಗವೋ ಹಾವೋ ಎಂಬ ಭಯ. ತಿಳಿದರೆ, ಶ್ವಾಸಕೋಶ ಆಸ್ತ್ಮ ಎನ್ನುವ ಒಂದು ರೀತಿಯ ಧೈರ್ಯ.

ಓದಿದ ತರುಣಿ, ಜಾಣೆ. ಆದರೂ ಉಸಿರಾಡುವುದು ನಿಂತೇ ಹೋಯಿತು

ಎಂದು ಉಸಿರಾಡುತ್ತಲೇ ಹೇಳುತ್ತಿದ್ದಳು. ಆತಂಕದ ಮಿತಿಮೀರಿದ ಒಂದು ಹಂತದಲ್ಲಿ ವಾಸ್ತವಿಕ ಪರಿಜ್ಞಾನವು ಕುರುಡಾಗುತ್ತದೆ. ಈ ಚಿಹ್ನೆಯಿಂದ ಆತಂಕದ ಪ್ರಮಾಣವನ್ನು ಸ್ವಲ್ಪ ಮಟ್ಟಿಗೆ ಅಳೆಯಬಹುದು. ಉಮಾಕುಮಾರಿಯ ಆತಂಕವು ಉಗ್ರವಾಗಿದೆ. ತೀವ್ರ ತಳಮಳದ ಮಟ್ಟಕ್ಕೆ ಏರಿದೆ ಎನ್ನುವುದು ಸ್ಪಷ್ಟವಾಯಿತು.

ಆಕೆಯ ಚಿಕಿತ್ಸೆಯನ್ನು ನುರಿತ ಮನೋವೈದ್ಯರು ಕೈಗೊಂಡರು. ಆತಂಕ ಶಮನ ಮಾಡುವ ಔಷಧಿಗಳನ್ನು ಸಾಕಷ್ಟು ಪ್ರಮಾಣದಲ್ಲಿ ಬಳಸಿದರು. ಅಲ್ಲದೆ, ತಾಯಿ ತಂದೆಯರನ್ನೂ ಪ್ರತ್ಯೇಕವಾಗಿ ಕಂಡು 'ವಿಷಯ ಹೀಗಿದೆ. ಮೊಂಡು ಮೊಂಡಾಗಿ ನೀವೇನಾದರೂ ಅಂದು ಆಡಿ ಶಿಕ್ಷಿಸಹೋದರೆ ಅಥವಾ ಮೂದಲಿಸಿದರೆ, ಆಕೆಯ ಮನಸ್ಸು ಮುಂದೆ ಪಲ್ಲಟವೇ ಆಗಬಹುದು. ಘೋರ ರೂಪಿನ ಇತರ ಮಾನಸಿಕ ರೋಗಗಳು ತೊಡರಿಕೊಳ್ಳುತ್ತವೆ.' ಎಂದು ಒತ್ತಾಯಪೂರ್ವಕವಾಗಿ ಹೇಳಿದರು.

ಆರೆಂಟು ತಿಂಗಳುಗಳು ಚಿಕಿತ್ಸೆಯು ಆದನಂತರ, ಉಸಿರಾಟದ ಕಾಟವು ನಿರ್ನಾಮವಾಯಿತು. ಆ ವೇಳೆಗೆ ಕಂಕಣ ಬಲವೂ ಕೂಡಿ ಬಂತು. ಈಗ, ಅಂದರೆ ಒಂದೆರಡು ವರ್ಷಗಳಾದ ಮೇಲೆ ಶ್ರೀಮತಿ ಉಮಾಕುಮಾರಿ. B.Sc., B.Ed. ನೆಮ್ಮದಿಯಿಂದಿದ್ದಾಳೆ, ಆದರೆ ಪುಟ್ಟ ಆತಂಕವೊಂದು ಭಾದಿಸುತ್ತಲೇ ಇದೆ.

'ನನ್ನ ಚೊಚ್ಚಲ ಮಗನಿಗಿಂತ ಸುಂದರವಾದ ಮಗುವು ಪ್ರಪಂಚದಲ್ಲಿ ಎಲ್ಲಿಯಾದರೂ ಇರಲು ಸಾಧ್ಯವೇ?' ಎನ್ನುವ ಆರೋಗ್ಯಕರವಾದ ಆತಂಕ.

**೩. ಶ್ವಾಸಕೋಶವು ಬೆಲೂನ್ ಆಗಿಬಿಟ್ಟಿದೆ**

'ತತ್‌ಕ್ಷಣ, ಬಾರೋ; ನಮ್ಮ ಶೀಲಾ ತುಂಬಾ ನರಳುತ್ತಾ ಇದ್ದಾಳೆ. ಕಾರ್ ಕಳಿಸಿದ್ದೀನಿ' ಎಂದು ನನ್ನ ಗೆಳೆಯ ಆಬ್ರಹಂ ಫೋನ್ ಮಾಡಿದ. ಮಧ್ಯಾಹ್ನ ೨ರ ಸಮಯ. ದೆವ್ವಗಳೂ, ದೋಭಿಗಳೂ ಮತ್ತು ಡಾಕ್ಟರುಗಳೂ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವ ಸಮಯ. ಅಂತಹ ಅಲ್ಪ ವಿರಾಮದಲ್ಲೇ ಇಂತಹ ತುರ್ತು ಕರೆಗಳು. ತುಂಬಾ ಆಪ್ತಮಿತ್ರ ಆಬ್ರಹಂ; ಆದಕಾರಣ ಅವನ ಕರೆಗೆ ಓ ಕೊಡಬೇಕು. ಮಿಲಿಯಾಧೀಶ್ವರ ಅವ, ಆ ಕಾರಣದಿಂದಲೂ ಅಗತ್ಯವಾಗಿ ಹೋಗಬೇಕು. ತುಂಬಿದ ಮನೆ ಅವನದು. ಆ ಮನೆಯಿಂದ ಯಾರಾದರೂ ಒಬ್ಬಿಬ್ಬರು ಪ್ರತಿದಿನವೂ ದವಾಖಾನೆಯಲ್ಲಿ ಹಾಜರಾಗುತ್ತಿದ್ದರು. ಬಿಡುಗೈ ದೊರೆ, ಆಬ್ರಹಂ; ಮನೆಯಲ್ಲಿ ಆಳುಕಾಳು ಮೊದಲುಗೊಂಡು ಯಾರಿಗೆ ಬೇನೆ ಬಂದರೂ ಚಿಕಿತ್ಸೆಗೆ ಕಳುಹಿಸುತ್ತಿದ್ದ.

ಎಷ್ಟು ಖರ್ಚಾದರೂ ಚಿಂತೆ ಇಲ್ಲ ಎನ್ನುತ್ತಿದ್ದ. ಈ ಎಲ್ಲ ಕಾರಣಗಳಿಂದ, ದೇವರನ್ನೊಬ್ಬನನ್ನು ಬಿಟ್ಟು ಇನ್ನು ಯಾರನ್ನೂ ಶಪಿಸದೆ, ಅವನ ಮನೆಗೆ, ಆ ಹೊತ್ತಿಗೆ ಬಂದು ಸಿದ್ಧವಾಗಿದ್ದ ಕಾರಿನಲ್ಲಿ ಹೋದೆ.

ಶೀಲಾ ಅವನ ಚೊಚ್ಚಲು ಮಗಳು. ಹದಿನೆಂಟರ ಪ್ರಾಯ. ಮೂರು ಜನ ತಂಗಿಯರೂ, ನಾಲ್ವರು ತಮ್ಮಂದಿರೂ ಇದ್ದ ನಂದಗೋಕುಲ, ಆ ಮನೆ. ಅಂದ ಮೇಲೆ ಶೀಲಾಳನ್ನ ಅತಿಮುದ್ದಿನಿಂದ ಏನೂ ಸಾಕಿರಲಿಲ್ಲ, ಅವಳ ಅಪ್ಪ ಅಮ್ಮ. ಡಿಗ್ರಿ ಪರೀಕ್ಷೆಗೆ ಹೋಂಸೈನ್ಸ್ ತೆಗೆದುಕೊಂಡು ಓದುತ್ತಿದ್ದಳು. ಸಾಕಷ್ಟು ಜಾಣೆ ಕೂಡ. ಅವಳೇ ತನಗಾದುದರ ವರದಿಯನ್ನು ಒಪ್ಪಿಸಿದಳು.

'ಡಾಕ್ಟರೆ' ಇವತ್ತು ಕಾಲೇಜಿಗೆ ರಜ ಇತ್ತು. ಊಟಕ್ಕೆ ವಿರಾಮವಾಗಿ ಕೂತಾಗ, ಮಿಡಿಮಾವಿನ ಉಪ್ಪಿನಕಾಯೂ ಘಮ ಘಮ ಅಂತಿತ್ತು. ಸಂಕೋಚ ಪಡದೆ ನೀವು ಉಣ್ಣೋ ಹಾಗೆ ನಾನೂ ತಿಂದೆ. ಉಂಡಾಗಲೇ ಎರಡು ಗಂಟೆಗಳ ಮೇಲಾಯಿತು. ಇಷ್ಟು ಹೊತ್ತಿಗೆ ಆಹಾರವೆಲ್ಲಾ ಹೊಟ್ಟೆಯಿಂದ ಕರುಳಿಗೆ ಇಳಿದಿರಲೇಬೇಕು. ಈಗ ಹತ್ತು ಹದಿನೈದು ನಿಮಿಷಗಳಿಂದ ತೆಗೆದುಕೊಂಡ ಉಸಿರು ಶ್ವಾಸಕೋಶಗಳನ್ನು ಬೆಲೂನಿನಂತೆ ಉಬ್ಬಿಸುತ್ತದೆ. ಆದರೆ ಎಷ್ಟು ಪ್ರಯಾಸ ಪಟ್ಟರೂ ಉಸಿರುಹೊರಕ್ಕೆ ಬರುವುದೇ ಇಲ್ಲ' ಎಂದಳು.

ತಾಯ ಗರ್ಭದಲ್ಲಿ ಆಕೆ ಅವತರಿಸಿದಾಗಿನಿಂದ, ಅವಳ ಪರಿಚಯವು ನನಗಿತ್ತು. ನನ್ನನ್ನು ಕಂಡರೆ ಬಲು ಸದರ. ಸ್ವಲ್ಪ ಗೌರವವೂ ಮಿಶ್ರಿತವಾಗಿದ್ದಿರಬಹುದು. ನನ್ನ ಜೊತೆಯಲ್ಲಿ ಎಷ್ಟೋ ಬಾರಿ ಊಟ ಮಾಡಿದ್ದ ಆಕೆ, ಹಾಗೆ ಸಾಮತಿಯನ್ನು ಕೊಟ್ಟಿದ್ದಳು. ಸ್ವಲ್ಪ ತುಂಟ ಸ್ವಭಾವದ ಹುಡುಗಿ.

ಚಿಕ್ಕಂದಿನಿಂದಲೂ ಆಕೆಯ ದೇಹಸ್ಥಿತಿಯ ವಿವರಗಳು ಚೆನ್ನಾಗಿ ಗೊತ್ತಿತ್ತು. ದೇಹಾರೋಗ್ಯವು ಅತ್ಯಂತ ತೃಪ್ತಿಕರವಾಗಿದೆ ಎನ್ನುವುದೂ ತಿಳಿದಿತ್ತು. ಶ್ರೀಮಂತ ಮನೆಯಾಗಿದ್ದರಿಂದ, ಅಪ್ಪ ಅಮ್ಮ ಅತಿ ಮುದ್ದು ಮಾಡದೆ ಇದ್ದರೂ, ಅವಳು ಬಯಸಿದ್ದನ್ನು ಪೂರೈಸುತ್ತಿದ್ದರು. ಕಾಲೇಜು ಸೇರಿದ ಮೇಲೆ ಭರತನಾಟ್ಯದ ಮೇಲೆ ಅವಳಿಗೆ ಖಯಾಲಿ ತಿರುಗಿತು. ಭರತನಾಟ್ಯ ಪ್ರವೀಣೆಯಾಗಬೇಕು, ಪ್ರಪಂಚ ಪರ್ಯಟನವನ್ನು ಮಾಡಬೇಕು. ಊರುಕೇರಿಗಳ ಪತ್ರಿಕೆಗಳಲ್ಲಿ ತನ್ನ ಫೋಟೋ ಮೆರೆಯಬೇಕು ; ಈ ಹೆಬ್ಬಯಕೆಯು ತೀವ್ರವಾಯಿತು. ಆ ತನಕ ತಾನು ಕೇಳಿದುದನ್ನೆಲ್ಲಾ ತಾಯ್ತಂದೆಯರು ನಡೆಸಿಕೊಟ್ಟಿದ್ದರು. ಆದರೆ ಈ ಹಂಬಲಕ್ಕೆ ತುಂಡು ಹಾಕಿದರು. 'ಕಾಲು ತೊಡೆಗಳನ್ನು ಎಲ್ಲರೆದುರಿಗೂ ಕೊಂಕಿಸಿಕೊಂಡು, ಕುಣಿದು ನೀನೇನೂ ಸಂಪಾದಿಸಬೇಕಾಗಿಲ್ಲ. ಮದುವೆಯಾಗಿ ಎಲ್ಲರಂತೆ ಮಾನವಾಗಿ

ಬಾಳು' ಎಂದವರು ಖಡಾಖಂಡಿತವಾಗಿ ಹೇಳಿದ್ದರು. ಮೂರು ದಿನಗಳು ಊಟ ಬಿಟ್ಟು ಶೀಲಾ ರಂಪ ಹೂಡಿದ್ದಳು. ಅವಳನ್ನ ಸಮಾಧಾನಪಡಿಸಲು ನನ್ನನ್ನು ಕರೆಸಿದ್ದರು. ವಿಷಯವನ್ನು ಕೇಳಿ ತಿಳಿದುಕೊಂಡ ಮೇಲೆ ಖಾಜಿ ನ್ಯಾಯವನ್ನು ಮಾಡಿದ್ದೆ. 'ಒಂದು ವರ್ಷ ಭರತನಾಟ್ಯವನ್ನು ಮನೆಯಲ್ಲಿ ಅಭ್ಯಾಸ ಮಾಡಲಿ. ಹೆಣ್ಣಿನ ದೇಹಕ್ಕೆ ಭರತನಾಟ್ಯವು ಅತ್ಯುತ್ತಮವಾದ ಮತ್ತು ಪರಿಪೂರ್ಣವಾದ ವ್ಯಾಯಾಮ. ಆ ದೃಷ್ಟಿಯಿಂದ ಶೀಲಾ ನಾಟ್ಯಾಭ್ಯಾಸವನ್ನು ಮಾಡಲಿ. ಅನಂತರ ರಂಗಪ್ರವೇಶವನ್ನು ಬಹಿರಂಗವಾಗಿ ಮಾಡಬೇಕೇ, ಬೇಡವೇ, ಎನ್ನುವುದನ್ನು ನಿರ್ಧರಿಸೋಣ'. ಎಂದು ಸಲಹೆಯನ್ನು ಮಾಡಿದ್ದೆ. ಶೀಲಾ ಒಪ್ಪಿದ್ದಳು. ತಾಯ್ತಂದೆಯರೂ ಕೂಡ.

ಹಟಮಾರಿತನವು ಶೀಲಾಳಲ್ಲಿ ಅಷ್ಟು ದೃಢವಾಗಿದೆ ಎನ್ನುವುದು ಆಗಲೇ ನನಗೆ ತಿಳಿದಿದ್ದು. ಹಟ ಹಿಡಿದು ವಾದಮಾಡಿದಾಗ ಅವಳ ಕೆನ್ನೆಗಳೆಲ್ಲಾ ಕೆಂಪೇರಿದ್ದುವು. ತುಟಿಗಳು ಥರಥರ ನಡುಗುತ್ತಿದ್ದುವು. ಮೂಗಿನ ಹೊಳ್ಳೆಗಳು ಕಂಪಿಸುತ್ತಿದ್ದುವು. ಅಗತ್ಯ ಬಿದ್ದರೆ, ಅವಕಾಶ ಸಿಕ್ಕರೆ ಕೈಮಾಡುವುದಕ್ಕೂ ಅವಳು ಹಿಂತೆಗೆಯುವುದಿಲ್ಲ ಎಂದು ಅನಿಸಿತ್ತು. ಇವೆಲ್ಲವೂ ಶೀಲಾಳನ್ನು ಈಗ ಕಂಡಾಗ, ಸ್ಮರಣೆಯಲ್ಲಿ ಮಿಂಚಿದುವು.

'ಅಜೀರ್ಣದಿಂದ, ಗಾಳಿ ಹೆಚ್ಚಾಗಿ ಹೊಟ್ಟೆಯಲ್ಲಿ ಉತ್ಪತ್ತಿಯಾಗಿದೆ. ಅದು ಡೈಯಾಫ್ರಂ ಅನ್ನು ಒತ್ತಿ ಏರಿಸಿದ ಹಾಗಾಗಿ ಉಸಿರು ಹೊರಬರಲು ಅಡಚಣೆ ಯಾದಂತೆ ಆಗಿದೆ. ಆದರೆ ಫೋನ್ ಮಾಡಿ ತುರ್ತು ಕರೆಸುವ ಪ್ರಸಂಗ ಇದಲ್ಲವಲ್ಲ! ನನ್ನ ಯಾಕೆ ಸತಾಯಿಸಿದೆ, ಈ ಹೊತ್ತಿನಲ್ಲಿ' ಎಂದೆ. ಹೀಗನ್ನುವಾಗ ಅವಳ ನಾಡಿಪರೀಕ್ಷೆಯನ್ನು ಮಾಡುತ್ತಿದ್ದೆ. ಕೆಟ್ಟ ಕನಸು ಕಂಡು, ಬೆದರಿ ಎದ್ದವರ ನಾಡಿ ಬಡಿತದಂತೆ ಮಿಡಿಯುತ್ತಿತ್ತು.

'ಉಸಿರು ಇಳಿಯಲಿಲ್ಲ. ಏಕೆ? ಎಂದು ಹೆದರಿಕೆಯಾಯಿತು. ಏನಾದರೂ ಬಂದಿದೆಯೇನೋ ಎಂದು ಅನಿಸಿತು. ಯಾವ ವಯಸ್ಸಿನಲ್ಲಾದರೂ ಹಾರ್ಟ್ ಅಟಾಕ್ ಬರಬಹುದು ಎಂದು ಮಾಸ ಪತ್ರಿಕೆಗಳಲ್ಲಿ ಓದಿದ್ದ ನೆನಪಾಯಿತು. ಹೆದರಿಕೆಯೂ ಇನ್ನೂ ಹೆಚ್ಚಾಯಿತು. ಏನೇ ಆಗಲಿ, ನಿಮಗೆ ಹೇಳಿಬಿಡುವುದು ವಾಸಿ ಅಂತ, ಕಾರ್ ಕಳಿಸಪ್ಪ ಎಂದು ಅಪ್ಪನಿಗೆ ಹೇಳಿದೆ.' ಎಂದಳು.

'ಈ ವಯಸ್ಸಿನಲ್ಲಿ ನಿನಗೆ ತಗಲುವ ಹಾರ್ಟ್ ಅಟಾಕ್, ಬೇರೆ ರೀತಿಯದು, ಕಣೇ! ಸ್ವೀಟ್‌ಹಾರ್ಟ್ ಅಟಾಕ್ ಆಗಬಹುದು. ಆ ಅಟಾಕಿಗೆ ನನ್ನಲ್ಲಿ ಔಷಧಿ ಇಲ್ಲ ಕಣಮ್ಮಾ !' ಎಂದು ನಿಧಾನವಾಗಿ ಗಂಭೀರವಾಗಿ ಹೇಳಿದೆನಾದರೂ,

ಯಾಕೆ ಇಷ್ಟು ಆತಂಕ ಪಡುತ್ತಿದ್ದಾಳೆ? ಬೆಲೂನ್ ಆಗಿದೆ ಶ್ವಾಸಕೋಶ ಅಂತ ಯಾಕೆ ಅನ್ನುತ್ತಿದ್ದಾಳೆ ? ಇಷ್ಟು ತೀವ್ರವಾದ ಆತಂಕಕ್ಕೆ ಕಾರಣವೇನಿರಬಹುದು? ಎಂದು ಯೋಚಿಸುತ್ತಿದ್ದೆ.

'ಊಟವಾದ ಮೇಲೆ ಏನು ಮಾಡಿದೆ ? ಓದುತ್ತಿದ್ದೆಯಾ ? ಮಲಗಿಬಿಟ್ಟೆಯಾ ?' ಎಂದು ಕೇಳಿದೆ. 'ಪೇಪರ್ ಓದುತ್ತಾ ಆರಾಂ ಕುರ್ಚಿಯ ಮೇಲೆ ಮಲಗಿದ್ದೆ. ಸ್ವಲ್ಪ ಝೊಂಪು ಬಂದಿದ್ದರೂ ಬಂದಿದ್ದಿರಬಹುದು. ಯಾಕೆ ನೀವು ಕೇಳ್ತಿದ್ದೀರಿ ಎನ್ನುವುದೂ ಗೊತ್ತಾಯಿತು. ಝೊಂಪು ಬಂದಿದ್ದಾಗ ಕೆಟ್ಟ ಕನಸು ಬಿದ್ದಿದ್ದರೂ ಇರಬಹುದು. ಆದರೆ ಈಗ ನೆನಪಿಲ್ಲ ಉಸಿರು ಇಳಿಯದೆ ಶ್ವಾಸಕೋಶಗಳು ಬೆಲೂನಿನಂತೆ ಉಬ್ಬುತ್ತಿವೆ ಎಂದು ಹಠಾತ್ತನೆ ತೋರಿತು. ಆಗ ಎಚ್ಚರವಾಗಿಯೇ ಇದ್ದೆ. ತುಂಬಾ ಭಯವೂ ಆಯಿತು. 'ಅಮ್ಮಾ, ಅಮ್ಮಾ ಎಂದು ಕರೆದೆ' ಎಂದಳು.

'ಅಷ್ಟೇ ಕಣೆ ಶೀಲಾ ! ಯಾವುದೋ ಕೆಟ್ಟ ಕನಸು ಬಿದ್ದರಬೇಕು. ದೆವ್ವದ ಕತೆಯನ್ನೋ ಕಳ್ಳನ ಕತೆಯನ್ನೋ ಯಾರೋ ಹೇಳಿದ್ದಿರಬೇಕು. ಅದು ಕನಸಿನಲ್ಲಿ ಚಿತ್ರವಿಚಿತ್ರವಾಗಿ ರೂಪು ತಾಳಿ ಗಾಬರಿ ಪಡೆಸಿರಬೇಕು. ಈಗ ಟ್ರಾಂಕ್ವಿಲೈಸರ್ ಮಾತ್ರೆಯೊಂದನ್ನು ಕೊಡುತ್ತೇನೆ, ಅದನ್ನು ನುಂಗು. ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೋ, ರಾತ್ರಿ ಅರೆಹೊಟ್ಟೆ ಊಟಮಾಡು' ಎಂದು ಧೈರ್ಯವನ್ನು ಹೇಳಿ ಹಿಂತಿರುಗಿದೆ. ವಿವರಣೆಯು ಸರಿ ಎಂದೇನೂ ನನಗೆ ಅನ್ನಿಸಿರಲಿಲ್ಲ. ಆದರೆ ಬೇರೆ ಯಾವ ಕಾರಣವೂ ತೋಚಿರಲಿಲ್ಲ. ಮತ್ತೇನು ತಾನೆ ಮಾಡಲು ಸಾಧ್ಯ.

ಇದಾದ ಮೇಲೆ ಶ್ವಾಸಕೋಶಗಳು ಬೆಲೂನ್ ಉಬ್ಬುವಂತಾಗುವುದು ಆರು ದಿನಗಳಿಗೊಮ್ಮೆ ಮೂರು ದಿನಗಳಿಗೊಮ್ಮೆ ಬರಲಾರಂಭವಾಯಿತು. ನಗುನಗುತ್ತಿದ್ದ ಸ್ವಲ್ಪ ಜುಲುಮಿನ ಶೀಲಾ, ಈಗೀಗ ಮೇಲೆ ಕಪ್ಪೆ ಬಿದ್ದು ಅಂಜಿದವರಂತೆ, ಆತಂಕಮಯವಾಗಿದ್ದಳು.

'ಮನೋವೈದ್ಯರ ಸಲಹೆಯು ಅಗತ್ಯ. ಹೀಗೆಯೇ ಇದನ್ನು ಬಿಡಬಾರದು. ಮುಂದೆ ಇತರ ಮಾನಸಿಕ ಬೇನೆಗಳು ಜತೆ ಬಂದು ತೊಡರಿಕೊಳ್ಳಬಹುದು' ಎಂದು ಆಬ್ರಹಂನಿಗೂ ಅವನ ಹೆಂಡತಿಗೂ ಇನ್ನಿಲ್ಲದ ಹಾಗೆ ಹೇಳಿದೆ. ಹಲವಾರು ನಿದರ್ಶನಗಳನ್ನೂ ಕೊಟ್ಟೆ. ದಂಪತಿಗಳು ಒಪ್ಪಲೇ ಇಲ್ಲ. 'ಬೇಗ ಮದುವೆಯನ್ನು ಮಾಡಿ ಬಿಡ್ತೀನಿ. ಕೈಲೊಂದು ಸೊಂಟದಲ್ಲೊಂದು ಮಗುವಿದ್ದರೆ, ಉಸಿರಿಳಿಯುವುದೂ ಏರುವುದೂ, ಕೋಶಗಳು ಬೆಲೂನ್ ಆಗುವುದೂ ಎಲ್ಲವೂ ಮರೆತು ಹೋಗುತ್ತೆ' ಎಂದವರು ಖಡಾಖಂಡಿತವಾಗಿ ಹೇಳಿಬಿಟ್ಟರು.

"ಶೀಲಾಳ ಆತಂಕವು ಅತ್ಯುಗ್ರವಾಗಿದೆ. ತೀವ್ರ ತಳಮಳದ ಹಂತಕ್ಕೆ ಏರಿದೆ. ಹೀಗೆಯೇ ಬಿಟ್ಟರೆ 'ಡಿಪ್ರೆಷನ್' ತಗುಲಿಕೊಳ್ಳಬಹುದು. ಈ ಸ್ಥಿತಿಯಲ್ಲಿ ಮದುವೆಯನ್ನು ಮಾಡಿದರೆ ಇವೆಲ್ಲಾ ಅತ್ಯುಲ್ಬಣವಾಗಲೂ ಬಹುದು. ತುಂಬಾ ಹುಷಾರಾಗಿರಬೇಕು" ಎಂದು ಹೇಳಿದೆ. ಯಾಕೆ ಇವರು ಅಲಕ್ಷ್ಯ ಮಾಡುತ್ತಿದ್ದಾರೆ ಎಂದು ಕಸಿವಿಸಿಯೂ ಆಯಿತು. ಕರ್ತವ್ಯವನ್ನು ನಾನು ಮಾಡಿದ್ದಾಯಿತು, ಮಿಕ್ಕಿದ್ದು ಅವರವರ ಪೂರ್ವಜನ್ಮದ ಕರ್ಮ ಎಂದು ವೇದಾಂತವನ್ನಂದುಕೊಂಡೆ.

ಇದಾದ ಒಂದೆರಡು ವರ್ಷಗಳು, ಶೀಲಾ ಈ ರೀತಿ ನರಳುತ್ತಲೇ ಇದ್ದಳು. ಇದೆಲ್ಲಾ ಸೈಕೋಜನಿಕ್ ಅಂತ ನನಗೂ ಅನ್ನಿಸುತ್ತೆ ; ಆದರೆ ಗಾಣಿಗಿತ್ತಿ ಅಯ್ಯೋ ಎಂದ ಹಾಗೆ. ಹಾಗನ್ನಿಸುವುದರಿಂದ ಯಾವ ಗುಣವೂ ಆಗಿಲ್ಲ ; ಎಂದು ಅನ್ನುತ್ತಿದ್ದಳು. ಮನೋವೈದ್ಯರನ್ನು ಕಾಣಲು ಅವಳಿಗೂ ಇಷ್ಟವಿರಲಿಲ್ಲ.

ಶ್ರೀಮಂತನಾದರೂ ಆಬ್ರಹಂನಿಗೆ ಅನುಕೂಲವಾದ ಅಳಿಯನನ್ನು ಷಿಕಾರಿ ಮಾಡಲು ಎರಡು ವರ್ಷಗಳು ಹಿಡಿಯಿತು. ವೈಭವದ ಮದುವೆಯನ್ನು ಅದ್ಧೂರಿಯಿಂದ ಮಾಡಿದರು. ವಿವಾಹದ ಸಂಭ್ರಮಗಳಲ್ಲಿ ಶೀಲಾ ಅನಾಸಕ್ತಿಯನ್ನೇನೂ ತೋರಿಸಲಿಲ್ಲ. ಆದರೆ ಅತ್ತೆಯ ಮನೆಗೆ ಹೋದಮೇಲೆ, ಬಸಿರು ಬಾಣಂತನಗಳು ಆಗುವಾಗ ಮನಃಪಲ್ಲಟವು ಆಗುತ್ತೇನೋ ಎಂದು ಶಂಕಿಸುತ್ತಲೇ ಇದ್ದೆ.

ಅತ್ತೆಯ ಮನೆಗೆ ಹೋಗಿ ಕೆಲವು ತಿಂಗಳುಗಳು ಸಂಸಾರವನ್ನು ನಡೆಸಿದಳು. ಕೆಲವು ದಿನಗಳು ತೌರಿನ ವಾಸಕ್ಕೆಂದು ಬಂದಿದ್ದಾಗ, 'ಅತ್ತೆಯ ಮನೆಯಲ್ಲಿ ಶ್ವಾಸಕೋಶಗಳು ಬೆಲೂನ್ ಆಗುವ ಘಟನೆಗಳು ಒಂದೆರಡು ಬಾರಿ, ಬಹಳ ಹಗೂರಾಗಿ, ಆಗಿತ್ತು. ಆಮೇಲಾಮೇಲೆ ಕಡಿಮೆಯಾಗುತ್ತ ಬಂತು. ಈಗ ಎರಡು ಮೂರು ತಿಂಗಳುಗಳಿಂದ ಹಾಗೆ ನರಳಿಯೇ ಇಲ್ಲ' ಎಂದು ಹೇಳಿದಳು. ಕೈಲೊಂದು ಮಗುವಿದೆ. ಸೊಂಟದಲ್ಲೊಂದು ಮಗು ಇದೆ. ನೆಮ್ಮದಿಯಾಗಿಯೇ ಇದಾಳೆ, ಶೀಲಾ.

ಅಂದರೆ ಆತಂಕದಿಂದಾದ ನರಳುವಿಕೆಯು, ಕೆಲವೊಮ್ಮೆ ತನ್ನಷ್ಟಕ್ಕೆ ತಾನೇ ಸರಿಹೋಗುವುದೂ ಉಂಟು. ಆದರೆ ಇದು ವಿರಳವಾಗಿ ಆಗುತ್ತದೆ. ಈ ಆಸೆಯನ್ನು ಇಟ್ಟುಕೊಂಡು ಮಾಡಬೇಕಾದ ಮನೋಚಿಕಿತ್ಸೆಯನ್ನು ಸಕಾಲದಲ್ಲಿ ಮಾಡಿಸದೇ ಇದ್ದರೆ, ಮುಂದೆ ಬೇರೂರಿದ ಇತರ ಮಾನಸಿಕ ಬೇನೆಗಳು ಕಾಣಿಸಿಕೊಳ್ಳುತ್ತವೆ. ಆಗ ಚಿಕಿತ್ಸೆಯೂ ಸುಲಭವಾಗಿರುವುದಿಲ್ಲ. ಆದಕಾರಣ ಮುಂಜಾಗ್ರತೆಯಾಗಿ ಎಚ್ಚರವಹಿಸುವುದು ಜಾಣತನ.

ಶೀಲಾಳ ಶ್ವಾಸಕೋಶಗಳು ಬೆಲೂನಿನಂತೆ ಉಬ್ಬಿ ಕಾಟವನ್ನು ಏಕೆ ಕೊಡುತ್ತದೆ? ನಿಜವಾಗಿ ಶ್ವಾಸಕೋಶಗಳು ಬೆಲೂನ್ ಆಗಿರುವುದಿಲ್ಲ. ಆದರೂ ಆದಂತೆ ಭ್ರಮೆಯನ್ನು ಹುಟ್ಟಿಸುವುದೇಕೆ? ಇಂದಿನ ವಿಜ್ಞಾನದ ಹಂತದಲ್ಲಿ, ಇದನ್ನು ಖಂಡತವಾಗಿ ಹೇಳಲು ಸಾಧ್ಯವಿಲ್ಲ. ಸುಂದರವಾಗಿರುವ, ಹೀಗೆ ಇರಲೇಬೇಕು ಎನಿಸುವ ಹಲವಾರು ಊಹೆಗಳಿಗೇನೂ ಕೊರತೆಯಿಲ್ಲ. ಕತೆ ಬರೆಯಬಲ್ಲವರೆಲ್ಲರೂ ಊಹೆಯನ್ನು ಕಟ್ಟಬಲ್ಲರು. ದಿಟವಾದ ಕಾರಣವು ದೇವರಿಗೇ ಗೊತ್ತು! ದೇವರನ್ನು ದೃಢವಾಗಿ ನಂಬಿದವರಲ್ಲಿ ಕೆಲವರಾದರೂ ಆತಂಕದ ಬೇನೆಯಿಂದ ಸ್ವಾಭಾವಿಕವಾಗಿ ಪಾರಾಗುತ್ತಾರೆ. ಇಷ್ಟನ್ನು ಮಾತ್ರ ಅನುಭವದಿಂದ ಹೇಳಬಹುದು.

**೪. ಬಾವಿ ಕಟ್ಟೆಯ ಸೈತಾನ್**

ಆಕೆಯ ಮುಖವನ್ನು ನೋಡಿದಾಗ ನನಗೆ ಗಾಬರಿಯಾಯಿತು. ದೆವ್ವವನ್ನು ಕಣ್ಣಾರ ಕಂಡವರ ಕಣ್ಣುಗಳಂತೆ ಆಕೆಯ ಕಣ್ಣುಗಳು ಗೆಡ್ಡೆಗಣ್ಣಾಗಿದ್ದುವು. ಪ್ರಯಾಸದಿಂದ ಆಕೆಯು ಉಸಿರನ್ನು ಎಳೆದುಕೊಳ್ಳುವಾಗ ವಕ್ರವಕ್ರವಾದ ಕರ್ಕಶ ಶಬ್ದಗಳು ಹೊರಹೊಮ್ಮುತ್ತಿದ್ದುವು. ಸುಮಾರು ಐದೂಮುಕ್ಕಾಲು ಅಡಿ ಎತ್ತರವಿರುವ, ಬುರುಕಿ ಹಾಕಿಕೊಂಡಿರುವ ಹೆಂಗಸು ಈ ರೀತಿ ಕರ್ಕಶ ಶಬ್ದಗಳನ್ನು ಮಾಡಿದರೆ ಯಾರೂ ಹೆದರಬೇಕಾದದ್ದೇ. ಮಧ್ಯೆ ಮಧ್ಯೆ ಉಸಿರನ್ನು ಎಳೆದು ಕೊಳ್ಳುವಾಗ, ತಟ್ಟಂತ ನಿಲ್ಲಸಿಬಿಟ್ಟು, ನಂತರ ನಾಯಿ ಕೆಮ್ಮಿನಂತೆ ಶಬ್ದಮಾಡುತ್ತ ದೊಡ್ಡ ಉಸಿರನ್ನು ಪ್ರಯಾಸದಿಂದ ಎಳೆದುಕೊಳ್ಳುತ್ತಿದ್ದಳು. 'ಯಾಕಮ್ಮಾ, ಹೀಗೆ ಉಸಿರಾಡುತ್ತಿ' ಎಂದು ಕೇಳಿದಾಗ 'ಯಾರೋ ಬಂದು ಕತ್ತನ್ನು ಅದುಮಿದ ಹಾಗೆ ಆಗುತ್ತೆ. ಆದ್ದರಿಂದ ಹೀಗೆ' ಎಂದಳು. 'ಇಲ್ಲಿ ಯಾರೂ ಇಲ್ಲವಲ್ಲಮ್ಮ : ಯಾರೂ ಬಂದಿಲ್ಲವಲ್ಲ' ಎಂದೆ. 'ಅದು ನನಗೂ ಗೊತ್ತು; ಆದರೆ ಹಾಗೆ ಆಗುತ್ತೆ ; ಯಾವಾಗ ಆಗುತ್ತೆ ಎನ್ನುವುದು ತಿಳಿಯದು. ಆದ್ದರಿಂದ ಭಯವೂ ಹೆಚ್ಚಾಗಿದೆ.' ಎಂದು ಆಕೆ ಹೇಳಿದಳು.

ಆತಂಕವು ಅತಿಯಾಗಿ ತೀವ್ರ ತಳಮಳದ ಹಂತವನ್ನು ಮುಟ್ಟಿದೆ ಎನ್ನುವುದು ಸ್ಪಷ್ಟವಾಯಿತು. ಸಮಾಧಾನವನ್ನು ಮೆದು ಮಾತುಗಳಿಂದ ಮಾಡುತ್ತ 'ಈ ಇಂಜಕ್ಷನ್ನಿನಿಂದ ಖಂಡಿತವಾಗಿ ಶಮನವಾಗುತ್ತೆ' ಎಂದು ಒತ್ತಾಯಪೂರ್ವಕವಾಗಿ ಧೈರ್ಯ ಹೇಳುತ್ತಾ, ಚಿಕಿತ್ಸೆಯನ್ನು ನಡೆಸಿದೆ. ಇನ್ಜಕ್ಷನ್ ಕೊಟ್ಟ ಮೂರು ನಾಲ್ಕು ನಿಮಿಷಗಳಲ್ಲಿ ಆಕೆಯ ಮುಖವು ನೋಡುವಂತಾಯಿತು. 'ಉಸ್ಸಪ್ಪ ! ಈಗ ಸರಾಗವಾಗಿ ಉಸಿರು ಬಿಡಬಹುದಪ್ಪಾ ! ಸದ್ಯಕ್ಕೆ ಬದುಕಿದೆ' ಎಂದು ನಿಟ್ಟುಸಿರನ್ನು

ದೀರ್ಘವಾಗಿ ಬಿಟ್ಟಳು.

ನಂತರ ವಿಚಾರಿಸಿದಾಗ ಕಳೆದ ಒಂದೆರಡು ವರ್ಷಗಳಿಂದಲೂ, ಆಗಿಂದಾಗ್ಗೆ, ಈ ರೀತಿ ಕತ್ತು ಅದುಮಿದಂತಾಗುತ್ತಿತ್ತೆಂದೂ, ಆದರೆ ಒಂದೆರಡು ತಿಂಗಳುಗಳಿಂದ ವಿಪರೀತಕ್ಕಿಟ್ಟುಕೊಂಡಿದೆಯೆಂದೂ, ಅವಳ ಗಂಡನಿಂದ ಗೊತ್ತಾಯಿತು. ಹಲವಾರು ಹೆಣ್ಣು ವೈದ್ಯರುಗಳಿಂದ ಪೂರ್ಣ ಪರೀಕ್ಷೆಯನ್ನು ಮಾಡಿಸಿಕೊಂಡಿದ್ದಳು. ಆ ವರದಿಗಳನ್ನೆಲ್ಲಾ ತಂದೂ ಇದ್ದಳು.

ದೇಹದ ಯಾವುದೊಂದು ಬೇನೆಯಿಂದಲೂ ಉಂಟಾದುದಲ್ಲ, ಈ ಆತಂಕ, ಎನ್ನುವುದು ಸ್ಪಷ್ಟವಾಯಿತು. ಮನೋವೈದ್ಯರ ಬಳಿಗೆ ಹೋಗಿ ಸಲಹೆಯನ್ನು ಪಡೆಯಿರಿ ಎಂದು ಆಕೆಯ ಮನೆ ವೈದ್ಯರು ಹೇಳಿದ್ದರು. ಆದರೆ ಮನೆಯವರು ಯಾರೂ ಒಪ್ಪಲಿಲ್ಲ. 'ಹುಚ್ಚಾಸ್ಪತ್ರೆಗೆ ಹೋಗುವಂತಹ ಕಾಯಿಲೆ ನನಗೇನಿದೆ? ಗಂಟಲಿನಲ್ಲಿ ಏನೋ ಇದೆ. ಇವರಾರಿಗೂ ಗೊತ್ತಾಗುತ್ತಿಲ್ಲ' ಎಂದು ಅವಳ ನಂಬಿಕೆ.

'ಯಾವ ಇಂಜಕ್ಷನ್ ಕೊಟ್ಟಿರಿ ? ಎರಡು ನಿಮಿಷಗಳಲ್ಲಿ ಎಲ್ಲವೂ ಸರಿ ಹೋಯಿತು, ಸದ್ಯಕ್ಕಾದರೂ' ಎಂದು ಕೇಳಿದಳು. ಇದರಿಂದ ಗುಣವಾಗುತ್ತೆ ಎಂದು ಒತ್ತಿ ಹೇಳಿದುದರಿಂದ ಗುಣಕಂಡಿತ್ತೇ ವಿನಹಾ, ಚುಚ್ಚಿದ ಯಃಕಶ್ಚಿತ್ ಮದ್ದಿನಿಂದಲ್ಲ ಎನ್ನುವುದು ನನಗೆ ಗೊತ್ತು, ಆದರೆ ಅದನ್ನು ಹೇಳುವಂತಿಲ್ಲ. ಆಕೆಯಲ್ಲಿ ಹುಟ್ಟಿದ ನಂಬಿಕೆಯನ್ನು ಬೆಳೆಸಿದರೆ ಅವಳಿಗೂ ಒಳ್ಳೆಯದು, ನನಗೂ ಕ್ಷೇಮ. ಆದರೆ ಈ ಪ್ರಯೋಗ, ಫಲಿತಾಂಶಗಳಿಂದ, ಕತ್ತು ಹಿಸುಕಿದಂತಾಗುತ್ತಿದ್ದುದು ಮನಸ್ಸಿನ ತೀವ್ರ ತಳಮಳದಿಂದಲೇ ಎನ್ನುವುದು ಖಂಡಿತವಾಯಿತು. ಹಾಗೂ ನಾನು ಮಾತನಾಡಿದ ಧಾಟಿಯು ಆಕೆಯ ಮನಸ್ಸಿಗೆ ಆಪ್ಯಾಯಮಾನವಾಗಿದೆ, ಅದರಿಂದ ಅವಳ ಮನಸ್ಸಿಗೆ ಸಮಾಧಾನವಾಗಿದೆ. ಆತಂಕವು ತಾತ್ಕಾಲಿಕವಾಗಿಯಾದರೂ ಶಮನವಾಗಿದೆ ಎನ್ನುವುದೂ ಸ್ಪಷ್ಟವಾಯಿತು.

ಹಳ್ಳಿಯ ಕಡೆಯ ಹೆಣ್ಣು ಆಕೆ. ಕಟ್ಟುನಿಟ್ಟು ಘೋಷಾವನ್ನು ಆಚರಿಸುವ ಶ್ರೀಮಂತ ಮುಸಲ್ಮಾನ್ ಮನೆಯಾಕೆ. ಹೊರಲೋಕದ ನಾಗರಿಕ ಪ್ರಪಂಚವು ಆಕೆಯನ್ನು ಸೋಕಿರಲೇ ಇಲ್ಲ. ಅಂದ ಮೇಲೆ ನಾಗರಿಕರ ಆತಂಕಕ್ಕೆ ಕಾರಣವಾಗುವ ವಿಷಯಗಳನ್ನು ವಿಚಾರಿಸುವ ಅಗತ್ಯವಿರಲಿಲ್ಲ. ಹಳೆಯ ಕಾಲದ ಮೂಢ ನಂಬಿಕೆಗಳೇನಾದರೂ ಕಾಡುತ್ತಿರಬಹುದೇ ? ಎಂದು ಅನ್ನಿಸಿತು, ಹಳ್ಳಿಯ ಕಡೆಯವರು ದೆವ್ವ ಪಿಶಾಚಿಗಳಲ್ಲಿ ಹೆಚ್ಚು ನಂಬುತ್ತಾರೆ. ಅಂತಹುದೇನಾದರೂ ಈಕೆಯನ್ನು ಕಾಡುತ್ತಿದೆಯೇ ? ನೋಡೋಣ ಒಂದು ಪಟ್ಟು ; ಅಡ್ಡೇಟಿನ

ಮೇಲೆ ಗುಡ್ಡೇಟು ಅಂತ ಆತಂಕದ ಕಾರಣವು ಸಿಗಬಹುದು, ಎಂದುಕೊಂಡೆ. ನೇರವಾಗಿ ಪ್ರಶ್ನಿಸಿದೆ. 'ಯಾವುದಾದರೂ ಸೈತಾನನ ಕಾಟದಿಂದ ಹೀಗಾಗುತ್ತಿರಬಹುದೇ ? ಒಂದೆರಡು ವರ್ಷಗಳಿಂದ ಹೀಗಾಗುತ್ತಿದೆ ಎಂದಿರಿ. ಒಂದೆರಡು ವರ್ಷಗಳ ಹಿಂದೆ ಎಲ್ಲಿಗಾದರೂ ಹೋಗಿದ್ದಾಗ ಸೈತಾನ್ ಮೆಟ್ಟಿಕೊಂಡಿರಬಹುದೇ ? ಹೀಗೆ ಏಕೆ ಕೇಳ್ತೀನಿ ಅಂದರೆ, ನಿಮ್ಮ ಗಂಟಲಿನಲ್ಲಿ ಯಾವ ದೋಷವೂ ಇಲ್ಲ. ನರನಾಡಿ ಮಾಂಸಖಂಡ ಎಲ್ಲವೂ ಲಕ್ಷಣವಾಗಿವೆ. ಅದಕ್ಕೇ' ಎಂದು. ಆಕೆಯ ಅನಿರೀಕ್ಷಿತ ಉತ್ತರವು ನನಗೂ ಆಚ್ಚರಿಯನ್ನುಂಟುಮಾಡಿತು.

'ಇವರಿಗೆ ಎಷ್ಟೋ ಹೇಳಿದೆ. ಆ ಮನೆಗೆ ಹೋಗುವುದು ಬೇಡ ಅಂತ. ಆದರೆ ಇವರು ಕೇಳಬೇಕಲ್ಲ ! ಒಳ್ಳೆಯವರಾದ, ತಿಳಿದ ನೆರೆ ಹೊರೆ, ನಮ್ಮವರೆಲ್ಲಾ ಇರುವ ಬಡಾವಣೆ. ಮನೆಯೂ ಅನುಕೂಲವಾಗಿದೆ, ಬಾಡಿಗೆಯೂ ದುಬಾರಿಯಾಗಿಲ್ಲ. ನಲ್ಲಿಯ ನೀರು ನಿಂತರೂ ಬಾವಿಯ ಸೌಕರ್ಯವಿದೆ. ನಮ್ಮ ದುಕಾನಿಗೂ ಹತ್ತಿರವಿದೆ. ಅಲ್ಲಿಗೆ ಹೋಗೋಣ ಎಂದರು. ಅವರು ಹೇಳಿದ್ದೇನೋ ದಿಟ. ಆಗಿದ್ದ ಹಳೆ ಮನೆಯಿಂದ ಮಧ್ಯಾಹ್ನದ ಊಟವನ್ನೂ ದುಕಾನಿಗೆ ಡಬ್ಬಿಯಲ್ಲಿ ಕಳಿಸಬೇಕು. ಹತ್ತಿರ ಮನೆಯಿದ್ದರೆ, ಹೊತ್ತಿಗೆ ಸರಿಯಾಗಿ ಮನೆಗೆ ಬಂದು ಬಿಸಿ ಬಿಸಿಯಾಗಿ ಉಣ್ಣಬಹುದು ಎಂದು ಮನಸ್ಸಿಗೆ ಹೊಳೆಯಿತು. ಆದ್ದರಿಂದ ಹ್ಞೂ, ಅಂತ ಒಪ್ಪಿ ಹೊಸ ಮನೆಗೆ ಹೋದೆವು. ಅಲ್ಲಿಗೆ ಹೋಗಿ ನೆಲಸಿದ ಒಂದೆರಡು ವಾರಗಳಲ್ಲಿ ಕತ್ತನ್ನು ಯಾರೋ ಹಿಸುಕಿದಂತೆ, ಬಲವಾಗಿ ಅದುಮಿದಂತೆ ಆಗಲು ಶುರುವಾಯಿತು' ಎಂದಾಕೆ ಲಕ್ಷಣವಾಗಿ ಹೇಳಿದಳು. ಆದರೆ ಅತ್ಯಗತ್ಯವಾದ ವಿಷಯವನ್ನು ಮರೆಮಾಚಿದ್ದಳು. ಆದಕಾರಣ ತಿರುಗಿ ಪ್ರಶ್ನಿಸಬೇಕಾಯಿತು. 'ಆಯ್ತಮ್ಮ ! ಆದರೆ ಆ ಮನೆಗೆ ಹೋಗುವುದು ಬೇಡ ಅಂತ ಯಾಕೆ ಹೇಳಿದಿರಿ ?' ಎಂದು ಕೇಳಿದೆ. 'ಸೆಲ್ಮಾಳ ನಿಕಾಕ್ಕೆ ಹೋಗಿದ್ದಾಗ, ಸಂಬಂಧಿಯೊಬ್ಬರು ಹೇಳಿದ್ದರು. ಆ ಮನೆಯಲ್ಲಿ ಹಿಂದೆ ಎಂದೋ ಮನೆಯಳಿಯ ಬಾವಿಯಲ್ಲಿ ಬಿದ್ದು ತೀರಿಕೊಂಡಿದ್ದ ಅಂತ. ಅವನಿಗೆ ಹೂರ್ ಸೈತಾನ್ ಬಡಿದಿತ್ತು ಅಂತ, ಇನ್ನು ಯಾರೋ ಅಂದರು, ಆತ್ಮಹತ್ಯೆ ಏನಲ್ಲ ಅದು ಹೆಂಡತಿಯೇ, ತನ್ನ ವಿಟನ ಸಹಾಯದಿಂದ ಗಂಡನನ್ನು ಬಾವಿಗೆ ತಳ್ಳಿದ್ದಳು ಅಂತ. ಅವನು ಈಗ ಮನೆಗೆ ಬಂದವರನ್ನು ಸೈತಾನ್ ಆಗಿ ಕಾಡುತ್ತಾನೆ ಎಂದು ನಾನೇನೂ ನಂಬುವುದಿಲ್ಲ. ಆದರೆ ಆ ಮನೆಗೆ ಹೋದಮೇಲೆ ಹೀಗಾಗುತ್ತಿರುವುದನ್ನು ನೋಡಿದರೆ, ಹಾಗೂ ಆಗಿರಬಹುದೋ ಎಂದು ಅನುಮಾನ ಬರುತ್ತದೆ' ಎಂದಳು.

ಆಗ ಆಕೆಯ ಗಂಡ ಮಧ್ಯೆ ಬಾಯಿ ಹಾಕಿದ. ನನ್ನ ಕಡೆಗೆ ತಿರುಗಿ,

'ನೀವೂ ಸರಿ ! ಇವಳ ಮಾತನ್ನು ಕೇಳಿ. ಆ ಮನೆಯಲ್ಲಿ ಹಾಗಾಯಿತು ಎನ್ನುವುದು ನಲವತ್ತು ಐವತ್ತು ವರ್ಷಗಳ ಹಿಂದಿನ ಕತೆ. ಆ ಮೇಲೆ ಆ ಮನೆಯಲ್ಲಿ ನನಗೆ ತಿಳಿದ ಹಾಗೆ ಮುವತ್ತು ನಲವತ್ತು ಹೆರಿಗೆಗಳಾಗಿವೆ. ಅವರೆಲ್ಲರೂ ಆರೋಗ್ಯವಾಗಿಯೇ ಇದ್ದರು. ಈ ಸೈತಾನ್ ಅವರು ಯಾರನ್ನೂ ಕಾಡಲಿಲ್ಲ. ಹಸಿಮೈಯಿನ ಆ ಪುಟ್ಟ ಬಾಣಂತಿಯರನ್ನೆಲ್ಲಾ ಬಿಟ್ಟು, ಈ ಮುದುಕೀನ ಅಮರಿಕೊಳ್ಳುಕ್ಕೆ ಆ ಸೈತಾನ್ ಕಾದಿದ್ದನೇ?' ಎಂದು ಅವ ತಾನು ಮಾಡಿದುದನ್ನು ಸಮರ್ಥಿಸಿಕೊಂಡ, ಚಾಲೂಕು ಗಂಡ; ಹಳ್ಳಿಯ ಮೊಂಡು ಹೆಣ್ಣನ್ನೂ ಭಂಡತನದಿಂದ ನಿಭಾಯಿಸಿಕೊಳ್ಳಬಲ್ಲ ಎನಿಸಿತು.

ಅಂದಿನ ಚಿಕಿತ್ಸೆಯನ್ನು ಮುಗಿಸಿ 'ನೀನೊಬ್ಬನೇ ಆ ಮೇಲೆ ಬಂದು ನನ್ನನ್ನು ಕಾಣು' ಎಂದು ಗಂಡನಿಗೆ ಹೇಳಿ, ಅವರನ್ನು ಕಳಿಸಿದ್ದಾಯಿತು.

ಆ ಮೇಲೆ ಗಂಡ ಬಂದಾಗ ಬಾವಿಕಟ್ಟೆಯ ಸೈತಾನನ ವಿವರಗಳನ್ನು ಕೇಳಿದೆ. ಅವ ಅಂದ :– ' ಬಾವಿಕಟ್ಟೆಯ ಮೇಲೆ ಆ ಸೈತಾನ್ ರಾತ್ರಿಯಲ್ಲಿ ಕೂತಿದ್ದನಂತೆ. ಇವಳೊಂದು ರಾತ್ರಿ ಅಕಸ್ಮಾತ್ ಒಬ್ಬಳೇ ಅತ್ತ ಹೋದಾಗ, ಕತ್ತಲು ಕತ್ತಲಾಗಿದ್ದರೂ ಡಿಖಾವಾಗಿ ಕಾಣಿಸಿತಂತೆ. ಘಟಸರ್ಪದಂತಿತ್ತಂತೆ, ಸೈತಾನನ ತೋಳುಗಳು. ಅವನ್ನು ಬೀಸಿ, ಸೈತಾನ 'ಬಾ' ಎಂದು ಕರೆದನಂತೆ. ಇವಳು ಬೆದರಿ ಬೆವರಿ ಮನೆಯೊಳಕ್ಕೆ ಓಡಿ ಬಂದುಬಿಟ್ಟಳಂತೆ, ಅಲ್ಲಾನ ಪ್ರಾರ್ಥನೆಯನ್ನೂ ಮಾಡಲು ಕೂಡ ಆಗ ಮರೆತುಬಿಟ್ಟಿದ್ದಳಂತೆ, ಇಂತಹ ಕತೆಯನ್ನು ಬೆಳೆದವರು ಯಾರಾದರೂ ನಂಬುತ್ತಾರೆಯೇ, ಡಾಕ್ಟರ್' ಎಂದು. ಒಂದೆರಡು ನಿಮಿಷಗಳೂ ಅವನನ್ನು ದಿಟ್ಟಿಸಿ ನೋಡಿದೆ. 'ನಿನಗೆಷ್ಟು ಜನ ಹೆಂಡತಿಯರು?' ಎಂದು ಕೇಳಿದೆ. ಆ ಜಾತಿಯ ಶ್ರೀಮಂತರನ್ನು ಕೇಳಬೇಕಾದ ಪ್ರಶ್ನೆ. 'ಇವಳೊಬ್ಬಳೇ, ಡಾಕ್ಟರ್, ಮತ್ತು ಅಂತಹ ಹವ್ಯಾಸದ ಖುಷಿ ನನಗಿಲ್ಲ' ಎಂದ. ನಾ ಕೇಳಿದ ಪ್ರಶ್ನೆಯ ಇಂಗಿತಕ್ಕೆ ಪರಿಪೂರ್ಣವಾದ ಉತ್ತರವನ್ನು ನೀಡಿಲ್ಲ ಎಂದವನಿಗೆ ಅನಿಸಿರಬೇಕು. ಆದಕಾರಣ ಮುಂದುವರೆದು 'ಡಾಕ್ಟರೆ ! ಬಡವರ ಮನೆಯಲ್ಲಿ ಹುಟ್ಟಿ ಬೆಳೆದವ, ನಾನು. ಯಾವ ಪುಣ್ಯವೋ, ಶ್ರೀಮಂತರ ಮನೆಯ ಈ ಹೆಣ್ಣನ್ನು ಮದುವೆ ಮಾಡಿಸಿತು. ಆ ನಂತರ ಯಾವ ವ್ಯಾಪಾರಕ್ಕೆ ನಾನು ಕೈ ಹಾಕಿದರೂ, ಕೊಪ್ಪರಿಗೆ ಹಣ ಲಾಭವಾಗಿ ಸಿಕ್ಕಲಾರಂಭಿಸಿತು. ಅವಳಲ್ಲಿ ತುಂಬಾ ವಿಶ್ವಾಸ ನನಗೆ. ಅಷ್ಟೇ ಅಲ್ಲ, ಗೌರವವೂ ಕೂಡ. ಇಷ್ಟು ಹಣ ನನ್ನ ಕೈ ಸೇರಿದೆ. ಆದರೆ ಮದುವೆಯಾಗಿ ಬಂದಾಗಿನಿಂದ ಒಂದು ದಿನವಾದರೂ, ಈ ಒಡವೆ ಮಾಡಿಸಿ ಕೊಡಿ ಎಂದು

ಕೇಳಿಲ್ಲ. ತನ್ನ ತೌರಿನ ಶ್ರೀಮಂತಿಕೆಯನ್ನು ನನ್ನೆದುರು ಬಡಾಯಿಸಿಲ್ಲ. ಆಕೆಯ ವಿಷಯದಲ್ಲಿ ಕೃತಜ್ಞತೆಯೂ ಇದೆ' ಎಂದು ಹೃದಯಬಿಚ್ಚಿ ಮಾತನಾಡಿದ. ಹೆಂಡತಿಯ ಆರೋಗ್ಯದ ಪರ ಅವನಿಗೂ ತುಂಬಾ ಆಸಕ್ತಿ ಇದೆ ಎನ್ನುವುದು ಖಚಿತವಾಯಿತು.

'ನಿನ್ನ ಜಾಣತನ, ವಿಚಾರಪರತೆ, ವ್ಯವಹಾರ ಕುಶಲತೆ, ಎಲ್ಲವೂ ಒತ್ತಟ್ಟಿಗಿರಲಿ. ನಿನ್ನ ಹೆಂಡತಿ ಹೀಗೆ ನರಳಬಾರದು ಅಲ್ಲವೇ ? ಬೇಗ ಗುಣವಾಗಬೇಕು ಅಲ್ಲವೇ ? ಈಗ ನಾನು ಹೇಳಿದ ಹಾಗೆ ಕೇಳು. ಡಾಕ್ಟರಿಗೂ ಮೂಢ ನಂಬಿಕೆಯೇ ಅಂತ ನಗಬೇಡ.

ಆ ಮನೆಯನ್ನು ಆದಷ್ಟು ಬೇಗ ಖಾಲಿ ಮಾಡು. ಬೇರೆ ಮನೆಗೆ ಹೋಗು. ಸೈತಾನನನ್ನು ಹೊಡೆದಟ್ಟುವ ಫಕೀರರಾರಾದರೂಇದ್ದರೆ ಅವರನ್ನು ಕರೆಸಿ ಪೂಜೆ ಹಾಕಿಸು. ಇದೆಂತಹಾ ಮೂಢತನ ಎಂದು ಅಲ್ಲಗಳೆಯಬೇಡ. ನಿನ್ನ ನನ್ನ ವಿದ್ಯೆಯ ಕಲಿಯುವಿಕೆಯಾಗಲೀ, ಪ್ರಪಂಚದ ಅರಿವಾಗಲೀ ನಿನ್ನ ಹೆಂಡತಿಗೆ ಇಲ್ಲ. ಅವಳು ನೇರವಾಗಿ ಒಪ್ಪದಿದ್ದರೂ, ಆಳ ಮನಸ್ಸಿನಲ್ಲಿ ಈ ಭಯವು ಬಲವಾಗಿದೆ. ಆ ಭಯವನ್ನು ನಿವಾರಿಸಿದರೆ, ಅರ್ಧದಷ್ಟಾದರೂ ನರಳುವಿಕೆಯಿಂದ ಶಮನವಾಗುತ್ತದೆ' ಎಂದು ಹೇಳಿದೆ. ಅವನೂ ಒಪ್ಪಿದ. ತಿಂಗಳೊಂದರಲ್ಲಿ ಬೇರೆ ಮನೆಗೆ ಹೋದೆ ಎಂದು ಹೇಳಿದ.

ಬೇರೆ ಮನೆಗೆ ಹೋದ ಮೇಲೂ ಕತ್ತು ಅದುಮುವ ಪ್ರಸಂಗಗಳು ಸಂಪೂರ್ಣವಾಗಿ ನಿಲ್ಲಲಿಲ್ಲ. ಆದರೆ ವಾರಕ್ಕೆರಡು ಮೂರು ಬಾರಿ ಆಗುತ್ತಿದ್ದುದು, ಈಗ ಎರಡು ಮೂರು ತಿಂಗಳುಗಳಿಗೊಮ್ಮೆ. ಅಲ್ಲದೆ ಆವೇಶಗಳ ತೀವ್ರತೆಯೂ ಗಮನೀಯವಾಗಿ ಕಡಿಮೆಯಾಗಿದೆ.

ಆತಂಕಪಡುವ ಸ್ವಭಾವವನ್ನು ಆಕೆ ಹುಟ್ಟಿನಿಂದಲೂ ಹೊಂದಿದ್ದಳು. ಕಲಿಕೆಯಾಗಲೀ, ಪ್ರಪಂಚದ ನಾಗರಿಕ ಸಂಪರ್ಕವಾಗಲಿ ಇಲ್ಲದುದರಿಂದ, ಮೂಢನಂಬಿಕೆಗಳು ದೃಢವಾಗುತ್ತಿದ್ದುವು. ಅಂತಹ ಸೈತಾನ್ ನಂಬಿಕೆಯು ಎಂದೋ ಮನಸ್ಸಿನಲ್ಲಿ ನೆಟ್ಟಿತ್ತು. ಅವಕಾಶ ದೊರೆತಾಗ ಚಿಗುರಿ, ಬೆಳೆಯಲಾರಂಭಿಸಿತು. ತೀವ್ರ ತಳಮಳದ ಹಂತಕ್ಕೆ, ಆಕೆಯ ಆತಂಕವು ಏರಬೇಕಾದರೆ, ಅವ್ಯಕ್ತವಾದ ಕಾರಣಗಳು ಇನ್ನೂ ಹಲವಾರು ಇರಲೇಬೇಕು. ಅವೆಲ್ಲವೂ ತಮ್ಮಷ್ಟಕ್ಕೆ ತಾವೇ, ಕಾಲಾನುಕೂಲವಾದಾಗ ಶಮನಗೊಳ್ಳುತ್ತವೆ. ದೊಡ್ಡದಾಗಿ ಕಾಡುವ, ಭಯ ಹುಟ್ಟಿಸುವ ಸೈತಾನನನ್ನು ಉಚ್ಚಾಟನೆ ಮಾಡಿದರೆ ಮಿಕ್ಕ ಚಿಕಿತ್ಸೆಯು ಸುಲಭ ಸಾಧ್ಯ.

**೫. ಶ್ವಾಸಕ್ಕೆ ತಗಲುವ ಆತಂಕ**

ಮನಸ್ಸಿನಲ್ಲುಂಟಾದ ಆತಂಕವು ಮನಸ್ಸನ್ನು ಹೇಗೆ ಕಾಡುತ್ತದೆಯೋ ಅದನ್ನು ಸಾಮಾನ್ಯವಾಗಿ ಎಲ್ಲರೂ ಅನುಭವಿಸಿದ್ದಾರೆ. ಆತಂಕವು ಅತಿಯಾದಗ, ಅದನ್ನು ಶಮನ ಮಾಡಲು, ಪ್ರಕೃತಿಯು ಒಂದು ಉಪಾಯವನ್ನು ಕಂಡುಹಿಡಿದಿದೆ. ದೇಹದ ಅಂಗಗಳಲ್ಲಿ ಯಾವುದಾದರೂ ಒಂದನ್ನು ಆರಿಸಿ, ಆ ಅಂಗದ ಕಾರ್ಯನಿರ್ವಹಣೆಯಲ್ಲಿ ಆತಂಕವು ಅವತರಿಸುವಂತೆ ಮಾಡುವುದೇ ಪ್ರಕೃತಿಯ ಒಂದು ಉಪಾಯ. ಆಗ ಅಂಗದ ಕಾಟವು ಕಾಡುತ್ತದೆ. ಆದರೂ ಆ ಅಂಗವು, ಅದರ ಕೆಲಸವು, ಕಣ್ಣಿಗೆ ಗೋಚರವಾಗಿರುತ್ತದೆ. ಅವ್ಯಕ್ತ ಕಾರಣಗಳಿಂದ ಉದ್ಭವಿಸಿದ ಆತಂಕವು ಅಂಗಗಳಲ್ಲಿ ವ್ಯಕ್ತವಾದರೆ, ಆತಂಕದ ತೀಕ್ಷ್ಣತೆಯು ಕಡಿಮೆಯಾಗುತ್ತದೆ. ಆದುದರಿಂದಲೇ ಪ್ರಕೃತಿಯ ಇದೊಂದು ಉಪಾಯ, ಆತಂಕಶಮನಕ್ಕೆ.

ಇಂತಹ ಆತಂಕಗಳು ಪೌಗಂಡ ವಯಸ್ಸಿನಲ್ಲಿ ಹೆಚ್ಚಾಗಿ ಕಾಣಬರುತ್ತವೆ. ಆ ವಯಸ್ಸಿನಲ್ಲಿ ದೇಹ ಮತ್ತು ಮನಸ್ಸು, ಇವೆರಡೂ ತಾಯ್ತನ ಅಥವಾ ತಂದೆಯ ಹೊಣೆಯನ್ನು ವಹಿಸಿಕೊಳ್ಳಲು, ತೀವ್ರ ಮಾರ್ಪಾಡುಗಳನ್ನು ಮಾಡಿಕೊಂಡು ಅಣಿಯಾಗಬೇಕು. ಅಂತಹ ಸಂಧಿಕಾಲದಲ್ಲಿ, ಇಡೀ ವ್ಯಕ್ತಿಯ ಗಮನವು ಜೀವನದ ಪೂರ್ಣ ಹೊಣೆಯತ್ತ ಸೆಳೆಯಲ್ಪಟ್ಟಿರುತ್ತದೆ. ಆತಂಕವು ಆಗ ಕಾಲು ಹಾಕಿಕೊಳ್ಳುವುದು ಸುಲಭ.

ಉಮಾಕುಮಾರಿಗೆ, ತನ್ನ ಮನೆಯವರ ಅಜ್ಞಾನದಿಂದ, ಆತಂಕವು ಬಲ ಗೊಂಡಿತು. ಶೀಲಾಳ ಆತಂಕವು ಶಮನವಾದ ರೀತಿಯನ್ನು ತಿಳಿದಾಯಿತು. ಬಾವಿ ಕಟ್ಟೆಯ ಸೈತಾನ್ ಆಳಮನಸ್ಸಿನ ಹಗೇವುಗಳಲ್ಲಿ ಮನೆ ಮಾಡಕೊಂಡು ಬೀಬಿಯ ಕತ್ತನ್ನು ಅದುಮಲಾರಂಭಿಸಿದ್ದನ್ನೂ ನೋಡಿದ್ದಾಯಿತು.

ಶ್ವಾಸಕಾರ್ಯದ ಮೇಲೆ ಆತಂಕವು ಎರಗಿ ಬೀಳುವುದೇಕೆ ? ಮತ್ತು ಹೇಗೆ ?

ಮನುಷ್ಯನು ಸತ್ತಿದ್ದಾನೆಯೇ ಇಲ್ಲವೆ ಎಂಬುದನ್ನು ನಿರ್ಧರಿಸಲು ಹೊಳೆಯುವ ಗಾಜನ್ನು ಮೂಗಿನ ಹೊಳ್ಳೆಗಳ ಬಳಿ ಇಡುತ್ತಿದ್ದರು. ಉಸಿರಾಡುತ್ತಿದ್ದರೆ, ಆಗ ಉಸಿರಿನ ಆವಿಯು ಗಾಜಿನ ಮೇಲೆ ಮಂಜುಗಟ್ಟುತ್ತಿತ್ತು. ಅದು ಸ್ಪಷ್ಟವಾಗಿ ಕಾಣಿಸುತ್ತಿತ್ತು. ತುಂಬಾ ಕ್ಷೀಣವಾಗಿರುವ ಕಾರಣ ಉಸಿರಾಡುತ್ತಿರುವುದು ಸ್ಪಷ್ಟವಾಗಿ ಕಾಣಿಸದೇ ಇದ್ದರೂ, ಗಾಜಿಗೆ ಮಂಜು ಹಿಡಿದರೆ ಉಸಿರಾಡುತ್ತಿದೆ ಎಂದು ಖಚಿತವಾಗುತ್ತಿತ್ತು. ಅಂದರೆ ಉಸಿರು ಕ್ಷೀಣವಾಗಿಯಾದರೂ ಆಡುತ್ತಿದ್ದರೆ ಬದುಕಿದ್ದಾನೆ, ಇಲ್ಲದಿದ್ದರೆ ಸತ್ತ ಎಂದು ತೀರ್ಮಾನಿಸುತ್ತಿದ್ದರು. ಬಾಳು ಸಾವುಗಳನ್ನು

ಉಸಿರಾಟವು ನಿಷ್ಕರ್ಷಿಸುತ್ತಿತ್ತು. ಪ್ರಾಣ ಎಂದರೆ ಉಸಿರು ಎನ್ನುವಂತಾಯಿತು. ಅಷ್ಟು ಮುಖ್ಯ ಉಸಿರಾಟ.

ತಾಯಿ ಗರ್ಭದಲ್ಲಿ ಸಂಪೂರ್ಣ ರಕ್ಷಣೆಯನ್ನು ಮಗುವು ಪಡೆದಿರುತ್ತದೆ. ಸ್ವಂತ ಹೊಣೆಯ ಲವಲೇಶಾಂಶವೂ ಅದಕ್ಕಿರುವುದಿಲ್ಲ. ಆದರೂ ಅದರ ದೇಹದಲ್ಲಿ ರಕ್ತ ಸಂಚಾರವಾಗುತ್ತಿರುತ್ತದೆ. ಮಾಂಸಖಂಡಗಳೂ, ಮೂಳೆಗಳೂ ಬೆಳೆಯುತ್ತಿರುತ್ತವೆ. ಅಂದರೆ ಆಹಾರದ ಸರಬರಾಜೂ ಆಗುತ್ತಿರುತ್ತದೆ. ಆದರೆ ಪ್ರಾಣಕ್ಕೆ ಅತಿ ಮುಖ್ಯವಾದ ಉಸಿರಾಟವು ಇರುವುದೇ ಇಲ್ಲ. ಗರ್ಭದಲ್ಲಿನ ಮಗುವಿನ ಶ್ವಾಸಕೋಶಗಳು ಮೊಗ್ಗಿನಂತೆ ಮುದುರಿಕೊಂಡಿರುತ್ತವೆ. ತಾಯ ಉಸಿರಾಟದಿಂದ, ಮಗುವು ಅಗತ್ಯ ವಸ್ತುಗಳನ್ನು ರಕ್ತದ ಮೂಲಕ ಪಡೆಯುತ್ತದೆ.

ಗರ್ಭದಿಂದ ಹೊರಗೆ ಬಂದ ಕ್ಷಣದಲ್ಲಿ ತಾಯ ಆಸರೆಯು ತಪ್ಪಿತು. ಆಗ ಮಗುವು ಅಳುತ್ತದೆ. ಅಳುವಾಗ ಆ ತನಕ ಮುದುಡಿಕೊಂಡಿದ್ದ ಶ್ವಾಸಕೋಶಗಳು ತೆರೆಯಲ್ಪಡುತ್ತವೆ. ಅತ್ತಾಗ ಎಳೆದುಕೊಂಡ ಉಸಿರು, ಶ್ವಾಸಕೋಶಗಳ ಮೂಲೆ ಮೂಲೆಗಳನ್ನೂ ಬಿಡಿಸಿ ಅರಳಿಸಿ, ಮುಂದೆ ಶ್ವಾಸಕಾರ್ಯವನ್ನು ಅಣಿಯಾಗಿ ಮಾಡುವಂತೆ ಸಿದ್ಧಪಡಿಸುತ್ತದೆ.

ಸಂಪೂರ್ಣವಾಗಿ ಸುರಕ್ಷಿತವಾದ ಗರ್ಭದಲ್ಲಿರುವಾಗ ಯಾವ ಆತಂಕವೂ ಇರಲಗತ್ಯವಿಲ್ಲ. ಆದರೆ ಹೊರ ಪ್ರಪಂಚಕ್ಕೆ ಇಳಿದ ಕ್ಷಣ, ಶ್ವಾಸಕಾರ್ಯವು ಆರಂಭವಾಯಿತು. ಉಸಿರಾಡುವ ಹೊಣೆಯು ನನ್ನ ಮೇಲೆ ಬಿತ್ತು, ಎಂದು ಹುಟ್ಟಿದ ಮಗುವಿಗೆ ಆತಂಕವು ಉಂಟಾಗುತ್ತದೆ ಎನ್ನುವುದು ಊಹಾಪೋಹ. ಏಕೆಂದರೆ ಆತಂಕವನ್ನು ಅನುಭವಿಸುವ ಹಂತಕ್ಕೆ ಅದರ ಮನಸ್ಸು ಅರಳಿರುವುದೇ ಇಲ್ಲ. ಈ ಕಾರಣದಿಂದಲೇ ಜವಾಬ್ದಾರಿ, ಹೊಣೆ, ನಾನು, ನನ್ನದು ಎನ್ನುವ ಕಲ್ಪನೆಯು ಹುಟ್ಟಿರುವುದಿಲ್ಲ.

ಆದರೆ ಅದರ ಮೆದುಳು ಬೆಳೆದಿರುತ್ತದೆ. ದೇಹದ ವಿಧವಿಧ ಅಂಗಗಳಿಗೆ ನಿಕಟ ಸಂಪರ್ಕವನ್ನು ಅಣಿಮಾಡುವಷ್ಟು ಬೆಳೆದಿರುತ್ತದೆ. ಮೆದುಳು ಎಂದಾಗ ಎರಡು ಮುಖ್ಯ ಭಾಗಗಳನ್ನು ಗಮನಿಸಬೇಕು. ಒಂದು : ಪುರಾತನವಾದ ಮೆದುಳಿನ ಬುಡ. ದೇಹದ ಅಗತ್ಯ ಕಾರ್ಯಗಳನ್ನು ನಿಯಂತ್ರಿಸುವ ಮೆದುಳು ಕೇಂದ್ರಗಳೆಲ್ಲವೂ ಇಲ್ಲಿಯೇ ಇರುವುದು. ಇನ್ನೊಂದು ; ಮೆದುಳಿನ ಕಾರ್ಟೆಕ್ಸ್. ವಿಚಾರ ಶಕ್ತಿಗೂ, ಸ್ಮರಣೆಗೂ ಮೀಸಲಾದುದು ಈ ಭಾಗ. ಮೆದುಳಿನ ಬುಡವು ಹುಟ್ಟಿದ ಮಗುವಿನಲ್ಲಿ ಸಾಕಷ್ಟು ಬೆಳೆದಿರುತ್ತದೆ. ಆದರೆ ಮೆದುಳಿನ ಕಾರ್ಟೆಕ್ಸ್ ಭಾಗವು ಅಷ್ಟಾಗಿ ಬೆಳೆದಿರುವುದಿಲ್ಲ. ಮಗುವು ಬೆಳೆದಂತೆಲ್ಲ, ಅದರ ಜ್ಞಾನ

ಭಂಡಾರವು ಹೆಚ್ಚಿದಂತೆಲ್ಲ, ಅದರ ಸ್ಮರಣ ಕೋಶವು ಹಿರಿದಾದಂತೆಲ್ಲ ಕಾರ್ಟೆಕ್ಸ್ ಕೂಡ ಹೊರವಾಗಿ ಬೆಳೆಯುತ್ತದೆ. ಬೆಳೆಯುವಾಗಲೂ ಕೂಡ ಮೆದುಳಿನ ಬುಡದೊಂದಿಗೆ ನಿಕಟ ಸಂಪರ್ಕವನ್ನು ಬಲಪಡಿಸಿಕೊಂಡಿರುತ್ತದೆ. ಮೆದುಳಿನ ಬುಡದಲ್ಲಿ ಶ್ವಾಸಕಾರ್ಯವನ್ನು ನಿಯಂತ್ರಿಸುವ ಮುಖ್ಯ ಕೇಂದ್ರಗಳಿರುವುವು. ಮೆದುಳಿನ ಕಾರ್ಟೆಕ್ಸ್ ಭಾಗವು ವೃದ್ಧಿಯಾದಂತೆಲ್ಲ, ಆತಂಕವು ಉಂಟಾಗಬಹುದಾದ ಸನ್ನಿವೇಶಗಳು ಸಂಭವಿಸಲೇಬೇಕು. ಅದೇ ಬಾಳು. ಹಾಗೆ ಆತಂಕವು ಮೂಡಿದಾಗ ಶ್ವಾಸಕಾರ್ಯದ ಕೇಂದ್ರಗಳು ಆತಂಕಕ್ಕೆ ಅನುಗುಣವಾಗಿ ತಲ್ಲಣಿಸುತ್ತವೆ. ಅಂದರೆ ಶ್ವಾಸಕೋಶದ ಕಾರ್ಯಗಳು ಏರುಪೇರಾದಂತೆ, ತಾಪತ್ರಯಪಡುತ್ತಿರುವಂತೆ ಮನಸ್ಸಿಗೆ ಭಾಸವಾಗುತ್ತದೆ. ಶ್ವಾಸಕೋಶದ ಕೇಂದ್ರಗಳು ತಲ್ಲಣಿಸುವ ಬದಲು ಕೆರಳಿದರೆ, ಆಗ ಶ್ವಾಸಕಾರ್ಯವು ದಿಟವಾಗಲೂ ಏರುಪೇರಾಗುತ್ತದೆ. ಶ್ವಾಸಕೇಂದ್ರಗಳು ತಲ್ಲಣಿಸುವಾಗ, ದೀರ್ಘವಾಗಿ ನಿಟ್ಟುಸಿರು ಬಿಡುವುದು, ಭಯಂಕರವಾಗಿ ಆಕಳಿಸುವುದು, ಬೇಗ ಬೇಗ ಉಸಿರನ್ನು ಮೇಲೆ ಮೇಲೆ ಎಳೆದುಕೊಳ್ಳುವುದು, ಇವೆಲ್ಲವೂ ನಡೆಯುತ್ತವೆ. ಇವೆಲ್ಲವೂ ಆತಂಕದ ಸಾಮಾನ್ಯ ಚಿಹ್ನೆಗಳು. ಎಲ್ಲರೂ ಕಂಡಿರುವ ವಿಷಯ. ಆದರೆ ಆತಂಕವು ಅತಿಯಾದರೆ, ಆಗ ಉಸಿರಾಟದ ತುಸು ಏರುಪೇರುಗಳು ಗಮನಕ್ಕೆ ಬರುತ್ತವೆ. ಅಲ್ಲದೆ ಭೂತಕನ್ನಡಿಯಲ್ಲಿ ನೋಡಿದಂತೆ, ಬೃಹತ್ ಪ್ರಮಾಣದಲ್ಲಿದ್ದಂತೆ ಭಾಸವಾಗುತ್ತವೆ. ಭೂತಕನ್ನಡಿಯಲ್ಲಿ ಕಂಡಂತೆಯೇ ಹೊರತು ದಿಟವಾಗಲೂ ಬೃಹತ್ ಪ್ರಮಾಣದ್ದೇನೂ ಅಲ್ಲವೇ ಅಲ್ಲ. ಭೂತ ಕನ್ನಡಿಯ ಬೃಹತ್ ಏರುಪೇರು, ಅಯ್ಯೋ! ಉಸಿರು ನಿಂತು ಹೋಗುವುದಲ್ಲ, ಶ್ವಾಸಕೋಶವು ಬೆಲೂನ್ ಆಯಿತಲ್ಲ, ಪ್ರಾಣವಾಯುವು ಹಾರಿಹೋಗಿ ಬಿಡುತ್ತಲ್ಲ' ಎಂಬ ದೊಡ್ಡದಾದ ಭಯಪೂರಿತವಾದ ಆತಂಕವಾಗುತ್ತದೆ. ಅತಿಯಾಗಿ ಕಳವಳಪಡಿಸಿ ಕಾಡುತ್ತದೆ. ಭಾರೀ ಪ್ರಮಾಣದ ಈ ಆತಂಕದ ಮುಂದೆ, ಮನಸ್ಸಿನಲ್ಲಿ ಮೂಡಿದ್ದ ಬಾಳಿನಿಂದುಂಟಾದ ಮೊದಲ ಆತಂಕವು ಅಲ್ಪವಾಗುತ್ತದೆ. ಗಮನಕ್ಕೆ ಬರುವುದೇ ಇಲ್ಲ. ಶ್ವಾಸಕಾರ್ಯದ ಪ್ರಾಣರಂಗನ ಆತಂಕದ ಮುಂದೆ ಬಾಳಸಿಂಗನ ಚಿಲ್ಲರೆ ಆತಂಕಗಳು ಹೇಗೆ ತಾನೆ ಮರೆಯಲು ಸಾಧ್ಯ ! ದೊಡ್ಡೇಗೌಡ ದೊಣ್ಣೆ ಹಿಡಿದು ಹೆದರಿಸುತ್ತಿರುವಾಗ, ಚಿಕ್ಕೇಗೌಡನ ಕೀಟಲೆಯನ್ನು ಯಾರು ಲೆಕ್ಕಕ್ಕೆ ತೆಗೆದುಕೊಳ್ಳುತ್ತಾರೆ?

ಮಾಡಲು ಯಾವ ಕೆಲಸವೂ ಇರದಿದ್ದಾಗ, ಅಥವಾ ಕಾರಣಾಂತರದಿಂದ ಕೆಲಸ ಮಾಡಲು ಬೇಸರ ತುಂಬಿದಾಗ, ದೇಹದ ಎಲ್ಲ ಕಾರ್ಯಗಳೂ ಮಂದಗತಿಯಲ್ಲಿ ನಡೆಯುತ್ತವೆ. ಉಸಿರಾಡುವುದೂ ಹಗುರವಾಗಿ ಮಂದಗತಿಯಲ್ಲಿ

ನಡೆಯುತ್ತದೆ. ಎಳೆದುಕೊಂಡ ಉಸಿರಿನಿಂದ, ಅಗತ್ಯವಾದಷ್ಟು ಆಕ್ಸಿಜನ್, ಆ ಸ್ಥಿತಿಯಲ್ಲಿ ದೊರಕುವುದಿಲ್ಲ. ಶ್ವಾಸಕೇಂದ್ರಗಳು ಆಗ ಚುರುಕುಗೊಂಡು, ಶ್ವಾಸಕಾರ್ಯವನ್ನು ತ್ವರಿತಗೊಳಿಸಲು ಆಜ್ಞೆಯೀಯುತ್ತವೆ. ದೀರ್ಘವಾದ ಆಕಳಿಕೆಯೇ ಇದರ ಪರಿಣಾಮ.

ಹೇಳಿದ್ದನ್ನೇ ಅವಲಕ್ಷಣವಾಗಿ ಹೇಳುವ ಕಿಸುಬಾಯದಾಸ, ಕೇಳುಗನ ಮನಸ್ಸಿನಲ್ಲಿ ಚಿಟ್ಟುಹಿಡಿಸುತ್ತಾನೆ. ನಾಗರಿಕತೆಯ ಕುರುಹು ಎಂದೆನ್ನಿಸಿಕೊಂಡ ಸಮಾಜದ ಸಭ್ಯ ನಡವಳಿಕೆಯ ಕಾರಣದಿಂದ, ಚಿಟ್ಟು ಹಿಡಿಯುತ್ತಿದ್ದರೂ ಕೇಳಿಸಿಕೊಳ್ಳಲೇಬೇಕು. ಅಂತಹ ಬೇಸರ ಮುತ್ತಿದ ಸಂದರ್ಭಗಳಲ್ಲಿಯೂ ಕುಂಭಕರ್ಣ ಆಕಳಿಕೆಯು ತಾನಾಗಿತಾನೇ ವ್ಯಕ್ತವಾಗುತ್ತದೆ. ಮನಸ್ಸಿಗೆ ಸಮಾಧಾನವನ್ನೂ ತರುತ್ತದೆ, ಒಂದು ಪ್ರಮಾಣದಲ್ಲಿ.

ಬೇಸರವು ಮನಸ್ಸಿನಲ್ಲಿ ತಾತ್ಕಾಲಿಕವಾಗಿರುವ ಪರಿಸ್ಥಿತಿ. ಮನಸ್ಸು ಹೇಗೂ ಚಂಚಲ, ಅಲ್ಲವೇ ! ಅದೂ ಒಂದು ವರವೋ ಏನೋ ? ಬೇಸರವು ಅತಿಯಾದಾಗ ಬೇರೆ ಯಾವುದಾದರೂ ವಿಷಯವು ಮನಸ್ಸನ್ನು ಸೆರೆಹಿಡಿಯುತ್ತದೆ. ಅದೂ ತಾತ್ಕಾಲಿಕವೇ, ಮಕ್ಕಳ ಆಟದಲ್ಲಿದ್ದಂತೆ.

ಆದರೆ ಬಾಳಿನಲ್ಲಿ ಯಾವುದಾದರೂ ನಿರ್ಣಯವನ್ನು ಮಾಡಬೇಕಾದಾಗ, ಆಗು ಹೋಗುಗಳು ಸಮ ಸಮ ಕಾಡುವಾಗ, ನಿರ್ಣಯವು ದುಸ್ಸಾಧ್ಯವಾಗುತ್ತದೆ. ಆಗ ಆತಂಕವು ಸುಡಲಾರಂಭಿಸುತ್ತದೆ. ಆಗಲೂ ಆಕಳಿಕೆಯು ಅವತರಿಸುತ್ತದೆ. ಆದರೆ ಈ ರೀತಿ ಉದ್ಭವಿಸಿದ ಆಕಳಿಕೆಯು ಭಯವನ್ನು ಮೂಡಿಸುತ್ತದೆ, ಭವಿಷ್ಯದ ಭಯವನ್ನು. ಭವಿಷ್ಯವು ಎಂದೂ ಮಾಯಾ ರೂಪಿನದು, ಮಾಯೆಯು ಭಯವನ್ನು ಮೂಡಿಸುತ್ತದೆ. ಆಸೆಯನ್ನೂ ಚಿಗುರಿಸುತ್ತದೆ. ಆದರೆ ಆತಂಕವು ಸುಡಲಾರಂಭಿಸಿದರೆ ಭಯವೇ ಕಾಣಿಸುವುದು.

ಆತಂಕ, ಭಯ, ಇವುಗಳ ಸಮ್ಮಿಶ್ರ ಕಾಟದಿಂದ. ಶ್ವಾಸಕಾರ್ಯದ ಅವಾಂತರಗಳು ಹೇಗೆ ಮತ್ತು ಏಕೆ ಉಂಟಾದುವು ಎಂಬುದನ್ನು ತುಸುಮಟ್ಟಿಗಾದರೂ ತಿಳಿದಂತಾಯಿತು.

## ಹೃದಯದ ಕಾರ್ಯದ ಅವ್ಯವಸ್ಥೆಗಳು

### ೧. ಕುಂಟಬಿಲ್ಲೆ ಆಡುವ ನಾಡಿ

ಶ್ವಾಸಕಾರ್ಯದ ಮೇಲೆ ಆತಂಕವು ಯಾವ ಯಾವ ರೀತಿಯಲ್ಲಿ ಅವ್ಯವಸ್ಥೆಯನ್ನುಂಟುಮಾಡುವುದು ಎಂಬುದನ್ನು ತಿಳಿದೆವು. ಶ್ವಾಸಕಾರ್ಯದಷ್ಟೇ, ಹೃದಯದ ಕಾರ್ಯವೂ ದೇಹದ ಜೀವಂತ ಆರೋಗ್ಯಕ್ಕೆ ಅತ್ಯಗತ್ಯ. ಆತಂಕವು ಹೃದಯದ ಕಾರ್ಯದಲ್ಲಿಯೂ ಅವ್ಯವಸ್ಥೆಗಳನ್ನು ಹೂಡುತ್ತದೆ. ಸಾಮಾನ್ಯವಾಗಿ ಕಾಣಬರುವ ಹಲವಾರು ತೆರನ ಹೃದಯದ ಏರುಪೇರು ಕಾರ್ಯವನ್ನು ಪರಿಶೀಲಿಸೋಣ.

ದಷ್ಟ ಪುಷ್ಟ ಬುದ್ಧಿಜೀವಿ, ಅವ. ಸುಮಾರು ನಲವತ್ತರ ಬಲಿತ ಪ್ರಾಯ. ಸಹೋದ್ಯೋಗಿ ಲಾಯರುಗಳಿಂದ ಮನ್ನಣೆಯನ್ನು ಗಳಿಸಿದ್ದವ. ಯಥೇಚ್ಛವಾದ ಸಂಪಾದನೆಯೂ ಇತ್ತು. ಮಿತಿಮೀರಿ ದುಡಿಯುತ್ತಲೂ ಇದ್ದ. 'ದುಡಿಮೆಯಿಂದಲೇ ಬಾಳು ಸಾರ್ಥಕ. ನಿಸ್ಪೃಹತೆಯಿಂದ ಎಷ್ಟು ದುಡಿದರೂ ದೇಹವು ದಣಿಯುವುದೇ ಇಲ್ಲ. ಬೇನೆ ಬೀಳುವುದೂ ಇಲ್ಲ' ಎಂದವ ಹೆಮ್ಮೆಯಿಂದ, ಅವಕಾಶವು ಸಿಕ್ಕಿದಾಗಲೆಲ್ಲ ಡಂಗೂರ ಹೊಡೆಯುತ್ತಿದ್ದ. ಅಂದಮೇಲೆ ಅತ್ಯಂತ ಸ್ವಾಭಿಮಾನಿ ಎಂದು ಹೇಳಬೇಕೆ!

ಒಂದು ಸಂಜೆ ಆರರ ಸಮಯದಲ್ಲಿ ತನ್ನ ಕೊಠಡಿಯಲ್ಲಿ ಒಡ್ಡೋಲಗವನ್ನು ನಡೆಸುತ್ತಿದ್ದ. ಎದೆಯ ಎಡಭಾಗದಲ್ಲಿ ಚಳಕ್ ಅಂತ, ಅರೆ ಕ್ಷಣವೂ ಇರಲಾರದು, ಅನ್ನಿಸಿತಂತೆ. ಮಾಸಿಕ ಡೈಜೆಸ್ಟ್‌ಗಳನ್ನು ಓದುವ ವಿದ್ಯಾವಂತ. ಹೃದಯಾಘಾತದ ವಿವರಗಳು ತಿಳಿಯದೆ? ಬ್ಲಡ್ ಪ್ರೆಷರ್ ಎಂದರೆ ಗೊತ್ತಿಲ್ಲವೇ? ಮಿಂಚಿನಂತೆ ಚಳಕ್ ಹೊಡೆದುದು ಹೃದಯ ಬೇನೆಯ ಮುನ್ಸೂಚನೆಯೇ ಇರಬೇಕು ಎಂದು ಸಹಜವಾಗಿ ಊಹಿಸಿದ. ಆದಕಾರಣ 'ನನಗೆ ಮೈ ಸ್ವಸ್ಥವಿಲ್ಲ. ಮನೆಗೆ ಹೋಗಿ ವಿಶ್ರಾಂತಿ ಪಡೆಯುತ್ತೇನೆ. ನಾಳೆ ಬೆಳಗ್ಗೆ ನೀವು ಬನ್ನಿ. ನಿಮ್ಮ ಮೊಕದ್ದಮೆಗಳನ್ನು ಚರ್ಚಿಸೋಣ' ಎಂದು ಅಲ್ಲಿದ್ದ ಕಕ್ಷಿಗಾರರಿಗೆ ಹೇಳಿ ಒಡ್ಡೋಲಗವನ್ನು ಬಂದು ಮಾಡಿ, ಮನೆಗೆ ಹೋಗುವ ಮೊದಲು, ದಢ ದಢ ಡಾಕ್ಟರ ಬಳಿಗೆ ಓಡಿದ. ನಲವತ್ತರ ಮಟ್ಟದ ಧಡಿಯ ಎದೆ ಚಳಕು ಎಂದರೆ ಸ್ವಾಭಾವಿಕವಾಗಿ ಬ್ಲಡ್ ಪ್ರೆಷರ್ ಎಷ್ಟಿದೆ ಎನ್ನುವುದನ್ನು ಡಾಕ್ಟರು ನೋಡಲೇಬೇಕು. ಡಾಕ್ಟರು ನೋಡಬಯಸದೆ ಇದ್ದರೂ, ಓದಿದ ರೋಗಿ ಸುಮ್ಮನಿರುತ್ತಾನೆಯೇ? 'ಬ್ಲಡ್ ಪ್ರೆಷರನ್ನು ಡಾಕ್ಟರು ಪರೀಕ್ಷಿಸಿದರು. ಹೃದಯವನ್ನೂ ಬಲು ಎಚ್ಚರಿಕೆಯಿಂದ ಪರೀಕ್ಷಿಸಿದರು. ಬ್ಲಡ್ ಪ್ರೆಷರ್ ಹೆಚ್ಚಾಗಿದೆಯೇ? 'ಎಷ್ಟು ಹೆಚ್ಚಾಗಿದೆ?' ಎಂದು ಆಗ್ರಹಪೂರ್ವಕವಾಗಿ ರೋಗಿಯು ಕೇಳಿದ. 'ನೂರ ಅರವತ್ತು ; ತೊಂಭತ್ತು.

ಅದೇನೂ ಹೆಚ್ಚಾಗಿಲ್ಲ. ನಿಮ್ಮ ವಯಸ್ಸು, ನಿಮ್ಮ ಕಾತರ ಇವುಗಳಿಗೆ ಸರಿಯಾಗಿದೆ. ಹೃದಯವು ಫಸ್ಟ್ ಕ್ಲಾಸ್ ಆಗಿದೆ' ಎಂದರು ಡಾಕ್ಟರು. ಇನ್ನೂ ಏನನ್ನೋ ಹೇಳಬೇಕು, ಅವರು, ಆದರೆ ಮಧ್ಯದಲ್ಲಿಯೇ ಬಾಯಿ ಹಾಕಿ, 'ನನ್ನ ವಯಸ್ಸಿಗೆ ನೂರು ಮತ್ತು ನಲವತ್ತು ಪ್ರೆಷರ್ ಇರಬೇಕಲ್ಲವೇ ? ಇಪ್ಪತ್ತರಷ್ಟು ಹೆಚ್ಚಾಗಿದೆಯಲ್ಲವೇ' ಎಂದು ರೋಗಿಯು ಕೇಳಿದ. 'ಹಾಗೇನಲ್ಲ, ಕೋಪವು ಉಕ್ಕಿದಾಗ ಬ್ಲಡ್ ಪ್ರೆಷರ್ ಏರಿರುತ್ತೆ. ಶಾಂತವಾದಾಗ ಇಳಿಯುತ್ತೆ. ೩೦–೪೦ ಮಿಲಿಮೀಟರುಗಳಷ್ಟು ಏರುಪೇರಾಗುತ್ತದೆ. ಉದ್ವೇಗವು ತೋರಿದರೂ ಹಾಗೆಯೇ ಆಗುತ್ತೆ. ಆತಂಕದಿಂದಲೂ ಹೀಗಾಗುತ್ತೆ. ನಿಮ್ಮ ಎದೆಯ ಕ್ಷಣಾಂಶದ ಚಳಕು, ಹೃದಯದ ಅವ್ಯವಸ್ಥೆಯಿಂದಾಗಲೀ, ಬ್ಲಡ್ ಪ್ರೆಷರಿನ ಈ ಮಟ್ಟದಿಂದಾಗಲೀ, ಖಂಡಿತವಾಗಿ ಆದುದಲ್ಲ.' ಎಂದು ಗಿಣಿಗೆ ಹೇಳಿದ ಹಾಗೆ ಡಾಕ್ಟರು ಹೇಳಿದರು. 'ಈ ಮಾತ್ರೆಗಳನ್ನು ತೆಗೆದುಕೊಳ್ಳಿ. ಸುಖನಿದ್ರೆ ಬರುತ್ತದೆ. ಬೆಳಿಗ್ಗೆ ಹೊತ್ತಿಗೆ ಆರಾಮವಾಗಿರ್ತೀರಿ' ಎಂದು ಎರಡು ಮಾತ್ರೆಗಳನ್ನು ಕೊಟ್ಟು ಕಳಿಸಿದರು.

ಗಿಣಿಗೆ ಹೇಳಿದ ಹಾಗೆ ಡಾಕ್ಟರು ಹೇಳಿದರು. ಮರುನುಡಿಯಲು ಮಾತ್ರ ಕಲಿಯುವ ಗಿಣಿಗೆ ಎಷ್ಟು ಅರ್ಥವಾಗುತ್ತೋ ಅಷ್ಟೇ ರೋಗಿಯ ಮನಸ್ಸಿಗೂ ನಾಟಿದ್ದು. ಮನೆಗೆ ಮಾತ್ರೆಗಳನ್ನು ಹಿಡಿದುಕೊಂಡು ಹಿಂತಿರುಗಿದ. ಅಷ್ಟು ಬೇಗ ಸಂಜೆಯ ವೇಳೆಯಲ್ಲಿ ಗಂಡ ಮನೆಗೆ ಬಂದಿದ್ದನ್ನು ಹೆಂಡತಿಯು ಕಂಡಿರಲೇ ಇಲ್ಲ. ಗಂಡನಿಗೆ ಏನಾಗಿರಬಹುದು ? ಯಾಕೆ ಬೇಗ ಬಂದರು ? ಎಂದು ಆಕೆಗೂ ಕಾತರವಾಯಿತು. 'ಯಾಕಂದ್ರೇ ಇಷ್ಟು ಸುಸ್ತಾಗಿದ್ದೀರಿ ? ಏನಾಯ್ತು ಅಂದ್ರೆ ?' ಎಂದು ಬಡಬಡ ಕೇಳಿದಳು. 'ಎಲ್ಲರಿಗೂ ಸ್ಪಷ್ಟವಾಗಿ ಕಾಣಿಸುವಷ್ಟು ಬೇನೆ ಬಡಿದಿದೆಯೆ ?' ಎಂದುಕೊಂಡ, ರೋಗಿ. ನಿಟ್ಟುಸಿರುಬಿಟ್ಟ. 'ಯಾಕೋ ಸ್ವಲ್ಪ ಸುಸ್ತಾಗಿತ್ತು, ಅದಕ್ಕೆ ಬೇಗ ಬಂದೆ' ಎಂದು ಕಿರುದನಿಯಲ್ಲಿ ಹೇಳಿ ತನ್ನ ಕೊಠಡಿಗೆ ಹೋದ. ಬಟ್ಟೆ ಕಳಚಿ, ಹಾಸಿಗೆ ಹಿಡಿದ. 'ಸ್ವಲ್ಪ ಹೊತ್ತು ಮಲಗಿರುತ್ತೇನೆ, ಆಮೇಲೆ ಎದ್ದು ಬಂದು ಊಟ ಮಾಡುತ್ತೇನೆ' ಎಂದ. ಒಂದರ್ಧ ಗಂಟೆಯಾದ ಮೇಲೆ ಎದ್ದ. ಆ ರಾತ್ರಿ ಹಾಲನ್ನವನ್ನು ಮಾತ್ರ ಉಂಡ. 'ಇದೇನೂ ಅಂದ್ರೆ ? ಬಟಾಣಿಕಾಳು ಉಸುಲಿ ಮಾಡಿದ್ದೇನೆ, ಈರುಳ್ಳಿ ಹುಳಿ ಮಾಡಿದ್ದೇನೆ, ಬಾಳಕ ಕರೆದಿಟ್ಟಿದ್ದೇನೆ. ಎಲ್ಲಾ ಬಿಟ್ಟು ಹಾಲು, ಅನ್ನ ! ಏನಾಗಿದೆ ಅಂದ್ರೆ ?' ಎಂದು ಆಕೆ ಅಳುಕ್ಕೆ ಶುರು ಮಾಡಿದಳು. 'ಏನೂ ಆಗಿಲ್ಲ ಕಣೇ ! ಸುಮ್ಮಸುಮ್ಮನೆ ನೀನ್ಯಾಕೆ ಅಳ್ತಿ ? ಈಗಲೇನೇ ? ಎದೆಯಲ್ಲಿ ಏನೋ ಚಳಕ್ ಅಂದಿತು. ಡಾಕ್ಟರ್ ಹತ್ತಿರ ಹೋಗಿದ್ದೆ. ಏನೂ ಇಲ್ಲ. ಚೆನ್ನಾಗಿದ್ದಿ ಅಂದರು. ಸ್ವಲ್ಪ ಬ್ಲಡ್ ಪ್ರೆಷರ್ ಏರಿತ್ತು.

ಅವರೇನೂ ಹೇಳಲಿಲ್ಲ ಆದರೂ ಉಪ್ಪು ತಿನ್ನದೆ ಇದ್ದರೆ, ಬ್ಲಡ್ ಪ್ರೆಷರಿಗೆ ಒಳ್ಳೆಯದು ಅಲ್ಲವೇ? ಅದಕ್ಕೇ ಇಷ್ಟೇ ಊಟ ಮಾಡಿ ಮಲಕ್ಕೋತೀನಿ' ಎಂದು ಹೇಳಿ ಮಲಗಲು ಹೋದ.

ಬೆಳಿಗ್ಗೆ ಎದ್ದಾಗ ಲವಲವಿಕೆಯಾಗಿಯೇ ಇದ್ದ. ಪ್ರಾತರ್ವಿಧಿಗಳನ್ನು ಎಂದಿನಂತೆ ಮುಗಿಸಿದ. ಬೆಳಗಿನ ತಿಂಡಿಗೆ ಆತುರವಾಗಿ ಕುಳಿತಾಗ 'ಈಗ ಹೇಗಿದ್ದೀರಿ ಅಂದ್ರೆ !' ಎಂದು ಹೆಂಡತಿ ಕೇಳಿದಳು. ಆತನಕ, ಹಿಂದಿನ ಸಂಜೆಯ ಅಡಾಉಡಿಯೆಲ್ಲವೂ ಮರೆತೇ ಹೋಗಿತ್ತು. ಹೆಂಡತಿಯ ಪ್ರಶ್ನೆಯು ಆ ನೆನಪನ್ನು ಕೆರಳಿಸಿತು. ಈಗೇನೂ ಅಂತಹ ಸುಸ್ತಿಲ್ಲ, ಔಷಧಿಯಿಂದ ಗುಣವಾಗಿರಬೇಕು. ಕೆಲಸಕ್ಕೆ ಹೋಗಿ ನೋಡ್ತೀನಿ, ಸುಸ್ತಾದರೆ ಮನೆಗೆ ಹಿಂತಿರುಗುತ್ತೀನಿ' ಎಂದು ಹೇಳಿದ. ತಿಂಡಿ ತಿಂದು ಕಚೇರಿಗೆ ಹೋದ. ಹತ್ತು ಹದಿನೈದು ನಿಮಿಷಗಳಲ್ಲಿ ಮನೆಗೆ ಹಿಂತಿರುಗಿದ. 'ಯಾಕೋ ಒಂದು ತರಹ ಆಗ್ತಾ ಇದೆ, ಅನುಭವಸ್ಥ ಡಾಕ್ಟರ ಸಲಹೆಯನ್ನು ಪಡೆಯೋಣ ಅನ್ನಿಸುತ್ತೆ. ನೀನು ನನ್ನ ಜತೆಯಲ್ಲಿ ಬಾ, ದಾರಿಯಲ್ಲಿ ಏನಾದರೂ ಲಕ್ವಾಗಿಕ್ವಾ ಹೊಡೆದರೆ !' ಎಂದು ಹೇಳಿ ಅವಳನ್ನೂ ಕರೆದುಕೊಂಡು ಬೇರೆ ಡಾಕ್ಟರ ಬಳಿಗೆ ಹೋದ.

ಈ ರೀತಿ ಆರಂಭವಾಯಿತು ಅವನ ಬೇನೆ, ಅವನ ನರಳಾಟ. ಎಂದಿನಂತೆ ಕೆಲವು ದಿನಗಳು ದುಡಿಯುತ್ತಿದ್ದ, ಸಾಕಷ್ಟು ಚೂಟಿಯಾಗಿ ಕೆಲಸವನ್ನು ಮಾಡುತ್ತಿದ್ದ. ಇನ್ನು ಕೆಲವು ವೇಳೆ ತಾನು ಹೆದರಿ ಒದ್ದಾಡುವುದರ ಜತೆಗೆ ಹೆಂಡತಿಯನ್ನೂ ಹೆದರಿಸಿ ಕಂಗೆಡಿಸುತ್ತಿದ್ದ.

ಬ್ಲಡ್ ಪ್ರೆಷರ್ ; ಇ.ಸಿ.ಜಿ. ಎಕ್ಸ್‌ರೆ ; ವಿಧವಿಧ ರಕ್ತ ಪರೀಕ್ಷೆಗಳು, ಎಲ್ಲವೂ ಹಲವಾರು ಕಡೆ ವಿಪುಲವಾಗಿ ಆದುವು, ಅವನ ನರಳಾಟ ತಪ್ಪಲಿಲ್ಲ.

'ನೋಡಿ, ನೋಡಿ, ನಾಡಿ ಕುಂಟೆಬಿಲ್ಲೆಯನ್ನು ಆಡುತ್ತಿದೆ. ಅಯ್ಯಯ್ಯೋ ನಿಂತೇ ಹೋಯಿತು ! ಎಷ್ಟು ಹೊತ್ತು ನಿಂತೇ ಹೋಗಿತ್ತು ? ಅಬ್ಬಾ ! ಕಣ್ಣು ಯಾಕೋ ಮಂಜಾಗುತ್ತಲ್ಲ. ಮೆದುಳಿನಲ್ಲಿ ಎಲ್ಲಾದರೂ ಹೆಮೊರೇಜ್ ಆಗಿರಬಹುದೇ ? ಲಕ್ವಾ ಬಡಿಯದ ಹಾಗೆ ಏನು ಮಾಡಬೇಕು? ಸಂಪೂರ್ಣವಾಗಿ ಉಪ್ಪು ಬಿಟ್ಟಿದ್ದೇನೆ. ಆದರೂ ಬ್ಲಡ್ ಪ್ರೆಷರ್ ಇಳಿದೇ ಇಲ್ಲವಲ್ಲ! ಯಾಕೆ ?'

ಇತ್ಯಾದಿ ದಿನದಿನದ ಪಲ್ಲವಿಯಾಯಿತು ; ಕಂಡ ಕಂಡ ಡಾಕ್ಟರ ಬಳಿಗೆ ಹೋದಾಗಲೆಲ್ಲ. ಹೆಂಡತಿಯನಕ ಬಳಿಯಲ್ಲೇ ಸದಾ ಇರಬೇಕು. ಅವನು ನರಳುವುದಂತಿರಲಿ, ಆಕೆಗೂ ನರಕಯಾತನೆ.

ದಿಳ್ಳಿಯ ಸುಪ್ರೀಂ ಕೋರ್ಟಿನಲ್ಲಿ ಲಾಯರಾಗಬೇಕು. ಅಷ್ಟಾದರೆ ಸಾಲದು

ನ್ಯಾಯಾಧೀಶನಾಗಬೇಕು ಎನ್ನುವ ಹೆಬ್ಬಯಕೆ ಅವನಿಗೆ. ನನ್ನಂತಹ ಜಾಣನಿಗಲ್ಲದೆ, ಮತ್ತೆ ಯಾರಿಗೆ ತಾನೇ ಆ ಯೋಗ್ಯತೆ ಇದೆ ? ಎಂದೆನ್ನುವ ಆಸೆ ಮತ್ತು ದುರಭಿಮಾನ ಅವನಿಗಿತ್ತು. ತಾನಿದ್ದ ಊರಿನಲ್ಲಿ ಅವನೇ ಹುಲಿಯಾಗಿದ್ದ. ಅಲ್ಲಿ ದೊರಕಿದ ಮನ್ನಣೆಯೇ ಅವನನ್ನು ದಿಳ್ಳಿಯತ್ತ ಬೆರಳುಮಾಡಿ ಅಟ್ಟಿತು. ಆರೆಂಟು ತಿಂಗಳು ಅಲ್ಲಿಗೆ ಹೋಗಿ ಒಂದು ಕೈ ನೋಡಿದ, ಅವಲಕ್ಷಣ ಎನ್ನಿಸಿಕೊಂಡ. ಮರಳಿ ತನ್ನೂರಿಗೆ ವಾಪಸು ಬಂದ. ಅಷ್ಟು ಕಾಲ ಊರು ಬಿಟ್ಟಿದ್ದರೂ, ತಿರುಗಿ ತನ್ನ ಕೆಲಸವನ್ನು ಶುರುಮಾಡಿದಾಗ, ಯಾವ ಕೊರತೆಯೂ ಕಾಣಬರಲಿಲ್ಲ. ಎಂದಿನಂತೆ ಸ್ವಲ್ಪ ಕಾಲದಲ್ಲೇ ಕಚೇರಿಯ ಒಡ್ಡೋಲಗವು ನಡೆಯಹತ್ತಿತ್ತು.

ಆದರೆ ಆ ದಿಳ್ಳಿಯ ಆಸೆ ಪಾಶವನ್ನು ಬಿಗಿದೆಳೆಯುತ್ತಿತ್ತು. ಪುಟ್ಟ ಊರಿನಲ್ಲಿ ದೊಡ್ಡವನಾಗಿರುವುದಷ್ಟೇ ನನ್ನ ಪಾಲಿನ ಪಂಚಾಮೃತ, ಎಂದು ಅವ ವಾಸ್ತವಿಕ ಪರಿಸ್ಥಿತಿಯನ್ನು ಮನದಾಳದಲ್ಲಿ ಒಪ್ಪಿಕೊಳ್ಳಲು ಸಿದ್ಧನಿರಲಿಲ್ಲ. ಆಸೆ, ವಾಸ್ತವಿಕ ಪರಿಸ್ಥಿತಿ ; ಇವೆರಡರ ಹೋರಾಟದಲ್ಲಿ ಇವ ಖಚಿತ ನಿರ್ಣಯವನ್ನು ಮಾಡಲಾರದೆ, ಆತಂಕದಿಂದ ನರಳುತ್ತಿದ್ದ, ಮನಸ್ಸು ಚಿಟಿಚಿಟಿಗುಡುತ್ತಿತ್ತು.

ಓದಿದ ಲೇಖನಗಳಿಂದ ಹೃದಯಾಘಾತದ ವಿವರಗಳನ್ನು ಅರ್ಧಂಬರ್ಧ ತಿಳಿದು ಕೊಂಡಿದ್ದ. ಎದೆಯಲ್ಲಿ ಚಳಕ್ ಎಂದಾಗ, ಆತಂಕದಿಂದ ತುಂಬಿಕೊಂಡಿದ್ದ ಮನಸ್ಸು ಅತಿ ಕೆಟ್ಟುದನ್ನೇ ಎತ್ತಿ ತೋರಿಸಿತು. ಹೃದಯಾಘಾತ, ಏರಿದ ಬ್ಲಡ್ ಪ್ರೆಷರ್, ಇವೇ ಸದಾಕಾಲ ಕಾಡುವ ಸದಾಶಿವನ ಧ್ಯಾನವಾಯಿತು. ನಾಡಿಯ ಬಡಿತದಲ್ಲಿ ಸ್ವಲ್ಪ ವ್ಯತ್ಯಾಸವಾದರೂ, ಕುಂಟೆಬಿಲ್ಲೆ ಆಡುತ್ತಿದೆ ನಾಡಿ, ಸರಿಯಾಗಿ ನಡೆಯುತ್ತಿಲ್ಲ ಎಂದು ನಾಡಿಯ ಮೇಲಿನ ಬೆರಳನ್ನು ತೆಗೆಯದೇ ತವಕಪಡಲಾರಂಭಿಸುತ್ತಿದ್ದ. ಅವನು ತವಕಪಟ್ಟಷ್ಟು ನಾಡಿಯು ಏರುಪೇರಾಗುವುದು ಹೆಚ್ಚುತ್ತಿತ್ತು. ಮುಂದೆ ಹೇಗಪ್ಪಾ ಬಾಳುವುದು, ಎನ್ನುವ ಭವಿಷ್ಯದ ಭಯವೂ ಜತೆಜತೆಯಲ್ಲೇ ನೆರಳಿನಂತೆ ಬಂತು ಭೂತದಂತೆ ಹೆದರಿಸುತ್ತಿತ್ತು.

ಇವೆಲ್ಲ ವಿವರಗಳನ್ನೂ ಅವನಿಗೆ ಪುನಃ ಪುನಃ ಮಂದಟ್ಟು ಮಾಡಿಕೊಡಲಾಯಿತು. 'ತೌರಿಗೆಂದು ಒಂದು ವಾರ ಹೆಂಡತಿಯನ್ನು ಕಳಿಸಿಕೊಡು; ಒಬ್ಬನೇ ಇದ್ದರೆ ಧೈರ್ಯವೂ ಬರುತ್ತದೆ' ಎಂದು ಪುಸಲಾಯಿಸಿ ಒಪ್ಪಿಸಿ, ಆಕೆಗೆ ಅಗತ್ಯವಾದ ವಿರಾಮವನ್ನೂ ಕೊಡಿಸಲಾಯಿತು. 'ನಾನಿದ್ದೇನಲ್ಲ ! ನಿನಗೆ ಇನ್ನಾತರ ಭಯ' ಎಂದು ಧೈರ್ಯವನ್ನು ತುಂಬಿದ್ದಾಯಿತು. ಈ ಮಾತಿನ ದ್ವಂದ್ವಾರ್ಥ, ಸದ್ಯ, ಅವನಿಗೆ ಹೊಳೆಯಲಿಲ್ಲ. ಒಂದು ವಾರ ಒಬ್ಬನೇ ಇದ್ದ. ತಕ್ಕಮಟ್ಟಿಗೆ ಚೆನ್ನಾಗಿಯೇ ಇದ್ದ.

ಹೆಂಡತಿಯು ಬಳಿಯಲ್ಲಿರದಿದ್ದರೂ, ನಾಡಿಯು ಕುಂಟೆಬಿಲ್ಲೆ ಆಡಿದರೂ, ಪರವಾಗಿಲ್ಲ. ಯಾವ ಕೇಡೂ ಆಗುವುದಿಲ್ಲ ಎನ್ನುವ ವಿಶ್ವಾಸವು ಮೂಡತೊಡಗಿತು. ಕ್ರಮೇಣ ಆತಂಕವೂ ಕಡಮೆಯಾಗಹತ್ತಿತು. ಆಗ ವಿಚಾರವನ್ನು ಮಾಡಲು ಸಮರ್ಥನೂ ಆದ, ವಾಸ್ತವಿಕವಾದ ತನ್ನ ಸ್ಥಿತಿಗಳನ್ನು ಅರಿತುಕೊಂಡ. ದಿಳ್ಳಿಯ ಆಸೆಗಳೆಲ್ಲ ಮಾಯಾ ಮೃಗಗಳು ಎಂಬುದನ್ನೂ ಸ್ಪಷ್ಟವಾಗಿ ಕಂಡ. ಈಗೀಗ ಬ್ಲಡ್ ಪ್ರೆಷರ್ ಎಷ್ಟಿದೆ ಎಂದು ನೋಡಿಸುವುದಕ್ಕೂ ಹೋಗುತ್ತಿಲ್ಲ. ನಾಡಿಯ ಮೇಲೆ ಬೆರಳನ್ನು ಇರಿಸಿರುವುದೂ ಇಲ್ಲ.

ಇಷ್ಟರ ಮಟ್ಟಿಗೆ ಗುಣವಾಗುವುದಕ್ಕೆ ಸುಮಾರು ಒಂದು ವರ್ಷ ಹಿಡಿಯಿತು. ಈ ಅಂತರದಲ್ಲಿ ಆತಂಕಶಮನ ಮಾಡುವ ಔಷಧಿಗಳನ್ನು ಸಾಕಷ್ಟು ಪ್ರಮಾಣದಲ್ಲಿ ಕೊಡಲಾಯಿತು. ಮೇಲಿಂದ ಮೇಲೆ ಒತ್ತಿಒತ್ತಿ ಹೇಳಿ, ಅವನ ಮನಸ್ಸನ್ನು ಹುರಿದುಂಬಿಸಲಾಯಿತು. ಹಾಗೂ ಕಾಲವೂ ಹಳೆಯದನ್ನು ಮರೆಸುತ್ತಾ, ಕಾಲ ಕ್ರಮೇಣ ಗುಣವನ್ನು ಸಾಧಿಸಿತು.

Da'Costa's Syndrome, ಎಂದು ಕರೆಯಲ್ಪಡುವ ಈ ಬೇನೆಯು ಮನಸ್ಸಿನ ತೀವ್ರ ಆತಂಕದಿಂದ ಹುಟ್ಟಿಕೊಳ್ಳುತ್ತದೆ. 'ಹೃದಯವೇ ನಿಂತು ಹೋಯಿತು; ಜ್ಞಾನವು ತಪ್ಪುತ್ತದೆ.' ಇತ್ಯಾದಿ ತೀವ್ರ ಭಯದಿಂದ, ಕೈಕಾಲು ಕುಸಿದು, ಮುಖವೆಲ್ಲಾ ಬಿಳುಪೇರಿ, ಬಿದ್ದೇಬಿಡುತ್ತಾರೆ, ಕೆಲವರು.

ಯುದ್ಧಗಳಲ್ಲಿ ಇಂತಹ ಬೇನೆಯು, ಹಲವಾರು ಯುವಕ ಸೈನಿಕರಿಗೆ ಬಡಿಯುತ್ತದೆ. ನಾಳೆ ಬದುಕಿರುತ್ತೀವಿ ಎನ್ನುವ ವಿಶ್ವಾಸವಿರುವುದಿಲ್ಲ. ಯಾವ ಕ್ಷಣದಲ್ಲಿ ಎಲ್ಲಿಂದಲೋ ಬಂದ ಗುಂಡು ಕೊಂದುಬಿಡಬಹುದು ಎನ್ನುವ ಅನಿಶ್ಚಿತೆಯು ತೀವ್ರ ಆತಂಕವನ್ನು ಉಂಟುಮಾಡುತ್ತದೆ. ಆಗ ಹೃದಯದ ಕಾರ್ಯವೂ ವ್ಯತ್ಯಾಸವಾಗುತ್ತದೆ. ಸೈನ್ಯದ ಡಾಕ್ಟರುಗಳು ಇಂತಹವರನ್ನು ಪರೀಕ್ಷಿಸಿದಾಗ, ಸೈನ್ಯಕ್ಕೆ ಇನ್ನು ಮುಂದೆ ಇವ ನಾಲಾಯಕ್ಕು, ಎಂದು ಮನೆಗೆ ಹಿಂದಿರುಗಿಸುತ್ತಾರೆ. ಹಾಗಾಗಿ ಯುದ್ಧ ಭೂಮಿಯಿಂದ ವಿನಾಯಿತಿಯನ್ನೂ ಪಡೆಯುತ್ತಾನೆ. ಇಷ್ಟವಿಲ್ಲದೆ, ಕೇವಲ ಒತ್ತಾಯಕ್ಕಾಗಿ, ಹಾಗೂ ಹಣದ ಆಸೆಯಿಂದ, ಸೈನಿಕರಾದವರಿಗೆ, ಸೈನ್ಯದಿಂದ ಮರ್ಯಾದೆಯನ್ನು ಉಳಿಸಿಕೊಂಡು ವಾಪಸಾಗಲು, Da' Costa's Syndrome ಉಪಯುಕ್ತವಾಗುತ್ತದೆ. ಆತಂಕವು ಅತಿಯಾದಾಗ, ಆತಂಕದ ಮೂಲ ಕಾರಣಗಳನ್ನು ನಿವಾರಿಸಿಕೊಳ್ಳಲು ದೇಹದ ಮೂಲಭೂತ ಜಾಣತನವು ಬಳಸುವ ಉಪಾಯ, ಈ ಬೇನೆ.

ಅತಿ ಪ್ರೀತಿಯಿಂದ ಸಾಕಿದ ತಂದೆಯೋ, ತಾಯಿಯೋ, ಪೂರ್ಣಾಯಸ್ಸಿನಲ್ಲಿ

ಸತ್ತರೂ, ಮಗನು ಈ ಬೇನೆಯಿಂದ ನರಳುತ್ತಾನೆ. ವಿಚಾರಪರ ಮನಸ್ಸು, ಹಿರಿಯರು ಸತ್ತಿದ್ದು, ಬಾಳ ನಿಯಮದಂತೆಯೇ, ಇದಕ್ಕೆ ದುಃಖಿಸುವುದು ಹುಡುಗತನ, ಎಂದು ಹೇಳುತ್ತದೆ. ಇಷ್ಟೂ ದಿನ ನನ್ನ ಬಾಳಿಗೆ ಇದ್ದ ಹಿರಿಯ ಮತ್ತು ದೃಢವಾದ ಬೆಂಬಲ ಇನ್ನಿಲ್ಲವಲ್ಲ, ಎಂದು ಭಯವೂ, ಕೊರಗೂ, ಉಂಟಾಗುತ್ತದೆ. ಈ ಜಂಝಾಟದಲ್ಲಿ, ಆತಂಕವು ಮುತ್ತಿಕೊಳ್ಳುತ್ತದೆ. ಹೀಗೆ ನರಳುವವರಲ್ಲಿ ಸುಮಾರು ಜನರ ಮನಸ್ಸು ಪ್ರೌಢಸ್ಥಿತಿಗೆ ಬಂದಿರುವುದಿಲ್ಲ. ವಯಸ್ಸು ಪಂಚಾಂಗದ ರೀತ್ಯಾ ಪ್ರೌಢವಾಗಿದ್ದರೂ, ಮನಸ್ಸು ಹುಡುಗು ಹುಡುಗಾಗಿಯೇ ಇರುತ್ತದೆ. ಎಳೆಯ ಮಕ್ಕಳಂತೆ ಮುದ್ದುಗರೆಯುವ ಸ್ವಭಾವ ಇವರದು.

ಚಿಕ್ಕ ವಯಸ್ಸಿನಲ್ಲಿಯೇ ದೊಡ್ಡ ಪರೀಕ್ಷೆಗಳನ್ನು ಅತಿ ಯಶಸ್ವಿಯಾಗಿ ಪ್ಯಾಸು ಮಾಡಿ, ಹಿರಿಯ ಸ್ಪರ್ಧಾ ಪರೀಕ್ಷೆಗಳಿಗೆ ಕೂಡುತ್ತಾರಲ್ಲಾ; ಅವರಲ್ಲಿ ಕೆಲವರು ಈ ಬೇನೆಗೆ ತುತ್ತಾಗುತ್ತಾರೆ. ಎಂದೂ ಸೋಲದೆ ಇದ್ದವರು ಸ್ಪರ್ಧಾ ಪರೀಕ್ಷೆಯಲ್ಲಿ ಮುಗ್ಗರಿಸುತ್ತೇವೋ ಎನ್ನುವ ಕಾತರ, ಹಾಗಾದರೆ ಅವಮಾನ ಎನ್ನುವ ಹುಡುಗು ಮನೋಭಾವ ; ಇವೆಲ್ಲವೂ ಪರೀಕ್ಷೆಗೆ ಮೊದಲೇ, ಬೇಗೆಯಾಗಿ ಕಾಡಿ, ಸ್ಪರ್ಧೆಯಿಂದ ಮಾನವಾಗಿ ವಾಪಸಾಗುವುದಕ್ಕೆ ಅನುಕೂಲ ಮಾಡಿಕೊಡುತ್ತವೆ.

ಈ ಬೇನೆಯಿಂದ ನರಳುವವರು, ತಮ್ಮ ಮನಸ್ಸು ಅತಿ ದೃಢವಾದುದು; ತಾವು ಬಲು ಧೈರ್ಯಶಾಲಿಗಳು, ಕೆಚ್ಚೆದೆಯವರು, ಎಂದು ಸಂಪೂರ್ಣವಾಗಿ ನಂಬುತ್ತಾರೆ. ಹಸಿ ಇಟ್ಟಿಗೆಯ ವಾಲುತ್ತಿರುವ ಗೋಡೆಗೆ ಊರೆಗೋಲು ಕೊಡುವಂತೆ, ಆತಂಕದಿಂದ ತುಂಬಿದ ಮನಸ್ಸು, ತಾನು ದೃಢವಾಗಿದ್ದೇನೆ ಎನ್ನುವ ಊರೆಗೋಲನ್ನು ಕೊಟ್ಟುಕೊಂಡು ಸ್ಥಿಮಿತವೂ ಸ್ಥಿರವೂ ಆಗಲೆತ್ನಿಸುತ್ತದೆ. ಇಂತಹ ಊರೆಗೋಲನ್ನು ಕಳಚುವ ವೈದ್ಯನು, ತಾನೇ ಊರೆಗೋಲಾಗಬೇಕು. ಹಾಗಾಗಲು ವೈದ್ಯನಿಗೆ ಮಾನಸಿಕ ಹಾಗೂ ಆಧ್ಯಾತ್ಮಿಕ ಆರೋಗ್ಯವು ಪೂರ್ಣವಾಗಿರಬೇಕು.

ಆಧ್ಯಾತ್ಮಿಕ ಔನ್ನತ್ಯವನ್ನು ಪಡೆದವರು, ಸ್ವತಃ ವೈದ್ಯರಲ್ಲದಿದ್ದರೂ, ಇಂತಹ ರೋಗಿಗಳನ್ನು ಕೆಲವೊಮ್ಮೆ ಗುಣಪಡಿಸುವುದು, ಈ ಕಾರಣದಿಂದಲೇ, ರೋಗಿಯ ಆತಂಕದ ಮನಸ್ಸಿಗೆ, ಅವರೇ ಸುಲಭವಾಗಿ ಊರೆಗೋಲಾಗುತ್ತಾರೆ.

**೨. ಕಾಲು ಕುಸಿದ ವಸ್ತಾದಿ**

ಕಚೇರಿಯಲ್ಲಿ ಕೆಲಸ ಮಾಡುತ್ತ ಕುಳಿತಿದ್ದವ, ಹಠಾತ್ತನೆ ಕುರ್ಚಿಯಿಂದ

ಜಾರಿದ.ನೆಲದ ಮೇಲಕ್ಕೆ ಬಿದ್ದ. ಬಿದ್ದುಕೊಂಡೇ ಇದ್ದ, ಒಂದೆರಡು ನಿಮಿಷಗಳಾದರೂನೂ. 'ಲತೀಫನಿಗೆ ಏನೋ ಆಯಿತು. ಜ್ಞಾನತಪ್ಪಿ ಬಿದ್ದು ಬಿಟ್ಟಿದ್ದಾನೆ.' ಎಂದು ಜತೆಯವರು ಅವನ ಸುತ್ತ, ಓಡಿಬಂದು ನಿಂತರು. ತಣ್ಣೀರನ್ನು ಅವನ ತಲೆಗೆ ಒಬ್ಬರು ತಟ್ಟಿದರು. ಕಚೇರಿಯ ಬೀಗದ ಕೈ ಅನ್ನು ಅವನ ಕೈಗೆ ಮತ್ತೊಬ್ಬರು. ಸಿಕ್ಕಿಸಿದರು. ಟೈ ಅನ್ನು ಸಡಿಲಿಸಿ, ಷರ್ಟಿನ ಗುಂಡಿಯನ್ನು ಬಿಚ್ಚಿದರು ಮತ್ತೊಬ್ಬರು. ದೊಡ್ಡ ಕಚೇರಿಯಲ್ಲಿ ಡ್ಯೂಟಿ ಮೇಲಿದ್ದ ಡಾಕ್ಟರನ್ನು ಕರೆತರಲು ಇನ್ನಿಬ್ಬರು ಓಡಿದರು. ಡಾಕ್ಟರು ಬಂದರು. ಗುಂಪನ್ನು ಚದುರಿಸಿದರು. ಒದ್ದೆ ತಲೆಯಲ್ಲಿ ಬಿದ್ದಿದ್ದ ಲತೀಫನಿಗೆ ಇನ್ಜಕ್ಷನ್ ಕೊಟ್ಟರು, ಯಾರಿಗೂ ಕಾಣದಂತೆ ಒಳಶುಂಠಿಯನ್ನು ಬಲವಾಗಿಟ್ಟರು. ಆಗ ಲತೀಫ್ ಎದ್ದು ಕುಳಿತ. 'ಕೈಕಾಲುಗಳು ಹಠಾತ್ತನೆ ಕುಸಿದುಬಿದ್ದುವು. ಏನು ಮಾಡುವುದಕ್ಕೂ ಆಗಲಿಲ್ಲ. ಸಹಾಯಕ್ಕೆ ಯಾರನ್ನಾದರೂ ಕರೆಯೋಣ ಅಂದರೆ ಧ್ವನಿಯೇ ಹೊರಡಲಿಲ್ಲ, ಬಿದ್ದೇ ಬಿಟ್ಟೆ. ನೀವೆಲ್ಲಾ ಮಾತನಾಡಿದ್ದೂ, ಮಾಡಿದ್ದೂ, ಎಲ್ಲವೂ ಚೆನ್ನಾಗಿ ತಿಳಿಯುತ್ತಿತ್ತು. ಅದರೆ ಮಾತನಾಡಲು ಆಗಲಿಲ್ಲ.' ಎಂದು ತನಗಾದುದನ್ನು ವಿವರಿಸಿದ.

'ಈಗ ಸ್ವಸ್ಥವಾಗಿದ್ದೀನಿ. ಮಾಡುತ್ತಿದ್ದ ಕೆಲಸವನ್ನು ಮುಂದುವರೆಸುತ್ತೀನಿ' ಎಂದು ಎದ್ದು ನಿಂತ. 'ಇವತ್ತು ಮನೆಗೆ ಹೋಗಿ ವಿಶ್ರಾಂತಿ ತೆಗೆದುಕೋ. ಮುಂದೆ ಹೀಗಾಗದಂತೆ ಡಾಕ್ಟರ ಬಳಿ ಚಿಕಿತ್ಸೆಯನ್ನು ಮಾಡಿಸಿಕೋ' ಎಂದು ಜೊತೆಯವರು ಒತ್ತಾಯಪಡಿಸಿ, ಆಟೋರಿಕ್ಷಾವನ್ನು ತರಿಸಿ, ಅದರಲ್ಲಿ ಕೂಡಿಸಿ ಕಳಿಸಿದರು.

ಅನಂತರ ಈ ರೀತಿಯ ಕೈಕಾಲು ಕುಸಿದು ಬೀಳುವ ಪ್ರಸಂಗಗಳು ಲತೀಫನನ್ನು ಆಗೊಮ್ಮೆ ಈಗೊಮ್ಮೆ ಕಾಡಲಾರಂಭಿಸಿದುವು. ಹೊತ್ತುಗೊತ್ತು ಅಂತ ಇಲ್ಲ; ಆ ಸ್ಥಳ, ಈ ಜಾಗ; ಎಂದೂ ಇಲ್ಲ. ಇವರಿದ್ದಾರೆ ಅವರಿಲ್ಲ ಎನ್ನುವ ಅಡ್ಡಿಗಳೂ ಇಲ್ಲ. ಸುಳಿವು ಸೂಚನೆಯನ್ನು ಕೊಡದೆ ಭರಸಿಡಿಲು ಬಡಿದ ಹಾಗೆ ಅವನಿಗೆ ಬಡಿಯುತ್ತಿತ್ತು, ಈ ಬೇನೆ. ಡಾಕ್ಟರ ಬಳಿಗೆ ಹೋದ.

ಆಮೂಲಾಗ್ರವಾಗಿ ಅವನ ದೇಹಾರೋಗ್ಯವನ್ನು ಪರೀಕ್ಷಿಸಲಾಯಿತು. ಅದರಲ್ಲೂ ಹೃದಯವನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಯಿತು. sudden collapse ಆಗುವಂತೆ ಇವನ ಬ್ಲಡ್‌ಪ್ರೆಷರ್ ಸರ್ರಂತ ಏಕೆ ಇಳಿಯುತ್ತೆ? ಸ್ವಲ್ಪ ಕಾಲದಲ್ಲಿ ತನ್ನಷ್ಟಕ್ಕೆ ತಾನೇ ಸರಿಹೋಗುತ್ತದಲ್ಲಾ? ಹೇಗೆ? ದೇಹದಲ್ಲಿ ದಿಟವಾದ ಬೇನೆ ಇದ್ದಿದ್ದರೆ, ಅಷ್ಟು ಬೇಗ ಚೇತರಿಸಿಕೊಳ್ಳಲು ಸಾಧ್ಯವಿರುವುದಿಲ್ಲ.

ಲತೀಫ್ ಯಾರು ಅಂತ? ನಮ್ಮೂರಿನಲ್ಲಿ ಆಖಾಡಾದ ಉಸ್ತಾದ್

ಗೂಡೂಮಿಯ್ಯ ಇರಲಿಲ್ಲವೇ? ಮೂರು ಬಾರಿ ದಸರಾ ಕುಸ್ತಿಗಳಲ್ಲಿ ಚಿನ್ನದ ಥೋಡಾ ಹಾಕಿಸಿಕೊಂಡಿದ್ದನಲ್ಲ, ಅವ. ಅವನ ಒಬ್ಬನೇ ಮಗ ಲತೀಫ್. ಆಖಾಡಾದ ಲಾಲ್ಮಟ್ಟಿಯಲ್ಲಿ ಲತೀಫ್ ಕೂಡ ಪ್ರಾಯದಲ್ಲಿ ಕುಸ್ತಿ ಆಡುತ್ತಿದ್ದ. ಒಬ್ಬನೇ ಮಗನ ಮೇಲೆ ಗೂಡೂಮಿಯ್ಯಾಗೆ ಅಸಾಧ್ಯ ಪ್ರೇಮ. ಕುಸ್ತಿಯ ಪಟ್ಟುಗಳನ್ನೆಲ್ಲಾ ಮಗನಿಗೆ ತಾನೇ ಕಲಿಸುತ್ತಿದ್ದ. 'ಬೇಟಾ! ಲಡಕ್ ಹಾಕಿ ಥೋಡಾ ಗಿಟ್ಟಿಸಿದರೆ ಸಾಲದು. ಓದಿ ವಿದ್ಯಾವಂತನಾಗಿ ಹುಜೂರ್ ಸರ್ಕಾರದಲ್ಲಿ ಬಡಾ ಚಾಕರಿ ಮಾಡಬೇಕು' ಎಂದು, ಶಾಲೆಗೆ ಮಗನನ್ನು ಕರೆದುಕೊಂಡು ಹೋಗುವಾಗಲೆಲ್ಲ ಹೇಳುತ್ತಿದ್ದ. ಮಧ್ಯಾಹ್ನದ ಊಟವನ್ನು ತಾನೇ ಶಾಲೆಗೆ ತೆಗೆದುಕೊಂಡು ಹೋಗಿ ಕೊಡುತ್ತಿದ್ದ. ಸಂಜೆ ಶಾಲೆಯಿಂದ ಮಗನನ್ನು ಅವನೇ ಕರೆತರುತ್ತಿದ್ದ. ಬಾಲ್ಯದ ನಾಲ್ಕನೆಯ ವರ್ಷದಿಂದಲೂ, ಲತೀಫ್ ಬೇಟಾ, ಗೂಡೂಮಿಯ್ಯಾನ ಚಿಕ್ಕನೆರಳಾಗಿದ್ದ. ಅಲೀಫ್, ಬೇ, ತೇ, ಶುರು ಮಾಡಿದ ಲತೀಫ್, ಓದಿನಲ್ಲಿ ಸಾಧಿಸಿದ ಪ್ರಗತಿಯನ್ನು ಆಖಾಡಾದಲ್ಲಿ ಪಡೆಯಲಿಲ್ಲ.

ಬಿ.ಎ. ಪರೀಕ್ಷೆಯಲ್ಲಿ ಸೆಕೆಂಡ್ ಕ್ಲಾಸ್‌ಅನ್ನು ಲತೀಫ್ ಗಿಟ್ಟಿಸಿದ. ಗೂಡೂಮಿಯ್ಯಾನ ಸಂತೋಷವನ್ನು ಹೇಳತೀರದು. ಭಾರೀತುರಾಯಿ, ಅದಕ್ಕಿಂತ ಭಾರೀ ಹಾರವನ್ನು, ಮಗನಿಗೆ ಹಾಕಿ, ಅಪ್ಪಿಕೊಂಡ. ಅದಾದ ಒಂದು ತಿಂಗಳಿನಲ್ಲಿ ನಡೆದ ಭಾರೀ ಕುಸ್ತಿ ಪಂದ್ಯದಲ್ಲಿ ರಾಣಿಬೆನ್ನೂರಿನ ಸೆಣಕಲ್ ಸಿದ್ದಯ್ಯನಿಗೆ, ಲತೀಫ್ ಸೋತಿದ್ದ. ತುಂಬಾ ಅವಮಾನವಾದಂತೆ ಲತೀಫ್ ಕೊರಗುತ್ತಿದ್ದ. 'ಜಾಂದೇ ಥೋಡೋ, ಬೇಟಾ ! ಬಿ. ಎ. ಪಡಕೋ, ಆಖಾಡಾಮೇ ಗಿರೇತೋ ಕ್ಯಾ?' ಎಂದು ಲತೀಫ್‌ನನ್ನು ಗೂಡೂಮಿಯ್ಯ ಉತ್ತೇಜಿಸಿದ್ದ. ಅವನೊಬ್ಬನೆ ಲತೀಫನಿಗೆ ದೃಢವಾದ ಬೆಂಬೊತ್ತು.

ಆ ಮೇಲೆಯೂ ಯಾವುದೊಂದು ಕೆಲಸವನ್ನು ಮಾಡಬೇಕಾದರೂ, ಅಪ್ಪನ ಸಮ್ಮತ ಮತ್ತು ಸಲಹೆಯನ್ನು ಲತೀಫ್ ಪಡೆಯುತ್ತಲೇ ಇದ್ದ. ಇದು ಕಟ್ಟುನಿಟ್ಟು ಅಭ್ಯಾಸವಾಗಿತ್ತು. ಉಡುಪುಗಳನ್ನು ಹೊಲಿಸುವಾಗಲೂ ಗೂಡೂಮಿಯ್ಯ ಹೇಳಿದುದನ್ನೇ ಲತೀಫ್ ಒಪ್ಪುತ್ತಿದ್ದ. ಆಖಾಡಾದ ಅಭಿರುಚಿಗೆ ತಕ್ಕಂತೆ ಗೂಡೂಮಿಯ್ಯಾ ಬಟ್ಟೆಯನ್ನು ಚುನಾಯಿಸಿದರೂ, ಹ್ಞೂ ಅನ್ನುತ್ತಿದ್ದ ಲತೀಫ್. ತಾನೊಪ್ಪದೇ ಇರಲಿ ಎಷ್ಟೇ ಬೇಸರವನ್ನು ತರಲಿ, ಅಪ್ಪನ ಮನಸ್ಸನ್ನು ನೋಯಿಸಬಾರದು ಎಂದೇ ಲತೀಫನ ಗುರಿ. ಬಟ್ಟೆ ಬರೆ ; ಊಟ ತಿಂಡಿ ; ಸಿನಿಮಾ ಷೋಕಿ; ನಿಕ್ಕಾ ತಲಕ್ ; ಎಲ್ಲದರಲ್ಲಿಯೂ ಲತೀಫ್, ಅಪ್ಪನ ಸಲಹೆಯನ್ನು ಮೀರುತ್ತಿರಲಿಲ್ಲ. ಅಪ್ಪ ಎಂದರೆ ಅಷ್ಟು ಗೌರವ ; ಅಷ್ಟು ಆದರ.

ತನ್ನ ಕಾಲ ಮೇಲೆ ತಾನು ನಿಂತು, ಬಾಳನ್ನು ನಡಸುವುದು ಶ್ರೇಯಸ್ಕರ ಎನ್ನುವುದು ಲತೀಫನಿಗೆ ತೋಚಲೇ ಇಲ್ಲ. ಅಪ್ಪ ಹಾಕಿದ ಆಲದ ಮರಕ್ಕೆ ನೇಣುಬಿದ್ದಿದ್ದ.

ಎಲ್ಲಾ ಬಡಾ ಬಡಾ ಉಸ್ತಾದರಂತೆ, ಗೂಡೂಮಿಯ್ಯ ಕೂಡ ಐವತ್ತರ ಪ್ರಾಯದಲ್ಲಿ ಹೃದಯದ ಬಳಲಿಕೆಗೆ ಬಲಿಯಾದ. ಒಂದೆರಡು ವರ್ಷಗಳು ಅಪ್ಪನ ಸೇವೆಯನ್ನು, ಮುತುವರ್ಜಿಯಿಂದ ಮತ್ತು ಆದರದಿಂದ, ಲತೀಫ್ ಮನಸ್ಸಾಕ್ಷಿಯಾಗಿ ಮಾಡಿದ. ವಸಿಷ್ಠನಿಗೆ ರೋಗ ಬಂದಿದ್ದರೆ, ಅರುಂಧತಿಯು ಕೂಡ ಅಷ್ಟು ಶ್ರದ್ಧೆಯಿಂದ ಸೇವೆ ಮಾಡುತ್ತಿರಲಿಲ್ಲವೇನೋ ? ಖುದಾಕಾ ಫಜಲ್ ಒಂದು ಸಂಜೆ ಮುಗಿಯಿತು ನೆಟ್ಟ ಕಣ್ಣು ಬಿರಿಬಿರಿ ಬಿಟ್ಟು, ದೊಡ್ಡ ಉಸಿರನ್ನು ಒಮ್ಮೆ ಘರಘರ ಎಳೆದುಕೊಂಡು, ಗೂಡೂಮಿಯ್ಯ ಅಲ್ಲಾನ ಬಳಿಗೆ ಹೋಗಿಬಿಟ್ಟ. ಇದೆಲ್ಲವನ್ನೂ ಕಣ್ಣಾರೆ ಕಂಡ ಲತೀಫನಿಗೆ ಬಾಳಿನ ತಳಪಾಯವೇ ಸಡಿಲಗೊಂಡು ಬಿದ್ದು ಹೋದಂತಾಯಿತು.

ಓದಿದ ವಿದ್ಯಾವಂತ ತರುಣ, ಲತೀಫ್. ಉಣ್ಣುಕ್ಕೆ ತಿನ್ನುಕ್ಕೆ ಬೇಕಾದಷ್ಟನ್ನು ಅಪ್ಪ ಬಿಟ್ಟು ಹೋಗಿದ್ದ. ಉಡುಕ್ಕೆ ಮಡಗುವುದಕ್ಕೆ ಸಾಕಷ್ಟು ಸಂಬಳ ದೊರೆಯುತ್ತಿತ್ತು. ಅಂದಮೇಲೆ ಬಾಳಿ ಬದುಕಲು ಆರ್ಥಿಕ ತೊಂದರೆಗಳೊಂದೂ ಇರಲಿಲ್ಲ. ಎಲ್ಲರೂ ಒಂದು ದಿನ ಅಲ್ಲ ಇನ್ನೊಂದು ದಿನ ಸಾಯಲೇಬೇಕು ; ಅದಕ್ಕಾಗಿ ಅತಿಯಾಗಿ ಕೊರಗುವುದು ಪೆಚ್ಚುತನ ಎಂದು ಲತೀಫನ ವಿಚಾರಪರ ಮನಸ್ಸು ನುಡಿಯುತ್ತಿತ್ತು. ಅಂತಹ ತಂದೆಯು ತೀರಿಕೊಂಡನಲ್ಲಾ ಎನ್ನುವ ಕೊರಗು ಭಾವನಾ ಮನಸ್ಸಿನಲ್ಲಿ ಕುಕ್ಕುತ್ತಿತ್ತು. ಜತೆ ಜತೆಯಾಗಿಯೇ 'ಇನ್ನುಮುಂದೆ ನನಗೆ ಸೂಕ್ತ ಸಲಹೆಯನ್ನು ಕೊಡುವವರಾರು ? ಈಗ ನಾನು ತಬ್ಬಲಿ. ಒಬ್ಬನೇ ಆದೆ. ಒಬ್ಬಂಟಿ ನಾನು' ಎನ್ನುವ ಯೋಚನೆಯೂ ಕಾಡಹತ್ತಿತು.

ಅಪ್ಪನ ನೆರಳಾಗಿ ಬೆಳೆದ ಲತೀಫನ ಮನಸ್ಸು, ವಯಸ್ಸಿಗೆ ತಕ್ಕಂತೆ ಬೆಳೆದು ಅಣಿಗೊಂಡಿರಲಿಲ್ಲ. ಆದಕಾರಣ, 'ಒಬ್ಬಂಟಿ ನಾನು, ತಬ್ಬಲಿ' ಎನ್ನುವ ಯೋಚನೆಯು ಬಂದಾಗ, ಆ ಯೋಚನೆಯು ಹೊರವಾಗಿ ಬೆಳೆಯುವಂತಾಯಿತು. ಇನ್ನು ಮುಂದೆ ಹೇಗಪ್ಪಾ, ಎನ್ನುವ ಆತಂಕವೂ ಕಾಡಲಾರಂಭಿಸಿತು. ಗೂಡೂಮಿಯ್ಯಾನ ಕೊನೆಯ ದಿನಗಳ ನರಳುವಿಕೆ ಮತ್ತು ಅಂತ್ಯವು, ಲತೀಫನ ಕಣ್ಣಿಗೆ ಕಟ್ಟಿದಂತಾಗಿತ್ತು. ಅವನ ಮನಸ್ಸಿನಲ್ಲಿ ಅಚ್ಚೊತ್ತಿದ ಚಿತ್ರವಾಗಿತ್ತು.

ಮನಸ್ಸಿನ ಆತಂಕವು ಮಿತಿಮೀರಿದಾಗ, ಅಪ್ಪನ ಸಾವಿನ ಚಿತ್ರವೂ ಭೂತ ಕನ್ನಡಿಯಲ್ಲಿ ಕಂಡಂತಾಯಿತು, ಭಯವಾಯಿತು. ಈ ಭಯವು ಏಕೆ ಎನ್ನುವುದು

ಲತೀಫನಿಗೆ ತಿಳಿಯಲೊಲ್ಲದು. ಅಪ್ಪನಂತೆ ನನಗೂ ಹೃದಯದ ಬೇನೆ ಬಂದಿರಬೇಕು; ನಾನೂ ಸಾಯುತ್ತೇನೆ, ಎನ್ನುವ ಭಯ. ಹೀಗಾದಾಗ ಮನಸ್ಸಿನಲ್ಲಿದ್ದ ಆತಂಕವು, ತನ್ನ ತೀವ್ರತೆಯನ್ನು ಶಮನಗೊಳಿಸಲು, ಹೃದಯಕ್ಕೆ ವಕ್ರಿಸಿಕೊಂಡಿತು.

ಕಚೇರಿಯಲ್ಲಿ ಕುಳಿತಿದ್ದಾಗ, ಆತಂಕವು ಮೆದುಳಿನ ಬುಡದಲ್ಲಿರುವ ಕೇಂದ್ರಗಳಿಗೆ ಪಸರಿಸಿತು. ಹೃದಯಕಾರ್ಯದ ಕೇಂದ್ರಗಳಿರುವುದೂ ಅಲ್ಲಿಯೇ. ಕಾರಣ ಆತಂಕವು ಹೃದಯದ ವೇಷವನ್ನು ಹಾಕಿಕೊಂಡಿತು, ಕೈ ಕಾಲುಗಳು ಕುಸಿದಂತಾಯಿತು. ಜ್ಞಾನವೇನೂ ಹೋಗಿರಲಿಲ್ಲ. ಮೂರ್ಛೆಯೇನೂ ಬಡಿದಿರಲಿಲ್ಲ. ಸುತ್ತಲೂ ನಡೆಯುವುದೆಲ್ಲವೂ ತಿಳಿಯುತ್ತಿತ್ತು. ಆದರೆ ಏನೂ ಮಾಡಲಾಗುತ್ತಿರಲಿಲ್ಲ. ಕೇವಲ ಮಾನಸಿಕ ಆತಂಕದಿಂದ ಹೀಗಾಗಿದೆ ; ದೇಹವು ಅಚ್ಚುಕಟ್ಟಾಗಿಯೇ ಇದೆ ; ಎನ್ನುವುದು ಈ ಚಿಹ್ನೆಗಳಿಂದ ಸ್ಪಷ್ಟವಾಗಿತ್ತು.

ಮನಸ್ಸಿನ ಈ ತೆರನ ಆತಂಕವು ಕಾಲಕ್ರಮೇಣ ಶಮನವಾಗುತ್ತದೆ. ಅಂದರೆ ಈ ರೀತಿ ಕೈ ಕಾಲು ಕುಸಿದು ಬೀಳುವುದೂ ಕಡಿಮೆಯಾಗುತ್ತದೆ. ಇದು ಏಕೆ ಹೀಗಾಗುತ್ತದೆ ಎನ್ನುವುದನ್ನು ತಿಳಿದುಕೊಂಡರೆ ಇನ್ನೂ ಬೇಗ ಗುಣವಾಗುತ್ತದೆ. ಏಕೆಂದರೆ ಭಯವು ಕಡಿಮೆಯಾಗುವುದರಿಂದ, ಮಡದಿ ಮಕ್ಕಳು ಆದಮೇಲೆ, ಗುಡೂಮಿಯ್ಯಾನ ನೆನಪು ಮಾಸುತ್ತ ಹೋಗುತ್ತದೆ. ಮಡದಿಮಕ್ಕಳು ನನ್ನ ಕಷ್ಟಕ್ಕೆ ಆಗುತ್ತಾರೆ ಎನ್ನುವ ಕಲ್ಪನೆಯು ಬೇರೂರುತ್ತದೆ. ಆಗ ಒಬ್ಬಂಟಿ, ತಬ್ಬಲಿ, ಎನ್ನುವ ಭಯವೂ ಕಡಿಮೆಯಾಗುತ್ತದೆ.

ಲತೀಫನ ಆತಂಕದ ಪ್ರದರ್ಶನದಲ್ಲಿ, ಇನ್ನೊಂದು ಮಾನಸಿಕ ಬೇನೆಯಾದ ಹಿಸ್ಟಿರಿಯಾದ ಛಾಯೆಯೂ ಜತೆಗೂಡಿಕೊಂಡಿದೆ. ಎರಡು ಮೂರು ತೆರನ ಮಾನಸಿಕ ಬೇನೆಗಳು, ಒಂದಿಷ್ಟು ಒಂದಷ್ಟು ಕೂಡಿಕೊಳ್ಳುವುದು, ಮಾನಸಿಕ ಬೇನೆಗಳಲ್ಲಿ ಸರ್ವೆಸಾಮಾನ್ಯ.

**೩. ಅಂತರಂಗದ ಆತಂಕ**

'ಆರೇಳು ದಿನಗಳಿಂದಲೂ ನಿದ್ರೇನೆ ಮಾಡುಲ್ಲ. ಇದಕ್ಕೆ ಮುಂಚೆ ಮಧ್ಯಾಹ್ನ ಊಟವಾದ ಮೇಲೆ ಒಂದು ಗಂಟೆ ಗೊರಕೆ ಹೊಡೆಯುತ್ತ ಗಡದ್ದು ನಿದ್ರೆ ಮಾಡುತ್ತಿದ್ದರು. ರಾತ್ರಿ ಊಟ ಮಾಡಿ ರೇಡಿಯೋ ಕೇಳಿ ಮುಗಿಸಿ, ಆ ಮಾತು ಈ ಮಾತು ಆಡ್ತಾ ಮಲಗಿದರೆ, ಬೆಳಗಿನ ತನಕ ಪಟಾಕಿ ಹೊಡೆದರೂ ಏಳುತ್ತಿರಲಿಲ್ಲ. ಅಂತಹವರು ಈ ವಾರದಿಂದ, ಮಧ್ಯಾಹ್ನ ಉಂಡು ಮಲಗುತ್ತಾರೆ. ಆದರೆ ಒಂದೈದು ನಿಮಿಷದಲ್ಲಿಯೇ, ನಿದ್ರೆ ಹತ್ತಿದ್ದವರು ಛಕ್ಕನೆ ಎದ್ದು 'ಲೇ, ಲೇ, ಎದೆಗೂಡು ಯಾಕೋ ತುಡಿಯುತ್ತಿದೆ' ಎಂದು ಕಿರಿಚುತ್ತಾ ಎದ್ದು ಬಿಡುತ್ತಾರೆ.

ಹತ್ತು ಹದಿನೈದು ನಿಮಿಷಗಳಲ್ಲಿ, ಈಗ ಸ್ವಲ್ಪ ಸಮಾಧಾನಕ್ಕೆ ಬಂದಿದೆ ಎನ್ನುತ್ತಾರೆ. ತಿರುಗಿ ಮಲಗುತ್ತಾರೆ, ಆದರೆ ಹಾಸಿಗೆಯಲ್ಲಿ ಹೊರಳಾಡುತ್ತಾ ಇರುತ್ತಾರೆಯೇ ವಿನಹಾ ನಿದ್ರೆಯೇ ಬರುಲ್ಲ. ರಾತ್ರಿಯಲ್ಲನಕ ಮೂರು ನಾಲ್ಕು ಬಾರಿ ಹೀಗೇ ಹೇಳುತ್ತಾರೆ. ಅರ್ಧ ಗಂಟೆ ಒಂದು ಗಂಟೆ ಒದ್ದಾಡಿದ ಮೇಲೆ ಜೊಂಪು ಹತ್ತುತ್ತೆ. ಒಂದೆರಡು ದಿನಗಳಲ್ಲಿ ಸರಿ ಹೋಗುತ್ತೆ ಅಂತಾರೆ. ಆದರೆ ದಿನದಿನಕ್ಕೂ ನಿದ್ರೆ ಕಡಿಮೆಯಾಗುವುದರ ಜೊತೆಗೆ ತುಂಬಾ ಗಾಬರಿಯಾದವರಂತೆಯೂ ಆಡ್ತಾರೆ. ನಿನ್ನೆ ಬೈಂದೂರಿನ ಸಂತೆ. ವಾರ ವಾರವೂ ಅಲ್ಲಿಗೆ ಹೋಗಿ, ಹತ್ತಿಪ್ಪತ್ತು ಲಾರಿ ದಿನಸಿಯನ್ನು ಕೊಂಡು ತರುವ ಮಾಮೂಲು, ಇವರದು. ಅದೇ ವ್ಯಾಪಾರ. ಈ ಸರ್ತಿ ನಾನು ಹೋಗುಲ್ಲ ; ಅಲ್ಲೇನಾದರೂ ಕಾಯಿಲೆ ಬಿದ್ದರೆ ? ಮತ್ತೆ ಲಾರಿಯಲ್ಲೇ ಹಿಂತಿರುಗಿ ಬರಬೇಕು. ಅಂತಹ ಕಠಿಣ ಪ್ರಯಾಣ ಈಗ ನನ್ನಿಂದ ಸಾಧ್ಯವಿಲ್ಲ ; ಎಂದು ಹೇಳಿ ವ್ಯಾಪಾರಕ್ಕೆ ಹೋಗಲೇ ಇಲ್ಲ. ಸಂತೆಗೆ ಹೋಗುವುದನ್ನು ಹಿಂದೆಂದೂ ಇವರು ತಪ್ಪಿಸಿಕೊಂಡವರಲ್ಲ. ಅದಕ್ಕೇ ನನಗೂ ಗಾಬರಿಯಾಯಿತು. ಹಠ ಹಿಡಿದು ಕರೆದುಕೊಂಡು ಬಂದೆ, ಸ್ವಲ್ಪ ಪರೀಕ್ಷೆ ಮಾಡಿ ನೋಡಿ.

ಎಂದು ವೆಂಕಮ್ಮ, ಗಂಡನನ್ನು ಡಾಕ್ಟರೆದುರಿಗೆ ಕೂರಿಸಿ ಹೇಳಿದಳು. ಸುಮಾರು ವರ್ಷಗಳ ಪರಿಚಯ. ಡಾಕ್ಟರ ಹತ್ತಿರ ಸದರ ಹೆಚ್ಚು, ವಿಶ್ವಾಸವೂ ಉಂಟು ; ಸಂಕೋಚವೇನೂ ಇರಲಿಲ್ಲ.

'ನಿನಗೇನು ಬಂತೋ ಚಿನ್ನಯ್ಯ ! ಗರಡಿ ಮನೆಗೆ ಹೋಗಿ ಬರೋನು, ನೀನು. ಪಟ್ಟಾಗಿ ತಿಂದು ಪಗದಸ್ತೂ ನಿದ್ರೆ ಮಾಡೋನು. ನಿಂಗ್ಯಾಕೆ ಹೀಗಾಯಿತು? ಹೆರಿಗೆಯ ಆಸ್ಪತ್ರೆಗೆ ಹೆಂಡತಿಯನ್ನು ಮರುಚಲ ಬಸುರಿಗೆ ಕರೆದುಕೊಂಡು ಹೋದಾಗಲೂ, ನೀವು ನೋಡಿಕೊಳ್ಳಿ ಡಾಕ್ಟರೇ ! ಸಂತೆ ವ್ಯಾಪಾರಕ್ಕೆ ಹೋಗಲೇಬೇಕು, ಎಂದು ಹೊರಟುಹೋದ ಧೀರ, ನೀನು. ವ್ಯಾಪಾರ ಸಂಪಾದನೆ ಅಂದರೆ ಅಷ್ಟು ಮೋಜು, ನಿನಗೆ. ಅಂತಹ ಜುಗ್ಗ ; ಸಂತೆಗೆ ಹೋಗಲಿಲ್ಲ ಎಂದರೆ, ಏನೋ ಮಹತ್ತಿನದಾಗಿರಬೇಕು. ಏನಾಗುತ್ತೆ, ಹೇಳು ; ವಿವರವಾಗಿ ಹೇಳು, ಸಂಕೋಚ ಪಡಬೇಡ' ಎಂದರು ಡಾಕ್ಟರು.

ಮಂಡೀ ವ್ಯಾಪಾರವನ್ನು ಭಾರೀ ಪ್ರಮಾಣದಲ್ಲಿ ಮಾಡುವವರಿಗೆ, ಎಂತಹ ಸಂಕೋಚವೂ ಸಾಮಾನ್ಯವಾಗಿ ಇರುವುದಿಲ್ಲ. ಆದರೂ ಮದುವೆಯಾದ ಹೆಂಡತಿಯ ಎದುರಿಗೆ ಹೇಳಿಕೊಳ್ಳಲು ವಾಮಾನಿಕೆ ಇರಬಹುದು. ಬೈಂದೂರಿನ ಸಂತೆಯಲ್ಲಿ ಸೀರೆಯನ್ನು ಯಾರಾದರೂ ಹರವು ಹಾಕಿದ್ದರೆ ; ಆದಕಾರಣ ಒಳಕೊಠಡಿಗೆ ಕರೆದು ಕೊಂಡು ಹೋದೆ, ಈಗ ಹೇಳು ಎಂದೆ.

'ಅಂತಹ ಘೋರವೇನೂ ಇಲ್ಲ, ಡಾಕ್ಟರೇ ! ಹಸಿವಾಗುತ್ತೆ, ಚೆನ್ನಾಗಿ ತಿಂತೀನಿ; ಜೀರ್ಣ ಆಗುತ್ತೆ. ಝುಕಾಯಿಸಿಕೊಂಡು ಬರುತ್ತೆ, ನಿದ್ರೆ. ಆದರೆ ಕಣ್ಣು ಮುಚ್ಚಿದ ಸ್ವಲ್ಪ ಹೊತ್ತಿನಲ್ಲಿ, ಎದೆಗೂಡಿನ ಮಧ್ಯದ ಮೂಲೆಯಲ್ಲಿ ಏನೋ ತಿವಿದಂತಾಗುತ್ತದೆ. ಆಗ ಎದೆಗೂಡು ತುಡಿದಂತಾಗುತ್ತದೆ. ಎಲ್ಲಾ ಒಂದರಕ್ಷಣ. ಅಷ್ಟೇ ! ಎಚ್ಚರವಾಗಿ ಬಿಡುತ್ತೆ. ನಂತರ ಏನೂ ಇರುವುದಿಲ್ಲ. ಆದರೆ ತುಂಬಾ ಗಾಬರಿಯಾಗುತ್ತದೆ. ಸಿಕ್ಕಾಪಟ್ಟೆ ಭಯವಾಗುತ್ತದೆ. ಸಾವಿನ ಭಯವಲ್ಲ ; ನೋವಿನ ಭಯವಲ್ಲ ; ಹೇಳಲಸಾಧ್ಯವಾದ ಎಂತದೋ ಕರಾಳಭಯ. ಆಮೇಲೆ ಎಷ್ಟು ಪ್ರಯಾಸಪಟ್ಟರೂ ಕಣ್ಣುರೆಪ್ಪೆ ಮುಚ್ಚುವುದಕ್ಕಾಗುವುದಿಲ್ಲ.' ಎಂದು, ಕಾತರ ತುಂಬಿದ ಧ್ವನಿಯಲ್ಲಿ ಹೇಳಿದ.

'ಎದೆ ಗೂಡು ತುಡಿಯುತ್ತದೆ ಅಂದರೆ ಏನಪ್ಪಾ ? ಈ ತನಕ ಈ ಮಾತನ್ನು ಕೇಳಿಯೇ ಇಲ್ಲ. ಹಾಗಂದರೇನು ? ವಿವರವಾಗಿ ತಿಳಿಸು' ಎಂದೆ.

'ಹೇಗೆ ಅಂತ ವಿವರಿಸಲಿ ; ನೋವಲ್ಲ. ಅದು, ನವೆಯೂ ಅಲ್ಲ. ಆಗಬಾರದ್ದು ಏನೋ ಆಗ್ತಾ ಇದೆ ಎಂಬ ಹೆದರಿಕೆಯಾಗುತ್ತೆ. ಬ್ಲಡ್ ಪ್ರೆಷರ್ ಹೆಚ್ಚಾದರೆ ಹೀಗೇನಾದರೂ ಆಗುತ್ತ್ಯೇ' ಎಂದು ಕೇಳಿದ.

ಕಾತರದ ಗೆರೆಗಳು ಅವನ ಮುಖದ ಮೇಲೆ ರಂಗೋಲಿ ಹಾಕಿದ್ದುವು. ತುಂಬಾ ನರಳುತಿದ್ದಾನೆ. ಅಸ್ಪಷ್ಟವಾದ ಅನುಭವಗಳನ್ನು ಮಾತುಗಳಲ್ಲಿ ವಿವರಿಸಲು ಅಶಕ್ತನಾಗಿದ್ದಾನೆ. ಆದುದರಿಂದ ಎದೆ ತುಡಿಯುತ್ತದೆ ಎಂದು ಹೇಳಿದ್ದಾನೆ, ಎಂದಂದುಕೊಂಡೆ. ಆದರೆ ಬ್ಲಡ್ ಪ್ರೆಷರಿನ ಮಾತನ್ನು ಏತಕ್ಕೆ ಎತ್ತಿದ ? 'ಬ್ಲಡ್ ಪ್ರೆಷರ್ ಹೆಚ್ಚಾಗಿರಬಹುದು ಎಂದು ಯಾಕೆ ಅನುಮಾನ ಬಂತು' ? ಎಂದೆ.

'ಅಂತಹ ಅನುಮಾನವೇನೂ ಇಲ್ಲ. ನನ್ನ ವಯಸ್ಸಿನ ಸ್ನೇಹಿತನೊಬ್ಬ ಆರೋಗ್ಯವಾಗಿಯೇ ಇದ್ದ. ವಿಮೆ ಮಾಡಿಸಿದ. ವೈದ್ಯ ಪರೀಕ್ಷೆಯಾದಾಗ, ಬ್ಲಡ್‌ಪ್ರೆಷರ್ ಹೆಚ್ಚಾಗಿದೆ. ವಿಮೆ ಇಳಿಸುಲ್ಲ ಅಂದರು. ನನಗೂ ಹಾಗೇನಾದರೂ ಆಗಿರಬಹುದೇ ಅಂತ ಅನುಮಾನ ಬಂತು' ಎಂದ.

ಬ್ಲಡ್ ಪ್ರೆಷರ್ ಎಂದರೇನು ? ದೇಹದ ಮೂಲೆ ಮೂಲೆಗಳಿಗೂ ಸಾಕಷ್ಟು ರಕ್ತವನ್ನು ಸರಬರಾಜು ಮಾಡಬೇಕಾದರೆ, ಹೃದಯವು ಸಾಮಾನ್ಯವಾಗಿ ೧೨೦ರ ಪ್ರಮಾಣದ ಪ್ರೆಷರನ್ನು ಉತ್ಪಾದಿಸುತ್ತದೆ. ಕೋಪ, ಕಾತರ ಇತ್ಯಾದಿ ಕಾರಣಗಳಿಂದ ೧೪೦–೧೫೦ರಷ್ಟು ಇರಬಹುದು. ಆದಾಕ್ಷಣ ಅದು ಬ್ಲಡ್‌ಪ್ರೆಷರ್ ಬೇನೆ ಎನಿಸಿಕೊಳ್ಳುವುದಿಲ್ಲ. ರಕ್ತದ ಸರಬರಾಜು ದೇಹದಲ್ಲೆಲ್ಲಾ ಅಣಿಯಾಗಿ ಆಗುವುದಕ್ಕೆ ಎಷ್ಟು ಪ್ರೆಷರಿನ ಅಗತ್ಯವಿದೆಯೋ, ಅಷ್ಟನ್ನು ದೇಹದ ಸಹಜ

ಜಾಣತನವು ಉತ್ಪಾದಿಸುತ್ತದೆ. ಅನಗತ್ಯವಾದ ಪ್ರೆಷರನ್ನು ಉತ್ಪಾದಿಸುವುದೇ ಇಲ್ಲ. ವ್ಯಕ್ತಿಯ ತೋರ ಮನಸ್ಸು ಬ್ಲಡ್‌ಪ್ರೆಷರಿನ ಹತೋಟಿಯಲ್ಲಿ ನೇರ ಪಾತ್ರವನ್ನು ವಹಿಸುವುದೇ ಇಲ್ಲ. ಆದರೆ ಬ್ಲಡ್ ಪ್ರೆಷರ್ ಏರಿದೆ, ಅಥವಾ ಏರುತ್ತದೆ ಎಂದು ಸದಾ ಚಿಂತಿಸಿ ಕೊರಗಲಾರಂಭಿಸಿದರೆ, ಮುಂದೆ, ಕೆಲವು ವರ್ಷಗಳಲ್ಲಿ ದಿಟವಾದ ಬ್ಲಡ್ ಪ್ರೆಷರ್ ಕಾಯಿಲೆಯೇ ಬರಬಹುದು ಎಂದು ಬ್ಲಡ್‌ಪ್ರೆಷರಿನ ವಿವರಗಳನ್ನು ಚಿತ್ರಗಳ ಮೂಲಕ ತಿಳಿಸಿದೆ. 'ನಿನಗೆ ಆ ಬೇನೆಯ ಭಯವೇ ಇಲ್ಲ. ನೆಮ್ಮದಿಯಾಗಿರು, ನಿದ್ರೆ ಬರುವಂತೆ, ಆತಂಕವು ಸ್ವಲ್ಪ ಶಮನವಾಗುವಂತೆ ಔಷಧಿಯನ್ನು ಕೊಡುತ್ತೇನೆ ನಿಶ್ಚಿಂತನಾಗಿರು' ಎಂದು ಹೇಳಿ ಕಳುಹಿಸಿಕೊಟ್ಟೆ.

ಆದರೆ ಮೂರನೆಯ ವಾರ, ಮೂರು ಸರ್ತಿ ಎದೆ ತುಡಿಯಿತು, ಎಂದು ಗಾಬರಿ ಪಟ್ಟುಕೊಂಡು ದವಾಖಾನೆಗೆ ಓಡಿ ಬಂದ. ಬ್ಲಡ್‌ಪ್ರೆಷರಿನ ಆತಂಕವೊಂದೇ ಇದಕ್ಕೆ ಕಾರಣವಲ್ಲ. ಮಹತ್ತರವಾದ ಇನ್ನು ಯಾವುದೋ ಕಾರಣವಿರಬೇಕು ಎಂದು ಖಚಿತವಾಯಿತು. ನನಗೆ ತಿಳಿದ ಹಾಗೆ ಅವನಿಗೆ ಇನ್ನು ಯಾವ ಹಿರಿಯ ಆತಂಕವೂ ಇರಲಿಲ್ಲ. ಅಣಿಯಾದ ಆದರೆ ತುಂಬಿದ ಸಂಸಾರ. ಭಾರೀ ವ್ಯಾಪಾರವನ್ನು ಮಾಡುತ್ತಿದ್ದನಾದರೂ ಸಾಲದ ಸೋಂಕೂ ಇರಲಿಲ್ಲ. ಬೆಳೆದ ಹೆಣ್ಣುಮಕ್ಕಳು ಮದುವೆಗೇನೂ ಇರಲಿಲ್ಲ. ಮತ್ತೇನು ಗುನುಗು ಇವನಿಗೆ ?

ಅವನ ಮಂಡಿಯ ಮುದಿ ಮುತ್ಸದ್ದಿಗೆ ಸಕ್ಕರೆ ಬೇನೆಯಿತ್ತು. ಚಿನ್ನಯ್ಯನ ತಂದೆಯ ಕಾಲದಿಂದ ಮಂಡಿಯ ನಂಬಿಕಸ್ಥ ನೌಕರನಾಗಿದ್ದ. ಅವನಿಗೆ ಬೆನ್ನು ಫಣಿ ಎದ್ದಿತ್ತು. ಬೇನೆಯು ಉಗ್ರವಾಗಿದ್ದುದರಿಂದ ಆಸ್ಪತ್ರೆಗೆ ಸೇರಿಸಿದ್ದರು. ವಾರ್ಡ್ ಡಾಕ್ಟರಿಗೆ ನೀವೂ ಒಂದು ಮಾತು ಹೇಳಿ, ಹೆಚ್ಚು ಆಸಕ್ತಿಯಿಂದ ಚಿಕಿತ್ಸೆ ನಡಸಲಿ, ಎಂದು ನನ್ನಿಂದ ಒಂದು ಶಿಫಾರಸು ಕಾಗದವನ್ನೂ ತೆಗೆದುಕೊಂಡು ಹೋದ. ಆ ಸಪ್ಪೆ ಕಾಗದಕ್ಕಿಂತ ಗರಿಗರಿಯಾದ ನೋಟ್ ಕೆಲವನ್ನು ಕೊಟ್ಟರೆ, ಹೆಚ್ಚು ಪ್ರಯೋಜನವಾದೀತು, ಎಂದು ಹೇಳಿದರೂ ಚಿನ್ನಯ್ಯ ಕೇಳಲಿಲ್ಲ. ಏನು ಮಾಡಿದರೂ ಮುತ್ಸದ್ದಿ ಉಳಿಯಲಿಲ್ಲ, ತೀರಿಕೊಂಡ.

ತರಚಿದ ಗಾಯಕ್ಕೆ ಚಿಕಿತ್ಸೆ ಪಡೆಯಲು ಬಂದಿದ್ದಾಗ, ಮುತ್ಸದ್ದಿ ತೀರಿಕೊಂಡಿದ್ದನ್ನು ಹೇಳಿದ. ಅಂತಹ ನಂಬಿಕಸ್ಥ ಮುತ್ಸದ್ದಿಯನ್ನು ಕಳೆದುಕೊಂಡುದಕ್ಕಾಗಿ ಸಂತಾಪವನ್ನು ಸೂಚಿಸಿದೆ. ಆದರೆ ಚಿನ್ನಯ್ಯನ ಪ್ರತಿಕ್ರಿಯೆ ಅಚ್ಚರಿಯನ್ನುಂಟು ಮಾಡಿತು.

'ಹಾಳು ಮುದುಕ ಸತ್ತು ಹೋಗಿದ್ದು ಒಳ್ಳೆಯದೇ ಆಯಿತು. ಹಳಬ ಎಂದು ಸದರ ತೆಗೆದುಕೊಂಡು ಮೇಲಿಂದ ಮೇಲೆ ಹಣವನ್ನು ಬೇಡುತ್ತಿದ್ದ.

ಮಗಳ ಮದುವೆ, ಮಗನ ಮುಂಜಿ, ಮೊಮ್ಮಗುವಿಗೆ ಆರತಿ, ಇತ್ಯಾದಿ ಏನಾದರೂ ಕಾರಣನೀಡಿ ಇನ್ನೂರು ಮುನ್ನೂರು ಹಾಗಿರಲಿ ಸಾವಿರ ಎರಡು ಸಾವಿರ ಕೇಳಲು ಶುರು ಮಾಡಿದ್ದ. ಆ ಕಾಟವು ತಪ್ಪಿತು. ಈಗ ನಿಸೂರಾಗಿರಬಹುದು' ಎಂದ.

ಆಗ ನನಗೆ ಸ್ವಲ್ಪ ಜ್ಞಾನೋದಯವಾಯಿತು.

'ಮಂಡಿಯ ಲೆಕ್ಕದ ಪುಸ್ತಕಗಳಲ್ಲಿ ಜಾದೂ ಮಾಡುತ್ತಾರೆ ಎಂದು ಪ್ರತೀತಿ, ಚಿನ್ನಯ್ಯ. ಮಾಲೀಕರಿಗಾಗಿ ಒಂದು ಲೆಕ್ಕ, ದುಡಿಯುವವರದು ಒಂದು ಲೆಕ್ಕ, ವರಮಾನ ತೆರಿಗೆ, ಮಾರಾಟ ತೆರಿಗೆ, ಇವರಿಗಾಗಿ ಒಂದು ಲೆಕ್ಕ, ಎಂದನ್ನುತ್ತಾರೆ. ನಿನ್ನ ಮುದಿ ಮುತ್ಸದ್ದಿಗೆ ಇವೆಲ್ಲದರ ಪರಿಚಯವೂ ಇದ್ದಿರಬಹುದು ಅಲ್ಲವೇ?' ಎಂದು ಯಾವ ಕುತೂಹಲವನ್ನೂ ತೋರಿಸದೆ, ಕೇಳಿದೆ.

ನನ್ನ ಮುಖವನ್ನೇ ದಿಟ್ಟಿಸಿ ನೋಡಿದ ಚಿನ್ನಯ್ಯ. 'ಏನೋ ಅಂತಿದ್ದೆ, ನಮ್ಮ ಡಾಕ್ಟರು ಬಲು ಪಾಖಡಾ ಆಸಾಮಿ. ಸತ್ತು ಸ್ವರ್ಗದಲ್ಲಿರುವವರ ಮಾತು ಯಾಕೆ ಎತ್ತಬೇಕು, ಸಾರ್ !' ಎಂದ.

ಇದಾಗಿ ಈಗ್ಗೆ ಮೂರು ನಾಲ್ಕು ವರ್ಷಗಳಾಗಿವೆ. ಎದೆ ತುಡಿಯುತ್ತದೆ, ಗಾಬರಿಯಾಗುತ್ತಿದೆ, ಎಂದು ಒಂದು ಬಾರಿಯೂ ಚಿನ್ನಯ್ಯ ನನ್ನ ಬಳಿಗೆ ಬಂದೇ ಇಲ್ಲ. ಮೊನ್ನೆ ಸಾಹುಕಾರ್ ಸೀನಪ್ಪನವರ ಮದುವೆ ಮನೆಯಲ್ಲಿ ಸಿಕ್ಕಿದ್ದ. ಹೇಗಿದಿ ಎಂದು ಕೇಳಿದೆ. 'ಗೂಳಿಹಾಗಿದ್ದಾರೆ. ಅವರಿಗೇನು ಕಷ್ಟ?' ಎಂದು ಪಕ್ಕದಲ್ಲಿದ್ದ ಅವನ ಹೆಂಡತಿಯು ಯೋಗಕ್ಷೇಮವನ್ನು ಉತ್ತರಿಸಿದಳು.

ಅಂಗಡಿಯ ಅಂತರಂಗದ ಲೆಕ್ಕವನ್ನು ಮುತ್ಸದ್ದಿಯು ಎಂದು ಬಹಿರಂಗ ಪಡಿಸಿ ಬಿಡುತ್ತಾನೋ! ಎಂಬ ತೀವ್ರ ಆತಂಕವು ಚಿನ್ನಯ್ಯನಿಗೆ ಹತ್ತಿಕೊಂಡಿದ್ದಿರಬೇಕು. ಇಂತಹ ತೊಂಚಾವಂಚದ ಪರಿಸ್ಥಿತಿಯನ್ನು ಯಾರೆದುರಿಗೂ ಹೇಳಿಕೊಳ್ಳುವಂತಿಲ್ಲ. ಅನುಭವಿಸುವುದಕ್ಕೂ ಅಸಾಧ್ಯವಾದುದು. ರಹಸ್ಯವನ್ನು ತೆರಿಗೆಯವರಿಂದ ದೂರ ಇರಿಸುತ್ತೇನೆ ಎನ್ನುವ ಕಾರಣದಿಂದಲೇ ನೂರು, ಸಾವಿರ ಅಂತ ಮುತ್ಸದ್ದಿಯು ಉಪಾಯವಾಗಿ ಪೀಕುತ್ತಿದ್ದ. ಸಂಬಳವನ್ನು ಕೊಟ್ಟು ಕೈಕೆಳಗೆ ಇಟ್ಟುಕೊಂಡ ಯಃಕಶ್ಚಿತ್ ನೌಕರನಿಗೆ ಹೆದರಬೇಕಲ್ಲ ಎಂದು ಚಿನ್ನಯ್ಯನಿಗೆ ತುಂಬಾ ಬೇಸರ ಬಂದಿರಬೇಕು. ಆದರೆ ಮುತ್ಸದ್ದಿಯನ್ನು ಎದುರು ಹಾಕಿಕೊಳ್ಳುವಂತಿಲ್ಲ. ಮುಳ್ಳಿನ ಮೇಲೆ ಬಿದ್ದ ಸೆರಗನ್ನು ಉಪಾಯವಾಗಿ ತೆಗೆಯಬೇಕೇ ಹೊರತು, ಕಿತ್ತೆಳೆಯುವಂತಿಲ್ಲ. ಹಾಗಾಗಿತ್ತು. ಚಿನ್ನಯ್ಯನಿಗೆ ಮುತ್ಸದ್ದಿ ಮುಳ್ಳು ಸತ್ತು ಹೋಯಿತು. ಚಿನ್ನಯ್ಯ ಈಗ ನಿಶ್ಚಿಂತನಾದ. ಆತಂಕವೇನೂ

ಇಲ್ಲ. ಎದೆ ತುಡಿಯುವುದೂ ಇಲ್ಲ.

ಎದೆ ತುಡಿದಂತಾಗುವುದು, ತೀವ್ರ ಆತಂಕದಿಂದ ಎದೆಯಲ್ಲಿರುವ ಮುಖ್ಯ ಅಂಗ, ಹೃದಯ. ಅಸ್ಪಷ್ಟವಾದ ಎದೆಯ ತುಡಿತವು ಹೃದಯಕ್ಕೆ ಸಂಬಂಧಿಸಿರಬೇಕು ಎಂದು ಚಿನ್ನಯ್ಯ ಭಾವಿಸಿಕೊಂಡಿದ್ದ. ಆದಕಾರಣ ಬ್ಲಡ್ ಪ್ರೆಷರಿನ ನೆನಪು ಆಗಿತ್ತು. ಸ್ನೇಹಿತನ ಬ್ಲಡ್ ಪ್ರೆಷರ್ ಕಾಯಿಲೆಯೂ ಇದಕ್ಕೆ ನೆರವಾಗಿತ್ತು.

**೪. ತಕ್ಕ ಹೆಂಡತಿಯಲ್ಲ**

ಯಾವ ಶಾಲೆಗಾಗಲೀ, ಸ್ಕೂಲಿಗಾಗಲೀ ನಮ್ಮ ಲಚ್ಚಮ್ಮಣ್ಣಿ ಹೋಗಿರಲಿಲ್ಲ. ತುಸು ಮೆಳ್ಳೆಗಣ್ಣಿನ ಹಳ್ಳಿ ಹುಡುಗಿ. ಆದರೆ ಎಂತದೋ ಒಂದು ಸಂತಸ ಮೂಡಿಸುವ ಕಳೆಯು ಅವಳ ಕೆಂಚಾನೆ ಮುಖದ ಮೇಲೆ ಯಾವಾಗಲೂ ನವಿಲಾಡುತ್ತಲೇ ಇರುತ್ತಿತ್ತು. ಇಂತಹ ಹುಡುಗಿ ತುಂಬಿಕೊಂಡು ಬೆಳೆದ ಮೇಲೆ ಚೆಂದ ಕಾಣಿಸದೆ ಇರಲು ಸಾಧ್ಯವೇ ? ಬೆಲ್ಲದ ಹದಿನೇಳರ ವೇಳೆಗೆ ತಿರುಗಿ ತಿರುಗಿ ನೋಡುವಂತಾಗಿದ್ದಳು. ಅಲ್ಲದೆ ಅವಳ ಜಾತಕದಲ್ಲಿ ಪ್ರಶಸ್ತವಾದ ರಾಜಯೋಗ, ಭದ್ರವಾದ ಮಾಂಗಲ್ಯ ಯೋಗ ; ಎರಡೂ ಇದ್ದವು.

ಶ್ರೀಮಂತ ಪಟೇಲನ ಒಬ್ಬನೆ ಮಗ ಶಾಮಾನಾಯ್ಕ. ಲಕ್ಷಣವಾಗಿ ಬೆಳೆದು, ದಿವನಾಗಿ ವಿದ್ಯಾಭ್ಯಾಸವನ್ನು ಮುಂದುವರಿಸಿಕೊಂಡು ಬಂದಿದ್ದ. ಆದರೆ ಮಗನನ್ನು ನೋಡಿದಾಗಲೆಲ್ಲ, ಪಟೇಲನಿಗೆ ಹೆಮ್ಮೆಯು ಉಕ್ಕಿದಂತೆ, ಕಾತರವೂ ಆಗುತ್ತಿತ್ತು. ಏಕೆಂದರೆ ಶಾಮಾನಾಯ್ಕನ ಜಾತಕವನ್ನು ಬರೆದ ಅಯ್ಯನವರು ಅವನಿಗೆ ಅಲ್ಪಾಯಸ್ಸು ಎಂದುಬಿಟ್ಟಿದ್ದರು. ಆದರೆ ಮಾಂಗಲ್ಯ ಬಲವುಳ್ಳ ಹೆಣ್ಣನ್ನು ಮದುವೆಯಾದರೆ ಸತ್ಯವಾನನಿಗಾದಂತೆ ಅಲ್ಪಾಯಸ್ಸು ಫಲಿಸುವುದಿಲ್ಲ ಎಂದೂ ಪರಿಹಾರವನ್ನು ಸೂಚಿಸಿದ್ದರು. ಈ ಕಾರಣದಿಂದ ಮಗನಿಗೆ ಕಾಲೇಜು ಪ್ರವೇಶ ದೊರಕಿದ, ಹದಿನಾರನೆಯ ವಯಸ್ಸಿನಿಂದಲೇ ಸೊಸೆಯನ್ನು ಹುಡುಕಲಾರಂಭಿಸಿದರು. ಲಚ್ಚಮ್ಮಣ್ಣಿಯ ಜಾತಕವೂ ಬಂದಿತು. ಬಡವರ ಮನೆ ಹೆಣ್ಣಾದರೇನು? ಮಾಂಗಲ್ಯ ಬಲ ಪ್ರಶಸ್ತವಾಗಿದೆ ಎಂದುಕೊಂಡರು. ಹುಡುಗಿಗೆ ಸ್ವಲ್ಪ ಮೆಳ್ಳಗಣ್ಣು ಅದೂ ಭಾಗ್ಯದ ಲಕ್ಷಣ ಎಂದುಕೊಂಡರು. ಹುಡುಗಿಯನ್ನು ನೋಡ ಹೋದಾಗ, ಬಲು ಚೆಲುವಾಗಿದ್ದಾಳೆ, ನೋಡುವುದಕ್ಕೆ, ಇವಳನ್ನೆ ಸೊಸೆಯನ್ನು ಮಾಡಿಕೊಳ್ಳಬೇಕು ಎಂದು ನಿರ್ಧರಿಸಿದರು. ೧೭ರ ಪ್ರಾಯದಲ್ಲಿ ಶಾಮಾನಾಯ್ಕ ಲಚ್ಚಮ್ಮಣ್ಣಿಯನ್ನು ವೈಭವದಿಂದ ಮದುವೆಯಾದ. ಒತ್ತಡದ ಮದುವೆಯಾದರೂ ಶಾಮಾನಾಯ್ಕನಿಗೆ ಹೆಂಡತಿಯನ್ನು ಕಂಡು ಖುಷಿಯಾಗಿತ್ತು.

ಪಟೇಲರ ಮನೆಯಲ್ಲಿ ಸೊಸೆ ಉಳಿದುಕೊಂಡಳು. ಷಹರಿಗೆ ಹೋಗಿ ವಿದ್ಯಾಭ್ಯಾಸವನ್ನು ಶ್ಯಾಮಾನಾಯ್ಕ ಮುಂದುವರೆಸಿದ. ಬಿ.ಎಸ್‌ಸಿ. ಪರೀಕ್ಷೆಯಲ್ಲಿ ಫಸ್ಟ್ ಕ್ಲಾಸ್ ಪಡೆದ. ಐ.ಎ.ಎಸ್. ಪರೀಕ್ಷೆಗೆ ಕೂತ. ಅಲ್ಲಿಯೂ ರ್‍ಯಾಂಕ್ ಬಂದಿತು. ಮನೆಗೆ ಬಂದ ಹೆಂಡತಿಯ ಪುಣ್ಯದಿಂದ ಹೀಗೆ ಯಶಸ್ವಿಯಾದೆ ಎಂದು ಶ್ಯಾಮಾನಾಯ್ಕನಿಗೆ ಅನಿಸಿತ್ತು. ಐ.ಎ.ಎಸ್. ಫಲಿತಾಂಶಗಳು ಪ್ರಕಟವಾಗುವುದಕ್ಕೂ, ಲಚ್ಚಮ್ಮಣ್ಣಿ ಹೆಣ್ಣು ಮಗುವನ್ನು ಸುಸೂತ್ರವಾಗಿ ಹೆತ್ತಳು, ಎಂದು ಅವಳ ತೌರಿನಿಂದ ತಂತಿ ಬರುವುದಕ್ಕೂ ತಾಳಿಯಾಯಿತು. ಹೆಂಡತಿ ಮತ್ತು ಮಗಳ ಭಾಗ್ಯಾತಿಶಯದಿಂದ ರ್‍ಯಾಂಕ್ ಬಂತು ಎಂದುಕೊಂಡ ಶ್ಯಾಮಾನಾಯ್ಕ. ತಂದೆಯು ಕೂಡ ಮಗನ ಈ ರೀತಿ ನಂಬುವಂತೆ, ಬಾಲ್ಯದಿಂದಲೂ Brain wash ಮಾಡುತ್ತಲೇ ಇದ್ದ.

ಲಚ್ಚಮ್ಮಣ್ಣಿ, ಮೂರು ಹೆಣ್ಣಿನ ತಾಯಿಯಾಗಿದ್ದರೂ, ಮದುವೆಯ ಹುಡುಗಿಯಂತೆಯೇ ಎಳಕಾಗಿ ಕಾಣುತ್ತಿದ್ದಳು. ಗಂಡನಿಗನಕ ಅಚ್ಚುಮೆಚ್ಚಾಗಿದ್ದಳು. ಸಾಮಾನ್ಯ ಸ್ವಭಾವವಿದ್ದುದರಿಂದ, ಧಾರಾಳಿಯೂ ಆದುದರಿಂದ ಮನೆಯ ಆಳು ಕಾಳುಗಳ ಗೌರವವನ್ನು ಪಡೆದಿದ್ದಳು, ನೆರೆಹೊರೆಯವರಿಂದ ಹೊಗಳಿಸಿಯೂ ಕೊಂಡಿದ್ದಳು. ಅತ್ತೆ ಅತ್ತಿಗೆ ನಾದಿನಿಯರು ಇರದ ಮನೆಯಲ್ಲಿ ಮಾವನ ಕಣ್ಮಣಿಯೂ ಆಗಿದ್ದಳು.

ಇಂತಹ ಪುಣ್ಯಶಾಲಿ ಹುಡುಗಿಗೆ ಬರಬಾರದ ಬೇನೆ ಬರಬೇಕೆ ? ಅಷ್ಟು ಆರೋಗ್ಯವಂತಳಾಗಿದ್ದಳು, ಕೂತರೆ ಸುಸ್ತು, ನಿಂತರೆ ಸುಸ್ತು, ಎಂದು ನರಳಲಾರಂಭಿಸಿದಳು, ಇಪ್ಪತ್ತುಮೂರರ ಚೆಲುವೆ ಶ್ರೀಮಂತರ ಸೊಸೆಯಾದವಳು, ದೊಡ್ಡ ಅಧಿಕಾರಿಯ ಹೆಂಡತಿಯಾದವಳು, ನರಳಲಾರಂಭಿಸಿದರೆ, ಅತ್ಯಾಧುನಿಕ ಚಿಕಿತ್ಸೆಯು ನೀಡಲ್ಪಡಬೇಕು. ಸುಪ್ರಸಿದ್ಧ ವೈದ್ಯರ ಸಲಹೆಯನ್ನು ಪಡೆಯಲಾಯಿತು.

ಬ್ಲಡ್ ಕೌಂಟ್ ಸ್ವಲ್ಪಕಡಿಮೆಯಾಗಿದೆ, ಮಿಕ್ಕಂತೆ ಎಲ್ಲ ಆರೋಗ್ಯ ಚೆನ್ನಾಗಿದೆ; ಎಂದು ರಕ್ತವೃದ್ಧಿಯನ್ನು ಮಾಡುವ ಚಿಕಿತ್ಸೆಯನ್ನು ಒಂದೆರಡು ತಿಂಗಳು ಮಾಡಲಾಯಿತು. ರಕ್ತವೃದ್ಧಿಯಾಯಿತು ಎಂದರು ವೈದ್ಯರುಗಳು ; ಸುಸ್ತು ಮಾತ್ರ ಲಚ್ಚಮ್ಮಣ್ಣಿಗೆ, ಮೊದಲಿನಂತೆಯೇ ಇತ್ತು.

ವೈಟಮಿನ್‌ಗಳ ಕೊರತೆಯಿಂದ ಹೀಗಾಗುವುದೂ ಉಂಟು, ಎಂದು ಅಕಾರಾದಿಯಾಗಿ ಎಲ್ಲಾ ವೈಟಮಿನ್‌ಗಳನ್ನೂ ಕೊಡಲಾರಂಭಿಸಿದರು. ಈಗ ಸ್ವಲ್ಪ ವಾಸಿಯಲ್ಲವೇ ? ಎಂದು ವೈದ್ಯರು ಗೋಗರೆದು ಕೇಳಿದಾಗ, ಸ್ವಲ್ಪ ವಾಸಿ ಅನಿಸುತ್ತೆ ಎಂದು ಲಚ್ಚಮ್ಮಣ್ಣಿಯು ಹೇಳುತ್ತಿದ್ದಳು. ಡಾಕ್ಟರಿಗೆ ತೃಪ್ತಿಯಾಗುತ್ತಿತ್ತು. ಆದರೆ ಲಚ್ಚಮ್ಮಣ್ಣಿಗೆ ಸುಸ್ತೋ ಸುಸ್ತು. ಬಚ್ಚಲ ಮನೆಯಿಂದ ಮಲಗುವ ಕೋಣೆಗೆ

ಬಂದರೆ ಎದೆ ಡವಡವ ಅಂತ ಹೊಡೆದುಕೊಳ್ಳುತ್ತಿತ್ತು. ಮಧ್ಯೆಮಧ್ಯೆ ಒಂದೆರಡು ನಾಡಿ ಬಡಿತವು ತಪ್ಪಿಯೂ ಹೋಗುತ್ತಿತ್ತು.

ಹೃದಯದ ಪ್ರವೀಣರು ಬಂದರು. ಇ.ಸಿ.ಜಿ. ತೆಗೆದರು. ಹೃದಯದಲ್ಲಿ ಯಾವ ಮೂಲಭೂತವಾದ ದೋಷವೂ ಕಾಣಿಸುವುದಿಲ್ಲ. ಆದರೂ ಹೃದಯವು ಬಳಲಿರಲೂ ಸಾಧ್ಯ. ಆದುದರಿಂದ ಪೂರ್ಣ ವಿಶ್ರಾಂತಿಯನ್ನು ತೆಗೆದುಕೊಂಡರೆ ಒಳ್ಳೆಯದು, ಎಂದು ಸಲಹೆ ಮಾಡಿದರು. ಪೂರ್ಣ ವಿಶ್ರಾಂತಿಗೆಂದು ತವರಿಗೆ ಕಳಿಸಿದರೆ ಹೇಗೆ ಎಂದು ಶಾಮಾನಾಯ್ಕ ತಂದೆಯನ್ನು ಕೇಳಿದ. ಹಳ್ಳಿಗಾಡಿನಲ್ಲಿ ಗಾಳಿಬೆಳಕು ಪಸಂದಾಗಿರುತ್ತೆ. ತೌರಿನ ವಾತಾವರಣ ಕೂಡ. ಕಳುಹಿಸಿಕೊಡು ಎಂದರು ಪಟೇಲರು.

ತೌರಿಗೆ ಲಚ್ಚಮ್ಮಣ್ಣಿ ಬಂದಳು. ಶ್ರೀಮಂತ ಮಗಳು ಬಡ ತೌರಿಗೆ ಬಂದರೆ. ತಾಯ್ತಂದೆಯರ ಅಕ್ಕರೆಯನ್ನು ವಿವರಿಸಬೇಕೆ? ದೇವರಾಯಿತು, ದಿಂಡರಾಯಿತು; ಮಂತ್ರಮಾಟವೆಲ್ಲಾ ಆದುವು. ಹತ್ತಾರು ಹಿರಿಯ ಮುತ್ತೈದೆಯರು ಬಂದು ದೃಷ್ಟಿ ತೆಗೆದರು, ಮಣ ಮಣ ಪೊರಕೆ ಸುಟ್ಟರು. ಯಾವುದರಿಂದಲೂ ಲಚ್ಚಮ್ಮಣ್ಣಿಗೆ ಗುಣ ಕಾಣಬರಲಿಲ್ಲ. ಮಲಗಿದ್ದವಳು ಎದ್ದು ಕೂತರೆ ಡವಡವ ಆಡುತ್ತಿತ್ತು, ಹೃದಯ. ಷಹರಿನ ದೊಡ್ಡ ದೊಡ್ಡ ವೈದ್ಯರುಗಳು ನೋಡಿದ್ದಾಯಿತು. ಇನ್ನು ಹಳ್ಳಿಯ ಅಳಲೇಕಾಯಿ ಪಂಡಿತರಿಗೆ ತೋರಿಸಿ ಏನು ಪ್ರಯೋಜನ? ಎಂದು ತೌರಿನವರು ಮಂತ್ರ ಪೂಜೆಗೆ ಪ್ರಾರಂಭಿಸಿದರು. ಅದೂ ನಿರರ್ಥಕವಾಗಲು, ಪಂಡಿತರನ್ನು ಒಂದು ಮಾತು ಕೇಳೋಣ ಎಂದುಕೊಂಡರು. ಪಂಡಿತರೂ ಬಂದರು.

'ನಿನಗೆಂತಹ ಸುಸ್ತೇ ಇರಲೀ, ಲಚ್ಚಮ್ಮಣ್ಣೀ, ಸರಿಯಾಗಿ ಗಿಡಗಿಕೊಂಡಾದರೂ ಊಟಮಾಡು. ಅದು ಜೀರ್ಣವಾಗುವ ಹಾಗೆ ಲೇಹವನ್ನು ಕೊಡ್ತೀನಿ. ಆಹಾರವು ಪಚನವಾದರೆ, ಶಕ್ತಿ ಬರಲೇಬೇಕು, ಸುಸ್ತು ಹೋಗಲೇಬೇಕು.' ಎಂದು ಪಂಡಿತರು ಹೇಳಿದರು. ಹಿರಿಯ ವಯಸ್ಸು ಪಂಡಿತರಿಗೆ, ಲಚ್ಚಮ್ಮಣ್ಣಿಯನ್ನು ಲಂಗದ ವಯಸ್ಸಿನಿಂದಲೂ ಬಲ್ಲವರು. ಈಗ ಶ್ರೀಮಂತಿಣಿಯಾಗಿದ್ದಾಳೆ. ದೊಡ್ಡ ಅಧಿಕಾರಿಯ ಹೆಂಡತಿ ಆಗಿದ್ದಾಳೆ ಎನ್ನುವ ಭಾವನೆಯೇನೂ ಅವರನ್ನು ಕಾಡಲಿಲ್ಲ. ಆತ್ಮೀಯವಾಗಿ ಮಾತನಾಡಿದರು.

'ಹಸಿವೇನೋ ಆಗುತ್ತೆ, ಪಂಡಿತರೆ. ಬಾಯಿ ರುಚಿಯೂ ಅಷ್ಟಾಗಿ ಕೆಟ್ಟಿಲ್ಲ. ಆದರೆ ಒಂದೆರಡು ತುತ್ತು ಅನ್ನವನ್ನು ಬಾಯಿಗಿಟ್ಟುಕೊಂಡು, ನುಂಗಲೆತ್ನಿಸಿದರೆ, ಎದೆಯಿಂದ ಏನೋ ಎದ್ದು ಬಂದು ತುತ್ತನ್ನು ಹೊರಕ್ಕೆ ವದ್ದಂತಾಗುತ್ತದೆ.

ಪ್ರಯಾಸಪಟ್ಟು ಒಂದೆರಡು ತುತ್ತು ನುಂಗಿದರನಕ, ಅವು ಹೊಟ್ಟೆಯಲ್ಲಿ ಹೆಪ್ಪುಗಟ್ಟಿಕೊಂಡು ಮಿಡಿಯುತ್ತದೆ. ಆಗ ಎದೆಯೂ ಡವಡವ ಅಂತ ಹೊಡೆದುಕೊಳ್ಳುತ್ತದೆ. ತತ್‍ಕ್ಷಣ ಎದ್ದು ಹೋಗಿ ಮಲಗಿಬಿಡ್ತೀನಿ' ಎಂದಳು ಲಚ್ಚಮ್ಮಣ್ಣಿ.

ಯೌವ್ವನಸ್ಥೆ. ಸಂಭ್ರಮದಿಂದ ಬಾಳಬೇಕು ಎಂದು ಅವಳಿಗೂ ಹೆಬ್ಬಯಕೆ ಇರುಲ್ಲವೇ ? ಆದರೆ, ಪಾಪ ! ಈಗ ಅವಳ ಮುಖದ ತುಂಬಾ ಆತಂಕದ ಉದ್ದುದ್ದ ಗೆರೆಗಳು. ಹಾಸ್ಯದ ಚಟಾಕಿಯನ್ನು ಪಂಡಿತರು ಹಾರಿಸಿದರೆ ಗಹಗಹಿಸಿ ನಕ್ಕು ನಲಿಯುತ್ತಿದ್ದ ಲಚ್ಚಮ್ಮಣ್ಣೀ ಈಗ ಕಿರಿನಗೆಯನ್ನು ಕ್ಷಣ ಮಾತ್ರ ಸೂಸುತ್ತಾಳೆ. ಅರೆ ಕ್ಷಣದಲ್ಲಿ ಮುಖವು ಪುನಃ ಮುದುಡಿಕೊಳ್ಳುತ್ತದೆ. ನಾಡಿಯನ್ನು ಹಿಡಿದು ಪಂಡಿತರು ಪರೀಕ್ಷೆ ಮಾಡಿದಾಗ, ಒಮ್ಮೆ ನಿಮಿಷಕ್ಕೆ ೭೦ ಇದ್ದುದು, ಕೆಲವೇ ನಿಮಿಷಗಳಲ್ಲಿ ನೂರಾಇಪ್ಪತ್ತಕ್ಕೆ ಏರುತ್ತದೆ. ಬಡಿತದ ಪ್ರಮಾಣವು ಏರುಪೇರಾಗುತ್ತದೆ. 'ಏನೆಲ್ಲಾ ಲೇಹಗಳನ್ನು ಪಂಡಿತರು ಪ್ರಯೋಗಿಸಿದರೂ, ಲಚ್ಚಮ್ಮಣ್ಣಿಗೆ ಉಣ್ಣುವಂತಾಗಲಿಲ್ಲ. ನನ್ನ ಚಿಕಿತ್ಸೆಯೂ ನಿಷ್ಪ್ರಯೋಜಕ ಎಂದುಕೊಂಡರು ಪಂಡಿತರು. ಈ ಮಾತನ್ನು ಹೇಳಿ ಈಗಲೇ ಕಾಲ್ತೆಗೆದರೆ, ಮಾನವಾದರೂ ಮುಂದೆ ಉಳಿಯಬಹುದು ಎಂದು ಅವರ ಎಣಿಕೆ.

ಆದರೆ ಮೂರನೆಯ ದಿನ ಲಚ್ಚಮ್ಮಣ್ಣಿಯೇ ಒಂದು ಉಪಾಯವನ್ನು ಸೂಚಿಸಿದಳು. 'ಪಂಡಿತರೇ ! ಎಷ್ಟೋ ಕಷ್ಟಪಟ್ಟು ಶ್ರಮವಹಿಸಿ ಚಿಕಿತ್ಸೆಯನ್ನು ಮಾಡುತ್ತಿದ್ದೀರಿ. ಪ್ರಯೋಜನ ಆಗಲಿಲ್ಲ. ಆದ್ದರಿಂದ ಔಷಧಿಗಳನ್ನು ನಿಲ್ಲಿಸಿ ಕೆಲವು ದಿನಗಳು ನೋಡೋಣ ಅನ್ನಿಸುತ್ತೆ. ನೀವೇನೂ ತಿಳಿದುಕೊಳ್ಳದೆ ಇದ್ದರೆ, ನಾಳೆಯಿಂದ ಚಿಕಿತ್ಸೆಯನ್ನು ನಿಲ್ಲಿಸಿಬಿಡೋಣ.

ದೇವಸ್ಥಾನದ ಅಂಗಳದಲ್ಲಿ ಪುರಾಣ ಪುಣ್ಯಕತೆಗಳನ್ನು, ನಾನು ಹುಡುಗಿಯಾಗಿದ್ದಾಗ, ನೀವು ಹೇಳುತ್ತಿದ್ದಿರಿ. ತುಂಬಾ ಇಷ್ಟವಾಗುತ್ತಿತ್ತು, ಅವು. ಈಗ ಬಿದ್ದಲ್ಲೇ ಬಿದ್ದಿರುವಂತಾಗಿದೆ. ಅಲ್ಲಿ ಇಲ್ಲಿ ನೆಂಟರ ಮನೆಗೆ ಹೋಗಿ ಬರಲು ಸಾಧ್ಯವಿಲ್ಲ. ಹೊತ್ತು ಹೋಗುವುದೇ ಕಷ್ಟ. ವಿರಾಮವಿದ್ದಾಗ ಬಂದು ಪುರಾಣದ ಕಥೆಗಳನ್ನು ಹೇಳಿದರೆ, ಕಾಲವಾದರೂ ಸುಲಭವಾಗಿ ಕಳೆಯುತ್ತೆ. ಸ್ವಲ್ಪ ಸಮಾಧಾನವೂ ಆಗಬಹುದು' ಎಂದಳು.

ಪಂಡಿತರಿಗೂ ಇದು ಖುಷಿಯಾದ ಕೆಲಸ. ಚಿಕಿತ್ಸೆಮಾಡಿ ಗುಣಪಡಿಸುವ ಜವಾಬ್ದಾರಿಯಿಲ್ಲ. ಪುರಾಣದ ಕತೆಗಳನ್ನು ರಂಗುರಂಗಾಗಿ ಹೇಳುವುದು ಅವರಿಗೂ ಇಷ್ಟ. ಕೆಲವು ದಿನಗಳ ಪ್ರವಚನಮಾಡಿದರೆ, ಬರಿಗೈಯಲ್ಲಿ ಹಿಂತಿರುಗಬೇಕಾಗಿಲ್ಲ.

ಲಚ್ಚಮ್ಮಣ್ಣಿ ಶ್ರೀಮಂತಿನಿ, ಹಾಗೂ ಬಿಡುಗೈ ಸ್ವಭಾವದವಳು. ಮೂರನೆಯ ದಿನ ದಿಂದಲೇ ಪುರಾಣವನ್ನು ಹೇಳಲು ಪ್ರಾರಂಭಿಸಿದರು.

ಮತ್ಸ್ಯಗಂಧಿಯನ್ನು ಶಂತನು ಚಕ್ರವರ್ತಿ ಬಯಸಿ ಮದುವೆಯಾದುದೂ; ಬ್ರಹ್ಮಚಾರಿಯಾಗಿ ಉಳಿಯುವೆನೆಂದು ಭೀಷ್ಮ ಪ್ರತಿಜ್ಞೆಯನ್ನು ಮಾಡಿದುದೂ, ನಂತರ ಯೋಜನಗಂಧಿಯು ಚಕ್ರವರ್ತಿನಿ ಆದ ಕತೆ.

'ಮೀನುಗಾರರ ಮನೆಯಲ್ಲಿ ಹುಟ್ಟಿ ಬೆಳೆದ ಮೊಗವೀರರ ಹೆಣ್ಣು. ಹಳ್ಳಿಯ ಪೆದ್ದು ಹುಡುಗಿಯೇ ಆಗಿರಬೇಕು. ಚಕ್ರವರ್ತಿಯಾದರೋ ಅರಮನೆಯಲ್ಲಿ ಸುಸಂಸ್ಕೃತ ಬಾಳನ್ನು ನಡೆಸುವವ. ಈ ಹಳ್ಳಿಯ ಹೆಣ್ಣು ಅರಮನೆಯ ಸುಸಂಸ್ಕೃತ ವಾತಾವರಣದಲ್ಲಿ ಹೇಗೆ ಬಾಳಿದಳು?' ಎಂದು ಲಚ್ಚಮ್ಮಣ್ಣಿಯು ಸ್ವಲ್ಪ ಕುತೂಹಲದಿಂದ ಕೇಳಿದಳು.

ಲೋಕಾನುಭವವನ್ನು ಪಡೆದಿದ್ದ ಪಂಡಿತ, ಸಹಜವಾಗಿ ಜಾಣ. ಈ ಪ್ರಶ್ನೆಯನ್ನು ಲಚ್ಚಮ್ಮಣ್ಣಿ ಏಕೆ ಕೇಳಿದಳು? ಮತ್ಸ್ಯಗಂಧಿಯಂತೆ ತಾನೂ ಹಳ್ಳಿಯ ಹುಡುಗಿ. ಅವಳಂತೆ ಇವಳೂ ಶ್ರೀಮಂತ, ಸುಸಂಸ್ಕೃತ, ಗಂಡನ ಮನೆಗೆ ಹೋಗಿದ್ದಳು. ಅಧಿಕಾರಿ ಗಂಡನಿಗೆ, ಮನೆಗೆ ಬರುವ ಗೆಳೆಯರು, ತುಂಬಾ ಇರುತ್ತಾರೆ. ಆ ನಾಗರಿಕರೊಂದಿಗೆ ಈಕೆ ನಡವಳಿಕೆಯಲ್ಲಿ ಏನಾದರೂ ಎಡವಿರಬಹುದೇ? ಅದರಿಂದಾಗಿ ತುಂಬಾ ಅವಮಾನಪಟ್ಟು ಹೀಗೆ ಕೊರಗಿರಬಹುದೇ? ಮುಂದೆ ನಾಗರಿಕ ರೀತಿಯಲ್ಲಿ ಬಾಳುವುದು ಸಾಧ್ಯವೇ? ಅದನ್ನು ಕಲಿಯಲಾದೀತೆ ? ಎನ್ನುವ ಆತಂಕವು ಇವಳನ್ನು ಕಾಡುತ್ತಿದೆಯೇ? ಎಂದೆಲ್ಲಾ ಯೋಚಿಸತೊಡಗಿದರು. ನಂತರ ಕತೆಯನ್ನು ಹೇಳುವಾಗ, ಈ ವಿಷಯದ ಮೇಲೆ ಹೆಚ್ಚು ಗಮನವನ್ನಿಟ್ಟರು.

ಶಂತನು ಚಕ್ರವರ್ತಿಯ ಮನೆಯಲ್ಲಿ, ಬಂದವರೆದುರು, ಮತ್ಸ್ಯಗಂಧಿಯು ಯಾವ ರೀತಿಯಲ್ಲಿ ಮೊದಮೊದಲು ಪೆಚ್ಚುಪೆಚ್ಚಾಗಿ ನಡೆದುಕೊಂಡಳು ; ಹಾಸ್ಯಾಸ್ಪದವಾದ ರೀತಿಯಲ್ಲಿ ಸಂಭಾಷಿಸುತ್ತಿದ್ದಳು ; ಇವೆಲ್ಲವನ್ನೂ ವಿಧವಿಧವಾಗಿ ತಮ್ಮ ಲೋಕಾನುಭವದ ನೆರವಿನಿಂದ, ಬಣ್ಣಗಟ್ಟಿ ಬಣ್ಣಿಸಿದರು. ಅನಂತರ ಏಕಾಂತದಲ್ಲಿ ಅರಸನನ್ನು ಸಂಕೋಚವಿಲ್ಲದೆ ಕೇಳಿ ನಾಗರಿಕ ಶಿಷ್ಟಾಚಾರಗಳನ್ನು ಹೇಗೆ ಕಲಿತು ಕೊಂಡಳು ? ಆಮೇಲೆ ಹುಟ್ಟು ಚಕ್ರವರ್ತಿನಿಯಂತೆ ಹೇಗೆ ನಡೆದುಕೊಂಡಳು ; ಇವೆಲ್ಲವನ್ನೂ ಹಲವಾರು ನಿದರ್ಶನಗಳನ್ನು ಕೊಟ್ಟು ವಿವರಿಸಿದರು.

ಎಂಟು ಹತ್ತು ದಿನ ಪುರಾಣದ ಕತೆಗಳನ್ನು ಕೇಳಿದ ಮೇಲೆ ಲಚ್ಚಮ್ಮಣ್ಣಿಯ

ಮುಖವು ಸ್ವಲ್ಪ ಸ್ವಲ್ಪ ಪ್ರಸನ್ನವಾಗಲಾರಂಭಿಸಿತು. ಕೊಂಚ ಊಟವನ್ನು ಮಾಡಿದರೂ, ಆಸಕ್ತಿಯಿಂದ ಉಣ್ಣಲಾರಂಭಿಸಿದಳು. ನೀವು ಕೊಟ್ಟ ಲೇಹ ಈಗ ಕೆಲಸ ಮಾಡುತ್ತಿದೆ ಎಂದು ಪಂಡಿತರಿಗೆ ಹೇಳಿದಳು. ತಿಂಗಳೊಪ್ಪತ್ತಿನಲ್ಲಿ ಮೊದಲಿದ್ದ ಉತ್ಸಾಹವೂ, ನಗು ಸರಸಿತನವೂ ಪುನಃ ಕಾಣಿಸಿಕೊಂಡಿತು. ಕೈತುಂಬಾ ದಕ್ಷಿಣೆ ಮತ್ತು ಉಡುಗೊರೆಯನ್ನು ಪಂಡಿತರಿಗೆ ಕೊಟ್ಟ ಜಿಗಿಜಿಗಿಯುತ್ತಾ ಗಂಡನ ಮನೆಗೆ ಹೋದಳು. ತಾನು ಮನೆಯಲ್ಲಿರದಿದ್ದರೂ, ಮಕ್ಕಳನ್ನು ಆದರದಿಂದ ಸಾಕಿದ, ಗಂಡ ಮಾವಂದಿರ ಮೇಲೆ ತುಂಬಾ ಅಭಿಮಾನವುಂಟಾಯಿತು. ಅವೂ ಹಾಗೆ ದೃಷ್ಟಿ ಬಡಿಯುವಂತೆ ಬೆಳೆದಿದ್ದುವು. ನಗು ನಗುತ್ತಲೂ ಇದ್ದುವು. ಯಾವ ಸಂಕೋಚವೂ ಇರದೆ, ಮೊಂಡುತನವನ್ನೂ ತೋರಿಸದೆ, ನಾಗರಿಕ ಶಿಷ್ಟಾಚಾರದ ಪಾಠಗಳನ್ನು ಗಂಡನಿಂದ ತಾನೇ ಕೇಳಿ ಕಲಿತುಕೊಂಡಳು. ಶ್ಯಾಮಾನಾಯ್ಕನಿಗನಕ ಬಲು ಖುಷಿ. ತಪ್ಪು ಎಂದು ತಿಳಿದುಕೊಂಡರೆ ಮುಂದೆ ತಿದ್ದಿಕೊಳ್ಳಬಹುದು. ಅಂತಹ ಹೆಂಡತಿಯು ಸಿಕ್ಕಿದ್ದಾಳಲ್ಲ ಎಂಬ ಹೆಮ್ಮೆ. ಇಷ್ಟು ದಿನವೂ ಹೀಗೇಕೆ ಕೇಳಿ ಕಲಿತುಕೊಳ್ಳಲಿಲ್ಲ ಎಂಬ ಸಮಸ್ಯೆಯೂ ಉಂಟಾಗಿತ್ತು. ಆಗಿ ಹೋದದ್ದನ್ನೆಲ್ಲಾ ಕಟ್ಟಿಕೊಂಡು ಈಗೇನಾಗಬೇಕು ? ಇನ್ನು ಮುಂದೆ ನಾಲ್ಕು ಜನ ಸರಿಯವರೆದುರಿಗೆ, ಇವಳ ಪೆಚ್ಚು ನಡವಳಿಕೆಯಿಂದ ತಲೆತಗ್ಗಿಸಬೇಕಾಗಿಲ್ಲವಲ್ಲ ; ಎಂದು ಸಂತಸಪಟ್ಟ.

ಪಂಡಿತರು ಪುರಾಣದ ಕತೆಗಳನ್ನು ಹೇಳುವಾಗ, ಒಂದು ರೀತಿಯಲ್ಲಿ ಉಪದೇಶವನ್ನೂ ಮಾಡಿದ್ದರು. ಮತ್ಸ್ಯಗಂಧಿಯ ಉದಾಹರಣೆಯನ್ನು ಬಳಸಿಕೊಂಡು, ಮುಂದೆ ಏನು ಮಾಡಬೇಕು, ಹೇಗೆ ಮಾಡಬೇಕು, ಎನ್ನುವುದನ್ನು ಉಪದೇಶಿಸಿದ್ದರು. ನೇರವಾಗಿ ಉಪದೇಶ ಮಾಡಿದರೆ, ತಿರುಗಿ ಬೀಳುವಂತೆ, ಸ್ವಾಭಿಮಾನವು ಕೆರಳಿಸುತ್ತದೆ. ಅದೂ ಬಡತನದಿಂದ ಹಠಾತ್ತನೆ ಶ್ರೀಮಂತಿಕೆಗೆ ಏರಿದ ಮಂದಿಯಲ್ಲಿ. ಆದುದರಿಂದಲೇ ಹಿರಿಯರು ಬದುಕಿ ಕೆಟ್ಟವರೊಂದಿಗೆ ಹೇಗಾದರೂ ಬಾಳಬಹುದು. ಆದರೆ ಕೆಟ್ಟು ಬದುಕಿದವರೊಂದಿಗೆ ಬಾಳಲು ಬಲು ಕಷ್ಟ ಎಂದನ್ನುತ್ತಿದ್ದರು.

ನಿದರ್ಶನಗಳ ಮೂಲಕ ಮಾಡಿದ ಉಪದೇಶದಿಂದ, ಲಚ್ಚಮ್ಮಣ್ಣಿಯ ಸ್ವಾಭಿಮಾನಕ್ಕೆ ಧಕ್ಕೆಯಾಗಲಿಲ್ಲ. ಆದುದರಿಂದಲೇ ಆಕೆ ಆ ಬುದ್ಧಿವಾದವನ್ನು ಅಂಗೀಕರಿಸಲು ಸುಲಭ ಸಾಧ್ಯವಾಯಿತು.

ಓದುಗರ ಮನಸ್ಸನ್ನು ನಿರ್ಮಲಗೊಳಿಸಿ, ಹಿತವಾದ ಬುದ್ಧಿವಾದವನ್ನು ಸ್ವಾಭಿಮಾನಕ್ಕ ಧಕ್ಕೆಯಾಗದಂತೆ ಹೇಳುವುದೇ ಸಾಹಿತ್ಯದ ಪ್ರಯೋಜನ. ಹೀಗಾಗುತ್ತದೆ ಎಂದು ತಿಳಿಯದೆ ಇದ್ದರೂ ಫಲಿತಾಂಶವೇನೋ ಆಗಿಯೇ

ಆಗುತ್ತದೆ. ಆದುದರಿಂದಲೇ ಸಾಹಿತ್ಯವು ಸಾಮಾನ್ಯವಾಗಿ ಜನಪ್ರಿಯವಾಗಿರುವುದು. ಸಾಹಿತ್ಯದಿಂದ ಹಿತ ದೊರಕುವುದರ ಜತೆಗೆ ವಿಹಿತವಾಗಿ ನಡೆದುಕೊಳ್ಳುವ ಉಪದೇಶವೂ ಇದ್ದೇ ಇರುತ್ತದೆ. ಗಂಭೀರವಾದ ಮತ್ತು ಹೇರಳ ಅನುಭವಾನಂತರ ಬರೆದ ಪರಿಪಕ್ವ ಸಾಹಿತ್ಯವು ಈ ರೀತಿ ಪ್ರಯೋಜನಕಾರಿಯಾಗುತ್ತದೆ.

ಮನೋವೈಜ್ಞಾನಿಗಳು, Suggestion, Persuasion ; Psycho-Analysis ಎಂಬ ಮೂರು ಮಾನಸಿಕ ಚಿಕಿತ್ಸಾ ಕ್ರಮಗಳನ್ನು ಬಳಸುತ್ತಾರೆ. ಹೆಸರೇ ಸೂಚಿಸುವಂತೆ, Suggestion 'ನೀನು ಆರೋಗ್ಯವಾಗಿದ್ದಿ ; ಮೂಲಭೂತವಾಗಿ ಚೆನ್ನಾಗಿದ್ದಿ ; ಈಗ ಕಾಡುತ್ತಿರುವ ಆತಂಕವು ಕೇವಲ ತಾತ್ಕಾಲಿಕ. ಮನಸ್ಸಿನ ಕಲ್ಪನೆ ಅದು. ಅದಕ್ಕೆ ಬೆದರಬೇಡ. ಧೈರ್ಯ ತಂದುಕೋ' ಎಂದು ಉಪದೇಶಿಸುವ ವಿಧಾನ.

ತೀವ್ರ ಆತಂಕಕ್ಕೆ ಒಳಗಾದ ಅರ್ಜುನನಿಗೆ, ಶ್ರೀಕೃಷ್ಣನ ಗೀತೋಪದೇಶದಲ್ಲಿ Suggestion ಬಲವಾಗಿದೆ.

ಹೇಳಿದ್ದನ್ನೇ, ವಿವಿಧ ರೀತಿಗಳಲ್ಲಿ ಪುನಃ ಪುನಃ ಹೇಳಿ; ಹೇಳಿದ್ದು, ಕೇಳಿದವನಿಗೆ ಮನದಟ್ಟಾಯಿತು ಎನ್ನುವಂತೆ, ಒತ್ತಾಯಪಡಿಸುವುದೇ Persuasion. ಆತಂಕವು ಮುತ್ತಿದವರಲ್ಲಿ, ಮನಸ್ಸು ಆತಂಕದಿಂದಲೇ ತುಂಬಿ ತುಳುಕುತಿರುತ್ತದೆ. ಇತರ ವಿಷಯಗಳನ್ನು ಗ್ರಹಿಸುವ ಶಕ್ತಿಯು ಬಹಳಷ್ಟು ಕಡಿಮೆಯಾಗಿರುತ್ತದೆ. ಅಂತಹ ಪರಿಸ್ಥಿತಿಯಲ್ಲಿ ಪುನಃಪುನಃ ಹೇಳಲೇಬೇಕು. Persuade ಮಾಡಲೇಬೇಕು.

ಗೀತೋಪದೇಶದಲ್ಲಿ ಪುನಃಪುನಃ ಉಪದೇಶಿಸುವುದನ್ನು ಸ್ಪಷ್ಟವಾಗಿ ಕಾಣಬಹುದು. ಹೇಳಿದ್ದನ್ನೇ ಹೇಳುತ್ತಾನಲ್ಲ, ಶ್ರೀಕೃಷ್ಣ, ಎಂದು ಮಾನಸಿಕ ಸ್ವಾಸ್ಥ್ಯವಿದ್ದವರಿಗೆ ಅನಿಸಿ ಬೇಸರವೂ ಆಗುತ್ತದೆ. ಆದರೆ ಉಪದೇಶವು ಆತಂಕದಿಂದ ನರಳುತ್ತಿರುವವರಿಗೆ ಎನ್ನುವುದನ್ನು ನೆನೆಸಿಕೊಂಡರೆ, ಪುನಃಪುನಃ ಉಪದೇಶಿಸುವುದರ ಔಚಿತ್ಯವು ಸ್ಪಷ್ಟವಾಗುತ್ತದೆ.

ಇದಾದ ಮೇಲೆ Psycho Analysis ಮನಸ್ಸಿನ ವಿಶ್ಲೇಷಣೆ. ಆತಂಕದಿಂದ ಮನಸ್ಸು ತಳಮಳಗೊಂಡಿದೆ ; ಕುದಿಯುತ್ತಿದೆ. ಮನಸ್ಸಿನ ಸ್ವರೂಪವೇನು? ಎಂಬುದನ್ನು ಎಳೆಎಳೆಯಾಗಿ ಸರಳವಾಗಿ ಅರಿತರೆ, ಆಗ ಆತಂಕದ ಆರ್ಭಟವೂ ಶಮನವಾಗುತ್ತದೆ.

ಗೀತೋಪದೇಶದಲ್ಲಿ, ಸಾಂಖ್ಯಯೋಗದ ಪ್ರಕರಣವೂ ವಿಶ್ವರೂಪದರ್ಶನದ ಅಧ್ಯಾಯವೂ ಮನಸ್ಸಿನ ಸ್ವರೂಪವನ್ನೂ, ಅದರ ಮೂಲ ಅಂತ್ಯಗಳನ್ನೂ, ಅದು ಬೆದರಿ ಹೆದರುವ ಕಾರಣಗಳನ್ನೂ ವಿಶ್ಲೇಷಿಸಿ ಸುಲಭವಾಗಿ ತಿಳಿಸುವಲ್ಲಿ

ಕೃತಕೃತ್ಯವಾಗಿವೆ.

ಪುರಾಣದ ಪುಣ್ಯಕತೆಗಳಲ್ಲಿ, ಸಾಹಿತ್ಯದ ಹಿತಮಾರ್ಗವೂ ಗೀತೆಯ ಉಪದೇಶಾವಿಧಾನಗಳೂ ಸಮ ಸಮ ಸ್ವಾರಸ್ಯವಾಗಿ ಮಿಲನವಾಗಿವೆ. ಆದಕಾರಣ ಜನಸಾಮಾನ್ಯರಲ್ಲಿ ಅವು ಅತಿ ಪ್ರಿಯವೂ ಪ್ರಯೋಜನಕಾರಿಯೂ ಆಗಿವೆ. ಗೀತೋಪದೇಶವನ್ನು ಅರಿಯಲು ವಿಚಾರಶಕ್ತಿಯು ಸಾಕಷ್ಟಿರಬೇಕು. ಇದು ಶತಾಂಶ ಹತ್ತಿಪ್ಪತ್ತು ಮಂದಿಯಲ್ಲಿ ಮಾತ್ರ ಇರುತ್ತದೆ. ಆದರೆ ಸಾಹಿತ್ಯದ ಹಿತ ಮಾರ್ಗವು ಜನಸಾಮಾನ್ಯರೆಲ್ಲರಿಗೂ ಸುಲಭವಾಗಿ ತಿಳಿಯುತ್ತದೆ.

ಮನೋವಿಜ್ಞಾನಿಗಳು ಇಂದು ಮಾಡುತ್ತಿರುವ ಪ್ರಯೋಗಗಳು, ಬಳಸುತ್ತಿರುವ ವಿಧಾನಗಳು, ಇವೆಲ್ಲವನ್ನೂ ಇನ್ನೂ ಅತಿ ಹೆಚ್ಚು ಫಲಪ್ರದವಾಗುವಂತೆ, ಪುರಾಣ, ಗೀತೆ, ಇತ್ಯಾದಿಗಳಲ್ಲಿ, ನಮ್ಮ ಹಿರಿಯರು ಸಾಧಿಸುತ್ತಿದ್ದರು. ಇದನ್ನು ಮನಗಂಡ ನಾವು, ಆಧುನಿಕ ಮನೋವಿಜ್ಞಾನವು ಯಾವ ರೀತಿಯಲ್ಲಿ ಮುಂದುವರೆಯಬೇಕು ಎನ್ನುವುದನ್ನು ಸೂಚಿಸಬೇಕು.

ಪುರಾಣದ ಕತೆಯ ಮೂಲಕ ಸಾಧಿಸಲ್ಪಟ್ಟ 'ಮಾನಸಿಕ ಚಿಕಿತ್ಸೆ' ಎಂದನ್ನುವ ಉಪದೇಶವು ಲಚ್ಚಮ್ಮಣ್ಣಿಯ ಆತಂಕವನ್ನು ಶಮನಮಾಡಿತ್ತು. ಏಕೆಂದರೆ ಯಾವ ಆತಂಕವು ಕಾಡುತ್ತಿತ್ತೋ, ಅದರ ಪರಿಹಾರ ಮಾರ್ಗವೂ ಹೇಳಲ್ಪಟ್ಟಿತ್ತು. ಆತಂಕವು ಶಮನವಾದಾಗ, ಸುಸ್ತೋಸುಸ್ತು ಇಲ್ಲವಾಯಿತು. ಹೃದಯದ ಬಡಿತವು ಸರಾಗವಾಯಿತು. ಉಂಡುದೆಲ್ಲ ಜೀರ್ಣವೂ ಆಯಿತು.

**೫. ಆತಂಕಕ್ಕೆ ಬಲಿಯಾದ ಅರ್ಜುನ**

ಜೇನುಗೂಡು ಕೆರಳಿದಾಗ, ಜೇನುಹುಳುಗಳು ಹುಚ್ಚಾಪಟ್ಟೆ ಹಾರಾಡುತ್ತ ಸಿಕ್ಕಿದ್ದನ್ನು ಕಟಕಾರಿಸಿ ಕಚ್ಚುತ್ತವೆ. ಏಕೆಂದರೆ ಅವುಗಳ ಸ್ವಾಭಾವಿಕ ಜೀವನಕ್ಕೆ ಅಡ್ಡಿ ಅಡಚಣೆಯುಂಟಾಗಿರುತ್ತದೆ. ಮುಂದೆ ಏನು ಮಾಡಬೇಕು ಎಂಬುದು ತಿಳಿಯದು. ಕಾರಣ ರೇಗಿ ಸಿಕ್ಕಿದ್ದನ್ನು ಕಚ್ಚಿ ಸಿಕ್ಕಾಪಟ್ಟೆ ಆಡುತ್ತವೆ. ಆತಂಕವು ಮನಸ್ಸನ್ನು ತುಂಬಿದಾಗ, ಮನಸ್ಸೂ ಸಿಕ್ಕಾಪಟ್ಟೆ ಓಡುತ್ತದೆ. ಗೊತ್ತಿಲ್ಲದೆ, ಗುರಿಯಿಲ್ಲದೆ ಎತ್ತೆತ್ತಲೋ ಓಡುತ್ತದೆ. ಅಂತಹ ಸ್ಥಿತಿಯಲ್ಲಿ ಧೀರನಾಗಿದ್ದವನೂ ಕೂಡ, ಯಾವ ಸ್ಥಿರನಿರ್ಣಯವನ್ನೂ ಮಾಡಲಾಗುವುದಿಲ್ಲ. ಎಂತಹ ಧೈರ್ಯಶಾಲಿಯೂ ಷಂಡನಂತಾಗುತ್ತಾನೆ. ಹೆಸರಾಂತ ಗಾಂಡೀವಿಯಾದರೂ, ಕಾತರದಿಂದ ಮುತ್ತಲ್ಪಟ್ಟಾಗ ಹೃದಯದೌರ್ಬಲ್ಯದಿಂದ ನರಳಿ ಬಳಲುತ್ತಾನೆ. ಇವೆಲ್ಲವನ್ನೂ ಸ್ಪಷ್ಟವಾಗಿ ತೋರಿಸುವ ವ್ಯಕ್ತಿ, ಅರ್ಜುನ. ವಿಶಾಲಬುದ್ಧಿಯವರು ಎಂದು ಅನ್ವರ್ಥ

ನಾಮಧೇಯರಾದ ವ್ಯಾಸ ಮಹರ್ಷಿಗಳು, ಆತಂಕದಿಂದ ತೀವ್ರವಾಗಿ ನರಳುತ್ತಿರುವ ಅರ್ಜುನನ ಸ್ಥಿತಿಯನ್ನು ಸಲ್ಲಕ್ಷಣವಾಗಿ ವಿವರಿಸಿದ್ದಾರೆ. Anxiety Neuroses ಅನ್ನು ಯಾವ ಮನೋವಿಜ್ಞಾನದ ಹೆಸರಾಂತ ಪುಸ್ತಕಗಳೂ ಅಷ್ಟು ವಿವರವಾಗಿ ಮತ್ತು ಸ್ಫುಟವಾಗಿ ವಿವರಿಸಿಲ್ಲ.

ಹೆಣ್ಣುತನದ, ಹೆಣ್ಣಿನ ಸ್ವಾಭಾವಿಕ ಭೀರುತನದ, ಯಾವ ಲಕ್ಷಣಗಳೂ ಅರ್ಜುನನಲ್ಲಿ ಇರಲಿಲ್ಲ ಎಂದು ವಿವರಿಸಿದ್ದಾರೆ. ಹೆಣ್ಣುತನದ ಹಿರಿಮೆಯಾದ ಸ್ತನಗಳ ರುದ್ರಾಕ್ಷಿಗಳು ಅಲ್ಪಸ್ವಲ್ಪವಾಗಿಯಾದರೂ ಪ್ರತಿಯೊಬ್ಬ ಗಂಡಸಿನಲ್ಲಿಯೂ ಕಂಡೇ ಕಾಣುತ್ತವೆ. ಶತಾಂಶನೂರರಷ್ಟು ಗಂಡು ಎಂಬುವ ಇಲ್ಲವೇ ಇಲ್ಲ. ಎಲ್ಲರೂ ಇಷ್ಟೋ ಅಷ್ಟೋ ಅರ್ಧನಾರೀಶ್ವರರೇ ! ಇದು ದೇಹವಿಜ್ಞಾನದ ಪ್ರಕಾರದಿಂದಲೂ ಖಚಿತವಾಗಿದೆ. ಆದರೆ ಅರ್ಜುನನ ಎದೆಯ ಮೇಲೆ ಮೊಲೆಯ ತೊಟ್ಟುಗಳ ಅವಶೇಷವೂ ಇರಲಿಲ್ಲವಂತೆ. ಅಂತಹ ಬಡಾ ಗಂಡಸು, ಅವ. ಭೀರುತನವು ಇರಲೇ ಕೂಡದು, ಅವನಿಗೆ.

ಸಾಮಾನ್ಯ ಗಂಡುಗಳ ಮಿಂಡನಾದ, ಇಂತಹ ಪ್ರಚಂಡ ಗಾಂಡೀವಿ. ಕುರುಕ್ಷೇತ್ರದ ಯುದ್ಧದ ಆರಂಭದಲ್ಲಿ, ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನ ಸಾರಥ್ಯದಲ್ಲಿ, ಏಳು ಅಕ್ಷೋಹಿಣಿ ಸೈನ್ಯದ ಬೆಂಬಲ ಪಡೆದು, ನಾಲ್ಕು ಜನ ವೀರ ಸಹೋದರರ ಜತೆ ನಿಂತು, ಯುದ್ಧಕ್ಕೆ ಸಿದ್ಧನಾಗಿದ್ದಾನೆ.

ಬಾಲ್ಯದಿಂದಲೂ ಶಿಕ್ಷಣವನ್ನು ಕೊಟ್ಟ ಗುರುಗಳು, ತನ್ನ ಹಿರಿಯರು, ರಕ್ತ ಸಂಬಂಧಿಗಳು, ಹನ್ನೊಂದು ಅಕ್ಷೋಹಿಣಿ ಸೈನ್ಯದ ಬೆಂಬಲದೊಂದಿಗೆ ಎದಿರು ನಿಂತಿರುವುದನ್ನು ಕಾಣುತ್ತಾನೆ. ಇವರನ್ನು ಈಗ ಅವ ಸದೆಬಡಿದು ಜಯಗಳಿಸಬೇಕು. ಅದಕ್ಕಾಗಿ ನಿಂತಿದ್ದಾನೆ. ಅವನ ಮನಸ್ಸಿನಲ್ಲಿ ಇದು ಸ್ಪಷ್ಟವಾಗಿ ತಿಳಿದಿದೆ. ಇಂತಹ ಅತಿರಥ ಮಹಾರಥರನ್ನು ನಿರ್ಮೂಲಮಾಡಲು ನನಗೆ ಸಾಧ್ಯವೇ ? ಎಂಬ ಭಯವು ಅಥವಾ ಸಂದೇಹವು ಉಂಟಾಗಿರಬೇಕು. ಸಂದೇಹವು ಉಂಟಾದಾಗ, ಭಯವು ಹಿಂದೆಯೇ ಕಾಡುತ್ತದೆ. ಹೀಗಾದರೆ ಹೇಗೆ ? ಹಾಗಾಗಿಬಿಟ್ಟರೆ ? ಎನ್ನುವ ಆಂದೋಲನವು ಶುರುವಾಗುತ್ತದೆ. ಜತೆಯಲ್ಲೇ ಭವಿಷ್ಯದ ಆತಂಕ ; ಕಾತರ.

ಕೌರವ ಸೇನಾಧಿಪತಿಗಳು ಆಗ ಶಂಖಗಳನ್ನು ಊದುತ್ತಾರೆ. ಅದರೊಂದಿಗೆ ಭೈರ್ಯಗಳೂ, ತಮಟೆಗಳೂ ಬಾರಿಸಲ್ಪಡುತ್ತವೆ. ಕಹಳೆಗಳೂ ಮೊಳಗುತ್ತವೆ. ಭಯಂಕರವಾದ ಈ ಶಬ್ದವು ಅತ್ಯುಗ್ರವಾಯಿತು. 'ತುಮುಲೋಭವತ್'. ಪಾಂಡವ ಸೈನ್ಯವೂ ಸಮಸಮ ಮಾರ್ದನಿ ಕೊಟ್ಟಿತು. ಭೀಕರವಾದ ಈ ರಣಕಹಳೆಯು,

ಅಂಜುತ್ತಿರುವವರ ಮೇಲೆ ಕಪ್ಪೆಯನ್ನು ಹಾಕಿದಂತೆ, ಅರ್ಜುನನ ಆತಂಕವನ್ನು ಉಲ್ಬಣಿಸಿರಬೇಕು. ಮನೆಗೆ ಹಿಂತಿರುಗಿದಾಗ, ಬಾಗಿಲ ಹಿಂದೆ ಮರೆಯಲ್ಲಿ ನಿಂತ ಮಗುವು ಅನಿರೀಕ್ಷಿತವಾಗಿ 'ಭೇ' ಎಂದು ಅರಚಿ ಬೆದರಿಸಿದರೆ, ದೊಡ್ಡವರು ಕೂಡ ತಟ್ಟಂತ ಬೆಚ್ಚುವುದಿಲ್ಲವೆ ?

ನಚ ಶಕ್ನೋಮಿ ಅವಸ್ಥಾತುಂ, ಭ್ರಮತೀವಚ ಮೇ ಮನಃ
ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ

ನಿಂತುಕೊಳ್ಳಲೂ ನನಗೆ ಶಕ್ತಿಯಿಲ್ಲ. ನನ್ನ ಮನಸ್ಸು ಎತ್ತೆತ್ತಲೋ ಸುತ್ತುತ್ತಿದೆ. ಕೇಡನ್ನುಂಟುಮಾಡುವ ಅಪಶಕುನಗಳನ್ನು ಕಾಣುತ್ತಿದ್ದೇನೆ.

ಸೀದಂತಿ ಮನು ಗಾತ್ರಾಣಿ ಮುಖಂ ಚ ಪರಿಶುಷ್ಯತಿ
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ

ನನ್ನ ಅವಯವಗಳು ಕುಂದಿ ಬೆಂಡಾಗುತ್ತಿವೆ. ಮುಖವೂ ಬಾಡುತ್ತಿದೆ. ಶರೀರದಲ್ಲಿ ಕಂಪನವೂ, ಮೈಗೂದಲು ನಿಮಿರಿ ನಿಲ್ಲುವುದೂ ಆಗುತ್ತಿದೆ.

ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ ಚೈವ ಪರಿದಹ್ಯತೇ.

ಗಾಂಡೀವವು ಕೈಯಿಂದ ಜಾರುತ್ತಿದೆ. ಚರ್ಮವು ಸುಡುತ್ತಿದೆ.

ಈ ರೀತಿ ಆತಂಕದಿಂದ ನರಳುತ್ತಿರುವ ಅರ್ಜುನನ ಪರಿಸ್ಥಿತಿಯನ್ನು ವ್ಯಾಸರು ವರ್ಣಿಸಿದ್ದಾರೆ. ಆತಂಕದಿಂದ ದೇಹದಲ್ಲಿ ಕಾಣಬರುವ ಈ ಚಿಹ್ನೆಗಳೆಲ್ಲವನ್ನೂ, ಈ ಮೊದಲು ಉದಾಹರಿಸಿದ ಲಚ್ಚಮ್ಮಣ್ಣಿಯಲ್ಲೂ, ಲತೀಫ್‌ನಲ್ಲೂ ; ಎದೆಗೂಡು ತುಡಿದ ಚಿನ್ನಯ್ಯನಲ್ಲೂ ಕಂಡಿದ್ದೆವು.

ಅರ್ಜುನನ ಆತಂಕನಿವಾರಣೆಗೆ, ಅವನ ಸಾರಥಿಯಾಗಿದ್ದ ಶ್ರೀಕೃಷ್ಣ ಮಾಡಿದ್ದೇನು ? ಸಾರಥಿ ಎಂದಾಗ ಅರ್ಜುನನ ರಥದ ಸಾರಥೀ ಮಾತ್ರವಲ್ಲ. ಅರ್ಜುನನ ಮನಸ್ಸಿಗೂ ಸಾರಥಿಯಾಗಿ, ಮನಸ್ಸನ್ನು ಹದಪಡಿಸಿ ತನ್ಮೂಲಕ ಅರ್ಜುನನ ದೇಹಪರಾಕ್ರಮವನ್ನೂ ಅನುಗೊಳಿಸಿದ ಶ್ರೀಕೃಷ್ಣ.

ಸ್ವಯಂ ನಿರ್ಣಯಿಸಲಾರದೆ, ಅನುಮಾನ, ಸಂಶಯಗಳಿಂದ ಕುಕ್ಕಲ್ಪಟ್ಟ ಅರ್ಜುನನನ್ನು 'ಉಪದೇಶಕ್ಕೆ' ಗುರಿಮಾಡಿದ. ತಾನು, ತನ್ನ ನೆಂಟರಿಷ್ಟರು, ತನ್ನ ದಾಯಾದಿಗಳು ; ಹೋರಾಡಬೇಕಾದವನು ತಾನು ತನ್ನವರನ್ನು ತಾನೇ ಜಯಿಸಬೇಕು, ನಿರ್ಮೂಲ ಮಾಡಬೇಕು, ಎಂದು ಅರ್ಜುನ ಕಾತರಗೊಂಡಿದ್ದ ಇವೆಲ್ಲದರಲ್ಲೂ ಇರುವ ಕೂಟಸ್ಥವಾದ 'ತಾನು' ಎಂಬುದರ ನಿಜವಾದ ಪರಿಚಯವನ್ನು, ಮೂಲಭೂತವಾದ ಅರಿವನ್ನು ಶ್ರೀಕೃಷ್ಣ, ಅರ್ಜುನನಿಗೆ ಪ್ರತ್ಯಕ್ಷ ಮಾಡಿ ಕೊಟ್ಟ. ಅರ್ಜುನನ ಸಂಶಯಗಳೆಲ್ಲವೂ ನಿವಾರಣೆಯಾದುವು. 'ತಾನು'

ಎನ್ನುವುದು ಕೇವಲ ನಿಮಿತ್ತ ಮಾತ್ರ ಎನ್ನುವುದನ್ನು ಅರಿತುಕೊಂಡ. ಅನಂತರ ಬಾಳಿನಲ್ಲಿ ತಾನು ಮಾಡಬೇಕಾದ ಕಾರ್ಯವನ್ನು ದೃಢಮನಸ್ಸಿನಿಂದ ಮಾಡಲು ಸಾಧ್ಯವಾಯಿತು.

ಆತಂಕದಿಂದ ನರಳುವ ರೋಗಿಗಳಿಗೆ ಮನೋವೈದ್ಯರು ಇಂದು ನಡಸುವ ಚಿಕಿತ್ಸಾ ಕ್ರಮಗಳಲ್ಲಿ ಮೂರು ಮುಖ್ಯ ಹಂತಗಳಿವೆ. (೧) Suggestion ರೋಗಿಯ ಮನಸ್ಸಿನಲ್ಲಿ ಧೈರ್ಯತುಂಬುವಂತೆ ಸಲಹೆ ಮಾಡುವುದು. ಆತ್ಮವಿಶ್ವಾಸವನ್ನು ಅಂಕುರಿಸುವುದು, (೨) Persuasion ಒತ್ತಾಯ ಮಾಡಿ, ಪುನಃ ಪುನಃ ವಿಧವಿಧ ರೀತಿಯಲ್ಲಿ ಉಪದೇಶಿಸಿ, ಮನಸ್ಸಿನ ಆತಂಕವನ್ನು ಕರಗಿಸುವುದು ; ಮನಸ್ಸನ್ನು ದೃಢಪಡಿಸುವುದು, (೩) Psycho-Analysis ಮನಸ್ಸಿನ ಮರ್ಕಟತನವನ್ನು ಎಳೆಎಳೆಯಾಗಿ ವಿಶ್ಲೇಷಿಸಿ, ಜಾಣ ರೋಗಿಗೆ ಮನದಟ್ಟಾಗುವಂತೆ ಶಾಸ್ತ್ರೀಯವಾಗಿ ಮಾಡುವುದು. ಈ ಮೂರು ಹಂತಗಳನ್ನೂ ಅರ್ಜುನನ ಆತಂಕನಿವಾರಣೆಗೆ ಶ್ರೀಕೃಷ್ಣ ಬಳಸಿಕೊಂಡ. ಯಶಸ್ವಿಯಾಗಿ ಬಳಸಿಕೊಂಡ. ಭಗವದ್ಗೀತೆಯಲ್ಲಿ, ಹೇಳಿದ್ದನ್ನೇ ಪುನಃಪುನಃ ಹೇಳುವ, ಪುನರುಕ್ತಿಗಳೂ ಬಹಳವಾಗಿವೆ. Persuasion ಚಿಕಿತ್ಸೆಗೆ, ಪುನರುಕ್ತಿಯು ಅತ್ಯಗತ್ಯ. ಎರಡನೆಯ ಅಧ್ಯಾಯದಲ್ಲಿ 'ನಾನು' 'ನನ್ನದು' ಎನ್ನುವುದರ ಮನೋವಿಶ್ಲೇಷಣೆಯು ಪರಿಪೂರ್ಣವೂ ಗಂಭೀರವೂ ಆದುದ್ದಾಗಿದೆ.

ಈಗಿನ ಕಾಲದವರು ಅರ್ಜುನನಿಗಿಂತ ಸ್ವಲ್ಪ ಹೆಚ್ಚು ಅದೃಷ್ಟವಂತರು. ಏಕೆಂದರೆ, ಆತಂಕಗೊಂಡ ಮನಸ್ಸನ್ನು ಸಮಾಧಾನಪಡಿಸುವ, ಪ್ರಭಾವಯುತವಾದ ಶಾಂತಿಕಾರಕ ಔಷಧಿಗಳು–Tranquillisers–ಅರ್ಜುನನ ಕಾಲದಲ್ಲಿ ಇರಲಿಲ್ಲ. ಮಸಲಾ ಅಂತಹ ಮೂಲಿಕೆಗಳಿದ್ದಿದ್ದರೂ, ಅವುಗಳನ್ನು ಜನರು ಬಳಸುತ್ತಿದ್ದಿದ್ದರೂ, ಶ್ರೀ ಕೃಷ್ಣ ಅಂತಹವುಗಳನ್ನು ಅರ್ಜುನನ ಮೇಲೆ ಉಪಯೋಗಿಸಿದ ಎಂದು ಎಲ್ಲೂ ವಿವರಿಸಿಲ್ಲ.

ಆದರೆ ಇಂದಿನ ರೋಗಿಗಳಿಗೆ ಈ ಸೌಲಭ್ಯವು ವಿಪುಲವಾಗಿ ದೊರೆಯುತ್ತದೆ. ಇವುಗಳ ಪ್ರಯೋಗದಿಂದ ಆತಂಕವು ಸಂಪೂರ್ಣವಾಗಿ ನಿವಾರಣೆಯಾಗುವುದಿಲ್ಲ. ಆದರೆ ಗೊಂದಲಮಯವಾದ ಮನಸ್ಸು ಸ್ವಲ್ಪ ಶಾಂತಿಯನ್ನು ಪಡೆಯುತ್ತದೆ. ಆಗ, ಮಾಡಿದ ಉಪದೇಶವು, ರೋಗಿಯ ಮನಸ್ಸಿಗೆ ಸುಲಭವಾಗಿ ಹತ್ತುತ್ತದೆ. ಹಾಗಾಗಿ ಪರಿಣಾಮಕಾರಿಯಾಗುತ್ತದೆ. ತೀವ್ರ ಆತಂಕದಿಂದ ನರಳುತ್ತಿರುವಾಗ, ಯಾರು ಏನನ್ನು ಉಪದೇಶಿಸಿದರೂ, ಗೋರ್ಕಲ್ಲ ಮೇಲೆ ಮಳೆಗರೆದಂತಾಗುತ್ತದೆ. ಶಾಂತಿಕಾರಕ ಔಷಧಿಗಳ ಸೂಕ್ತ ಬಳಕೆಯಿಂದ, ಮನಸ್ಸಿನ ತಲ್ಲಣವನ್ನು ಕಡಿಮೆ ಮಾಡಿದರೆ, ಅನಂತರ ಉಪದೇಶವು ಉಪಯುಕ್ತವಾಗುತ್ತದೆ.

ನಮ್ಮ ಭಾರತದಲ್ಲಿ, ಪುರಾತನ ಕಾಲದಿಂದಲೂ ಬೆಳೆದು ಬಂದಿರುವ ಸಂಸ್ಕೃತಿಯ ಪರಿಣಾಮವಾಗಿ, ಆತಂಕಕ್ಕೆ ತುತ್ತಾದವರು, ರಾಮಾಯಣ ಪಾರಾಯಣ, ಗೀತಾ ಪ್ರವಚನ, ಭಾರತ ಶ್ರವಣ, ಹರಿಕಥೆ, ಶಿವಕಥೆಗಳನ್ನು ಕೇಳುವುದು; ಇತ್ಯಾದಿಗಳಲ್ಲಿ ಮಗ್ನರಾಗುತ್ತಿದ್ದರು. ಪೂಜೆ ಪುನಸ್ಕಾರ, ವ್ರತ ನಿಯಮ ಇವುಗಳನ್ನು ಶ್ರದ್ಧೆಯಿಂದ ಆಚರಿಸುತ್ತಿದ್ದರು. ಈ ಚಟುವಟಿಕೆಗಳೆಲ್ಲವೂ ಆಧ್ಯಾತ್ಮಿಕ ಸ್ವರೂಪದ್ದೇ! ಶ್ರವಣ ಅಥವಾ ಪಠಣ ಮಾಡಿದಾಗ, ರಾಮಾಯಣದ ಆಧ್ಯಾತ್ಮಿಕ ಅರಿವಾಗಲೀ, ಗೀತೆಯ ನಿಯಮಗಳಾಗಲೀ, ಅರ್ಥವಾಗದೆ ಇರಬಹುದು. ಆದರೂ ಅನಂತರ ಮನಸ್ಸಿಗೆ ಒಂದು ತೆರನ ನೆಮ್ಮದಿಯು ದೊರಕಿ ಆತಂಕದ ಕಾಟವು ಕಡಮೆಯಾಗುತ್ತಿತ್ತು, ಕಡಿಮೆಯಾಗುತ್ತಲೂ ಇದೆ. ಇವೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಹಂತದಲ್ಲಿ, 'ಉಪದೇಶವೇ' ಹೌದು. ಕಾವ್ಯಮಯವಾದ ಉಪದೇಶ. ಅಂದರೆ, ಕಾವ್ಯಗಳಲ್ಲಿನ ವ್ಯಕ್ತಿಗಳೊಡನೆ ಓದುಗನು ತಾದಾತ್ಮ್ಯವನ್ನು ಹೊಂದುತ್ತಾನೆ. ತನ್ನ ಮನದ ಆತಂಕದ ಕಲ್ಮಷವನ್ನು ಕಳೆದುಕೊಳ್ಳುತ್ತಾನೆ, ಆಗ ಮನಸ್ಸಿಗೆ ನೆಮ್ಮದಿಯು ದೊರಕುತ್ತದೆ. ಇದರ ಜತೆಗೆ ಆಧ್ಯಾತ್ಮಿಕ ಉಪದೇಶವೂ ಬೆಸೆದುಗೊಂಡಿರುವುದರಿಂದ, ಮನಸ್ಸಿನ ಗೊಂದಲವು, ಹರಿದು, ಸರಳವಾಗಲು ಸಾಧ್ಯವಾಗುತ್ತದೆ. ಸುಲಭಸಾಧ್ಯವಾಗುತ್ತದೆ ; ಏಕೆಂದರೆ ಶೈಶವದಿಂದಲೂ ಇವನ್ನೇ ಮನಸ್ಸಿನಲ್ಲಿ ರೂಢಿಸಿಕೊಂಡಿರುತ್ತಾರೆ, ನಮ್ಮ ದೇಶದಲ್ಲಿ.

ಬಾಳಿನ ಗುರಿಯನ್ನು ಕಾಣದೆ, ಬದುಕಿನ ಅರ್ಥವನ್ನು ಅರಿಯದೆ ಜೀವನವನ್ನು ನಡೆಸುತ್ತಿರುವವರು ಬಹಳ ಮಂದಿ. ಇಂತಹವರು ಸಂಪತ್‌ಸಮೃದ್ಧ ರಾಷ್ಟ್ರಗಳಲ್ಲಿದ್ದರೆ, ಬಾಳು ಸುಲಭವಾಗುತ್ತದೆ. ದೈಹಿಕ ಅಗತ್ಯಗಳು ನಿರಾಯಾಸದಿಂದ ದೊರಕುತ್ತವೆ. ಆಗ ಮನಸ್ಸಿಗೆ ಹೆಚ್ಚು ಕೆಲಸವಿರುವುದಿಲ್ಲ. ಅಂತಹ ಮನಸ್ಸು, ಇಂತಹ ಬಾಳಿನ ಸಾರ್ಥಕತೆ ಏನು ? ನಶ್ವರವಾದ, ಎರಡು ಮುಖಗಳನ್ನು ಹೊಂದಿರುವ ಈ ಸುಖದಿಂದ, ಗತಿ ಏನು ? ಎನ್ನುವ ಹಿರಿಯ ಆತಂಕಕ್ಕೆ ಗುರಿಯಾಗುತ್ತದೆ. 'ಹರೇ ಕೃಷ್ಣ ! ಹರೇ ರಾಮ !' ಎಂದು ಭಜಿಸಿದವರನ್ನು ಅವರು ಹಿಂಬಾಲಿಸುತ್ತಾರೆ. ಏಕೆ ? ಆಗ 'ತಮ್ಮ ಹೊಣೆ ತೀರಿತು ; ಕೃಷ್ಣ, ರಾಮ ಭವಿಷ್ಯವನ್ನು ಕಾಪಾಡುತ್ತಾರೆ' ಎನ್ನುವ ಮನೋಭಾವವು ದೃಢವಾಗಿ ಆತಂಕವು ನಶಿಸುತ್ತದೆ. ತುಸು ನೆಮ್ಮದಿಯೂ ದೊರಕುತ್ತದೆ. ಕೃಷ್ಣ, ರಾಮರು, ಇಂತಹವರ ಮನಸ್ಸಿನಲ್ಲಿ ಶೈಶವದಿಂದಲೂ ಅಚ್ಚಾಗುವುದಿಲ್ಲ. ಆದರೂ, ಕಡೆ ಮುಳುಗು ಹಾಕುವವನು ಸಿಗುವ ಹುಲ್ಲುಕಡ್ಡಿಯನ್ನು ಭದ್ರವಾಗಿ ಹಿಡಿಯುವಂತೆ, ಇವರುಗಳೂ 'ಹರೇ ಕೃಷ್ಣ, ಹರೇ ರಾಮ' ವನ್ನು ಬಿಗಿಹಿಡಿಯುತ್ತಾರೆ. ಇದರಿಂದಲೇ ನೆಮ್ಮದಿಯೂ

ದೊರಕುತ್ತದೆ. 'ನಾಮದ ಬಲವೊಂದಿದ್ದರೆ ಸಾಕೋ, ನೀನ್ಯಾಕೋ, ರಂಗ, ನಿನ್ನ ಹಂಗ್ಯಾಕೋ,' ಎಂದು ದಾಸರು ದೂರದೃಷ್ಟಿಯಿಂದ, ವಿಶಾಲ ಅರಿವಿನಿಂದ ಹಾಡಿದುದು ಈ ನಿದರ್ಶನದಿಂದ, ಸಾರ್ವಕಾಲಿಕ ಸತ್ಯವನ್ನು ಪ್ರತ್ಯಕ್ಷಿಸುತ್ತದೆ.

ನಮ್ಮ ಸಂಸ್ಕೃತಿಗೆ ಸಹಜವಾದ 'ಉಪದೇಶದ' ಈ ಹಲವಾರು ಮಾರ್ಗಗಳನ್ನೂ ನಮ್ಮ ಮನೋವೈದ್ಯರುಗಳು ಅತ್ಯವಶ್ಯಕವಾಗಿ ಬಳಸಿಕೊಳ್ಳಬೇಕು. ಬಳಸಿಕೊಳ್ಳುತ್ತಲೂ ಇದ್ದಾರೆ. ಆತಂಕದಿಂದ ನರಳುತ್ತಿರುವವರ, ನೆಂಟರು, ಇಷ್ಟರೂ, ಆಪ್ತಮಿತ್ರರೂ, ಈ ವಿಷಯವನ್ನು ತಿಳಿದುಕೊಂಡರೆ, ಸಮಾಜದ ಕ್ಷೇಮವು ರಕ್ಷಿಸಲ್ಪಡುತ್ತದೆ.

**೬. ಉತ್ಕಟ ಆತಂಕ**

ಈತನಕ ಆತಂಕದಿಂದ ಉಸಿರಾಡುವುದರ ಅಥವಾ ಹೃದಯದ ಕಾರ್ಯಗಳಲ್ಲಿ ಯಾವ ರೀತಿಯ ಭ್ರಮಾಪೂರ್ಣ ಅವ್ಯವಸ್ಥೆಗಳು ಆಗುತ್ತವೆ ಎಂಬುದನ್ನು ತಿಳಿದೆವು. ಆದರೆ ಹೀಗೆ ನರಳುತ್ತಿರುವ ರೋಗಿಯು ತನ್ನ ದಿನದಿನದ ಕಾರ್ಯಗಳನ್ನು ಹೇಗೋ ಒಂದು ರೀತಿಯಲ್ಲಿ ಮಾಡಿಕೊಂಡು ಹೋಗಲು ಸಾಧ್ಯವಾಗಿತ್ತು. ಆದರೆ ಆತಂಕವು ಅತ್ಯುತ್ಕಟವಾದಾಗ ದೈನಂದಿನ ಕಾರ್ಯಗಳನ್ನು ಮಾಡಲು ಸಾಧ್ಯವಾಗುವುದಿಲ್ಲ.

ನಲವತ್ತರ ಪ್ರಾಯ ಅವನಿಗೆ. ಸಾಕಷ್ಟು ಪುಷ್ಟವಾಗಿ ಬೆಳೆದಿದ್ದಾನೆ. ಚಿಕಿತ್ಸೆಗಾಗಿ ಬಂದವ ಕುರ್ಚಿಯ ಮೇಲೆ ಸ್ವಸ್ಥವಾಗಿ ಕುಳಿತುಕೊಳ್ಳಲಿಲ್ಲ. ಕುರ್ಚಿಯ ಅಂಚಿನ ಮೇಲೆ ಅರೆಕ್ಷಣ ಸೆಟೆದು ಕೂರುತ್ತಾನೆ. ತಟ್ಟಂತ ಎದ್ದು ಅರೆಕ್ಷಣ ನಿಲ್ಲುತ್ತಾನೆ. ನಂತರ ತಿರುಗಿ ಕೂರುತ್ತಾನೆ. ಎರಡು ಮಾತುಗಳನ್ನು ಆಡುತ್ತಾನೆ. ಸುತ್ತಲೂ ಬಿರಿ ಬಿರಿ ನೋಡುತ್ತಾನೆ. ಇನ್ನು ಯಾವುದೋ ಮಾತು ಆಡಲು ಪ್ರಾರಂಭಿಸುತ್ತಾನೆ. ಅದನ್ನೂ ಅರ್ಧದಲ್ಲಿ ನಿಲ್ಲಿಸುತ್ತಾನೆ. ನಿಮಿಷಕ್ಕೆ ಎರಡು ಬಾರಿ ಬಾಯನ್ನು ಒರೆಸಿಕೊಳ್ಳುತ್ತಾನೆ. ಹಣೆಯನ್ನು ಆಗಿಂದಾಗ್ಗೆ ಒರೆಸಿಕೊಳ್ಳುತ್ತಾನೆ. ಮುಳ್ಳಿನ ಮೇಲೆ ಕೂತಹಾಗೆ ಕೂತಿದ್ದಾನೆ.

ನಯವಾಗಿ ಮಾತನಾಡಿ, ವಿನಯದಿಂದ ಆದರಿಸಿ, ಸಮಾಧಾನವನ್ನು ಮಾಡಿದ ಮೇಲೆ, ಅವನ ಗೋಳು ಏನು? ಅವನ ನರಳಾಟ ಎಂತದು ಎಂದು ತಿಳಿಯಲು ಪ್ರಯತ್ನಿಸಲಾಯಿತು. ಸ್ವಲ್ಪಕಾಲ ತಾಳ್ಮೆಯಿಂದ ನಡಸಲಾಯಿತು. ಆದರೆ ರೋಗಿಯು ಏನನ್ನೂ ನೆಟ್ಟಗೆ ಹೇಳಲೊಲ್ಲ. ಡಾಕ್ಟರ ತಾಳ್ಮೆ ತಪ್ಪಿತು. ಅವರೂ ಉಪ್ಪು ಹುಳಿ ತಿಂದ ಮನುಷ್ಯರು. 'ತೆಪ್ಪಗೆ ಎರಡು ನಿಮಿಷ ಕೂತುಕೊಂಡು

ಕೇಳಿದ್ದಕ್ಕೆ ಜವಾಬು ಕೊಡ್ತೀಯಾ? ಅಥವಾ ಎದ್ದು ಹೋಗಿ ಇನ್ನೊಬ್ಬ ರೋಗಿಗೆ ಅವಕಾಶ ಮಾಡಿಕೊಡ್ತೀಯಾ?' ಎಂದು ರೇಗಿದರು. ನುಡಿದ ಮಾತುಗಳಿಗಿಂತ, ಅವರು ಆಡಿದ ಆವೇಶದ ಗಡುಸಿನ ದನಿಯು ರೋಗಿಗೆ ಷಾಕ್ ಕೊಟ್ಟಂತಾಯಿತು. ಸೆಟೆದುಕೊಂಡಿದ್ದರೂ, ತೆಪ್ಪಗೆ ಸ್ವಲ್ಪಹೊತ್ತು ಕುಳಿತುಕೊಂಡ. ಕಂಡವರೆದುರಿಗೆ ಅವಮಾನವಾದರೆ, ಮಾನಸ್ಥನ ಮುಖವು ಇಳಿದು ಹೋಗುಲ್ಲವೇ, ಹಾಗೆ ಅವನ ಮುಖವು ಇಳಿದು ಹೋಗಿತ್ತು. ಉತ್ಕಟ ಆತಂಕದಿಂದ ನರಳುತ್ತಿದ್ದರೂ, ಮೂಲಭೂತವಾಗಿ ಇವನ ಮನಸ್ಸು ಹತೋಟಿಯಲ್ಲಿದೆ ; ಆದುದರಿಂದಲೇ ಅವಮಾನ ಆದಾಗ ಮುಖ ಇಳಿಯಿತು ಎಂದನಿಸಿತು. ಅವಮಾನವು ಆಗದೆ ಇದ್ದರೆ, ಅಭಿಮಾನವೇ ಕಳೆದುಹೋಗಿದ್ದಿದ್ದರೆ, ಮನಸ್ಸು ಛಿದ್ರವಾಗಿದೆ ಎಂದು ತಿಳಿಯುತ್ತಿತ್ತು. ಆಗ ಯಾವುದಾದರೂ ಒಂದು ತೆರನ ಹುಚ್ಚು, ಆತಂಕದ ಜತೆಗೆ ಕಾಡುತ್ತಿದೆ ಎಂದು ಖಂಡಿತವಾಗುತ್ತಿತ್ತು. ಮುಖವನ್ನು ಮುದುಡಿಕೊಂಡೇ ಅವನು ಉತ್ತರಗಳನ್ನು ನೀಡಿದ, ಸಾಕಷ್ಟು ಸುಸಂಬದ್ಧವಾಗಿಯೇ; ಕೇಳಿದ ಪ್ರಶ್ನೆಗಳಿಗೆ ನೇರ ಉತ್ತರವನ್ನು ಕೊಟ್ಟ.

ಚೆನ್ನಾಗಿ ಓದಿ, ಯಶಸ್ವಿಯಾಗಿ ಪ್ಯಾಸು ಮಾಡಿದ್ದ ವೆಂಕಟಯ್ಯ. ಪ್ರೌಢ ಶಿಕ್ಷಣಕ್ಕೆಂದು ವಿದೇಶೀ ಪ್ರವಾಸವನ್ನು ಮಾಡಲು ಅವಕಾಶವು ದೊರಕಿತ್ತು. ಆದರೆ ಮರಣೋನ್ಮುಖಳಾಗಿದ್ದ ತಾಯಿಯನ್ನು ಆ ಸ್ಥಿತಿಯಲ್ಲಿ ಬಿಟ್ಟು, ದೂರ ದೇಶ ಹೋಗಲು ಅವನಿಗೆ ಉತ್ಸಾಹವಿರಲಿಲ್ಲ. 'ಇಲ್ಲೇ ಇರಪ್ಪಾ, ಕಡೆಗಾಲದಲ್ಲಿ ನಿನ್ನ ಕೈಯಿಂದ ಒಂದು ಉದ್ಧರಣೆ ನೀರು ಕುಡಿದು ಕಣ್ಣುಮುಚ್ಚುತ್ತೇನೆ' ಎಂದು ಅಮ್ಮನೂ ಒತ್ತಾಯಪಡಿಸಿದಳು. ಆದಕಾರಣ ಇದ್ದ ಚಾಕರಿಯಲ್ಲೇ ಉಳಿದು ಕೊಂಡ. ಪ್ರೌಢ ವಿದ್ಯಾಭ್ಯಾಸದ ಅವಕಾಶವು ಪುನಃ ದೊರೆಯಲಿಲ್ಲ. ತಾಯಿಯೂ ಸಾಯಲಿಲ್ಲ. ಅವನಿಗಿಂತ ಕಿರಿಯರಾಗಿದ್ದವರು ವಿದೇಶೀವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಹಿಂತಿರುಗಿ, ಇವನ ಮೇಲೆ ಅಧಿಕಾರವನ್ನು ಚಲಾಯಿಸುವಂತೆ ಆಗಿತ್ತು.

ಚಾಕರಿಗೆ ಸೇರಿದ ಕೆಲವು ದಿನಗಳಲ್ಲಿ ಯಥಾ ಪ್ರಕಾರ ಮದುವೆಯೂ ಆಗಿತ್ತು. ಒಮ್ಮೆ ಮೆರೆದಾಡಿದ ಶ್ರೀಮಂತರಾಗಿದ್ದು, ಈಗ ದುಃಸ್ಥಿತಿಗೆ ಇಳಿದಿದ್ದ ಮನೆಯ ಹೆಣ್ಣು, ಆ ಕಾರಣದಿಂದಲೇ ಬಡ ವೆಂಕಟಯ್ಯನನ್ನು ಮದುವೆಯಾಗಲು ಒಪ್ಪಿಕೊಂಡಿದ್ದು. ಗಂಡಹೆಂಡಿರ ಮನಸ್ಸು ಪೂರ್ವ ಪಶ್ಚಿಮ ಆಗಿತ್ತು. ಆದರೂ ಯೌವನದ ಅಮಲಿನಿಂದಾಗಿ ಸಂಸಾರ ಸಾಗುತ್ತಿತ್ತು. ಇಬ್ಬರು ಹೆಣ್ಣುಮಕ್ಕಳಾಗಿದ್ದರು. ಇಬ್ಬರೂ ತಾಯಿಯನ್ನು ರೂಪದಲ್ಲೂ ಗುಣದಲ್ಲೂ ಹೋತುಕೊಂಡಿದ್ದರು.

ತೌರಿನ ಒಂದು ಕಾಲದ ವೈಭವವನ್ನೂ, ಸ್ವಚ್ಛಂದ ಮಜದ ಬಾಳನ್ನೂ ತಾಯಿಯು ಮರೆತಿರಲಿಲ್ಲ. ಹೆಣ್ಣುಮಕ್ಕಳೆದುರಿಗೆ ಗತವೈಭವವನ್ನು ಹೇಳಿಕೊಂಡು ಆಕೆ ಹಿಗ್ಗುತ್ತಿದ್ದಳು. ಆರುನೂರು ಸಂಪಾದಿಸುತ್ತಿದ್ದ ಗಂಡ ಆಕೆಯ ಪಾಲಿಗೆ ಕಡು ಬಡವ. ಪ್ರತ್ಯಕ್ಷ ನಡವಳಿಕೆಯಲ್ಲಿ ಸ್ಪಷ್ಟವಾಗಿ ತೋರಿಸದೆ ಇದ್ದರೂ, ಗಂಡನನ್ನು ಸ್ವಲ್ಪ ಹೀನವಾಗಿ ಕಾಣುತ್ತಾಳೆ ಎಂಬುದು ಎಲ್ಲರಿಗೂ ತಿಳಿದಿತ್ತು. ವೆಂಕಟಯ್ಯನಿಗೂ ಕೂಡ.

ವಿದೇಶಕ್ಕೆ ಹೇಗಾದರೂ ಹೋಗಿ, ಪ್ರೌಢ ಶಿಕ್ಷಣವನ್ನು ಪಡೆದು ಬಂದು, ಚಾಕರಿಯ ಅಂತಸ್ತನ್ನು ಎತ್ತರಿಸಿಕೊಳ್ಳಬೇಕು ಎಂದು ಕೆಲವು ವರ್ಷಗಳಾದ ಮೇಲೆ ವೆಂಕಟಯ್ಯ ನಿರ್ಧರಿಸಿದ. ಆದರೆ ಈ ಇಳಿವಯಸ್ಸಿನಲ್ಲಿ ಓದಹೋಗುವುದು, ಪ್ರೌಢ ವ್ಯಾಸಂಗದಲ್ಲಿ ಉತ್ತೀರ್ಣನಾಗುವುದು ನನ್ನಿಂದ ಸಾಧ್ಯವೇ ಎಂಬ ಶಂಕೆಯು ವೆಂಕಟಯ್ಯನನ್ನು ಕಾಡುತ್ತಲಿತ್ತು. ಆದರೆ 'ದೊಡ್ಡ ಅಧಿಕಾರಿ' ಎಂಬ ಪ್ರಶಸ್ತಿಯನ್ನು ಹೆಂಡತಿಯ ಮುಂದೆ ಹಿಡಿದರೆ, ಸಂಸಾರದಲ್ಲಿ ಹೆಚ್ಚು ಸುಖ ದೊರಕಬಹುದು ಎಂದವನ ಹಂಬಲ. ಕಡೆಗೂ ಸರ್ವ ಸಾಹಸಪಟ್ಟು, ತನ್ನ ಸ್ವಂತ ಖರ್ಚಿನಲ್ಲಿ ವಿದೇಶೀ ವ್ಯಾಸಂಗಕ್ಕೆ ತೆರಳಿದ.

ಇತ್ತ ಮೋಜು ಜೀವನವನ್ನು ಬಯಸಿದ್ದ ಹೆಂಡತಿ, ಮರೆ ಮರೆಯಲ್ಲಿಯೆ ಮಜ ಜೀವನವನ್ನು ನಡೆಸುತ್ತಿದ್ದಳು. ವಿದೇಶಕ್ಕೆ ಗಂಡ ಹೋದ ಮೇಲೆ, ಅಡ್ಡಿ ಆತಂಕಗಳು ದೂರವಾದುವು ; ಸ್ವೇಚ್ಛಾಚಾರಿಯಾದಳು, ಕೇರಿಯಲ್ಲೆಲ್ಲ ಗುಲ್ಲು ಹರಡಿತು. 'ಮನೆಯಲ್ಲಿರುವವರೆಲ್ಲಾ ಸವತಿಯರೇ ಕಣೋ !' ಎಂದು ಪೋಲೀ ಹುಡುಗರು ಬಾಯಿಗೆ ಬಂದಂತೆ ಆಡತೊಡಗಿದರು. ಈ ಸುದ್ದಿಯನ್ನು ಹಿತೈಷಿಗಳೊಬ್ಬರು, ಕೇಬಲ್ ಮೂಲಕ ವೆಂಕಟಯ್ಯನಿಗೆ ತಿಳಿಸಿದರು. 'ಬೇಗ ಹಿಂತಿರುಗಿ ಬಾ, ಇಲ್ಲದಿದ್ದರೆ ಹೆಣ್ಣು ಮಕ್ಕಳ ಭವಿಷ್ಯ ಬರಡಾಗುತ್ತದೆ' ಎಂದು ಬುದ್ಧಿವಾದದ ಕಾಗದವನ್ನು ಬರೆದರು.

ವಿದೇಶೀ ಪ್ರೌಢ ವ್ಯಾಸಂಗವು ಆ ವಯಸ್ಸಿನಲ್ಲಿ ಕಠಿಣ ಎಂದು ಆ ವೇಳೆಗೆ ವೆಂಕಟಯ್ಯನಿಗೆ ಗೊತ್ತಾಗಿತ್ತು. ಹುಟ್ಟೂರಿನಿಂದ ಈ ಕೆಟ್ಟ ಸುದ್ದಿಯೂ ಬಂದಿತು. ಇದನ್ನೇ ನೆಪಮಾಡಿಕೊಂಡು ವೆಂಕಟಯ್ಯ ಓದಿಗೆ ತುಂಡುಹಾಕಿ, ಮನೆಗೆ ದುಡುಂ ಎಂದು ಹಿಂತಿರುಗಿದ.

ಇಷ್ಟೆಲ್ಲಾ ಕಷ್ಟ ಕಾರ್ಪಣ್ಯ ; ಅವಮಾನ ಬೇಸರ ; ಕೋಪ ತಾಪ ; ಎಲ್ಲವೂ ಒಟ್ಟಿಗೆ ಉಂಟಾದರೆ, ಅವುಗಳ ಪರಿಹಾರ ಮಾರ್ಗವು ಕಾಣದೆ ಇದ್ದರೆ, ಯಾವನ ಮನಸ್ಸು ತಾನೇ ನಿಶ್ಚಿಂತವಾಗಿರಲು ಸಾಧ್ಯ ? ಊರಿಗೆ ಹಿಂತಿರುಗಿದವನು

ಚಾಕರಿಗೆ ಹಾಜರಾಗಲಿಲ್ಲ. ಹೇಗೂ ಇನ್ನೂ ಒಂದು ವರ್ಷ ರಜವಿತ್ತು. ನಿಂತಲ್ಲಿ ಕ್ಷಣಕೂಡ ನಿಲ್ಲಲಾರ. ಸರಿಯಾಗಿ ಕುಳಿತು ಎರಡು ತುತ್ತು ಉಣಲಾರ. ನಿದ್ರೆಯನಕ ಅವನ ಪಾಲಿಗೆ ಹಳೆಯ ಕನಸಾಗಿತ್ತು. ಆಶಾಗೋಪುರಗಳೆಲ್ಲವೂ ಕಳಚಿ ಬಿದ್ದಿದ್ದುವು. ಉಳಿದಿದ್ದುದು ಚಾಕರಿ, ಮತ್ತು ಸಂಸಾರ. ಕೆಟ್ಟದುದರಲ್ಲಿ ಮಧ್ಯಸ್ಥ ಎಂಬಂತೆ, ಉಳಿದುದನ್ನು ಉಳಿಸಿಕೊಂಡರೆ ಸಾಕು ಎಂದನಿಸಿತ್ತು.

ಅವನ ಹೇಳಿಕೆಯಿಂದ ಅರ್ಧ; ನೆಂಟರು ಸ್ನೇಹಿತರು ಹೇಳಿದುದರಿಂದ ಇನ್ನರ್ಧ; ಅವನ ಬೇನೆಯ ಕಾರಣಗಳನ್ನು ತಿಳಿಯಲಾಯಿತು. ಆತಂಕವು ಅತ್ಯುತ್ಕಟವಾಗಿದ್ದರೂ, ಮನಸ್ಸು ಇನ್ನೂ ಮುರಿದು ಹೋಗಿಲ್ಲ ಎನ್ನುವ ಭರವಸೆಯು ಇತ್ತು. ಅದುದರಿಂದ ಚಿಕಿತ್ಸೆಯು ಕೆಲವು ತಿಂಗಳು ಹಿಡಿದರೂ, ಅಂತಿಮವಾಗಿ ಗುಣಪಡಿಸುತ್ತದೆ ಎಂದು ಖಂಡಿತವಾಯಿತು.

ಡಾಕ್ಟರ್ ರೇಗಿ ಮಾತನಾಡಿದ Shockನಿಂದ ರೋಗಿಯು, ಹೇಳಿದ್ದನ್ನು ಕೇಳುವ ಸ್ಥಿತಿಗೆ ಬಂದಿದ್ದ. ಹೇಳಿದುದನ್ನು ಕೇಳಿಸಿಕೊಂಡರೂ ವಿಷಯವು ಮನದಟ್ಟಾಗುತ್ತದೆ ಎನ್ನುವ ಧೈರ್ಯವಿರಲಿಲ್ಲ. ಆದಕಾರಣ ಔಷಧಿಗಳೂ ಅಗತ್ಯವಾಗಿದ್ದವು. ಸಾಕಷ್ಟು ಧಾರಾಳವಾಗಿ ಶಾಂತಿಕಾರಕ ಔಷಧಿಗಳನ್ನು ಉಪಯೋಗಿಸಲಾಯಿತು. ಕೆಲವು ದಿನಗಳಲ್ಲಿ ನಿದ್ರೆಯನ್ನು ಮಾಡುವಂತಾದ. ಹಸಿವು ಉಂಟಾಗಿ ಉಣ್ಣಲೂ ಆರಂಭಿಸಿದ. ಅನಂತರ ಡಾಕ್ಟರು ಹೇಳಿದುದನ್ನು ಗ್ರಹಿಸುವ ಶಕ್ತಿಯನ್ನು ಪಡೆದುಕೊಂಡ. ವಿದ್ಯಾವಂತ ; ಸ್ವಾಭಾವಿಕವಾಗಿ ಜಾಣ; ಆಸೆಗೆ ಮಿತಿಯಿಲ್ಲ ಎಂಬುದನ್ನು ಅರಿತುಕೊಂಡ. ವಾಸ್ತವಿಕ ಬಾಳಿಗೂ, ಮನಸ್ಸಿನ ಆಶಾಬಾಳಿಗೂ ಅಜಗಜಾಂತರವಿದೆ ಎಂಬುದನ್ನು ಹಲವಾರು ಗೆಳೆಯರ ನಿದರ್ಶನದಿಂದ ವಿವರಿಸಿದಾಗ, 'ಅಂದ ಮೇಲೆ ನನ್ನ ಬಾಳೇ ವಾಸಿಯಲ್ಲವೆ ?' ಎಂದು ಹೇಳಿದ.

ಹೆಂಡತಿ ಮಕ್ಕಳಿಗೂ ಇವನ ಬೇನೆಯ ರೀತಿಯಿಂದ ಹೆದರಿಕೆಯುಂಟಾಗಿತ್ತು. ಇವನು ದುಡಿಯುವ ತನಕ ಅವರದೂ ಒಂದು ಬಾಳು. ಇವನೇನಾದರೂ ತಲೆಕೆಡಿಸಿಕೊಂಡು ಚಾಕರಿ ಕಳೆದುಕೊಂಡರೆ, ಅವರ ಪಾಡು ನಾಯಿಪಾಡು ಎಂಬ ಅರಿವು ಮೂಡಿತ್ತು. ಮೋಜು ಜೀವನದ ಮಾಯಾಜಾಲವು ಹರಿಯತೊಡಗಿತು. ಹಳೇ ಗಂಡನ ಪಾದವೇ ಗತಿ ಎಂದು ಅನಿಸಿತು. ಹಾಗಾಗಿ ಅನುಕಂಪದ ನಡವಳಿಕೆಯನ್ನು ಸಂಸಾರದಲ್ಲಿ ವೆಂಕಟಯ್ಯ ಕಾಣತೊಡಗಿದ, ಹಳೆಯದನ್ನೆಲ್ಲಾ ಮರೆತ.

ಕೇವಲ ಎರಡು ಮೂರು ತಿಂಗಳುಗಳಲ್ಲಿ 'ಇನ್ನು ಮುಂದೆ ಚಾಕರಿಗೆ

ಹೋಗುತ್ತೇನೆ, ದಕ್ಷತೆಯಿಂದ ಕೆಲಸ ಮಾಡುವ ಭರವಸೆ ಹುಟ್ಟಿದೆ' ಎಂದ. ಡಾಕ್ಟರ ಒಪ್ಪಿಗೆಯನ್ನು ಪಡೆದು ಚಾಕರಿಯ ಮೇಲೆ ಹಾಜರಾದ. ಕೆಲವು ದಿನಗಳಲ್ಲಿ ದಕ್ಷತೆಯಿಂದ ಕೆಲಸವನ್ನೂ ಮಾಡುವಂತಾದ.

ಇಷ್ಟು ಬೇಗ ಗುಣವಾಗುತ್ತಾನೆ ಎಂದು ಡಾಕ್ಟರಿಗೂ ಅನಿಸಿರಲಿಲ್ಲ. ಆದರೂ ದೈವಕೃಪೆಯೊಂದಿದ್ದರೆ ಆತಂಕವು ಎಷ್ಟೇ ಉತ್ಕಟವಾಗಿದ್ದರೂ, ನಿರೀಕ್ಷಣೆಗಿಂತ ಶೀಘ್ರವಾಗಿ ಗುಣಹೊಂದುತ್ತದೆ.

**೭. ಆತಂಕದ ಘೋರ ಪರಿಣಾಮ**

ಆತಂಕವು ಅತ್ಯುತ್ಕಟವಾದಾಗ, ಮನಸ್ಸು ತೀವ್ರ ಭ್ರಮೆಯಿಂದ ತುಂಬಿಕೊಂಡು, ವಾಸ್ತವಿಕ ಪ್ರಪಂಚದ ಅರಿವೇ ಇಲ್ಲದಂತಾಗಬಹುದು.

ಒಂದು ಬೆಳಗಿನ ಝಾವ ಸಂಸ್ಕೃತದ ಹಳೆಯ ಮಾಸ್ತರು ಮನೆಗೆ ಬಂದರು. ತುಂಬಾ ಖಿನ್ನರಾಗಿದ್ದರು. 'ನಿನಗೆ ಪೊಲೀಸ್ ಕಮೀಷನರ ಪರಿಚಯವಿದೆಯಂತೆ, ಅವರಿಗೆ ಒಂದು ಮಾತು ಹೇಳಿ ನನಗೆ ಸಹಾಯ ಮಾಡಬೇಕು' ಎಂದು ಹೇಳುತ್ತಾ ಮಾತನ್ನಾರಂಭಿಸಿದುದು. 'ನನ್ನ ಕಿರಿಯ ಅಳಿಯ ನಾಲ್ಕು ದಿನಗಳಿಂದ ನಾಪತ್ತೆಯಾಗಿದ್ದಾನೆ ; ಕಚೇರಿಗೂ ಹೋಗಿಲ್ಲ, ರಜಕ್ಕೂ ಬರೆದು ಹಾಕಿಲ್ಲ. ಅವನಿನ್ನೂ ಇದ್ದಾನೋ, ಆತ್ಮಹತ್ಯೆಯನ್ನೇ ಮಾಡಿಕೊಂಡಿದ್ದಾನೋ, ಯಾವುದೂ ತಿಳಿಯದು. ನಮಗೆ ತಿಳಿದ ಹಾಗೆ, ಅಂತಹ ಭೀಕರವಾದ ಕಷ್ಟವಾಗಲೀ ಕಾರ್ಪಣ್ಯವಾಗಲೀ ಅವನಿಗಿರಲಿಲ್ಲ. ಯಾಕೆ ಹೀಗಾಯಿತೋ ದೇವರೇ ಬಲ್ಲ. ಮಗಳನಕ ಆವತ್ತಿನಿಂದ ತೊಟ್ಟು ನೀರು ಕುಡಿದಿಲ್ಲ. ಗೊಳೋ ಎಂದು ಅಳುತ್ತಾ ಇದಾಳೆ. ಪೊಲೀಸ್ ಕಂಪ್ಲೈಂಟ್ ಕೊಟ್ಟರೆ ಊರಿಗೆಲ್ಲಾ ಸುದ್ದಿ ಹರಡುತ್ತೆ, ನಮ್ಮ ಮನೆತನದ ಮಾನ ಹೋಗಿಬಿಡಿತ್ತೆ. ಪೊಲೀಸ್ ಕಮೀಷನರಿಗೆ ಈ ವಿಷಯವನ್ನು ತಿಳಿಸಿ, ನನ್ನ ಅಳಿಯನನ್ನು ಗುಟ್ಟಾಗಿ ತಲಾಷ್ ಮಾಡುವಂತೆ, ಕೇಳಬೇಕಪ್ಪಾ. ಅಷ್ಟು ಮಾಡಿ ಕೊಡ್ತೀಯ?' ಎಂದು ಗೋಗರೆಯುತ್ತಾ ಕೇಳಿದರು. 'ಇದಕ್ಕೇನು ಮುಟ್ಟಿಸಬೇಕು? ನಿಮ್ಮ ಮಗಳು ಅಂದ ಮೇಲೆ ನನಗೂ ಕಿರಿಯ ತಂಗಿ ಇದ್ದ ಹಾಗೆ, ಖಂಡಿತವಾಗಿ ಕೇಳಿಕೋತೀನಿ' ಎಂದು ಹೇಳಿ, ಅಳಿಯನ ವಿವರಗಳನ್ನು ಮಾಸ್ತರಿಂದ ಪಡೆದು, ಕಮೀಷನರ್ ಬಳಿಗೆ ಹೋದೆ. ಎಲ್ಲಾ ವಿಷಯವನ್ನೂ ಅವರಿಗೆ ತಿಳಿಸಿದೆ. ಪ್ರಚಾರವಾಗದ ಹಾಗೆ ತಲಾಷ್ ಮಾಡಿಸುತ್ತೀನಿ ಎಂದು ಅವರೂ ಒಪ್ಪಿಕೊಂಡರು.

ಮೂರನೆಯ ಸಂಜೆ ಸಂಸ್ಕೃತದ ಮಾಸ್ತರು ತಿರುಗಿ ಬಂದರು. 'ತಾನಾಗಿಯೇ

ಕಿರಿಯ ಅಳಿಯ ಮನೆಗೆ ಬಂದಿದ್ದಾನೆ, ಯಾರೋ ಮಂಕು ಬೂದಿಯನ್ನು ಎರಚಿ ಕರೆದುಕೊಂಡು ಹೋಗಿದ್ದರು ಅಂತ ಕಾಣುತ್ತೆ, ಈಗಲೂ ಮಂಕು ಹಿಡಿದವನಂತೆಯೇ ಇದ್ದಾನೆ, ಒಂದು ಮಾತನ್ನೂ ಆಡುವುದಿಲ್ಲ, ಮುಖದಲ್ಲಿ ಕಳೆಯೇ ಇಲ್ಲ. ನನ್ನ ಜತೆ ಈಗಲೇ ಬಂದು ಪರೀಕ್ಷೆ ಮಾಡಪ್ಪ' ಎಂದು ಕೇಳಿಕೊಂಡರು. ಅವರೊಡನೆ ಹೋಗಿ ರೋಗಿಯನ್ನು ಪರೀಕ್ಷೆ ಮಾಡಿದೆ. 'ತೀವ್ರ ರೀತಿಯ ಭ್ರಮೆಯು ಅವನನ್ನು ಆವರಿಸಿದೆ. ತಾನು ಯಾರು, ಏನು, ಎಲ್ಲಿದ್ದೇನೆ, ಎನ್ನುವುದೂ ಮರೆತುಹೋಗಿದೆ. ಅಂದರೆ ಯಾವುದೋ ಆತಂಕವು ಅತ್ಯುಗ್ರವಾಗಿದೆ' ಎನ್ನುವುದು ಸ್ಪಷ್ಟವಾಯಿತು. ಗಾಢ ನಿದ್ರೆ ಬರುವಂತೆ ಚಿಕಿತ್ಸೆ ನಡೆಸಿ, 'ನಾಳೆ ಬಂದು ನೋಡುತ್ತೇನೆ' ಎಂದು ಹೇಳಿ ಹಿಂತಿರುಗಿದೆ. ಪೊಲೀಸ್ ಕಮೀಷನರಿಗೆ ಈ ಸುದ್ದಿಯನ್ನು ಫೋನ್ ಮೂಲಕ ತಿಳಿಸಿದೆ.

ಮಾರನೆಯ ಬೆಳಿಗ್ಗೆ ಅವನನ್ನು ನೋಡಹೋದೆ. ಹಿಂದಿನ ರಾತ್ರಿ ಚೆನ್ನಾಗಿ ನಿದ್ದೆಮಾಡಿದನಾದರೂ ಮಧ್ಯೆಮಧ್ಯೆ ಕನವರಿಸಿ ಬೆಚ್ಚುತ್ತಿದ್ದನೆಂಬುದು ತಿಳಿಯಿತು. ನಾನು ಹೋಗುವ ವೇಳೆಗೆ ಅವ ಎಚ್ಚರಗೊಂಡಿದ್ದ. ಕೊಟ್ಟ ತಿಂಡಿ ಕಾಫಿಯನ್ನು ಯಾಂತ್ರಿಕವಾಗಿ ತಿಂದು ಮುಗಿಸಿದ್ದ. ಎರಡು ಮೂರು ದಿನಗಳು, ಚೆನ್ನಾಗಿ ನಿದ್ರೆ ಬರುವಂತೆ ಮಾಡಲಾಯಿತು. ಆನಂತರ ಅವನ ಮುಖದಲ್ಲಿ ಜೀವಕಳೆಯು ಬರಲಾರಂಭಿಸಿತು. ಆಗ ಅವನೊಡನೆ ಮಾತನಾಡಿ, ಅವನಿಂದ ಉತ್ತರವನ್ನು ಪಡೆಯಲು ಸಾಧ್ಯವಾಯಿತು.

ತಾಯ್ತಂದೆಯರನ್ನು ಚಿಕ್ಕಂದಿನಲ್ಲಿ ಕಳೆದುಕೊಂಡು, ದೊಡ್ಡ ಅಣ್ಣ, ಅತ್ತಿಗೆಯರ ಆಶ್ರಯದಲ್ಲಿ ಓದಿದ್ದ. ಕಾಲೇಜ್ ವ್ಯಾಸಂಗದ ಹಂತದಲ್ಲಿ ಎರಡು ಮೂರು ಬಾರಿ ಕುಂಟಿದಾಗ, ಇನ್ನು ಓದು ಸಾಕು, ಅಣ್ಣ ಅತ್ತಿಗೆಯರಿಗೆ ಹೊರೆಯಾಗುವುದು ಬೇಡ, ಎಂದಂದುಕೊಂಡ. ಸರ್ಕಾರಿ ಚಾಕರಿಯೊಂದನ್ನು ಹಿಡಿದ. ಅಣ್ಣ ಅತ್ತಿಗೆಯರು ತನ್ನ ಪಾಲಿಗೆ ಪ್ರತ್ಯಕ್ಷ ದೇವರು ಎಂದುಕೊಂಡಿದ್ದ. ಅಷ್ಟು ಆದರದಿಂದ ಅವರುಗಳು ಆರೈಕೆ ಮಾಡಿ ಬೆಳೆಸಿದ್ದರು. ಮದುವೆಯ ಪ್ರಸ್ತಾಪವು ಬಂದಾಗ 'ನಿನಗೆ ಸೂಕ್ತಕಂಡ ಹೆಣ್ಣನ್ನು ಮಾಡಿಕೋ' ಎಂದು ಸ್ವಾತಂತ್ರ್ಯವನ್ನೂ ಕೊಟ್ಟಿದ್ದರು. ಉದ್ಯೋಗಸ್ಥ ತರುಣಿಯೊಬ್ಬಳನ್ನು ಮದುವೆಯಾಗಲು ಒಪ್ಪಿಕೊಂಡ. ಅಣ್ಣ, ಅತ್ತಿಗೆಯರೂ ಸಂಭ್ರಮದಿಂದ ಮದುವೆಮಾಡಿದರು. ಅವಿಭಕ್ತ ಕುಟುಂಬ. ಹಂಚಿಕೊಳ್ಳುವುದಕ್ಕೆ ಯಾವ ಆಸ್ತಿಯು ಇರದಿದ್ದರೂ ಅವಿಭಕ್ತ ಕುಟುಂಬ, ಆದುದರಿಂದಲೇ ಅನ್ಯೋನ್ಯವಾಗಿಯೂ ಇದ್ದರು. ಗಂಡ ಹೆಂಡತಿ ಇಬ್ಬರೂ ದುಡಿಯುವುದಕ್ಕೆ ಹೋಗುತ್ತಿದ್ದುದರಿಂದ, ಸಂಸಾರದ ನಿರ್ವಹಣೆಯ ಹೊಣೆಯು

ಅತ್ತಿಗೆಯ ಮೇಲೆ ಬಿದ್ದಿತ್ತು. ಹೊಸದಾಗಿ ಬಂದ ಕಿರಿಯ ವಾರಗಿತ್ತಿಯೂ, ಮನೆಯಲ್ಲಿದ್ದಾಗ ಅಡಿಗೆಯ ಮನೆಯಲ್ಲಿ ನೆರವಾಗುತ್ತಿದ್ದಳು. ಹೇಳಿದ ಕೆಲಸವನ್ನು ನಗುನಗುತ ಮಾಡುತ್ತಿದ್ದಳು. 'ಇಂತಹ ಒಳ್ಳೆಯ ಹೆಣ್ಣು ನನ್ನ ಮೈದುನನಿಗೆ ಸಿಕ್ಕಿದಳಲ್ಲಾ' ಎಂದು ದೊಡ್ಡಾಕೆಯು ಹಿಗ್ಗಿಯೂ ಇದ್ದಳು.

ಒಂದು ಸಂಜೆ ಮೈದುನ ಮನೆಗೆ ಬಂದ. ಅಡಿಗೆಯ ಮನೆಯಲ್ಲಿ ಅತ್ತಿಗೆಯು ಇದ್ದಳು. ಕೈಕಾಲು ತೊಳೆದುಕೊಂಡ ಮೇಲೆ ಅತ್ತಿಗೆಯ ಬಳಿಗೆ ಹೋಗಿ ಎಂದಿನಂತೆ 'ಕಾಫಿ ಕೊಡಮ್ಮ, ತಿನ್ನಲು ಏನಾದರೂ ಇದೆಯೇ' ಎಂದು ವಿನಯವಾಗಿಯೇ ಕೇಳಿದ. ಆಕೆಗೆ ಅಂದು ಎಂತದೋ ಬೇಜಾರು. ಯಾವ ತಲೆನೋವು ಬಂದಿತ್ತೋ ಏನೋ, 'ನಿನ್ನ ಹೆಂಡತಿಯ ಕೈಯಲ್ಲಿ ನಿನಗೇನು ಬೇಕೋ ಅದನ್ನು ಮಾಡಿಸಿಕೋ' ಎಂದಳು. ಧ್ವನಿಯಲ್ಲಿ ಸಿಡುಕೂ ಇತ್ತು. 'ಕೆಲಸಕ್ಕೆ ಹೋಗಿದ್ದಾಳೆ. ಇನ್ನೂ ಹಿಂತಿರುಗಿ ಬಂದಿಲ್ಲ, ಅವಳನ್ಯಾಕೆ ಅಂತೀ' ಎಂದ. 'ಅನ್ನೋದೇನು ಬಂತು, ಆ ಮಹಾರಾಣಿಗೂ ನಿನಗೂ ಜೀತದಾಳಲ್ಲ, ನಾನು' ಎಂದಳು ಅತ್ತಿಗೆ. ಇವನಿಗೂ ರೇಗಿತು, ಮಾತಿಗೆ ಮಾತು ಬೆಳೆಯಿತು. 'ಚಿಕ್ಕಂದಿನಿಂದಲೂ ಸಾಕಿ ಸಲಹಿದ ನಾನು ಮಾಡಿದ್ದು ತಪ್ಪು, ಅಂದಿದ್ದು ತಪ್ಪು. ಮೊನ್ನೆ ನಿನ್ನೆ ಬಂದ ನಿನ್ನ ಹೆಂಡತಿಯನ್ನು ವಹಿಸಿಕೊಂಡು ಮಾತಾಡ್ತೀಯಲ್ಲ ! ನಿನ್ನ ಗರ್ವ ಎಷ್ಟು ? ಎಲ್ಲಾದರೂ ನಾಶವಾಗಿ ಹೋಗು, ಹಾಳಾಗಿಹೋಗು' ಎಂದು ಹೇಳಿ ತಪ್ಪಲೆ ಕುಕ್ಕಿದಳು.

'ನಾಶವಾಗಿ ಹೋಗು, ಹಾಳಾಗಿ ಹೋಗು' ಎನ್ನುವ ಮಾತುಗಳನ್ನು ಕೇಳಿದಾಗ, ಇವ ಹೊರಕ್ಕೆ ಬಂದ. ಹೆತ್ತ ತಾಯಿಗಿಂತಲೂ ಹೆಚ್ಚು ಆದರದಿಂದ ಆತನಕ ಕಾಪಾಡಿದ ಹಿರಿಯಾಕೆ 'ನಾಶವಾಗಿ ಹೋಗು' ಎಂದರೆ ಅದು ದಿಟವಾಗಿಬಿಡುತ್ತದೆ, ಎನ್ನುವ ತೀವ್ರ ಭಯವುಂಟಾಯಿತು. ರೇಗಿದ್ದ ಮನಸ್ಸಿಗೆ ಅತಿ ಭಯವು ಬಡಿದಾಗ ದಿಗ್ಭ್ರಮೆ ಹಿಡಿದಂತಾಯಿತು. ಮನೆಯನ್ನು ಬಿಟ್ಟು ಹೊರಟ. ಎಲ್ಲಿಗೆ ಎಂದು ಯೋಚಿಸುವ ಸ್ಥಿತಿಯಲ್ಲಿರಲಿಲ್ಲ. ಎಲ್ಲಾದರೂ ಬಲು ದೂರ ಹೋಗಬೇಕು, ಆ ಶಾಪದಿಂದ ಬಹಳ ದೂರವಾಗಬೇಕು ಎನ್ನುವುದೊಂದೇ ಆತುರ, ಅದೊಂದೇ ಕಾರತ.

ವಿಮನಸ್ಕನಾಗಿ ಹೋಗುತ್ತಿದ್ದವನ ಹಾದಿಯಲ್ಲಿ ಬಸ್ ನಿಲ್ದಾಣವಿತ್ತು. ಎದುರು ಕಂಡ ಬಸ್ಸಿನಲ್ಲಿ ಕುಳಿತುಕೊಂಡ. ಏನು ಮಾಡುತ್ತಿದ್ದೀನಿ ಎಂದು ತಿಳಿದರೆ ತಾನೆ ? ಬಸ್ ಹೊರಟಿತು. ಸ್ವಲ್ಪ ದೂರ ಹೋದ ಮೇಲೆ, ಇವನ ಬಳಿಗೆ ಕಂಡಕ್ಟರ್ ಬಂದು ಯಾವ ಊರಿಗೆ ಟಿಕೆಟ್ ಬೇಕು ? ಎಂದು ಕೇಳಿದ. ಯಾಂತ್ರಿಕವಾಗಿ ಜೇಬಿಗೆ ಕೈ ಹಾಕಿದ, ಅಲ್ಲೇನಿತ್ತು ? ಲೊಳಲೊಟ್ಟೆ. ಪೆಂಗುಪೆಂಗಾಗಿ

ನೋಡಿದ, ಯಾವ ಮಾತನ್ನೂ ಆಡಲೊಲ್ಲ. ಕಂಡಕ್ಟರು ಕೆಟ್ಟಕೆಟ್ಟದಾಗಿ ಬೈದರೂ ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಸುಮಾರು ಮೂವತ್ತು ಮೈಲಿಗಳೂ ಆದಮೇಲೆ, ಬಸ್ಸಿನ ಮೊದಲ ನಿಲ್ದಾಣವು ಸಿಕ್ಕಿತು. ಬಸ್ಸಿನಿಂದ ಇವನನ್ನು ಕಂಡಕ್ಟರ್ ಹೊರಕ್ಕೆ ದೂಡಿದ. ಕಿಮಕ್ಕಮಕ್ ಅನ್ನದೆ ಇವನೂ ಇಳಿದ. ಎದುರಿನಲ್ಲಿ ಒಂದು ಸಣ್ಣ ಕೆರೆಯೊಂದಿತ್ತು. ಅದರ ಏರಿಯ ಬಳಿ ಕಲ್ಲು ಬೆಂಚೊಂದಿತ್ತು. ಅದರ ಮೇಲೆ ಹೋಗಿ ಕುಳಿತ. ತಿಂಡಿಯ ಆತುರವಿಲ್ಲ, ನಿದ್ರೆಯ ಅಗತ್ಯವಿರಲಿಲ್ಲ. ಕಡೆದ ವಿಗ್ರಹದಂತೆ ಜಡವಾಗಿ ಕೂತಿದ್ದ.

ಯಾವಾಗಲೋ ಅಲ್ಲಿಂದ ಎದ್ದು ಬಂದ. ನಿಂತಿದ್ದ ಬಸ್ಸಿನಲ್ಲಿ ಹೋಗಿ ಕುಳಿತುಕೊಂಡ. ಆ ಬಸ್ಸು ಇವನ ಊರಿನ ಕಡೆಗೆ ಹೋಗುತ್ತಿತ್ತು. ಅದೊಂದೂ ಇವನಿಗೆ ತಿಳಿಯದು. ಆ ಬಸ್ಸಿನ ಕಂಡಕ್ಟರ ಕೈಯಲ್ಲೂ ಬಾಯಿಗೆ ಬಂದ ಹಾಗೆ ಬೈಸಿಕೊಂಡು, ನಿಲ್ದಾಣದಲ್ಲಿ ಇಳಿಸಲ್ಪಟ್ಟ.

ತನ್ನ ಊರ ಬಸ್ ನಿಲ್ದಾಣಕ್ಕೆ ಹಿಂತಿರುಗಿದಾಗ, ಮಸುಕು ಮಸುಕಾಗಿ, ಸ್ಮರಣೆಯು ಬರಹತ್ತಿತು. ನಿಲ್ದಾಣದಿಂದ ನಡೆದ, ತನ್ನ ಮನೆ ಸಿಕ್ಕಿತು. ಒಳಕ್ಕೆ ಹೋದ, ಮಂಕಾಗಿ ಕುಳಿತ.

ಆ ಅವಧಿಯಲ್ಲಿ ನಾಲ್ಕು ದಿನಗಳು ನಾಲ್ಕು ರಾತ್ರಿಗಳು ಕಳೆದಿದ್ದುವು ಎನ್ನುವುದು ಅವನಿಗೆ ಗೊತ್ತೇ ಇಲ್ಲ. ಅಷ್ಟೂ ಕಾಲದಲ್ಲಿ ಊಟವಿಲ್ಲ ತಿಂಡಿಯಿಲ್ಲ, ಪ್ರಪಂಚದ ಪರಿವೆಯೇ ಇಲ್ಲ.

ಹಿರಿಯರು ಶಾಪವನ್ನು ಕೊಟ್ಟರೆ, ಅದು ಸತ್ಯವಾಗಿಬಿಡುತ್ತದೆ, ಎಂದು ಹಿಂದಿನ ಕಾಲದಲ್ಲಿ ಜನರು ನಂಬುತ್ತಿದ್ದರು. ಆ ನಂಬಿಕೆಯು ನಮ್ಮಲ್ಲಿ ಇನ್ನೂ ಬಹಳಷ್ಟು ಉಳಿದೇ ಇದೆ. ಮಾತೃಸ್ಥಾನದಲ್ಲಿರುವ ಅತ್ತಿಗೆಯು ಶಾಪವನ್ನು ಕೊಟ್ಟರು. ಅದು ನಡೆದೇ ಹೋಗುತ್ತೆ ಎನ್ನುವ ತೀವ್ರ ಭಯ ಒಂದು ಕಡೆ, ಹೀಗೆ ರೇಗುವಂತೆ ಆಕೆಯ ಹತ್ತಿರ ಹದ್ದುಮೀರಿ ಮಾತನಾಡಿದ್ದು ಘೋರ ಪಾಪ ಎನ್ನುವ ಕೊರೆತವು ಇನ್ನೊಂದು ಕಡೆ. ಜೊತೆಗೆ ಸೂಕ್ಷ್ಮಪ್ರವೃತ್ತಿಯ ಮನಸ್ಸು ಅವನದು. ಅತ್ತಿಗೆಯು ಆರೈಕೆಯನ್ನು ಇವನ ಚಿಕ್ಕಂದಿನಿಂದ ಮಾಡಿದ್ದರೂ, ಅದು ಆಕೆಯ ಔದಾರ್ಯವೆಂದನಿಸಿತ್ತು. ಕೃತಜ್ಞತೆಯೂ ತುಂಬಾ ಇತ್ತು. ಆದರೆ ಅದು ನನ್ನ ಹಕ್ಕು ಎನ್ನುವ ಭಾವನೆಯು ಬಂದೇ ಇರಲಿಲ್ಲ. ತಾಯಿಯೊಬ್ಬಳಲ್ಲಿ ಮಾತ್ರ ಹಕ್ಕಿನ ಭಾವನೆಯು ಬರಲು ಸಾಧ್ಯ. ಔದಾರ್ಯದ ಉರುಲಿನಲ್ಲಿ ಬೆಳೆದು ಬಂದವನಿಗೆ ಎಂದೂ ಸಂಕೋಚದ ಪ್ರವೃತ್ತಿಯೇ, ಅಂತಹ ಸೂಕ್ಷ್ಮಸ್ವಭಾವದವನಿಗೆ, ‘ನಾಶವಾಗಿ ಹೋಗು, ಹಾಳಾಗಿ ಹೋಗು’ ಎಂದು ಅನಿರೀಕ್ಷಿತವಾಗಿ ಅತ್ತಿಗೆಯು

ನುಡಿದಾಗ, ಔದಾರ್ಯದ ಉರುಲು ಬಿಗಿಯಿತು. ಭವಿಷ್ಯದ ಅವ್ಯಕ್ತ ಭಯವು, ಆತಂಕವೂ ಕೂಡಿಕೊಂಡು, ಉಲ್ಬಣವಾಗಿ ಮನಸ್ಸಿಗೆ ದಿಗ್ಭ್ರಮೆಯನ್ನು ಹಿಡಿಸಿತು.

ಕೋಪದಲ್ಲಿ ಕುಯ್ದುಕೊಂಡ ಮೂಗು ಶಾಂತವಾದಾಗ ಚಿಗುರಲು ಸಾಧ್ಯವೇ? ಕೋಪದಲ್ಲಿ ತಾನಾಡಿದುದೂ, ಅತ್ತಿಗೆಯು ಸಿಡುಕಿದುದೂ, ಇವನ ಮನಸ್ಸಿನಲ್ಲಿ ಪಟ್ಟೆ ಪಟ್ಟೆ ಬರೆಯನ್ನು ಹಾಕಿದಂತಾಯಿತು. ನುಡಿದ ಮಾತು, ಒಡೆದ ಮುತ್ತಿನಂತೆಯೇ ! ಎಷ್ಟೋಬಾರಿ ನುಡಿದ ಮಾತು ಕೇಳಿಸಿಕೊಂಡವನ ಮನಸ್ಸನ್ನು ಒಡೆದುಬಿಡುತ್ತದೆ.

ಗೆಳೆಯ ವೈದ್ಯರೊಬ್ಬರು ಒಮ್ಮೆ ವಿಷಾದದಿಂದ ಹೇಳಿದರು, ತಮ್ಮ ಅನುಭವವನ್ನು. ವಿದ್ಯಾವಂತನಾಗಿದ್ದ, ಮಧ್ಯವಯಸ್ಸಿನ, ಸಂನ್ಯಾಸಿಯೊಬ್ಬನು, ತೊಡೆಯ ಮೇಲೆ ಮಚ್ಚೆ ಏಳುತ್ತಿದ್ದುದನ್ನು ಕಂಡ. ನನ್ನ ಗೆಳೆಯರ ಬಳಿಗೆ ವೈದ್ಯ ಸಲಹೆಗಾಗಿ ಹೋದ. ಅವನನ್ನು ಅಮೂಲಾಗ್ರವಾಗಿ ವೈದ್ಯರು ಪರೀಕ್ಷಿಸಿದರು. ಚರ್ಮದ ಒಂದು ಚೂರನ್ನೂ ಮತ್ತು ರಕ್ತವನ್ನೂ ಪರೀಕ್ಷೆಯ ಸಲುವಾಗಿ ತೆಗೆದುಕೊಂಡರು. 'ಇಷ್ಟೆಲ್ಲಾ ಪರೀಕ್ಷೆಗಳೇಕೆ? ಯಾವುದಾದರೂ ಮುಲಾಮಿನಿಂದ ವಾಸಿಯಾಗುವುದಿಲ್ಲವೇ ?' ಎಂದು ಸಂನ್ಯಾಸಿಗಳು ಕೇಳಿದರು. 'ಇಂತಹ ವಿವರವಾದ ಪರೀಕ್ಷೆಗಳ ಅಗತ್ಯವಿದೆ. ಮಸಲಾ ಇದೇನಾದರೂ ಕುಷ್ಟರೋಗದ ಪ್ರಾರಂಭವಾಗಿದ್ದರೆ, ಈಗಲೇ ಖಚಿತಪಡಿಸಿಕೊಂಡು, ತಕ್ಕ ಚಿಕಿತ್ಸೆಯನ್ನು ಮಾಡಬೇಕು' ಎಂದರು ಡಾಕ್ಟರು. 'ಇನ್ನು ಮೂರು ದಿನಗಳ ನಂತರ ಬನ್ನಿ. ಆ ವೇಳೆಗೆ ಫಲಿತಾಂಶಗಳು ಸಿದ್ಧವಾಗಿರುತ್ತವೆ.' ಎಂದು ಹೇಳಿ, ಸಂನ್ಯಾಸಿಯನ್ನು ಬೀಳ್ಕೊಟ್ಟರು. ಮೂರು ದಿನಗಳಾದ ಮೇಲೆ ಫಲಿತಾಂಶಗಳೇನೋ ಬಂದುವು. ಕುಷ್ಟರೋಗದ ಯಾವ ಸೂಚನೆಯೂ ಇರಲಿಲ್ಲ. ಆದರೆ ಸಂನ್ಯಾಸಿಯು ಡಾಕ್ಟರ ಬಳಿಗೆ ಹಿಂತಿರುಗಿ ಬರಲೇ ಇಲ್ಲ. ಆ ಸಂನ್ಯಾಸಿಯ ತೇಜಸ್ವೀ ಮುಖವನ್ನು ಕಂಡಾಗ, ಡಾಕ್ಟರಿಗೆ ಗೌರವ ಭಾವನೆಯುಂಟಾಗಿತ್ತು. ಈ ಒಳ್ಳೆಯ ಸುದ್ದಿಯನ್ನು ಅವರಿಗೆ ತಿಳಿಸಬೇಕು ಎಂಬ ಹಂಬಲದಿಂದ, ಸಂನ್ಯಾಸಿಯ ವಿಳಾಸವನ್ನು ಪತ್ತೆಹಚ್ಚಿ, ಆ ಮಠಕ್ಕೆ ಹೋದರು. ಅಲ್ಲಿದ್ದ ಹಿರಿಯ ಸಂನ್ಯಾಸಿಯನ್ನು ಭೇಟಿಯಾಗಿ, ಇಂತಹ ಹೆಸರಿನ, ಈ ವಿಳಾಸದಲ್ಲಿದ್ದ ಸಂನ್ಯಾಸಿಗಳು, ನನ್ನ ಬಳಗೆ ಬಂದಿದ್ದರು; ತಿರುಗಿ ಬರಲಿಲ್ಲ. ಅವರಿಗೆ ಸುದ್ದಿ ತಿಳಿಸಿ ಹೋಗೋಣ ಎಂದು ನಾನೇ ಬಂದೆ. ಚರ್ಮದಲ್ಲಿ ಎದ್ದಿದ್ದ ಮಚ್ಚೆಯು ಕುಷ್ಟರೋಗದಿಂದಲ್ಲ ಎಂದು ಹೇಳಲು ಬಂದೆ. ಅವರೆಲ್ಲಿ ?' ಎಂದು ಕೇಳಿದರು ; ವಿವರಗಳನ್ನು ತಿಳಿಸಿ.

ಹಿರಿಯ ಸಂನ್ಯಾಸಿಗಳು ನಿಟ್ಟುಸಿರುಬಿಟ್ಟು 'ಹೀಗೋ, ಸಮಾಚಾರ. ನನಗೆ

ತಿಳಿದಿರಲಿಲ್ಲ. ಮೂರು ದಿನಗಳ ಹಿಂದೆ ಆತ ರೈಲು ಕಂಬಿಯ ಮೇಲೆ ಮಲಗಿ, ರಾತ್ರಿಯಲ್ಲಿ ಆತ್ಮಹತ್ಯೆ ಮಾಡಿಕೊಂಡ. ತುಂಬಾ ವಿನಯಶೀಲ, ಪ್ರಗಲ್ಭವಾದ ಪಾಂಡಿತ್ಯವಿತ್ತು. ಅವನೇಕೆ ಆತ್ಮಹತ್ಯೆ ಮಾಡಿಕೊಂಡ ಎಂದು ಶಂಕಿಸುತ್ತಿದ್ದೆ, ನೀವು ಹೇಳಿದ ಮೇಲೆ ಈಗ ಅರ್ಥವಾಯಿತು. ಶುಚಿಯಾದ ದೇಹ, ನಿರ್ಮಲ ಮನಸ್ಸು, ಆರೋಗ್ಯಕರ ಆಚಾರ ಎಲ್ಲವೂ ಇದ್ದ ನನಗೆ ಕುಷ್ಟರೋಗವು ಬಂದುದೇಕೆ ಎನ್ನುವ ಆತಂಕ ಹತ್ತಿರಬೇಕು. ತೀವ್ರ ಜುಗುಪ್ಸೆಯೂ ಉಂಟಾಗಿರಬೇಕು. ಆತಂಕವು ಉತ್ಕಟವಾಗಿ, ಅಸಾಧ್ಯ ಜುಗುಪ್ಸೆಯಲ್ಲಿ ಪರಿಣಮಿಸಿದರೆ, ಆತ್ಮಹತ್ಯೆಯು ಕೂಡ ಸಾಧ್ಯ. ಎಲ್ಲವನ್ನೂ ಸ್ವಯಂಪ್ರೇರಣೆಯಿಂದ, ಪ್ರೌಢವಯಸ್ಸು ಬಂದ ಮೇಲೆ, ಪರಿತ್ಯಾಗ ಮಾಡಿ ಸಂನ್ಯಾಸಿಯಾದವನಿಗೂ ಹೀಗಾದರೆ, ಸಾಮಾನ್ಯ ಜನರ ಪಾಡು ಏನೇನಾಗಬಹುದು ?' ಎಂದು ಹೇಳಿದರು.

ಗೆಳೆಯ ಡಾಕ್ಟರಿಗೆ ಇಂದೂ ಈ ಘಟನೆಯು ಕುಕ್ಕುತ್ತಲೇ ಇದೆ. ಕುಷ್ಟರೋಗದ ಸಂಶಯವಿದೆ. ಅದನ್ನು ಇಲ್ಲ ಎಂದು ಖಚಿತಪಡಿಸಿಕೊಳ್ಳಬೇಕು ಎಂದು ಹೇಳಿದ್ದು ತಪ್ಪಾಯಿತೇನೋ ? ಎನ್ನುವ ಕೊರಗು ಕಾಡುತ್ತಲೇ ಇದೆ.

ಆತ್ಮಹತ್ಯೆಯನ್ನು ಮಾಡಿಕೊಂಡ ಸಂನ್ಯಾಸಿಗಾದರೂ, ಕೇಳಿದ ಕೆಟ್ಟ ಸುದ್ದಿಯಿಂದ, ಆತಂಕವು ಕಾಣಿಸಿಕೊಳ್ಳುವ ಮೊದಲೇ, ಅತ್ಯುಗ್ರವಾಗಿ ತೀವ್ರ ಜುಗುಪ್ಸೆಯಲ್ಲಿ ಲೀನವಾಯಿತು. ಈ ಅವಸ್ಥೆಯು ಸ್ವಲ್ಪ ಕಾಲವೇ ಇರುವುದು. ಅಂತಹ ಪರಿಸ್ಥಿತಿಯಲ್ಲಿ ಸ್ನೇಹಿತರಾದರೂ ಅವರೊಂದಿಗೆ ಇದ್ದಿದ್ದರೆ, ಜುಗುಪ್ಸೆಯ ತೀವ್ರತೆಯನ್ನು ಶಮನಮಾಡಬಹುದಿತ್ತು. ಆತ್ಮಹತ್ಯೆಯೂ ಆಗುತ್ತಿರಲಿಲ್ಲ. ಅನಂತರ ಆತಂಕದ ಚಿಹ್ನೆಗಳು ಕಾಡುತ್ತಿದ್ದುವು. ಪರೀಕ್ಷೆಯ ಫಲಿತಾಂಶಗಳು ಆತಂಕದ ಕಾರಣವನ್ನು ನಿವಾರಿಸಿದ ಮೇಲೆ, ಆತ ಸ್ವಸ್ಥವಾಗುತ್ತಿದ್ದ. ಆದರೆ? ವಿಧಿ ಎನ್ನದೇ ಬೇರೇನನ್ನೂ ಹೇಳಬರುವುದಿಲ್ಲ.

**೮. ವೈದ್ಯಜನಿಕ ಆತಂಕ**

ಆತಂಕದ ಶಮನಕ್ಕಾಗಿ ವೈದ್ಯರಲ್ಲಿಗೆ ಹೋಗುವುದು ನ್ಯಾಯ. ಆದರೆ ವೈದ್ಯರಲ್ಲಿಗೆ ಸಲಹೆಗೆಂದು ಹೋದ ಮೇಲೆ, ಅವರಾಡಿದ ಮಾತುಗಳಿಂದಲೇ ಹೊಸ ಹೊಸ ಆತಂಕಗಳು ಹುಟ್ಟಿಕೊಂಡರೆ ? ಪರಮ ಅನ್ಯಾಯ. ಆದರೆ ಇದು ಆಗುತ್ತಲೇ ಇದೆ. ವೈದ್ಯವಿಜ್ಞಾನದಲ್ಲಿ ಪ್ರಗತಿಯು ನಡೆದಷ್ಟೂ, ಪ್ರಗತಿಯ ಪ್ರಚಾರವು ಸಾರ್ವಜನಿಕರಲ್ಲಿ ಹೆಚ್ಚಾದಷ್ಟೂ, ವೈದ್ಯಜನಿಕ ಆತಂಕಗಳೂ ಅತಿಯಾಗುತ್ತವೆ.

**ಡೈಜೆಸ್ಟ್ ಓದುವ ನರಸಪ್ಪ**

ವಿಧವಿಧ ಡೈಜೆಸ್ಟ್ ಪತ್ರಿಕೆಗಳನ್ನು ಓದುವ ಅಭ್ಯಾಸ ನರಸಪ್ಪನಿಗೆ. ಸಾಕಷ್ಟು ಸಂಪಾದಿಸುತ್ತಿದ್ದ ಇಂಜಿನಿಯರಿಂಗ್ ಕಂಟ್ರಾಕ್ಟರ್ ನರಸಪ್ಪನಿಗೆ ನಲವತ್ತರ ಪ್ರಾಯ. ಮಧ್ಯಾಹ್ನ ಭೋಜನಾನಂತರ ಒಂದ್ಹತ್ತು ನಿಮಿಷ ವಿಶ್ರಮಿಸಿಕೊಳ್ಳುವ ಅಭ್ಯಾಸ. ಕೆಲವು ವರ್ಷಗಳ ಹಿಂದೆ ಡೈಜೆಸ್ಟ್ ಪತ್ರಿಕೆಯೊಂದರಲ್ಲಿ ಭೋಜನಾ ನಂತರದ ವಿಶ್ರಾಂತಿಯ ಸತ್ಫಲಗಳನ್ನು ಓದಿದ ಮೇಲೆ, ಈ ಅಭ್ಯಾಸವನ್ನು ಮಾಡಿಕೊಂಡಿದ್ದ. ಅವತ್ತು ಮಧ್ಯಾಹ್ನ ಮಂಚದ ಮೇಲೆ ಅಡ್ಡಾದಾಗ ಎದೆಯಲ್ಲಿ ಒಂದು ತರಹ ನೋವು ಕಾಣಿಸಿತು. ಒಂದರಕ್ಷಣ ಆ ನೋವು ಎಡತೋಳಿಗೆ ಹರಡಿ ಬೆರಳುಗಳಿಗೂ ತಟ್ಟಿದಂತಾಯಿತು. ಎಲ್ಲಾ ಮಿಂಚಿನಂತೆ ಕ್ಷಣಾಂಶದಲ್ಲಿ ಅನುಭವವಾಯಿತು. ತದನಂತರ ತೋಳನ ತರಹ ಚೆನ್ನಾಗಿಯೇ ಇದ್ದ. ಆದರೆ ಡೈಜೆಸ್ಟ್‌ಗಳನ್ನು ಓದಿದ ವಿದ್ಯಾವಂತನಿಗೆ, ಅಂಜೈನಾ : ಕಾರೊನರಿ ಅಟಾಕ್ ; ಇತ್ಯಾದಿಗಳ ಸ್ಮರಣೆ ಬಾರದೆ ಇರುತ್ತದೆಯೆ ? ಅವುಗಳೇನಾದರೂ ಇರಬಹುದೇ ಎಂದು ಅನುಮಾನಿಸಿದ. ಮರುಕ್ಷಣದಲ್ಲೇ ನೆನಪಾಯಿತು : ಹಿಂದಿನ ರಾತ್ರಿ ಪಾರ್ಟಿಗೆ ಹೋಗಿ ಹಸಿವು ಬಾಯಾರಿಕೆಗಳನ್ನು ಬಿರಿಯಾನಿ ಬ್ರಾಂದಿಗಳಿಂದ ಕಂಠಪೂರ್ತಿ ಸಂತುಷ್ಟಿಪಡಿಸಿದ್ದು. ಅದರ ಪ್ರಭಾವದಿಂದಲೂ ಹೀಗಾಗಬಹುದು ಎಂಬುದೂ ನರಸಪ್ಪನಿಗೆ ಗೊತ್ತು. ಅದನ್ನೂ ಡೈಜೆಸ್ಟ್ ಪತ್ರಿಕೆಗಳೂ ವಿವರಿಸಿದ್ದುವು. ಏನೇ ಇರಲಿ ; ಮೊಳಕೆಯಲ್ಲೇ ಚಿವುಟಿಹಾಕಿದರೆ, ರೋಗವು ಪ್ರಬಲಗೊಳ್ಳುವುದಿಲ್ಲ. ಮುಂಜಾಗ್ರತೆಯನ್ನು ವಹಿಸಿದರೆ ಎಂದಿಗೂ ಕ್ಷೇಮ. ಡಾಕ್ಟರ ಬಳಿಗೆ ಹೋಗಿ ಪರೀಕ್ಷಿಸಿಕೊಳ್ಳೋಣ ಎಂದು ನರಸಪ್ಪ ಯೋಚಿಸಿದ. ತತ್‌ಕ್ಷಣ ಕಾರಿನಲ್ಲಿ ಡಾಕ್ಟರ ಬಳಿಗೆ ಹೋದ.

ವಿವರವಾಗಿ ಪರೀಕ್ಷೆಯನ್ನು ಡಾಕ್ಟರು ಮಾಡಿದರು. ಪಾರ್ಟಿಯ ವೈಭವದ ಚರಿತ್ರೆಯನ್ನೂ ಪಡೆದರು. 'ನಿನ್ನೆಯ ದಿನದ ಪಾರ್ಟಿಯ ಪ್ರಭಾವವೇ ಇದು. ಅಂತಹ ಪಾರ್ಟಿಗಳಾದ ಮೇಲೆ ಪಿತ್ತಕೋಶಕ್ಕೆ ಹೆಚ್ಚು ತ್ರಾಸು ಆಗುತ್ತೆ. ಪಿತ್ತ ಕೋಶಕ್ಕೆ ಸರಬರಾಜಾಗುವ ನರಗಳೂ, ಹೃದಯಕ್ಕೆ ಸರಬರಾಜಾಗುವ ನರಗಳೂ, ಒಂದೇ ಬೊಂತೆಯಿಂದ ಹರಿಯುತ್ತವೆ. ಹಾಗಾಗಿ, ಕೆಲವು ವೇಳೆ ಪಿತ್ತಕೋಶವು ಕೆರಳಿದಾಗ, ಹೃದಯದಲ್ಲಿದ್ದಂತೆ ನೋವು ಕಾಣಿಸಿಕೊಳ್ಳುತ್ತದೆ. ನಿನ್ನ ನಾಡಿ ಚೆನ್ನಾಗಿದೆ. ಹೃದಯವು ಅಣಿಯಾಗಿದೆ. ಯಾವ ಗಾಬರಿಯೂ ಬೇಡ. ಒಂದು ಹೊತ್ತು ಲಂಘಣ ಮಾಡು. ಕರಿದ ಪದಾರ್ಥಗಳನ್ನು ಒಂದೆರಡು ದಿನ ತಿನ್ನಬೇಡ, ಎಲ್ಲವೂ ಸರಿಹೋಗುತ್ತದೆ,' ಎಂದರು.

'ಬ್ಲಡ್ ಪ್ರೆಷರ್ ರೆಕಾರ್ಡ್ ಮಾಡಿದರಲ್ಲ ! ಎಷ್ಟಿತ್ತು ?' ಎಂದು ಡೈಜೆಸ್ಟ್ ನರಸಪ್ಪ ಕೇಳಿದ.

'ಈಗ ಬ್ಲಡ್ ಪ್ರೆಷರ್ ನೂರಾನಲವತ್ತು ಮತ್ತು ತೊಂಭತ್ತು, ಇದೆ'. ಅದೇನೂ ರೋಗಸೂಚಕವಲ್ಲ, ಆದರೂ ನಾಳೆ ಬೆಳಿಗ್ಗೆ ಬಂದು ಪರೀಕ್ಷೆ ಮಾಡಿಸಿಕೊಂಡು ಹೋಗು' ಎಂದರು, ಡಾಕ್ಟರು. ಅವರಿಗೂ ಊಟಕ್ಕೆ ಹೋಗುವ ಅವಸರ.

ಮನೆಗೆ ಹಿಂತಿರುಗುವಾಗ ನರಸಪ್ಪ ಯೋಚಿಸಿದ, ಡಾಕ್ಟರೇನೋ ಪೂರ್ಣ ಪರೀಕ್ಷೆಮಾಡಿ, ಹೃದಯದ ತಾಪತ್ರಯವಾವುದೂ ಇಲ್ಲ ಎಂದು ಹೇಳಿದರು, ದಿಟ. ಬ್ಲಡ್ ಪ್ರೆಷರ್ ಕೂಡ ನನ್ನ ವಯಸ್ಸಿಗೆ ಸರಿಯಾಗಿದೆ ಎಂದು ಹೇಳಿದರು. ಆದರೆ ನಾಳೆ ಬೆಳಿಗ್ಗೆ ತಿರುಗಿ ಬಂದು ಪರೀಕ್ಷೆ ಮಾಡಿಸಿಕೊಂಡು ಹೋಗು ಅಂತ ಏಕಂದರು ? ಬ್ಲಡ್ ಪ್ರೆಷರ್ ಏನಾದರೂ ಹೆಚ್ಚಾಗಿದ್ದು ; ಇದ್ದುದನ್ನು ಇದ್ದಹಾಗೆ ಹೇಳಿದರೆ ನನಗೆ ಗಾಬರಿಯಾಗಬಹುದು ಅಂತ ಸುಳ್ಳೇನಾದರೂ ಹೇಳಿರಬಹುದೆ? ಈ ಸಂಶಯವು ಹೆಡೆಯೆತ್ತಿತು.

ಹಿಂತಿರುಗುತ್ತಿದ್ದ ರಸ್ತೆಯಲ್ಲಿ ದವಾಖಾನೆಯ ಬೋರ್ಡೊಂದು ಡಿಖಾವಾಗಿ ಕಾಣಿಸಿತು. ದವಾಖಾನೆಯ ಬಾಗಿಲೂ ತೆರೆದಿತ್ತು. ಈ ಡಾಕ್ಟರ ಹತ್ತಿರವೂ ಬ್ಲಡ್ ಪ್ರೆಷರ್ ಪರೀಕ್ಷಿಸೋಣ. ಇವರು ಅಪರಿಚಿತರು. ಇದ್ದುದನ್ನು ಇದ್ದ ಹಾಗೆಯೇ ಹೇಳಬಹುದು ; ಎಂದು ಯೋಚಿಸಿದ. ಅಲ್ಲಿ ಕಾರು ನಿಲ್ಲಿಸಿ ಒಳಕ್ಕೆ ನಡೆದ. 'ನನ್ನ ಬ್ಲಡ್‌ಪ್ರೆಷರ್ ಎಷ್ಟಿದೆ ನೋಡಿ. ಡಾಕ್ಟರೇ' ಎಂದು ಕೇಳಿದ. ಕಾರಿನಲ್ಲಿ ಬಂದಿಳಿದ ರೋಗಿಯನ್ನು ಯಾವ ಖಾಸಗಿ ಡಾಕ್ಟರಾಗಲೀ ತೃಪ್ತಿಪಡಿಸಲೇ ಬೇಕು. ಏನು, ಎತ್ತ, ಏಕೆ, ಎಂದು ಕೇಳಬೇಕ್ಯಾಕೆ ? ಬ್ಲಡ್‌ಪ್ರೆಷರ್ ಪೇಷಂಟಿರ ಬೇಕು. ರೆಕಾರ್ಡ್ ಮಾಡಿದರೆ ನನ್ನ ಹೊಣೆ ತೀರಿತು, ಎಂದುಕೊಂಡು ಡಾಕ್ಟರು, ಬ್ಲಡ್‌ಪ್ರೆಷರ್ ರೆಕಾರ್ಡ್ ಮಾಡಿದರು. 'ನೂರಾ ಅರವತ್ತು, ಮತ್ತು ನೂರು ಇದೆ. ನಿಮ್ಮ ವಯಸ್ಸಿಗೆ ಸರಿಯಾಗೇ ಇದೆ' ಎಂದರು ಡಾಕ್ಟರು. 'ಥ್ಯಾಂಕ್ಯೂ ಡಾಕ್ಟರ್' ಅಂತ ನರಸಪ್ಪ ಹೇಳಿ, ಫೀಜನ್ನಿಟ್ಟು ಕಾರಿಗೆ ಬಂದ. ಕುಳಿತು ಮನೆಯತ್ತ ಹೊರಟ.

'ನಾನಂದುಕೊಂಡಿದ್ದೇ ಸರಿ. ಮನೆ ಡಾಕ್ಟರು ನಿಜ ಸಂಗತಿಯನ್ನು ಮರೆ ಮಾಚಿದ್ದಾರೆ, ನನ್ನ ಹಿತೈಷಿಗಳೇ ಹೌದು. ಆದರೆ ಇದ್ದುದನ್ನು ಇದ್ದ ಹಾಗೆಯೇ ಹೇಳಿ, ಸೂಕ್ತ ಚಿಕಿತ್ಸೆಯನ್ನು ನಡೆಸಿದ್ದರೆ ಚೆನ್ನಾಗಿರುತ್ತಿತ್ತು. 'ಲಂಘಣ ಮಾಡು ; ಜಿಡ್ಡು ತಿನ್ನಬೇಡ, ಅಂತ ಅಡುಗೂಲಜ್ಜಿ ಹೇಳುವಹಾಗೆ ಹೇಳಿದರಲ್ಲ !' ಎಂದಂದು ಕೊಂಡ.

ಸರಿ ! ಆ ದಿನದಿಂದ ದಿನಕ್ಕೆ ಇಬ್ಬರು ಹೊಸ ಡಾಕ್ಟರುಗಳ ಬಳಿ ಹೋಗಿ ಬ್ಲಡ್ ಪ್ರೆಷರ್ ರೆಕಾರ್ಡ್ ಮಾಡಿಸುವುದಕ್ಕೆ ಆರಂಭಿಸಿದ. ಹಳೆಯ ಹರಕಲು ಬಟ್ಟೆಗಳನ್ನು ಬಡವನಂತೆ ಹಾಕಿಕೊಂಡು, ಛದ್ಮವೇಷಧಾರಿಯಾಗಿ ಸರ್ಕಾರಿ ಆಸ್ಪತ್ರೆಗಳಿಗೆ ಹೋಗಿ ಬ್ಲಡ್‌ಪ್ರೆಷರ್ ರೆಕಾರ್ಡ್ ಮಾಡಿಸಿಕೊಳ್ಳಲು ತೊಡಗಿದ. ಬಡವರ ಹತ್ತಿರ ಡಾಕ್ಟರು ಸುಳ್ಳು ಹೇಳುವುದಿಲ್ಲ. ಅದರಿಂದ ಅವರಿಗೇನೂ ಲಾಭವಿಲ್ಲ ಎಂದೊಂದು ಹುಚ್ಚು ನಂಬಿಕೆ, ನರಸಪ್ಪನಿಗೆ. ಒಂದೊಂದು ದಿವಸ ಒಂದೊಂದು ಪ್ರಮಾಣದ ಬ್ಲಡ್‌ಪ್ರೆಷರ್.

ಕಳೆದ ಮೂರು ವರ್ಷಗಳಿಂದ ಎದೆಯ ಛಳುಕಾಗಲಿ, ತೋಳು ಮಿಡಿಯುವುದಾಗಲೀ, ಪುನಃ ಆಗಿಲ್ಲ. ಆದರೂ ಒಬ್ಬಿಬ್ಬರ ಹತ್ತಿರ ಹೋಗಿ ಬ್ಲಡ್‌ಪ್ರೆಷರ್ ಅಳತೆ ಹಾಕಿಸದೇ ಇದ್ದರೆ, ಉಂಡ ಅನ್ನ ಅವನ ಮೈ ಹತ್ತುವಂತಿರಲಿಲ್ಲ. ಬ್ಲಡ್‌ಪ್ರೆಷರಿನ ಆತಂಕವು ಅವನನ್ನು ದೆವ್ವ ಹಿಡಿದಂತೆ ಹಿಡಿದಿದೆ. ಆದರೆ ಪುಟಾಣಿ ದೆವ್ವ, ಅದು. ಕಂಟ್ರಾಕ್ಟ್ ಕೆಲಸವನ್ನು ಸುಸೂತ್ರವಾಗಿ ಮಾಡುತ್ತಿದ್ದಾನೆ. ಸಂಸಾರವನ್ನೂ ಪಗದಸ್ತಾಗಿ ನಡೆಸುತ್ತಿದ್ದಾನೆ. ಆದರೂ ದಪ್ಪ ನೋಟು ಪುಸ್ತಕವೊಂದರಲ್ಲಿ ದಿನದಿನವೂ ಎರಡು ಮೂರು ಬಾರಿ ವ್ಯತ್ಯಾಸವಾಗುತ್ತಿರುವ ಬ್ಲಡ್‌ಪ್ರೆಷರ್ ಸಂಖ್ಯೆಗಳನ್ನು ಜಾತಕದ ಕುಂಡಲಿ ಬರೆದ ಹಾಗೆ ಬರೆದಿಡುತ್ತಿದ್ದಾನೆ. ೪೩–೪೪ರ ಪ್ರಾಯದಲ್ಲೇ ಉಯಿಲು ಬರೆದಿಡಲಾರಂಭಿಸಿದ್ದಾನೆ. ತಿಂಗಳು ತಿಂಗಳಿಗೂ ಅದನ್ನು ಬದಲಾಯಿಸುತ್ತಿದ್ದಾನೆ.

ಬಿರಿಯಾನಿ ಬ್ರಾಂದಿ ಪಾರ್ಟಿಗಳಿಗೆ ಸಾಮಾನ್ಯವಾಗಿ ಹೋಗುವುದಿಲ್ಲ. ಅತ್ಯಗತ್ಯವಾಗಿ ಹೋಗಬೇಕಾದಾಗ ಬಹಳ ಎಚ್ಚರದಿಂದ ತುತ್ತಿಗೆ ಮುತ್ತು ಕೊಡುತ್ತಾನೆ. ಕರಿದ ಪದಾರ್ಥಗಳನ್ನು ಹೆಚ್ಚು ತಿನ್ನುವುದಿಲ್ಲ. ಬ್ಲಡ್‌ಪ್ರೆಷರಿನ ಪುಟಾಣಿ ಆತಂಕವು ಆರೋಗ್ಯಕರ ಜೀವನವನ್ನು ನಡೆಸುವಂತೆ ಅವನನ್ನು ಬೆದರಿಸಿಟ್ಟಿದೆ.

ಆದರೆ ಅವನ ಜೀವನದಲ್ಲಿ, ಬ್ಲಡ್‌ಪ್ರೆಷರನ್ನು ಅಳತೆ ಹಾಕಿಸುವ ಚಟ ಕಾಲು ಹಾಕಿಕೊಂಡಿದೆ. ಈ ಚಟವು ಉಲ್ಬಣಗೊಂಡರೆ, ಕೆಲವು ವರ್ಷಗಳಲ್ಲಿ, ಆತಂಕದಿಂದಲೇ ಬ್ಲಡ್ ಪ್ರೆಷರ್ ಹೆಚ್ಚಿ ಬ್ಲಡ್‌ಪ್ರೆಷರ್ ರೋಗವು ಕಾಣಿಸಿಕೊಳ್ಳಬಹುದು. ಆದರೆ ಈ ತನಕ ಆರೋಗ್ಯವಾಗಿಯೇ ಇದ್ದಾನೆ.

'ತಿರುಗಿ ನಾಳೆ ಬೆಳಿಗ್ಗೆ ಬಂದು ಬ್ಲಡ್‌ಪ್ರೆಷರ್ ನೋಡಿಸಿಕೊಂಡು ಹೋಗು' ಎಂದು ಮನೆ ವೈದ್ಯರು ಮೊದಲಸಲ ಹೇಳಿದ್ದು ತಪ್ಪೇ? ಇಲ್ಲವೇ ಇಲ್ಲ. ಆದರೆ ಡಾಕ್ಟರಂದುದು ಆತಂಕಕ್ಕೆ ಅಸ್ತಿಭಾರವನ್ನು ಹಾಕಿತು. ಏಕೆಂದರೆ ಡೈಜೆಸ್ಟ್ ಓದಿದ ಮನಸ್ಸು ಆತಂಕವು ಬೇರೂರಲು ಅಣಿಯಾಗಿತ್ತು. ನರಸಪ್ಪನ ಸಂಶಯ ಪ್ರವೃತ್ತಿಯೂ ಇದಕ್ಕೆ ಬೆಂಬಲ ಕೊಟ್ಟಿತು.

ನಿಜವಾಗಿ ಬ್ಲಡ್‌ಪ್ರೆಷರ್ ಬೇನೆಯಿಂದ ನರಳುವವರು ಕೂಡ, ನರಸಪ್ಪನಷ್ಟು ಬೆದರುವುದಿಲ್ಲ. ಬೇನೆಗಿಂತಲೂ, ಬೇನೆಯು ಬಂದುಬಿಡ್ತಪ್ಪ ಎನ್ನುವ ಭಯವೇ, ಹೆಚ್ಚು ಕಾಟ ಕೊಡುತ್ತದೆ.

ವೈದ್ಯಜನಿಕ ಆತಂಕವಿದು. ಆದರೆ ಇದನ್ನು ತಪ್ಪಿಸುವ ಬಗೆ ಹೇಗೆ? ನರಸಪ್ಪನ ಮನೆ ವೈದ್ಯರು ದಿಟವನ್ನೇ ಹೇಳಿದ್ದರು. ಸಂಶಯಾತ್ಮಾ ನರಸಪ್ಪದಲ್ಲಿ ಈ ಪರಿಣಾಮವಾಯಿತು. ಪರಿಹಾರ ! ಸಂಶಯವು ನಿವಾರಣೆಯಾಗುವಂತೆ ಪೂರ್ಣ ಜ್ಞಾನಾರ್ಜನೆ. ಅರ್ಧಜ್ಞಾನವು ಎಂದೂ ಅಪಾಯಕಾರಿ.

**ಕ್ಯಾನ್ಸರಿನ ಕಪಿನೀಪತಿ**

ಕ್ಯಾನ್ಸರ್ ರೋಗದಂತಹ ದರಿದ್ರ ಬೇನೆ ಮತ್ತೆ ಯಾವುದೂ ಇರಲಾರದು. ಕ್ಯಾನ್ಸರ್ ಎನ್ನುವ ಹೆಸರು, ಕರ್ಕಾಟಕ ರಾಶಿಯನ್ನು ಸೂಚಿಸುವ ಕರ್ಕಾಟಕವೆಂಬ ಎಂಟು ಕೊಂಡಿಗಳುಳ್ಳ, ಅವುಗಳಿಂದ ಬಲು ಭದ್ರವಾಗಿ ಕಚ್ಚಿ ಹಿಡಿಯುವ ಪ್ರಾಣಿಯನ್ನು ಈ ಬೇನೆಗೆ ಹೋಲಿಸಿದ್ದುದರಿಂದಲೇ. ದೇಹದ ಯಾವುದಾದರೂ ಒಂದು ಅಂಗದಲ್ಲಿ ಇದು ಸಣ್ಣ ಪ್ರಮಾಣದಲ್ಲಿ ಪ್ರಾರಂಭವಾಗುತ್ತದೆ. ಅನಂತರ ಎಡೆತಡೆಯಿಲ್ಲದೆ ಬೆಳೆಯುತ್ತಾ ಹೋಗುತ್ತದೆ. ಸುತ್ತುಮುತ್ತಲಿನ ಸರ್ವ ಟಿಷ್ಯೂಗಳಲ್ಲಿಯೂ ಬೇರೂರುತ್ತದೆ. ತನ್ನ ಬೆಳವಣಿಗೆಗೆ ಅಗತ್ಯವಾದ ಆಹಾರಪದಾರ್ಥಗಳನ್ನು ತಾನು ನೆಲೆಸಿದ ದೇಹದಿಂದ ಕ್ಯಾನ್ಸರ್ ಹೀರಲಾರಂಭಿಸುತ್ತದೆ. ಕಡೆಗೆ ದೇಹವೇ ಹಿಪ್ಪೆ ಹೀರೇಕಾಯಾಗಿಬಿಡುತ್ತದೆ. ಸಾವು ಬಂದಾಗಲೇ ಬೇನೆಯಿಂದ ಮುಕ್ತಿ. ಈ ಅಂತರದಲ್ಲಿ ರೋಗಿಯನ್ನು ನರಕಯಾತನೆಗೆ ಗುರಿಪಡಿಸುತ್ತದೆ. ಈ ಬೇನೆಯಿಂದ ತೀವ್ರವಾಗಿ ನರಳುತ್ತಿರುವವರನ್ನು ಕಂಡರೆ, ಯಾವ ಕಷ್ಟವನ್ನಾದರೂ ದೇವರು ಕೊಡಲಿ, ಆದರೆ ಇದೊಂದು ಬೇನೆಯು ಬೇಡ ಎನ್ನುವಂತಾಗುತ್ತದೆ.

ಆದರೆ ಈ ಬೇನೆಯ ಮೊದಮೊದಲ ಹಂತದಲ್ಲಿ, ಸೂಕ್ತ ಶಸ್ತ್ರಚಿಕಿತ್ಸೆಯಿಂದ ಎಕ್ಸ್‌ರೇ ಮತ್ತು ರೇಡಿಯಂಗಳಿಂದ, ಮತ್ತು ಹಲವು ಔಷಧಿಗಳಿಂದ, ಸಂಪೂರ್ಣವಾಗಿ ಗುಣಪಡಿಸಬಹುದು. ಹಾಗೆ ಯಾಕೆ ಚಿಕಿತ್ಸೆಯನ್ನು ಮೊದಮೊದಲ ಹಂತದಲ್ಲಿ ಮಾಡುವುದಿಲ್ಲ ? ಬೇನೆಯ ಮೊದಲ ಹಂತದಲ್ಲಿ ರೋಗಿಗೆ ಯಾವ ವಿಶೇಷ ತೊಂದರೆಯೂ ಆಗುವುದಿಲ್ಲ. ಆದುದರಿಂದ ಅವ ಡಾಕ್ಟರ ಬಳಿಗೆ ಏಕೆ ಹೋಗುತ್ತಾನೆ? ಹೋಗುವುದಿಲ್ಲ. ರೋಗವು ಬಲಿತ ಮೇಲೆ ಡಾಕ್ಟರನ್ನು ಕಾಣುತ್ತಾನೆ. ಬಲಿತ ಆ ಹಂತದಲ್ಲಿ ಚಿಕಿತ್ಸೆಯು ಶಮನ ಮಾಡಬಹುದೇ ವಿನಹಾ ಗುಣ ಪಡಿಸುವುದಿಲ್ಲ.

ಈ ಕಾರಣದಿಂದಾಗಿ, ಕ್ಯಾನ್ಸರಿನ ಮೊದಮೊದಲ ಚಿಹ್ನೆಗಳನ್ನು ಗಮನಿಸಿ ಎಂದು ವೈದ್ಯರು ಡಂಗೂರ ಸಾರುತ್ತಾರೆ.

ದೈನಂದಿನ ಪತ್ರಿಕೆಯಲ್ಲಿ ಸರಳ ಭಾಷೆಯಲ್ಲಿ ಬರೆದಿದ್ದ ಕ್ಯಾನ್ಸರಿನ ಲೇಖನವೊಂದನ್ನು ಕಪಿನೀಪತಿ ಓದಿದ. ದೊಡ್ಡ ಅಧಿಕಾರದಲ್ಲಿ ಯಶಸ್ವಿಯಾಗಿ ಮೆರೆಯುತ್ತಿದ್ದ ಅವನಿಗೆ ಪುಸ್ತಕಗಳು, ಪತ್ರಿಕೆಗಳು, ಓದು ಎಂದರೆ ತುಂಬಾ ಇಷ್ಟ. ಸಾಮಾನ್ಯವಾಗಿ ದೊಡ್ಡ ಅಧಿಕಾರಕ್ಕೆ ಬಂದು ಮುಟ್ಟಿದವರು, ಆಸ್ತಿಪಾಸ್ತಿ, ಇನ್ಕ್ರಿಮೆಂಟ್, ಪ್ರಮೋಷನ್, ತಮ್ಮ ಕೆಲಸ, ಇವು ಹೊರತು ಇತರ ವಿಷಯಗಳಿಗೆ ಗಮನ ಕೊಡುವುದಿಲ್ಲ. ಆದರೆ ಕಪಿನೀಪತಿ ಈ ನಿಯಮಕ್ಕೆ ಹೊರತು. ಜ್ಞಾನಾರ್ಜನೆಗಾಗಿ ಓದುವುದು ಎಂದರೆ ಬಲು ಖಯಾಲಿ.

'ಗಂಟಲಿನಲ್ಲಿ ಏನೋ ಸಿಕ್ಕಿಹಾಕಿಕೊಂಡಹಾಗಿದೆ, ಸ್ವಲ್ಪ ಪರೀಕ್ಷೆಮಾಡಿ ನೋಡಿ' ಎಂದವ ಗಂಟಲುತಜ್ಞರ ಬಳಿಗೆ ಹೋದ. ಐವತ್ತರ ಪ್ರಾಯವನ್ನು ಮೀರಿದ ರೋಗಿಗೆ ಕ್ಯಾನ್ಸರ್ ಇರಬಹುದೇ ಎಂಬ ಅನುಮಾನವು ವೈದ್ಯರಿಗೆ ಯಾವಾಗಲೂ ಇದ್ದೇ ಇರುತ್ತದೆ. ಆ ಕಾರಣದಿಂದ ವೈದ್ಯರು ಕಪಿನೀಪತಿಯ ಗಂಟಲನ್ನು ಬಹಳ ಎಚ್ಚರದಿಂದ ಅವಸರಪಡದೆ ಪರೀಕ್ಷಿಸಿದರು. ಕ್ಯಾನ್ಸರಿನ ಯಾವ ಕಿಂಚಿತ್ ಸೂಚನೆಯೂ ಕಾಣಿಸಲಿಲ್ಲ. 'ಸಿಗರೇಟ್ ಸೇದುವುದನ್ನು ಬಿಟ್ಟು ಬಿಡು, ಸಿಕ್ಕಿಹಾಕಿಕೊಂಡಂತಾಗುವುದು ನಿರ್ಮೂಲವಾಗುತ್ತದೆ. ಕ್ಯಾನ್ಸರಿನ ಭಯಕ್ಕೆ ಕಾರಣವೇ ಇಲ್ಲ' ಎಂದು ಖಡಾಖಂಡಿತವಾಗಿ ಡಾಕ್ಟರು ಹೇಳಿದರು. ಕಪಿನೀಪತಿಗೆ ಸಂತೋಷವಾಯಿತು. ಥ್ಯಾಂಕ್ಯೂ ಮಾಡಿ ಮನೆಗೆ ಹಿಂತಿರುಗಿದ, ಮೂರು ಸಿಗರೇಟುಗಳಿದ್ದ ಪ್ಯಾಕೆಟ್ಟನ್ನು ಮೋಟಾರಿನ ಕಿಟಕಿಯಿಂದ ರಸ್ತೆಗೆ ಎಸೆದ. ಇನ್ನು ಮುಂದೆ ಸಿಗರೇಟ್ ವರ್ಜ್ಯ ಎಂದು ತನಗೆ ತಾನೇ ಕೇಳಿಸುವಂತೆ ಶಪಥವನ್ನು ಮಾಡಿದ. ಸುಮಾರು ಒಂದು ತಿಂಗಳು ಹೊಗೆ ಬತ್ತಿಯನ್ನು ಹಿಡಿಯಲೇ ಇಲ್ಲ. ಆದರೂ ಗಂಟಲಿನಲ್ಲಿ ಏನೋ ಸಿಕ್ಕಿಹಾಕಿಕೊಂಡಂತೆಯೇ ಇತ್ತು. 'ಗಂಟಲ ತಜ್ಞರು ಪ್ರವೀಣರೇನೋ ಹೌದು ! ಆದರೆ ಎಂತಹವರೂ ಒಮ್ಮೊಮ್ಮೆ ಎಡವಬಹುದಲ್ಲ ! ಎಡವಿದರೆ, ಅವರು ಎದ್ದು ಚೇತರಿಸಿಕೊಳ್ಳುತ್ತಾರೆ. ನನ್ನ ಪಾಡು ! ಹೇಗೂ ಒಂದು ತಲೆಗಿಂತ ಎರಡು ತಲೆ ಕ್ಷೇಮ' ಎಂದು ಯೋಚಿಸಿ ಬೊಂಬಾಯಿಗೆ ಹೋದಾಗ, ತಜ್ಞರ ಸಲಹೆಯನ್ನು ಪಡೆಯಹೋದ. ಸ್ವಭಾವತಃ ಜಾಣ, ಮೊದಲ ತಜ್ಞರು ಬರೆದುಕೊಟ್ಟಿದ್ದುದನ್ನೂ, ನಡಸಿದ ಪರೀಕ್ಷೆಯ ವಿವರಗಳನ್ನೂ, ಲಕ್ಷಣವಾಗಿ ತಿಳಿಸಿದ. ಬೊಂಬಾಯಿನ ತಜ್ಞರೂ ಎಲ್ಲ ಸಾಮಾನ್ಯ ಪರೀಕ್ಷೆಗಳನ್ನು ಮಾಡಿದರು. ಕ್ಯಾನ್ಸರಿನ ಸೂಚನೆ ಯಾವುದೂ ಕಂಡುಬರಲಿಲ್ಲ.

ಆಗ ಕಪಿನೀಪತಿಯು ಒಂದು ಸಲಹೆ ಮಾಡಿದ 'ಒಂದು ಚೂರು ಸೆಕ್ಷನ್ ಮಾಡಿ ಪರೀಕ್ಷೆ ಮಾಡಿದರೆ ಹೇಗೆ ?' ಎಂದು. ಪತ್ರಿಕೆಗಳನ್ನು ಓದುವವನಲ್ಲವೇ? ಕ್ಯಾನ್ಸರಿಗೆ ಮಾಡುವ ಸಕಲ ಪರೀಕ್ಷಾ ವೈಭವಗಳನ್ನು ಅರಿತಿದ್ದ. 'ಅದನ್ನೂ ಮಾಡುತ್ತೇನೆ, ನಿಮ್ಮ ಸಂಶಯವಾದರೂ ಆಗ ನಿವಾರಣೆಯಾಗುತ್ತೆ ! ಇನ್ನು ಯಾವ ಫಲವಿರದಿದ್ದರೂ' ಎಂದರು ಆ ತಜ್ಞರು. ಪುಟ್ಟದೊಂದು ಶಸ್ತ್ರ ಚಿಕಿತ್ಸೆ ಮಾಡಿ ಸೆಕ್ಷನ್ ತೆಗೆದರು. ವಾರವಾದ ಮೇಲೆ ಅದರ ಫಲಿತಾಂಶವನ್ನು ಕಪಿನೀಪತಿಗೆ ಕಳಿಸಿಕೊಟ್ಟರು. 'ಕ್ಯಾನ್ಸರಿನ ಸುಳಿವೂ ಇಲ್ಲ' ಎಂದಿತ್ತು ಫಲಿತಾಂಶದ ವರದಿಯಲ್ಲಿ. ಅದನ್ನು ತಂದು ಮನೆ ವೈದ್ಯನಿಗೆ ತೋರಿಸಿದ.

'ನೋಡಪ್ಪ ! ಬೊಂಬಾಯಿನ ತಜ್ಞರೂ, ಕ್ಯಾನ್ಸರಿನ ಸುಳಿವಿಲ್ಲ ಎಂದು ಬರೆದಿದ್ದಾರೆ. ಆದರೆ ನನ್ನ ಗೋಳು ತಪ್ಪೇ ಇಲ್ಲ. ನಿಮ್ಮಗಳ ಮಾತು ಕೇಳಿ ಸಿಗರೇಟನ್ನೂ ಬಿಟ್ಟೆ. ಆದರೆ ಆ ಕಾಟ ನನ್ನ ಬಿಡಲಿಲ್ಲ. ತಜ್ಞರದೆಲ್ಲಾ ಆಯಿತು. ನಿನ್ನ ಕೈಲಿ ಏನಾದರೂ ಸಾಧ್ಯವೇ ನೋಡು' ಎಂದು ಹೇಳಿದ. ಕಪಿನೀಪತಿಯ ಸಂಸಾರದ ವಿವರಗಳೆಲ್ಲವೂ ಮನೆ ವೈದ್ಯನಿಗೆ ಗೊತ್ತಿತ್ತು. ಆದಕಾರಣ ಅವ ಅಂದ: 'ರಾಯರೇ ! ನಿಮ್ಮ ಗಂಟಲಿನಲ್ಲಿ ಯಾವ ಬೇನೆಯೂ ಇಲ್ಲೆಂದು ತಜ್ಞರೆಲ್ಲರೂ ಹೇಳಿದ್ದಾರೆ. ಆದರೂ ನಿಮ್ಮ ತಾಪತ್ರಯ ತಪ್ಪಿಲ್ಲ. ನನಗನ್ನಿಸುತ್ತೆ, ಅಮೆರಿಕಾಕ್ಕೆ ಹೋದ ನಿಮ್ಮ ಮಗ ಹಿಂತಿರುಗುವ ತನಕ ಇದು ಹೀಗೇ ಇರುತ್ತೆ ಅಂತ. ಅಮೆರಿಕಾದ ಹುಡುಗಿಯೊಬ್ಬಳೊಂದಿಗೆ ತುಂಬಾ ಓಡಾಡುತ್ತಿದ್ದಾನೆ ಎಂದು ಗಾಳಿ ಸಮಾಚಾರ ಬಂದಾಗಿನಿಂದ ಹೀಗೆ ಗಂಟಲಿನಲ್ಲಿ ಸಿಕ್ಕಿಹಾಕಿಕೊಂಡಿದೆ ಅಂತ ಅನ್ನುತ್ತಿದ್ದೀರಿ.' ಎಂದ. ಕಪಿನೀಪತಿ ಗಹಗಹಿಸಿ ನಕ್ಕ. 'ಅಲ್ಲ, ಡಾಕ್ಟರೇ ! ನವರಾತ್ರಿಗೆ ಇಡುವ ಪಟ್ಟದ ಬೊಂಬೆಯ ಬಣ್ಣವಿರುವ ಹುಡುಗಿಯನ್ನು ನಾನೇನೋ ಮದುವೆಯಾದೆ. ನನ್ನ ಮಗ ಜಂತದ ಬೊಂಬೆಯಂತಹವಳನ್ನು ಮದುವೆಯಾದರೆ ನನಗೆ ಸಂತೋಷವೇ ಆಗಬೇಕು. ಅದಕ್ಕೂ, ನನ್ನ ಗಂಟಲಿಗೂ ಏಕೆ ಗಂಟು ಹಾಕುತ್ತೀರಿ ?' ಎಂದ. 'ಆತಂಕದಿಂದಲೂ ಈ ತರಹ ಕಾಟವು ಗಂಟಲಿನಲ್ಲಿ ಕಾಣಿಸಲು ಸಾಧ್ಯ. ಬೇರೆ ಯಾವ ಕಾರಣವೂ ಸಿಗದುದರಿಂದ, ಆತಂಕವು ಯಾವುದಿರಬಹುದು ಎಂದು ಯೋಚಿಸಿದೆ. ನಿಮ್ಮ ಮಗನ ನೆನಪಾಯಿತು. ಗಾಳಿ ಸಮಾಚಾರವು ನನಗೂ ಕೇಳಿಸಿತ್ತು. ಅದಕ್ಕೇ ತಾಳೆ ಹಾಕಿದೆ' ಎಂದರು ಮನೆ ವೈದ್ಯರು. 'ನೀನೋ ಹಳೇ ಕಾಲದ ಗೊಡ್ಡು ಡಾಕ್ಟರು' ಎಂದು ಕಪಿನೀಪತಿ ಆದರದಿಂದ ಮೂದಲಿಸಿದ.

ಮೂರು ತಿಂಗಳಾದ ಮೇಲೆ ಒಂದು ದಿನ ಕಪಿನೀಪತಿಯು ಮನೆ

ವೈದ್ಯರನ್ನು ಬರಹೇಳಿದ. 'ಬದರಿ ಯಾತ್ರೆಯನ್ನು ಮಾಡಿಬಿಡುವ ಎಂದು ಮನಸ್ಸಾಗಿದೆ. ಸಿಮ್ಲಾದಲ್ಲಿ ಒಂದು ಸಭೆಗೆ ನನ್ನ ಕಳಿಸಿದ್ದಾರೆ. ಜತೆಯಲ್ಲಿ ಬರುವ ಇಬ್ಬರು ಮೂವರು ಅಧಿಕಾರಿಗಳು ಬದರಿಯಾತ್ರೆಯ ಏರ್ಪಾಡು ಮಾಡಿದ್ದಾರೆ. ಅವರ ಜತೆಗೆ ಹೋದರೆ ಶ್ರಮವಿಲ್ಲದೆ ಯಾತ್ರೆಯಾಗಿಬಿಡುತ್ತೆ. ನನ್ನ ದೇಹಸ್ಥಿತಿ ನಿನಗೆ ಗೊತ್ತು. ಆ ಛಳಿ ಗಾಳಿಯಲ್ಲಿ ನೆಗಡಿ ಶೀತ ಆದರೆ ಯಾವ ಔಷಧಿಗಳನ್ನು ತೆಗೆದುಕೊಳ್ಳಬೇಕು. ಏನು ಪಥ್ಯ ಮಾಡಬೇಕು. ಇವೆಲ್ಲವನ್ನೂ ವಿಶದವಾಗಿ ಬರೆದು, ಕೈಗಾವಲಿಗೆಂದು ಔಷಧಿಗಳನ್ನೂ ಇಟ್ಟು, ಒಂದು ಪ್ಯಾಕೆಟ್ ಕೊಡು. ಮೂರು ನಾಲ್ಕು ವಾರಗಳ ಪ್ರವಾಸ. ಅನುಕೂಲಗಳು ದೊರೆತಾಗ ಯಾಕೆ ಬಿಡಬೇಕು?' ಎಂದರು. ಗಂಟಲಿನ ವಿಷಯ ಅವರೂ ಎತ್ತಲಿಲ್ಲ. ಮನೆ ವೈದ್ಯರು ಜ್ಞಾಪಿಸಲೂ ಇಲ್ಲ. ಅಗತ್ಯವಾದ ಔಷಧಿಗಳನ್ನು ಸಣ್ಣ ಮಡೀ ಪೆಟ್ಟಿಗೆಯಲ್ಲಿಟ್ಟು ಕಪಿನೀಪತಿಗೆ ಕಳಿಸಿಕೊಟ್ಟರು.

ನಾಲ್ಕು ವಾರಗಳಾದ ಮೇಲೆ ಕಪಿನೀಪತಿಯು ಕಾನ್ಫರೆನ್ಸನ್ನೂ, ಯಾತ್ರೆಯನ್ನೂ ಮುಗಿಸಿಕೊಂಡು ಬಂದ. ಮನೆಯಲ್ಲಿ ಗಂಗಾ ಸಂತರ್ಪಣೆಯನ್ನು ಮಾಡಿದ. ಮನೇ ಡಾಕ್ಟರು ಹೊತ್ತಾಗಿ ಬಂದುದರಿಂದ, ಕಪಿನೀಪತಿಯ ಜತೆಗೆ ಮೂರನೇ ಪಙ್ತಿಯಲ್ಲಿ ಭೋಜನಕ್ಕೆ ಕುಳಿತರು, 'ರಾಯರೇ ! ಯಾತ್ರೆಗೆ ಅಂತ ನಿಮ್ಮ ಜೇಬಿನ ಪೈಸೆ ಪೋಲಾಗದೆ ಇದ್ದರೂ, ಈ ಸಂತರ್ಪಣೆಗಾದರೂ ಧಾರಾಳವಾಗಿ ಖರ್ಚು ಮಾಡಿದ್ದೀರಿ. ಏನೇನೆಲ್ಲಾ ಭಕ್ಷ್ಯಗಳು ; ಭೋಜ್ಯಗಳು,' ಎಂದರು ಮನೆ ಡಾಕ್ಟರು, ಸ್ವಾಭಾವಿಕವಾಗಿ ಅವರು ಉಂಡಾಡಿಭಟ್ಟರು.

'ಯಾತ್ರೆ ಮುಗಿಸಿಕೊಂಡು ಬರುವ ಹೊತ್ತಿಗೆ ಅಮೆರಿಕಾದಿಂದ ಕೇಬಲ್ ಬಂದಿತ್ತು. ಇನ್ನೊಂದು ವಾರದಲ್ಲಿ ಮಗ ಯೂರೋಪಿನ ಪ್ರವಾಸಕ್ಕೆ ಹೋಗ್ತಾನಂತೆ. ಒಂದೆರಡು ತಿಂಗಳು ಅಲ್ಲೆಲ್ಲಾ ಸುತ್ತಾಡಿಕೊಂಡು, ಊರಿಗೆ ಹಿಂತಿರುಗುತ್ತಾನಂತೆ. ಕಾಗದವೂ ಬಂತು. ಪಿಎಚ್.ಡಿ.ಯಲ್ಲಿ ಯಶಸ್ವಿಯಾಗಿ ಪಾಸು ಮಾಡಿದ್ದಾನಂತೆ. ಸುಮಾರು ಉದ್ದಾನೆ ಕಾಗದ. ಅವನ ಪ್ರೊಫೆಸರುಗಳು ಹೊಗಳಿದ್ದನ್ನೆಲ್ಲಾ ಬರೆದಿದ್ದಾನೆ' ಎಂದರು ಕಪಿನೀಪತಿ. ಮನೆ ಡಾಕ್ಟರು ಆಡಿದ ಚುಚ್ಚು ಮಾತು ತಾಕಿರಲೇ ಇಲ್ಲ.

'ಹಾಗೇ ! ಅಂದರೆ ಕಾಗದದಲ್ಲಿ, ಅಮೆರಿಕಾದ ಜಂತದ ಬೊಂಬೆ, ಮದುವೆ, ಮಾಂಗಲ್ಯ, ಇತ್ಯಾದಿ ?' ಎಂದು ಡಾಕ್ಟರು ಕೇಳಿದರು.

'ಅದರ ಸುದ್ದಿಯೇ ಇಲ್ಲ. ಬರೀ ಗಾಳಿ ಸಮಾಚಾರ ಅಂತ ಕಾಣುತ್ತೆ. ನಮ್ಮ ಜನದ ಚಾಳೀ ಗೊತ್ತಲ್ಲಾ, ಯಾವ ಚಾಡಿ ಸುದ್ದಿಗೂ ರೆಕ್ಕೆ ಪುಕ್ಕ ಕಟ್ಟಿ ಬಿಡೋದು' ಎಂದು ರಾಯರು ಆರಾಮವಾಗಿ ನಕ್ಕರು.

'ನಿಮ್ಮ ಗಂಟಲಿನಲ್ಲಿ ಏನೋ ಸಿಕ್ಕಿಹಾಕಿಕೊಂಡು ಕಾಟ ಕೊಡುವುದು ಏನಾಯಿತು ? ಎಂದು ಮನೆಯ ಡಾಕ್ಟರು ವಿಚಾರಿಸಲಿಲ್ಲ. ಕಪಿನೀಪತಿರಾಯನಿಗೆ ಅದರ ನೆನಪೇ ಇರಲಿಲ್ಲ.

ಅಂದರೆ ಆತಂಕದಿಂದಲೇ ಕ್ಯಾನ್ಸರಿನ ಮೊದಲ ಹಂತದ ಚಿಹ್ನೆಗಳು ತೋರಿ ಬರಬಹುದು. ಕ್ಯಾನ್ಸರಿನ ಬಗೆಯ ವಿಪುಲ ಪ್ರಚಾರದಿಂದ, ಆತಂಕವು ಈ ರೂಪನ್ನು ಧರಿಸಬಹುದು–ಕ್ಯಾನ್ಸರ್ ಬಗೆಯ ಪ್ರಬಲ ಪ್ರಚಾರದಿಂದ, ಹಲವಾರು ಮಂದಿಯ ಆತಂಕವು ಕ್ಯಾನ್ಸರಿನ ಭಯವಾಗಿ ಪರಿಣಮಿಸಬಹುದು. ಆದರೂ ಪ್ರಚಾರವನ್ನು ಮಾಡಲೇಬೇಕು. ಏಕೆಂದರೆ ಕ್ಯಾನ್ಸರ್ ಬೇನೆಯಿಂದ ಒಬ್ಬರನ್ನು ಉಳಿಸಿದರೂ ಸಾರ್ಥಕ. ಹತ್ತೂ ಜನರು ಭಯಪಟ್ಟರೂ ಪರವಾಗಿಲ್ಲ. ಅದರಿಂದ ಅತಿಯಾದ ದುರಂತವಾವುದೂ ಅರಿವಾಗುವುದಿಲ್ಲ.

**ಜಾಹೀರಾತುಗಳ ಅತಂಕ**

'ಗುಪ್ತವ್ಯಾಧಿಗಳಿಂದ ಏಕೆ ನರಳುವಿರಿ ? ನಮ್ಮ......ನ್ನೇ ಸೇವಿಸಿರಿ' ಎಂದು ಗೋಡೆಗೋಡೆಗಳ ಮೇಲೂ ಭಿತ್ತಿಪತ್ರಗಳನ್ನು ಕಣ್ಣಿಗೆ ಬಡಿಯುವಂತೆ ಜಾಹೀರಾತು ಮಾಡುತ್ತಾರೆ. 'ನಮ್ಮ......ನ್ನು' ಮಾರುವಾಗ ಪುಟ್ಟ ಹೊತ್ತಗೆಗಳನ್ನೂ ಪುಕಟ್ಟು ಕೊಡುತ್ತಾರೆ. ಆ ಹೊತ್ತಗೆಗಳಲ್ಲಿ ಏನೇನೆಲ್ಲಾ ಭಯ ಮೂಡಿಸುವ ವಿಷಯಗಳಿರುತ್ತವೆ ಅಂತ. 'ದುರಭ್ಯಾಸಗಳಲ್ಲಿ ತೊಡಗಿದ್ದರೆ, ನಿಮ್ಮ ಕಣ್ಣು ಕಾಲಕ್ರಮೇಣ ಇಂಗಿ ಹೋಗುತ್ತದೆ, ಕೂದಲು ನರೆತು ಬಿದ್ದೇ ಹೋಗುತ್ತದೆ, ಮೂಗು ಚಪ್ಪಟೆಯಾಗುತ್ತದೆ, ಬಾಯಿ ಬೊಚ್ಚಾಗುತ್ತದೆ, ಮನಸ್ಸು ಸಡಿಲಗೊಂಡು ಯಾವ ನಿರ್ಧಾರವನ್ನೂ ಮಾಡಲು ಆಗುವುದಿಲ್ಲ. ವಂಶಾಭಿವೃದ್ಧಿಯೂ ಆಗಲಾರದು, ಅಪ್ಪಿ ತಪ್ಪಿ ಆದರೂ ಅವಲಕ್ಷಣ ಕುಬ್ಜಗಳು ! ಸೊಂಟವು ಬಗ್ಗಿ ಹೋಗುತ್ತದೆ.'

ಇಂತಹ ಘೋರ ದುಷ್ಪರಿಣಾಮಗಳನ್ನು ತಪ್ಪಿಸಬೇಕಾದರೆ, ಪೂರ್ಣ ಯೌವನವನ್ನು ಯಯಾತಿಯಂತೆ ಬಲು ಕಾಲ ಪಡೆಯಬೇಕಾದರೆ, 'ನಮ್ಮ......ನ್ನು' ಸೇವಿಸಿರಿ.

ತಲೆಯಲ್ಲಿ ತುಣುಕು ಬುದ್ಧಿಯಿದ್ದರೂ, ಇಂತಹ ಜಾಹೀರಾತುಗಳನ್ನು ನೋಡಿ ಮಂದಿ ನಗಬೇಕು. ಧನ್ವಂತರಿಯೂ ಸಮುದ್ರಮಥನದಲ್ಲಿ ಎತ್ತಿಕೊಂಡು ತಂದ ಅಮೃತವು, ಈ ಫಲಿತಾಂಶವನ್ನಾಗಲೀ, ಸೌಭಾಗ್ಯವನ್ನಾಗಲೀ ಕೊಡುತ್ತದೆ ಎಂದು ಜಾಹೀರಾತು ಮಾಡಿಲ್ಲ. 'ನಮ್ಮ............ನ್ನು' ಹಾಗೇ ಜಾಹೀರಾತನ್ನು

ನಾಚಿಕೆ ಇರದೆ, ಸಂಕೋಚವಿರದೆ, ನಗುತ್ತಾರೆ ಎನ್ನುವ ಭಯವೂ ಇರದೆ, ಪ್ರಚಾರ ಮಾಡುತ್ತಾರೆ, ಸಂದಿಗೊಂದಿಗಳ ಗೋಡೆಗಳ ಮೇಲೆಲ್ಲಾ.

ಆದರೆ ಜನತೆಯ ವಿಪರೀತ ವರ್ತನೆ ಎಂತಹುದು ಅನ್ನುತ್ತೀರಿ? ಯುವಕ ಮಂದಿ ಇದನ್ನು ನಂಬುತ್ತಾರೆ. ಕಾಲೇಜುಗಳಲ್ಲಿ ಓದುವ ವಿದ್ಯಾವಂತ ಯುವಕರು, ಅಚ್ಚಾಗಿ ಬಂದಿದೆಯಲ್ಲ ಎಂದು ನಂಬುತ್ತಾರೆ ! ಅಚ್ಚಾಗಿ ಬಂದುದೆಲ್ಲ ಸತ್ಯ ಎಂದು ನಂಬಬೇಕಾದರೆ ಮನಸ್ಸನ್ನು ಯಾವ ರೀತಿಯ ಮೌಢ್ಯ ಆವರಿಸಿಕೊಂಡಿರಬೇಕು. !

ಯಾಕೆ ಹೀಗಾಗುತ್ತೆ?

ಯುವಕರಲ್ಲಿ, ಪೌಗಂಡ ವಯಸ್ಸಿನವರಲ್ಲಿ, ದುರಭ್ಯಾಸವು ಸಾಮಾನ್ಯವಾಗಿ ಇದ್ದೇ ಇರುತ್ತದೆ. ಒಂದಲ್ಲ ಒಂದು ಕಾರಣದಿಂದ ; ಒಂದಲ್ಲ ಒಂದು ರೀತಿಯಲ್ಲಿ ದುರಭ್ಯಾಸಕ್ಕೆ ನಾನು ಒಳಗಾಗಿದ್ದೇನೆ. ಇದನ್ನು ತಪ್ಪಿಸಿಕೊಳ್ಳುವ ಬಗೆ ಹೇಗೆ? ಎಂದವರು ವೈದ್ಯರಲ್ಲಿಗೆ ಹೋಗಿ ಸಲಹೆಯನ್ನು ಪಡೆಯುವುದಿಲ್ಲ. ಏಕೆ ? ಈ ಅಭ್ಯಾಸವು, ದುರಭ್ಯಾಸ, ಕೆಟ್ಟುದು ಎಂದವರು ನಂಬಿರುತ್ತಾರೆ. ಆದುದರಿಂದಲೇ ಗುಟ್ಟಾಗಿ ಆಚರಿಸುವ ಅಭ್ಯಾಸ. ಮಾಡಬಾರದುದನ್ನು ಮಾಡಿದೆ ಎನ್ನುವ ಅಪರಾಧ ಮನೋಭಾವವು ಅವರನ್ನು ಕುಕ್ಕಲಾರಂಭಿಸುತ್ತದೆ. ದುರಭ್ಯಾಸ ಎಂದ ಮೇಲೆ ದುಷ್ಪರಿಣಾಮಗಳು ಹಿಂದೆಯೇ ಆಗಬೇಕು, ಅದನ್ನೂ ಒಪ್ಪಿಕೊಂಡಿರುತ್ತಾರೆ. ಇನ್ನೊಬ್ಬರೆದುರಿಗೆ, ಅದೂ ವಯಸ್ಸಿನಲ್ಲಿ ಹಿರಿಯರಾದವರೆದುರಿಗೆ, ಇದನ್ನೆಲ್ಲಾ ಹೇಳಿಕೊಂಡರೆ ಆತ್ಮಾಭಿಮಾನಕ್ಕೆ ಪೆಟ್ಟಾಗುತ್ತದೆ. ಆದಕಾರಣ ಹೇಳಿಕೊಳ್ಳುವುದೇ ಇಲ್ಲ. ಆದರೆ ದುರಭ್ಯಾಸವನ್ನು ಬಿಡಲು ಸಾಧ್ಯವೂ ಆಗುವುದಿಲ್ಲ. ಒಂದೆರಡು ವಾರ, ಒಂದೆರಡು ತಿಂಗಳು ತಪ್ಪಿಸಿದರೂ, ಅದರಿಂದಾಗುವ ಸುಖದ ನೆನವು ಮರಳಿ ಮರಳಿ ಸೆಳೆಯುತ್ತದೆ. ಇದೊಂದು ಹಿರಿಯ ಆತಂಕವಾಗಿಬಿಡುತ್ತದೆ. ಆತಂಕದಿಂದ ಮುತ್ತಲ್ಪಟ್ಟವನ ಮನಸ್ಸು ನೀರಿನಲ್ಲಿ ಮುಳುಗಿ ಹೋಗುತ್ತಿರುವವನಂತೆ. ಕೈಗೆ ಸಿಕ್ಕ ಕಡ್ಡಿಯನ್ನು ಹಿಡಿದುಕೊಂಡು, ಇದರಿಂದ 'ಬಚಾವ್' ಆಗುತ್ತೇನೆ ಎಂಬ ಆಸೆಯು ಮೂಡುತ್ತದೆ.

ಈ ಕಾರಣದಿಂದಾಗಿ, ಯುವಕರಲ್ಲನೇಕರು, ವಿದ್ಯಾವಂತರಾಗಿರಲಿ ಇಲ್ಲದಿರಲಿ, ಇಂತಹ ಜಗಜ್ಜಾಹೀರಾತುಗಳನ್ನು ನಂಬುತ್ತಾರೆ. ಅದರಲ್ಲಿ ವರ್ಣಿಸಿದ ಕೆಲವು ಚಿಹ್ನೆಗಳು ಈಗಾಗಲೇ ನಮ್ಮಲ್ಲಿವೆ, ಎಂದು ತಾವೇ ತಾಳೆ ಹಾಕುತ್ತಾರೆ. ಜಾಹೀರಾತಿನ ಮದ್ದೇ ನಮ್ಮನ್ನು ಕಾಪಾಡುತ್ತದೆ ಎಂದಂದುಕೊಳ್ಳುತ್ತಾರೆ.

ಸಮಾಜದಲ್ಲಿ ಇಂತಹವರ ಸಂಖ್ಯೆ ಎಷ್ಟು ಅಂತೀರಿ? ಶತಾಂಶ

ಐವತ್ತಕ್ಕಿಂತಲೂ ಹೆಚ್ಚು ! ಅಪರಾಧ ಮನೋಭಾವದಿಂದ ಆತಂಕವಾಗುತ್ತದೆ. ಆಗ ಜಾಹೀರಾತುಗಳನ್ನು ಓದುತ್ತಾರೆ, ಗುಟ್ಟಾಗಿ. ಆತಂಕವು ಅತ್ಯುಲ್ಬಣವಾಗುತ್ತದೆ. ತಾತ್ಕಾಲಿಕ ಉದ್ರೇಕಗೊಳಿಸುವ ಆ ಔಷಧಿಗಳು ಸ್ವಲ್ಪ ದಿನ ಧೈರ್ಯ ತುಂಬುತ್ತವೆ. ಅನಂತರ ಬಲುಬೇಗ ದುಷ್ಪರಿಣಾಮಗಳನ್ನು ಮೂಡಿಸುತ್ತವೆ. ವಿಷಚಕ್ರವು ಈ ರೀತಿ ಸುತ್ತಹತ್ತುತ್ತದೆ.

ವೈದ್ಯಜನಿತ ಆತಂಕವೆಂದೆನ್ನುವುದಕ್ಕಿಂತ ಜಾಹೀರಾತುಜನಿತ ಆತಂಕ ಎನ್ನಬಹುದು. ಈ ಗುಂಪಿನಲ್ಲಿ ಹೆಚ್ಚು ಮಾರಾಟವಾಗುವ, ಯುವಕರಿಗೆ ಮೆಚ್ಚಾಗುವ, ಹಲವಾರು ಕಾದಂಬರಿ, ಕತೆಗಳನ್ನೂ ಗಮನಿಸಬಹುದು. ಜಾಹೀರಾತಿನಲ್ಲಿ ಸಾಹಿತ್ಯದ ಸೋಂಕು ಇರುವಂತೆ, ಸಾಹಿತ್ಯದ ಕೆಲವು ಪ್ರಕಾರಗಳಲ್ಲಿ ಜಾಹೀರಾತಿನ ಕೊಳೆಯನ್ನೂ ಕಾಣಬಹುದು. ಆತಂಕದ ಉಲ್ಬಣಕ್ಕೆ ಇವೂ ಬೆಂಬಲ ನೀಡುತ್ತವೆ.

**ಆತಂಕ ಮತ್ತು ಚಟ**

'ಹೇಗೆ ಹೇಗೋ ಆಡ್ತಾ ಇದಾನೆ, ನಮ್ಮ ಮಗು, ತಕ್ಷಣ ಬನ್ನಿ' ಎಂದು ಸಾಹುಕಾರರ ಹೆಂಡತಿ ರಾತ್ರಿಯ ಹನ್ನೆರಡರ ವೇಳೆಗೆ ಫೋನ್ ಮಾಡಿದರು. ಹೋಗಿ ನೋಡಿದರೆ 'ಮಗು'ವಿಗೆ ಮೂವತ್ತರ ಪ್ರಾಯ, ಧಾಂಡಿಗ. ಮಂಚದ ಮೇಲೆ ಬಿರಟೆ ಹೊಡೆದಂತೆ ಸೆಟೆದು ಕೂತಿದ್ದಾನೆ. ಗಾಬರಿ ತುಂಬಿದ ವಿಹ್ವಲ ಮುಖ. ನಾಡಿ ಹಿಡಿದುನೋಡಿದರೆ, ಜೂಜಿನ ಕುದುರೆಯ ತರಹ ಓಡುತ್ತಿದೆ. ಬೇಗ ಬೇಗ ಮೇಲ್ಮೇಲುಸಿರು ಬಿಡುತ್ತಿದ್ದಾನೆ. ಸುತ್ತಲೂ ಮನೆಯವರೆಲ್ಲ ಗಿರ್ಕಾಯಿಸಿಕೊಂಡಿದ್ದಾರೆ. ಈಗ ಹೇಗಿದೀಪ್ಪಾ ಎಂದು ಕ್ಷಣಕ್ಷಣಕ್ಕೂ ಕಾತರದಿಂದ ವಿಚಾರಿಸುತ್ತಾ ಇದ್ದಾರೆ.

ಕೇಳಿದ ಯಾವ ಪ್ರಶ್ನೆಗೂ ಅವ ಹ್ಞಾ ಹೂ, ಬಿಟ್ಟು ಸರಿಯಾದ ಯಾವ ಉತ್ತರವನ್ನೂ ಕೊಡುತ್ತಿಲ್ಲ. ಕೊಡುವ ಸ್ಥಿತಿಯಲ್ಲೂ ಅವ ಇದ್ದಂತೆ ಕಾಣಿಸಲಿಲ್ಲ. ಭೀಕರ ದೆವ್ವವನ್ನು ಕಣ್ಣಾರೆ ಕಂಡವನಂತೆ ಬೆದರಿ ಕೂತಿದ್ದ. 'ಉಗ್ರ ಆತಂಕದ ಸ್ಥಿತಿಯಲ್ಲಿದ್ದಾನೆ. ಅದು ಬಿಟ್ಟರೆ ಇನ್ನು ಯಾವ ಕೆಟ್ಟ ಸೂಚನೆಗಳೂ ಇಲ್ಲ.' ಎಂಬುದು ಸ್ಪಷ್ಟವಾಗಿತ್ತು. ಆದುದರಿಂದ ಮಲಗಿ ಚೆನ್ನಾಗಿ ನಿದ್ರೆ ಬರುವಂತೆ ಮಾಡುವ ಶಾಂತಿಕಾರಕ ಔಷಧಿಗಳನ್ನು ಚುಚ್ಚಲಾಯಿತು. ಅವನು ಮಲಗಿ ನಿದ್ರಿಸಿದರೆ ವೈದ್ಯನೂ ಮನೆಗೆ ಹೋಗಿ ನಿದ್ರಿಸಬಹುದಲ್ಲ.

ಬೆಳಿಗ್ಗೆ ರೋಗಿಯ ಮನೆಯಿಂದ ಕರೆಯೇನೂ ಬರಲಿಲ್ಲ. ಆದರೆ ವೈದ್ಯನಿಗೆ

ಆತಂಕ ! ರೋಗಿ ಹೇಗಿದ್ದಾನೋ ? ಏನಾದನೋ ? ಅಂತ. ಕಾರಣ, ಮೇಲೆ ಬಿದ್ದುಗೊಂಡು ಅವನೇ ಸಾಹುಕಾರರ ಮನೆಗೆ ಹೋದ. ಅಲ್ಲಿ ವೈದ್ಯ ಕಂಡುದೇನು? ಹೊರ ಹಜಾರದಲ್ಲಿಯೇ ಧಾಂಡಿಗ ಮಗು ಕುಳಿತು ಇಡಲಿಗುಡ್ಡಗಳನ್ನೂ ಕಾಫಿ ಚೊಂಬನ್ನೂ ಖಾಲಿ ಮಾಡುತ್ತಿದ್ದ. 'ಚೆನ್ನಾಗಿ ನಿದ್ರೆ ಬಂತು ಡಾಕ್ಟರೇ ! ಈಗ ಚೆನ್ನಾಗಿದ್ದೀನಿ. ಅಸಾಧ್ಯ ಹಸಿವು ಅಷ್ಟೇ' ಎಂದ.

'ನಿನ್ನೆ ನಿಶಿರಾತ್ರಿಯಲ್ಲಿ ಹಾಗೆ ಯಾಕೆ ಆಡಿದೆ ? ಏನಾದರೂ ಕೆಟ್ಟ ಕನಸು ಬಿದ್ದು ಹಾಗಾಗಿತ್ತೇ ? ಅಥವಾ ಎಲ್ಲಾದರೂ ಊಟಗೀಟ ; ತೀರ್ಥಪ್ರಸಾದ ಅತಿ ಯಾಯಿತೋ ?' ಎಂದು ವೈದ್ಯರು ಕೇಳಿದರು. ಅವರ ಆತಂಕ ಈಗ ಕಡಮೆ ಯಾಗಿತ್ತಲ್ಲಾ ! ಈಗ ಕುಹಕವಾಡಬಹುದಾಗಿತ್ತು. ರೇಗಿಸಿ ಕೆಣಕಲೂ ಅನುಕೂಲವಿತ್ತು. ರಾತ್ರಿಯ ನಿದ್ರೆಗೆಡಿಸಿದವನ ಮೇಲೆ ಹೀಗಾದರೂ ಸೇಡು ತೀರಿಸಿಕೊಳ್ಳಬೇಡವೇ ?

ಧಾಂಡಿಗ ಮಗು ಡಾಕ್ಟರನ್ನು ಒಂದು ತರಹ ನೋಡಿದ. ಬನ್ನಿ ನನ್ನ ಕೊಠಡಿಗೆ, ಪರೀಕ್ಷೆ ಮಾಡೀರಂತೆ, ಎಂದು ಹೇಳಿ, ತಿಂಡಿ ತಿನ್ನುವುದನ್ನು ಅರ್ಧದಲ್ಲಿ ನಿಲ್ಲಿಸಿ ಎದ್ದ. 'ಅಮ್ಮಾ, ತಿರುಗಿ ಬಂದು ತಿಂದು ಮುಗಿಸ್ತೀನಿ, ತಟ್ಟೆ ಮುಚ್ಚಿಡಮ್ಮಾ, ಎಂದು ತಾಯಿಗೆ ಹೇಳಿ ಕೊಠಡಿಗೆ ಹೋದ. ಹಿಂಬಾಲಿಸಿದ ಡಾಕ್ಟರು ಕೋಣೆಯನ್ನು ಸೇರಿದಮೇಲೆ ಬಾಗಿಲು ಮುಚ್ಚಿ ಅಗುಳಿಯನ್ನು ಹಾಕಿದ.

'ಯಾರ ಹತ್ತಿರವೂ ಹೇಳಬೇಡಿ, ಡಾಕ್ಟರೇ ! ಕಲ್ಕತ್ತಾದಿಂದ ಸ್ನೇಹಿತ ನೊಬ್ಬನು ನಿನ್ನೆ ಸಂಜೆ ಭೇಟಿಯಾಗಿದ್ದ. ಬೆಳ್ಳಿಯ ವರಕು ಹಾಕಿದಂತಿದ್ದ ತಂಬಾಕಿನ ಮಾತ್ರೆಗಳನ್ನು ಪುಟ್ಟ ಶೀಷೆಯಲ್ಲಿಟ್ಟುಕೊಂಡಿದ್ದ. ಅದನ್ನು ನನಗೆ ಕೊಟ್ಟು ನಾಳೆ ನಾಡಿದ್ದರಲ್ಲಿ ಭೀಮಸಿಂಗ್ ಬರ್ತಾನೆ, ನಿನ್ನ ಬಳಿಗೆ, ಅವನಿಗೆ ಇದನ್ನು ಕೊಡು' ಎಂದ, ಆಗಲಿ ಅಂತ ಇಸಕೊಂಡೆ. 'ಕಲ್ಕತ್ತಾದಿಂದ ಇದನ್ನು ಭೀಮಸಿಂಗ್ ಏಕೆ ತರಿಸಿಕೊಳ್ಳುತ್ತಾನೆ ? ತಂಬಾಕು ಇಲ್ಲಿ ಸಿಗುಲ್ಲವೇ ?' ಎಂದು ಕೇಳಿದೆ. 'ಇದು ಪರಮಾಯಿಷಿ ತಂಬಾಕು ಕಣೋ, ಒಂದನ್ನು ಎಲಡಿಕೆ ಜತೆಗೆ ಹಾಕಿಕೊಂಡರೆ ಆಮೇಲೆ ನೋಡು ಅದರ ಮಜ! ನಾಲ್ವರು ಹೆಂಡಿರಿದ್ದರೇ ಸಂಸಾರ ಚೆನ್ನು ಅನ್ನಿಸುತ್ತೆ' ಎಂದ. ಒಂದು ಮಾತ್ರೆ ಕಡಿಮೆಯಾದರೆ ಭೀಮಸಿಂಗ್ ಬೈಯಲ್ಲ ಅಂತಂದುಕೊಂಡೆ. ಊಟವಾದ ಮೇಲೆ ಅಡಿಕೆ ಜತೆಗೆ ಇದನ್ನೂ ಬಾಯಿಗೆ ಹಾಕಿಕೊಂಡೆ ಎಂತದೋ ವಾಸನೆ ಇತ್ತು, ಕೆಟ್ಟುದೇನೂ ಅಲ್ಲ, ವಗಚು ವಗಚಾಗಿತ್ತು. ಒಂದು ತರಹ ರುಚಿಯಾಗಿಯೇ ಇತ್ತು ತಿಂದೆ, ನೋಡಿ, ಡಾಕ್ಟರೇ ! ಎರಡು ವಿಳ್ಳೇದೆಲೆ ಜಗಿದೆ. ಅಷ್ಟರಲ್ಲಿ ಮೈ ಬೆವರುಕ್ಕೆ ಶುರುವಾಯಿತು. ಎದೆ

ಹೊಡೆದುಕೊಳ್ಳುಕ್ಕೆ ಪ್ರಾರಂಭವಾಯಿತು. ಬುದ್ಧಿಯೇ ಸ್ಥಿಮಿತದಲ್ಲಿರಲಿಲ್ಲ. ಎಲ್ಲಾದರೂ ಓಡಿ ಹೋಗೋಣ ಅನ್ನಿಸಿತು. ಏಳುಕ್ಕೆ ಕಾಲೇ ಬರದು. 'ಇದು ಯಾಕೆ ಹೀಗಾಡ್ತಾ ಇದೀರೀ ಅಂದ್ರೆ' ಅಂತ ಅಳುಮುಖ ಮಾಡಿಕೊಂಡು ಕೊಠಡಿಯ ಬಾಗಿಲು ಬಿಚ್ಚಿ ನನ್ನ ಹೆಂಡತಿ ಅಮ್ಮನ್ನ ಕರೆಯುಕ್ಕೆ ಹೋದಳು. ಬೇಡ ಕಣೆ ಇಲ್ಲೇ ಇರು ಅಂತ ಹೇಳಬೇಕು ಅಂತ ಮನಸ್ಸು. ಆದರೆ ಮಾತು ಬರಲಿಲ್ಲ. ಅಮ್ಮ ಬಂದಳು, ಯಾಕೆ ಹೀಗೆ ಮಗು ಎಂದು ಚೀರಿದಳು. ಕೂಡಲೇ ನಿಮಗೆ ಫೋನ್ ಮಾಡಿದಳು. ನೀವು ಬಂದಿರಿ, ಇನ್ಜಕ್ಷನ್ ಕೊಟ್ಟಿರಿ ; ಸುತ್ತಲೂ ನಡೆಯುತ್ತಿದ್ದುದೆಲ್ಲಾ ಚೆನ್ನಾಗಿ ಗೊತ್ತಾಗುತ್ತಿತ್ತು. ಆದರೆ ಬಾಯಿ ಬಿಟ್ಟು ಸರಿಯಾಗಿ ಮಾತನಾಡಲಾಗಲಿಲ್ಲ. ಬೆಳಿಗ್ಗೆ ಎದ್ದ ಮೇಲೆ ಯಾವ ತಾಪತ್ರಯವೂ ಇಲ್ಲ,' ಎಂದು ಹಿಂದಿನ ರಾತ್ರಿಯ ರಹಸ್ಯವನ್ನು ಬಯಲು ಮಾಡಿದ, ಗುಟ್ಟಾಗಿ.......

ಅವರಿವರ ಮಾತು ಕೇಳಿ, ಗೂಳಿಯ ತರಹ ಆಗ್ತೀನಿ, ಎಂದು ಎಂತೆಂತದೊ ಮಾತ್ರೆಗಳನ್ನು ಜಗಿದರೆ ಪರಿಣಾಮವು ತೀವ್ರ ಆತಂಕದಲ್ಲಿ ಮುಕ್ತಾಯವಾಗಬಹುದು.

ಉಬ್ಬಸದ ಕಾಯಿಲೆ ಇರುವವರು ಈಫಡ್ರಿನ್ ಇರುವ ಔಷಧದ ಮಾತ್ರೆಗಳನ್ನು ಕೈಗಾವಲಾಗಿ ಇಟ್ಟುಕೊಂಡಿರುತ್ತಾರೆ. ನಿಶಿರಾತ್ರಿಯಲ್ಲಿ ಉಬ್ಬಸ ಉಲ್ಬಣವಾದರೆ ಆಗ ಬಳಸಬಹುದು ಎಂದು. ಹೀಗೆ ಬಳಸಿ ಸಾಕಷ್ಟು ಸೌಖ್ಯವನ್ನು ಪಡೆಯುತ್ತಾರೆ. ಆದರೆ ಒಮ್ಮೊಮ್ಮೆ ಒಂದೆರಡು ಗುಳಿಗೆಗಳನ್ನು ಸೇವಿಸಿದ ಮೇಲೆ ಕೂಡ ಉಬ್ಬಸವು ಇಳಿಯಲಿಲ್ಲ. ಉಬ್ಬಸದ ಕಾಟವನ್ನು ತಡೆಯಲಾರದೆ, ರಾತ್ರಿಯ ವೇಳೆ ವೈದ್ಯರ ಬಳಿಗೆ ಹೋಗಲಾರದೆ, ಮೇಲಿಂದ ಮೇಲೆ ಮಾತ್ರೆಗಳನ್ನು, ಲೆಕ್ಕವಿಲ್ಲದೆ ಸೇವಿಸಿ ಬಿಡುತ್ತರೆ. ಆಗ ಉಬ್ಬಸವು ತುಸು ಕಡಿಮೆಯಾದರೂ, ಅದಕ್ಕಿಂತಲೂ ಹೆಚ್ಚಾಗಿ ತೀವ್ರ ಆತಂಕವು ಕಾಡುತ್ತದೆ. ಎದೆ ಹೊಡೆದುಕೊಳ್ಳುತ್ತದೆ. ನಿದ್ರೆ ಬರುವುದಿಲ್ಲ. ಏನಾಗಿಬಿಡುತ್ತೋ? ಏನೇನೋ ಆಗುತ್ತಿದೆಯಲ್ಲ ಎಂಬ ಭಯವಾಗುತ್ತದೆ.

ಸ್ವಲ್ಪ ಕಾಲಾನಂತರ ಆತಂಕವು ಶಮನವಾಗುತ್ತದೆ. ಔಷಧಿಗಳ ಪ್ರಭಾವವು ಕಡಿಮೆಯಾದಾಗ.

ಪರೀಕ್ಷೆಗೆ ಓದಬೇಕು ; ಹಾಳೂ ನಿದ್ರೆ ಝುಕಾಯಿಸಿಕೊಂಡು ಬರುತ್ತದೆ. ಇದನ್ನ ತಪ್ಪಿಸಬೇಕು, ಎಂದು ವಿದ್ಯಾರ್ಥಿಗಳು, ಕೊಳಗ ಕೊಳಗ ಕಾಫಿಯನ್ನು ಕುಡಿಯುತ್ತಾರೆ. ನಿದ್ರಾನಿವಾರಕ ಔಷಧಿಗಳನ್ನು–ಪೆಪ್‌ಪಿಲ್ಸ್–ಸೇವಿಸುವುದೂ ಉಂಟು. ಸಣ್ಣ ಪ್ರಮಾಣದಲ್ಲಿ ಕಾಫಿಯಾಗಲೀ, ಆಮ್ಫಿಟಮೀನ್ ಪೆಪ್‌ಪಿಲ್ಸ್ ಆಗಲಿ, ಸ್ವಲ್ಪ ಸಹಾಯವನ್ನು ಮಾಡಬಹುದು. ಆದರೆ ನಿದ್ರೆಯು ಸಹಜ ಪ್ರವೃತ್ತಿ.

ಮನಸ್ಸಿನ ದೃಢತೆಯಿಂದ ಅದನ್ನು ಹತೋಟಿಯಲ್ಲಿಡಲಾಗದಿದ್ದರೆ, ಔಷಧಿಗಳೂ ಸಹ ಬಳಸಲ್ಪಡುತ್ತವೆ. ಆಗ, ಒಂದು ಮಿತಿಯನ್ನು ಮೀರಿದಾಗ, ಆತಂಕದ ಚಿಹ್ನೆಗಳು ಕಾಣಬರುತ್ತದೆ. ಅಂತಹ ಸ್ಥಿತಿಯಲ್ಲಿ ಕಣ್ಣಿಟ್ಟುಕೊಂಡು ಓದುವುದೂ ಕಷ್ಟ. ಓದಿದರೂ ತಲೆಗೆ ಹತ್ತುವುದೇ ಇಲ್ಲ. ಓದು ಹಾಳಾಗಿ ಹೋಗಲಿ, ತಿಳಿದಿದ್ದು ಬರೆದರಾಯಿತು ಎಂದು ಮಲಗಿದರೆ, ನಿದ್ರೆಯೂ ಬರುವುದಿಲ್ಲ. ಕಣ್ಣು ರೆಪ್ಪೆಗಳನ್ನು ಮುಚ್ಚಲೂ ಆಗುವುದಿಲ್ಲ.

ಬಲವಂತಕ್ಕೆ ಬಸಿರಾದವರು, ಮಗುವನ್ನು ಹೆರಲು ಇಷ್ಟಪಡದೆ, ಬಯಕೆಯು ಮೂಡಿದ ಎರಡೋ ಮೂರನೆಯದೋ ತಿಂಗಳಿನಲ್ಲಿ ಮೈ ಇಳಿಸಿಕೊಳ್ಳಲು, ಕೇರಿಯ ಬೂಬಿಯರು, ಅಜ್ಜಿಯರು ಹೇಳಿದುದನ್ನೆಲ್ಲಾ ಮಾಡುತ್ತಾರೆ. ದೋರೆ ಪರಂಗಿಕಾಯಿಗಳು, ಎಂತೆಂತದೋ ಕಂಡೂ ಕೇಳದ ಗಿಡಮೂಲಿಕೆಗಳು, ಅವರಿವರು ಗುಟ್ಟಾಗಿ ಕೊಟ್ಟ ರಸಮಿಶ್ರ ಮಾತ್ರೆಗಳು ; ಯಾವುದು ಸಿಕ್ಕಿದರೆ ಅದನ್ನು ಮುಕ್ಕಿ ಬಿಡುತ್ತಾರೆ.

ಅನಪೇಕ್ಷಿತವಾಗಿ ಬಸಿರಾದೆವಲ್ಲಾ ಎಂಬುದೇ ಒಂದು ಕೊರಗು. ಇದನ್ನು ಹೇಗಾದರೂ ಮಾಡಿ ದೊಡ್ಡವರಿಗೆ ತಿಳಿಯದಂತೆ ನಿವಾರಿಸಿಕೊಳ್ಳಬೇಕು ಎನ್ನುವ ಆತಂಕ. ಇಂತಹ ಸಮಯದಲ್ಲಿ ಯಾವ ಮುದುಕಿ ಏನು ಹೇಳಿದರೂ ಕೇಳುವಂತೆ ಮನಸ್ಸು ಅಸ್ಥಿರವಾಗಿರುತ್ತೆ. ಆಗ ವಿಷಮೂಲಿಕೆಗಳು, ರಸಮಾತ್ರೆಗಳು ಬಯಸಿದ ಫಲವನ್ನು ನೀಡದೆ, ದೇಹದ ಸ್ವಾಸ್ಥ್ಯವನ್ನು ಕೆಡಿಸುತ್ತವೆ. ಅದರೊಂದಿಗೆ ಮನಸ್ಸಿನ ಆತಂಕವೂ ಹೆಚ್ಚಿ ಭಯವೂ ಮೂಡುತ್ತದೆ. ಮೈ ಇಳಿಯುವುದು ಹಾಗಿರಲಿ, ಮೈಯ್ಯೇ ಅಳಿದು ಹೋಗುವುದೂ ಉಂಟು. ಉಳಿದುಕೊಂಡವರ ಮನಸ್ಸು ಆತಂಕಗ್ರಸ್ತವಾಗಿ ಮನೆಯಲ್ಲಿನ ನಡವಳಿಕೆಯು ವಿಚಿತ್ರವಾಗುವುದೂ ಉಂಟು.

**ಚಟಗಳು**

ಶ್ರೀಮಂತರು ಸಿಗರೇಟ್ ಸೇದುತ್ತಾರೆ, ಅದು ಶ್ರೀಮಂತಿಕೆಯ ಒಂದು ಲಕ್ಷಣ; ಹೀಗಂದುಕೊಂಡು ತಾತ್ಕಾಲಿಕ ಶ್ರೀಮಂತಿಕೆಯನ್ನು ಅನುಭವಿಸಲು ಬಡವನೂ ಮೊದಲಬಾರಿಗೆ ಸಿಗರೇಟ್ ಹಿಡಿಯುತ್ತಾನೆ. ಆಗ ಅವನಿಗೆ ಸುಖ ತಟ್ಟುತ್ತದೆ ಎಂದು ಹೇಳಬರುವುದಿಲ್ಲ. ಕೆಟ್ಟಕೆಟ್ಟದಾಗಿ ಕೆಮ್ಮುವಂತಾದರೂ, ಮನಸ್ಸಿನಲ್ಲಿ ಅವನಿಗೆ ಏನನ್ನೋ ಸಾಧಿಸಿದ ಹಿಗ್ಗು ಇರುತ್ತದೆ. ಸ್ವಲ್ಪ ಅಭ್ಯಾಸವಾದ ಮೇಲೆ ತುಸು ಸುಖವನ್ನು ನೀಡುತ್ತದೆ. ಆ ಹೊತ್ತಿಗೆ ಅಭ್ಯಾಸವು ಒಂದು ಚಟವಾಗಿಬಿಡುತ್ತದೆ. ಬೇಸರ ಮೂಡಿದಾಗ ಸಿಗರೇಟ್ ಹಚ್ಚಿದರೆ ಬೇಸರವೂ ಹೊಗೆಯಾಗಿ

ಹೋಗುತ್ತದೆ. ಆನಂತರ ಚಟವು ದುಶ್ಚಟವಾಗುತ್ತದೆ. ಸೇದುವುದರಿಂದ ಸುಖವಾಗದೆ ಇರಬಹುದು. ಆದರೆ ಸೇದದೇ ಇದ್ದರೆ ತುಂಬಾ ತಳಮಳವಾಗುತ್ತದೆ. ಸಿಗರೇಟನ್ನು ಸಾಲ್‌ಸಾಲಾಗಿ ಸೇದುವವರಿಗೆ ಸುಖವೆಲ್ಲಿಂದ ಬಂತು ! ದುಶ್ಚಟದಿಂದಾಗುವ ತಳಮಳವು ತಪ್ಪಿತು. ದುಶ್ಚಟದ ಈ ಹಂತದಲ್ಲಿ ಮೇಲಿಂದ ಮೇಲೆ ಸಿಗರೇಟ್ ಸೇದುವುದರಿಂದ, ನಿಕೋಟೀನ್ ವಸ್ತುವು ದೇಹಕ್ಕೆ ಹೆಚ್ಚು ಪ್ರಮಾಣದಲ್ಲಿ ಸೇರುವುದರಿಂದ ಎದೆ ಡಬ ಡಬ ಹೊಡೆದುಕೊಳ್ಳುತ್ತದೆ. ತೀವ್ರ ಆತಂಕದ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ.

ಬೇಸರ, ಕಿರಿಕಿರಿ ಇವೆಲ್ಲವೂ ಆತಂಕಕ್ಕೆ ಸೋಪಾನಗಳಿದ್ದಂತೆ. ಕೆಲವು ಚಟಗಳು ಇವನ್ನು ಕಡಿಮೆ ಮಾಡಬಹುದು. ಆದರೆ ದುಶ್ಚಟಗಳ ಹಂತಕ್ಕೆ ಏರಿದಾಗ, ಆತಂಕವನ್ನೇ ಮೂಡಿಸುತ್ತವೆ.

**ಪರೀಕ್ಷೆಯ ಆತಂಕ**

ಎಷ್ಟು ಜಾಣ ಹುಡುಗ ಅಂತ, ಎಸ್.ಎಸ್.ಎಲ್.ಸಿ.ಯಲ್ಲಿ ರಾಜ್ಯಕ್ಕೇ ಪ್ರಥಮ ರ್‍ಯಾಂಕ್ ಗಳಿಸಿದ್ದ. ತಂದೆಯನ್ನು ಕಳೆದುಕೊಂಡಿದ್ದ ಹುಡುಗ, ತಾಯ ಕಣ್ಮಣಿಯಾಗಿ ಬೆಳೆದು ಓದುತ್ತಿದ್ದ. ಎರಡು ಬಾರಿ ಹುಡುಗನೇನಾದರೂ ಸೀನಿದರೆ, ತತ್‌ಕ್ಷಣ ಅವನನ್ನು ಡಾಕ್ಟರ ಬಳಿಗೆ ತಾಯಿಯು ಕರೆದುಕೊಂಡು ಓಡುತ್ತಿದ್ದಳು. ಜ್ವರವೇನಾದರೂ ಹುಡುಗನಿಗೆ ಬಂದರೆ, ಅವನ ಪಕ್ಕದಲ್ಲಿ ತಾಯಿ ಹಗಲು ರಾತ್ರಿ ಠಿಕಾಣಿ ಹಾಕುತ್ತಿದ್ದಳು. ಡಾಕ್ಟರುಗಳು ಔಷಧಿಗಳು ಟಾನಿಕುಗಳು ಬಾಲ್ಯದಿಂದಲೂ ಅವನಿಗೆ ಮಾಮೂಲು. ಅದು ಕಟ್ಟಳೆಯಂತೆ ದಿನವೂ ನಡೆದ ಮೇಲೆ ಊಟ, ತಿಂಡಿ, ಬಟ್ಟೆ ಬರೆ, ಬಿಸಿಲುಗಾಲದಲ್ಲೂ, ಅವ ಸ್ವೆಟರ್ ಹಾಕಲೇಬೇಕು. ಛಳಿಗಾಲದಲ್ಲನಕ, ಅಂಗಿ ಮೇಲೆ ಅಂಗಿ, ಶಾನುಭೋಗನ ತಂಗಿಯೂ ಇವನನ್ನು ನೋಡಿ ನಗುವಂತಿತ್ತು. ಇದೆಲ್ಲವೂ ಆದ ಮೇಲೆ ಪುಸ್ತಕ ಓದು ; ಸ್ಕೂಲು, ಮನೆ ಪಾಠ ; ಇವುಗಳತ್ತ ಗಮನ. ತಾಯ ಮಡಿಲಿನಲ್ಲಿ ಹೀಗೆ ಬೆಳೆದುಬಂದ ನಮ್ಮ ಹುಡುಗ. ಹದಿನೈದು ಚೈತ್ರಗಳು ಸಂದಿದ್ದರೂ, ಬಚ್ಚಲಮನೆಗೆ ರಾತ್ರಿಯಲ್ಲಿ ಹೋಗಬೇಕಾದರೆ, ಬಾಗಿಲ ತನಕ ತಾಯಿಯು ಬಂದಿರಬೇಕು. ಅಲ್ಲೇ ನಿಂತೂ ಇರಬೇಕು. 'ಇಲ್ಲದೆ ಇದ್ದರೆ ಗೊಗ್ಗಯ್ಯ ಬಂದು ಕತ್ತಲಲ್ಲಿ ಹಿಡಿದುಕೊಂಡು ಬಿಟ್ಟರೆ ?' ಹೀಗಂತ ಹುಡುಗ ಬಾಯಿ ಬಿಟ್ಟು ಹೇಳದೇ ಇದ್ದರೂ ಆಳ ಮನಸ್ಸಿನಲ್ಲಿದ್ದ ಅಧೈರ್ಯವನ್ನು ನಡವಳಿಕೆಯಲ್ಲಿ ತೋರಿಸಿಕೊಳ್ಳುತ್ತಿದ್ದ.

ಪಿ.ಯು.ಸಿ. ಪರೀಕ್ಷೆಗೆ ಕಟ್ಟಿದ್ದಾನೆ. ಚೂಟಿಯಾಗಿ ಓದುತ್ತಲೂ ಇದ್ದಾನೆ. ಪರೀಕ್ಷೆಯು ಹತ್ತಿರ ಹತ್ತಿರಕ್ಕೆ ಬಂತು. 'ಜಾಣ ನೀನು, ರ್‍ಯಾಂಕ್ ಬರದೇ ಇದ್ದರೂ ಫಸ್ಟ್‌ಕ್ಲಾಸ್ ಸಿಗಿದು ಹಾಕುತ್ತೀ' ಎಂದು ತಾಯಿಯೂ ದಿನಕ್ಕೆ ಹತ್ತು ಸರ್ತಿ ಯಾದರೂ ಹೇಳುತ್ತಿದ್ದಾಳೆ. ನೆಂಟರಿಷ್ಟರೂ ಹುಡುಗನ ಜಾಣತನವನ್ನು ಹೊಗಳಿದ್ದೂ ಹೊಗಳಿದ್ದೇ. ಮನೆಗೆ ಬಂದ ನೆರೆಹೊರೆಯವರು ಹುಡುಗನನ್ನು ತಾಯಿಯೆದುರಿಗೆ ಅಟ್ಟಕ್ಕೇರಿಸುತ್ತಿದ್ದರು. ತಿಂಗಳಿಗೆ ಒಂದೆರಡು ಬಾರಿಯಾದರೂ ತಾಯಿಯು, ಮಗನಿಗೆ ಬಡಿದಿರಬಹುದಾದ ದೃಷ್ಟಿಯನ್ನು ತೆಗೆಯಲೋಸುಗ, ಮುಖಕ್ಕೆ ಕಸಪರಿಕೆ ನೀವಳಿಸಿ, ಮೂಲೆಯಲ್ಲಿಟ್ಟು ಚಟಪಟ ಸುಡುತ್ತಿದ್ದಳು.

ಪರೀಕ್ಷೆಗೆ ಇನ್ನು ಮೂರು ದಿನಗಳಿವೆ. ಪುಸ್ತಕಗಳನ್ನು ಎದುರಿಗಿಟ್ಟುಕೊಂಡು ಓದುತ್ತಿದ್ದ ಹುಡುಗ ತಟ್ಟನೆ ಪುಸ್ತಕಗಳನ್ನು ದೂಡಿ, ಎರಡೂ ಕೈಗಳಲ್ಲಿ ತಲೆಯನ್ನು ಭದ್ರವಾಗಿ ಹಿಡಿದುಕೊಂಡು, 'ಅಮ್ಮಾ ಅಮ್ಮಾ ತಲೆ ತುಂಬಾ ಸಿಡೀತಾ ಇದೇಮ್ಮಾ; ಕಣ್ಣು ಮಂಜಾಗುತ್ತಾ ಇದೆ' ಎಂದು ಕೆಟ್ಟದಾಗಿ ಕಿರುಚಿಕೊಂಡ. ಅಮ್ಮ ಗಾಬರಿಯಾದಳು. ಓಡಿಹೋಗಿ ಆಟೋರಿಕ್ಷಾ ತಂದಳು. ಡಾಕ್ಟರ ದವಾಖಾನೆಗೆ ಕೆಟ್ಟೆನೋ ಬೆಂದೆನೋ ಅಂತ ಹೋದಳು. ಹುಡುಗನನ್ನು ಡಾಕ್ಟರು ಪರೀಕ್ಷೆ ಮಾಡಿದರು. 'ಏನೂ ಆಗಿಲ್ಲವಮ್ಮಾ. ರಾತ್ರಿಯೆಲ್ಲಾ ನಿದ್ರೆಗೆಟ್ಟು ಓದುತ್ತಾನೆ ಅಂತ ಕಾಣುತ್ತೆ. strain ಆದ ಹಾಗಿದೆ ಈ ಇನ್ಜಕ್ಷನ್ ಕೊಡ್ತೀನಿ ; ಈ ಮಾತ್ರೆಗಳನ್ನು ತರಿಸಿಕೊಡಿ. ಇವತ್ತು ಹೆಚ್ಚು ಹೊತ್ತು ಓದುವುದು ಬೇಡ' ಎಂದು ಹೇಳಿ ಚಿಕಿತ್ಸೆಯನ್ನು ನಡಸಿದರು. ಡಾಕ್ಟರನ್ನು ಕಂಡಾಗಲೇ ಹುಡುಗನಿಗೆ ಸ್ವಲ್ಪ ಧೈರ್ಯ ಮೂಡಿತ್ತು. ಶೈಶವದಿಂದಲೂ ಕಂಡಿದ್ದ ಡಾಕ್ಟರು, ತುಂಬು ನಂಬಿಕೆಯೂ ಇತ್ತು. ಕಾರಣ, ತಲೆ ಸಿಡಿತವು ದವಾಖಾನೆಗೆ ಹೋದಕೂಡಲೆ ಇಳಿಯತೊಡಗಿತ್ತು. ಡಾಕ್ಟರು ಇನ್ಜಕ್ಷನ್ನನ್ನು ಕೊಟ್ಟಾಗ ಆ ನೋವಿನಲ್ಲಿ ತಲೆ ಸಿಡಿತವು ಮಾಯವಾಗಿತ್ತು. ಅದಕ್ಕಿಂತಲೂ ಮುಖ್ಯ ಎಂದರೆ, ಪಟ್ಟಾಗಿ ಕೂತು ಓದುವ ಹೊಣೆಯು ಸಡಿಲಗೊಂಡಿತ್ತು. ಮನೆಗೆ ಹಿಂತಿರುಗಿದ. ಮಲಗಿ ನಿದ್ರೆ ಮಾಡಿದ, ಬೆಳಿಗ್ಗೆ ಎದ್ದಾಗ ಬಲು ಲವಲವಿಕೆಯಾಗಿದ್ದ. ಅಚ್ಚುಕಟ್ಟಾಗಿ ಅಮ್ಮ ಕೊಟ್ಟ ಕಾಳುಪ್ಪಿಟ್ಟನ್ನು ತಿಂದ. ನಂತರ ಪುಸ್ತಕಗಳನ್ನು ಎದುರಿಗಿಟ್ಟುಕೊಂಡು ಕುಳಿತ. ಪರೀಕ್ಷೆ–ಫಸ್ಟ್ ಕ್ಲಾಸ್–ರ್‍ಯಾಂಕ್–ಅವರಿವರ ಹೊಗಳಿಕೆ–ಅಮ್ಮನ ಆಸೆ ಎಲ್ಲವೂ ಅರೆಕ್ಷಣ ಸ್ಮರಣೆಗೆ ಬಂತು. ಹತ್ತು ಹದಿನೈದು ನಿಮಿಷ ಹಟ ಹಿಡಿದು ಕೂತುಕೊಂಡು ಓದಿದ. ತಿರುಗಿ ತಲೆ ಸಿಡಿಯುಕ್ಕೆ ಆರಂಭವಾಯಿತು. 'ಅಮ್ಮಾ, ಅಮ್ಮಾ' ಎಂದು ಕಿರುಚಿದ. ಅಮ್ಮ ಬಂದಳು, ಮಗನ ಮುಖ ನೋಡಿದಳು. ಓಡಿಹೋಗಿ ಡಾಕ್ಟರನ್ನು

ಕರೆದುಕೊಂಡು ಬಂದಳು. ಡಾಕ್ಟರು ಪರೀಕ್ಷೆ ಮಾಡಿದಾಗ ನೂರು ಡಿಗ್ರಿ ಜ್ವರ ಇತ್ತು. 'ಜ್ವರ ಬಂದಿದೆ, ಅದಕ್ಕೇ ತಲೆ ಸಿಡಿತವು ಮೊದಲು ಕಾಣಿಸಿಕೊಂಡಿದ್ದು. ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲಿ' ಎಂದರು. ಯಥಾಪ್ರಕಾರ ಇನ್ಜಕ್ಷನ್ ಚುಚ್ಚಿದರು. ಎರಡೆರಡು ತರಹ ಔಷಧಿ ಮಾತ್ರೆಗಳನ್ನು ವಿಧಿಸಿದರು. ಪರೀಕ್ಷೆಯ ದಿನವೂ ಮೈ ಸ್ವಲ್ಪ ಬೆಚ್ಚಗೇ ಇತ್ತು. ಈ ಸರ್ತಿ ಪರೀಕ್ಷೆಗೆ ಕೂಡುವುದು ಬೇಡ ; ಇನ್ನಾರು ತಿಂಗಳಿಗೆ ಹೇಗೂ ಪರೀಕ್ಷೆ ಇದೆಯಲ್ಲಾ' ಎಂದು ಡಾಕ್ಟರು ಸಲಹೆ ಮಾಡಿದರು. 'ಖಂಡಿತವಾಗಿ ಹೋಗಲೇಬೇಕು' ಎಂದು ಹುಡುಗ ಹಟ ಹಿಡಿದ. ತಾಯಿಯ ಮನಸ್ಸು ಹಾಗೂ ಇತ್ತು ಹೀಗೂ ಇತ್ತು. ಅನ್ಯಾಯವಾಗಿ ಒಂದು ವರ್ಷ ಪೋಲಾಗುತ್ತೆ. ನಮ್ಮ ಬಡಸ್ಥಿತಿಯಲ್ಲಿ ದೊಡ್ಡ ಹೊರೆಯಾಗುತ್ತೆ, ಎಂದು ಒಂದು ಕಡೆ. ಮಗ ಹಟ ಹಿಡಿದಾಗ ಆಕೆಯೂ ಹ್ಞೂ ಅಂದಳು.

ಪರೀಕ್ಷೆಗೆ ಹೋದ, ಫಸ್ಟ್‌ಕ್ಲಾಸ್ ಬಂತು. ರ್‍ಯಾಂಕ್ ಬರಲಿಲ್ಲ. 'ಅಷ್ಟು ಕಾಯಿಲೆ ಬಿದ್ದಿದ್ದರೂ ಫಸ್ಟ್‌ಕ್ಲಾಸಿನಲ್ಲಿ ಪ್ಯಾಸ್ ಮಾಡಿದೆಯಲ್ಲೋ ? ಸ್ವಸ್ಥವಾಗಿದ್ದಿದ್ದರೆ ಫಸ್ಟ್ ರ್‍ಯಾಂಕ್ ಪಡೆಯುತ್ತಿದ್ದೆ' ಎಂದು ಮಗನ ಗಲ್ಲ ಹಿಡಿದು ತಾಯಿಯು ಮುದ್ದುಗರೆದಳು. ಮಗನಿಗೆ ನೊಬೆಲ್ ಪ್ರೈಸ್ ಬಂದಷ್ಟು ಹಿಗ್ಗಾಯಿತು.

ಆಮೇಲೆ ಬಿ.ಎಸ್‌ಸಿ. ಪರೀಕ್ಷೆಗಳು. ಪ್ರತಿ ಪರೀಕ್ಷೆಯ ಮೊದಲೂ, ತಲೆ ಸಿಡಿತ ಜ್ವರ ಬರಲಾರಂಭಿಸಿತು. ಒಮ್ಮೆ ಸೆಕೆಂಡ್ ಕ್ಲಾಸಿನಲ್ಲಿ ತೇರ್ಗಡೆಯಾದ, ಇನ್ನೊಂದು ಪರೀಕ್ಷೆಯಲ್ಲಿ ನಪಾಸಾದ. ಹಾಗಾದ, ಅಂತ ಯಾರೂ ಅವನನ್ನು ಹೀಯಾಳಿಸಲಿಲ್ಲ. ಕಡೆಗೂ ಪ್ಯಾಸ್ ಆದ. ಮುಂದೆ ಓದಬೇಕೋ, ಚಾಕರಿ ಯಾವುದನ್ನಾದರೂ ಹಿಡಿಯಬೇಕೋ ಎಂದು ಸ್ವತಃ ನಿರ್ಧರಿಸಲಾರ. ಅಮ್ಮನ ಮಡಿಲಲ್ಲಿ ಬೆಳೆದವ ; ತನ್ನ ಕಾಲ ಮೇಲೆ ನಿಲ್ಲುವುದನ್ನು ಕಲಿತೇ ಇಲ್ಲ. 'ಅಮ್ಮ, ನೀ ಹೇಳಿದ ಹಾಗೆ' ಅಂತಾನೆಯೇ ಹೊರತು ; ಬೆಳೆದಿದ್ದೇನೆ, ಪದವೀಧರನಾಗಿದ್ದೇನೆ, ಹೀಗೆ ಮಾಡ್ತೀನಿ, ಅಂತ ಯಾವ ಕೆಚ್ಚಿನ ಮಾತನ್ನೂ, ಆತ್ಮವಿಶ್ವಾಸದ ನುಡಿಯನ್ನೂ ಆಡಲಾರ.

ಪರೀಕ್ಷೆಗಳಲ್ಲಿ ರ್‍ಯಾಂಕು ಗಳಿಸಬೇಕು ಎಂದು ಜಾಣ ವಿದ್ಯಾರ್ಥಿಗಳೆಲ್ಲರೂ ಬಯಸುತ್ತಾರೆ. ರ್‍ಯಾಂಕ್ ಗಿಟ್ಟಿಸಿದರೆ ಮುಂದಿನ ಭವಿಷ್ಯವು ಉತ್ತಮ ಮತ್ತು ಸುಗಮ ಎನ್ನುವ ಕಾರಣದಿಂದ ಅಂತಹ ಹೆಬ್ಬಯಕೆಯು ಹುಟ್ಟುತ್ತದೆ. ಎಷ್ಟೋ ಕಷ್ಟಪಟ್ಟು ಓದಿದರೂ, ಇತರ ವಿದ್ಯಾರ್ಥಿಗಳು ಇನ್ನೂ ಚೆನ್ನಾಗಿ ಓದಿದರೆ, ರ್‍ಯಾಂಕ್ ತಪ್ಪುತ್ತದೆ ಎಂದೂ ಅನುಮಾನ. ಹಾಗಾಗುವುದಾದರೆ ಎಷ್ಟು ಓದಿದರೂ ಏನು ಪ್ರಯೋಜನ. 'ಲಕ್' ಇರಬೇಕು ರ್‍ಯಾಂಕಿಗೆ ಎಂದು ತಮಗೆ ತಾವೇ

ಸಮಾಧಾನ ಹೇಳಿಕೊಳ್ಳುತ್ತಾರೆ. ಡೋಲಾಯಮಾನದ ಮನಸ್ಸಿನ ಈ ಸ್ಥಿತಿಯೇ ಆತಂಕಕ್ಕೆ ಕಾರಣ. ರ್‍ಯಾಂಕ್ ಗಿಟ್ಟಿಸಿದರೆ ಅಮ್ಮ ಮೆಚ್ಚುತ್ತಾಳೆ, ಹಿಗ್ಗುತ್ತಾಳೆ. ಏನೆಲ್ಲಾ ಕಷ್ಟಪಡುತ್ತಿದ್ದಾಳೆ, ನನ್ನಸಲುವಾಗಿ. ಅವಳಿಗೆ ಸಂತೋಷವನ್ನುಂಟುಮಾಡಬೇಕು ಎನ್ನುವ ತೀವ್ರ ಆಸೆಯು, ಇದ್ದ ಆತಂಕವನ್ನು ಕೆರಳಿಸುತ್ತದೆ.

ವಿದ್ಯಾರ್ಥಿಯ ಪೌಗಂಡ ವಯಸ್ಸಿನಲ್ಲಿ, ವ್ಯಕ್ತಿತ್ವವು (Personality) ಪರಿಪೂರ್ಣವಾಗಿರುವುದಿಲ್ಲ (Maturity) ಜೀವನದ ವಾಸ್ತವಿಕ ಅನುಭವಗಳಿಂದ ಹದಗೊಂಡಿರುವುದಿಲ್ಲ. ಇತರರಿಗಿಂತ ಎತ್ತರದಲ್ಲಿರಬೇಕು ಎನ್ನುವ ಧ್ಯೇಯವೊಂದು ಬಲವಾಗಿರುತ್ತದೆ. ಹಾಗಾಗಿ ವಾಸ್ತವಿಕ ಪ್ರಪಂಚದ ಆಗುಹೋಗುಗಳು ಸ್ಪಷ್ಟವಾಗಿ ಕಾಣಿಸುವುದಿಲ್ಲ. ಪರೀಕ್ಷೆಗಳಲ್ಲಿ ಜಾಣ ಹುಡುಗರು ಮುಗ್ಗರಿಸುವುದೂ, ಮಂಕು ಬಡ್ಡಿಗಳು ಫಸ್ಟ್‌ಕ್ಲಾಸ್ ಪಡೆಯುವುದೂ, ಅವರ ಗಮನಕ್ಕೆ ಬರುತ್ತದೆ. ಪ್ರೈವೇಟ್ ಟ್ಯೂಷನ್, ಜಾತಿ, ಕುಲ, ಲಂಚ ರುಷುವತ್ತು ; ಇತ್ಯಾದಿ ಸಬೂಬುಗಳನ್ನು ಪರೀಕ್ಷೆಯ ಫಲಿತಾಂಶಗಳಿಗೆ ಲಗತ್ತಿಸಿರುತ್ತಾರೆ. ಆಗ ಅವರ ಮನಸ್ಸಿಗೆ ಸ್ವಲ್ಪ ಸಮಾಧಾನವು ದೊರಕುತ್ತದೆ. ಈ ವಿಚಾರಸರಣಿಯು, ಸ್ವಂತ ಪ್ರಯತ್ನದಿಂದ ಯಾವ ಮೆಹನತ್ತೂ ದೊರಕಲಾರದು ಎಂಬ ಜುಗುಪ್ಸೆಯನ್ನು ಉಂಟುಮಾಡುತ್ತದೆ. ಇತ್ತ ಜುಗುಪ್ಸೆ ; ಅತ್ತ ಆಸೆ. ಇವೆರಡರ ಜಗ್ಗಾಟದಲ್ಲಿ ಆತಂಕ ಕಾಣಿಸಿಕೊಳ್ಳುತ್ತದೆ. ಆತಂಕದಿಂದಲೂ ಪ್ರಯೋಜನವು ಉಂಟು, ಹೇಗೆ ಅನ್ನಿ.

ಆತಂಕದ ಫಲವಾಗಿ ದೇಹದಲ್ಲಿ ಬೇನೆಯು ಕಾಣಿಸಿಕೊಳ್ಳುತ್ತದೆ. ಬೇನೆಯ ನೆಪದಿಂದ, ಪರೀಕ್ಷೆಯಲ್ಲಿ ಯಶಸ್ವಿಯಾಗುವ ಹೊಣೆಯು ಕಡಿಮೆಯಾಗುತ್ತದೆ. ಮನೆಯ ಹಿರಿಯರ ಮನ್ನಣೆಯನ್ನು ಕಳೆದುಕೊಳ್ಳಬೇಕಾಗಿಲ್ಲ. ಹೀಗಾಗಿ ಮನಸ್ಸಿನಲ್ಲಿ ಸಮಾಧಾನವೂ ಮೂಡುತ್ತದೆ.

ಮನಸ್ಸಿನಲ್ಲಿ ಆತಂಕವು ಮೂಡಿದರೆ, ದೇಹದಲ್ಲಿ ಜ್ವರ ಏಕೆ ಕಾಣಿಸಿಕೊಳ್ಳಬೇಕು ? ಎಂದು ಅನುಮಾನ ಬರಬಹುದು. ಸಾಮಾನ್ಯವಾಗಿ ಜ್ವರ ಬರಬೇಕಾದರೆ ಬ್ಯಾಕ್ಟೀರಿಯಾಗಳೋ ಅಥವಾ ವೈರಸ್‌ಗಳೋ ಹಾಗೂ ಇತರ ಪ್ರೋಟೋಜೂಆಗಳೋ ಸೋಂಕಿರಬೇಕು. ಅವುಗಳ ಸೋಂಕಿರದಿದ್ದರೂ ಜ್ವರ ಬರಬಹುದು. ದೇಹದ ಉಷ್ಣವನ್ನು ಒಂದು ಹಂತದಲ್ಲಿ ಸರಿಯಾಗಿರಿಸಲು, ಕೆಲವು ನರಕೇಂದ್ರಗಳು ಹೊಣೆ ಹೊತ್ತಿರುತ್ತವೆ. ಈ ಕೇಂದ್ರಗಳು ಮೆದುಳಿನ ಬುಡದಲ್ಲಿವೆ. (Thermotaxic centres). ಆತಂಕವು ತೀವ್ರವಾದಾಗ ಮೆದುಳಿನ ತಲಾಮಸ್ ಮತ್ತು ಸ್ವಯಂಚಾಲಿತ ನರಗಳ ಮೂಲಕ (Autonomic nerves) ಅದು ದೇಹಕ್ಕೆ ವಕ್ರಿಸುತ್ತದೆ. ಆಗ ಎದೆಯು ಡಬಡಬ ಮಾಡುತ್ತದೆ. ಉಸಿರಾಡುವುದು

ಮೇಲ್ಮೇಲಾಗುತ್ತದೆ, ಇತ್ಯಾದಿ. ಇದು ದೇಹದಲ್ಲಾಗುವ ಕಾರ್ಯಕ್ರಮ. ಕೆಲವೊಂದು ವೇಳೆ, ಹಲವರಲ್ಲಿ, ಆತಂಕವು ತೀವ್ರವಾದಾಗ, ತಲಾಮಸ್ಸಿಗೆ ಹರಡಿದಾಗ, ಉಷ್ಣ ಸಮತೋಲನ ಕೇಂದ್ರಗಳಿಗೂ ಪಸರಿಸುತ್ತದೆ. ಕೆರಳಿದ ಆ ಕೇಂದ್ರಗಳು ಉಷ್ಣವನ್ನು ಉತ್ಪಾದಿಸುತ್ತವೆ, ಜ್ವರವು ಕಾಣಿಸಿಕೊಳ್ಳುತ್ತದೆ.

ಲಕ್ಷ ಜನ ಜ್ವರ ಬಂದವರಲ್ಲಿ, ಆತಂಕದಿಂದಾಗಿ ಜ್ವರ ಬರುವುದು ಒಬ್ಬಿಬ್ಬರಲ್ಲಿ ಮಾತ್ರ. ಅತಿ ವಿರಳವಾಗಿ ಹೀಗಾಗುವುದಾದರೂ, ಹೀಗಾಗಬಹುದು ಎಂಬುದನ್ನು ಮರೆಯಬಾರದು.

**ಸ್ಪರ್ಧೆಯ ದಿಗ್ಭ್ರಮೆ :**

ಐ.ಎ.ಎಸ್. ಪರೀಕ್ಷೆಗೆ ಕೂತಿದ್ದ ನಮ್ಮ ಭೈರಪ್ಪ. ಜೂಆಲಜಿ ಆನರ್ಸ್‌ನಲ್ಲಿ ರ್‍ಯಾಂಕ್ ಪಡೆದಿದ್ದವ, ಇಂಗ್ಲೀಷಿನಲ್ಲಿ ಅಸಾಧಾರಣ ಪಾಂಡಿತ್ಯವಿತ್ತು. ಅಂತರ್ ವಿಶ್ವವಿದ್ಯಾಲಯಗಳ ಟೆನ್ನೀಸ್ ಚಾಂಪಿಯನ್ ಆಗಿದ್ದ ವಾಗ್ಮಿ. ಇಷ್ಟರ ಜತೆಗೆ ಅವರ ತಂದೆ ದೊಡ್ಡ ಶ್ರೀಮಂತ. ಅಂತಹವರ ಮಕ್ಕಳಿಗೆ ತಾನೇ ದೇವರು, ಸ್ಪರ್ಧಾ ಪರೀಕ್ಷೆಗಳಲ್ಲಿ ರ್‍ಯಾಂಕ್ ಕೊಡಿಸುವುದು !

ಪರೀಕ್ಷೆಗೆ ಇನ್ನು ಹದಿನೈದು ದಿನಗಳಿವೆ ಎನ್ನುವಾಗ ಭೈರಪ್ಪನಿಗೆ, ಎಲ್ಲ ಸ್ಪರ್ಧಿಗಳಿಗೂ ಇರುವಂತೆ ಆತಂಕವು ಇತ್ತು, ಅಷ್ಟು ಇರಬೇಕಾದದ್ದೇ. ದಿಳ್ಳಿಯಲ್ಲಿ ಓದುತ್ತಿದ್ದ, ಪರೀಕ್ಷೆಯನ್ನು ಅಲ್ಲೇ ಏರ್ಪಡಿಸಿಕೊಂಡಿದ್ದ. ಹಳೆಯ ಸ್ನೇಹಿತ ರಾಜಾರಾಂ ಅವನ ರೂಂಮೇಟ್ ಆಗಿದ್ದ.

ಭೈರಪ್ಪನ ತಂದೆಗೆ ರಾಜಾರಾಂ ಒಂದು ತುರ್ತು ತಂತಿ ಕಳಿಸಿದ. 'ಈಗೊಂದೆರಡು ದಿನಗಳಿಂದ ಭೈರಪ್ಪ ಒಂದು ತುತ್ತು ಉಂಡಿಲ್ಲ. ಒಂದು ಕ್ಷಣ ಮಲಗಿ ನಿದ್ರೆ ಮಾಡುವುದಿಲ್ಲ. ಸುಮ್ಮನೆ ಥರಪರಗುಟ್ಟುತ್ತಾನೆ. ತತ್‌ಕ್ಷಣ ಬನ್ನಿ' ಅಂತ. ಸರ್ವಸಾಹಸ ಮಾಡಿ ಅವತ್ತೇ ದಿಳ್ಳಿಗೆ ವಿಮಾನದಲ್ಲಿ ಸೀಟು ಗಿಟ್ಟಿಸಿ ಹೊರಟರು.

ಮಾರನೆಯ ದಿನ ಭೈರಪ್ಪನನ್ನು ಕರೆದುಕೊಂಡು ದೊಡ್ಡಾಸ್ಪತ್ರೆಗೆ ಹೋದರು. ಅಲ್ಲಿ ಮೈಸೂರಿನ ಡಾಕ್ಟರು ಇರುವುದರಿಂದ ಏನೋ ನಿಧಿ ಸಿಕ್ಕಿದಂತಾಗಿತ್ತು, ಭೈರಪ್ಪನ ತಂದೆಗೆ. ಭೈರಪ್ಪನಿಗೆ ತೀವ್ರ ತಳಮಳವಾಗಿದೆ ಎನ್ನುವುದು ಡಾಕ್ಟರಿಗೆ ಸ್ಪಷ್ಟವಾಯಿತು. 'ಯಾಕೆ ಹೀಗಾಗಿದಿ, ಹಠಾತ್ತಾನೆ ಹೀಗಾಯಿತೇ ? ಏನಾದರೂ ಔಷಧಿ ಗಿವ್ಷಧಿ ಸೇವಿಸುತ್ತಿದ್ದೆಯಾ ?' ಎಂದು ಅತ್ಯಾದರದಿಂದ, ಸಹಾನುಭೂತಿಯಿಂದ ಡಾಕ್ಟರು ಕೇಳಿದರು. ಇಂತಹ ಪರಿಸ್ಥಿತಿಗಳಲ್ಲಿ ಕೇಳಿದ ಮಾತುಗಳಿಗಿಂತ ಆಡುವ

ರೀತಿಯು ಅತ್ಯಂತ ಫಲದಾಯಕ. ಭೈರಪ್ಪ ಹೇಳಿದ– 'ಈಗ ಎರಡು ಮೂರು ದಿನಗಳಿಂದ ಎಲ್ಲವೂ ಮರೆತುಹೋಗುತ್ತಾ ಇದೆ. ಹತ್ತು ಸರ್ತಿ ಓದಿರ್ತೀನಿ, ಬೆಳಿಗ್ಗೆ ತಿರುಗಿ ಆ ಪುಸ್ತಕವನ್ನು ತಿರುಗಿ ಹಾಕಿರ್ತೀನಿ. ಅರ್ಧ ಗಂಟೆಯ ಮೇಲೆ ಜ್ಞಾಪಿಸಿಕೊಳ್ಳಲು ಹೋದರೆ, ಒಂದು ವಿಷಯವೂ ನೆನಪಿಗೆ ಬರುಲ್ಲ. ಇನ್ನು ಪರೀಕ್ಷೆಗೆ ಕೂತೇನು ಪ್ರಯೋಜನ ? ಪುಸ್ತಕಗಳನ್ನು ನೋಡಿದರೆ ಹೇಗೆ ಹೇಗೋ ಆಗುತ್ತೆ, ಮೈಯಲ್ಲೆಲ್ಲಾ ನಡುಕ ಹುಟ್ಟುತ್ತೆ, ಹಾಳಾಗಿ ಹೋಗಲಿ, ಪರೀಕ್ಷೆ ಅಂತ ಮಲಗಿದರೆ, ನಿದ್ರೇನೇ ಬರುಲ್ಲ. ಏನೋ ಆಗಿಹೋಗಿದೆ ಡಾಕ್ಟರೇ ! ಹುಚ್ಚು ಹಿಡಿದಿದೆಯೇನೋ ಎಂದು ಗಾಬರಿಯಾಗ್ತಾ ಇದೆ' ಎಂದು ಹೇಳಿದ. ವಾರಣವಾಗಿ ಆಗುತ್ತಿದ್ದುದನ್ನು ಲಕ್ಷಣವಾಗಿ ವಿವರಿಸಿದ.

ಮಗನ ಕಾತರದ ಮುಖವನ್ನು, ಎರಡು ದಿನದ ಗಡ್ಡ ಬೆಳೆದಿರುವುದನ್ನೂ ಕಂಡು ಕಂಗಾಲಾಗಿದ್ದ ತಂದೆ. 'ಐ.ಎ.ಎಸ್. ಪ್ಯಾಸಾಗಿ ನಿಂಗೇನಾಗಬೇಕು. ನಾಲ್ಕು ಜನ ಐ.ಎ.ಎಸ್. ಗಳನ್ನ ನಮ್ಮ ದುಖಾನ್‌ನಲ್ಲಿ ನೌಕರಿಗೆ ಇಟ್ಟುಕೋಬಹುದು. ಇದಕ್ಯಾಕೆ ನೀ ಒದ್ದಾಡ್ತೀ ! ತೆಗೀತು, ಬಿಡು, ಪರೀಕ್ಷೇನೂ ಬೇಡ, ಡಾಕ್ಟರ ಹತ್ತಿರ ಔಷಧಿ ತಕ್ಕೊಂಡು, ಗುಣ ಆಗ್ತಿದ್ದಾಗೇ ಊರಿಗೆ ಹೋಗೋಣ' ಎಂದರು.

'ಯಾವ ಪರೀಕ್ಷೇಲೂ ಎಂದೂ ಜಾರಿಲ್ಲ. ಈಗ ಹೆದರಿಕೊಂಡು ಹೋಗು ಅಂತ ಯಾಕಂತೀ, ಅಪ್ಪಾ ! ನಂಗೆ ಅವಮಾನ ಆಗುಲ್ವ ! ಕೆಂಚಪ್ಪ ನಮ್ಮನ್ನೋಡಿ ನಗುಲ್ವಾ' ಎಂದು ಅಳುದನಿಯಲ್ಲಿ ಭೈರಪ್ಪ ಅಂದ.

'ಕೆಂಚಪ್ಪ ಯಾರು ?' ಎಂದು ಡಾಕ್ಟರು ಕೇಳಿದರು.

'ಕೆಂಚಪ್ಪ ನಮ್ಮ ದಾಯಾದಿ, ಅವನ ಮಗ ಹೋದ ವರ್ಷ ಐ.ಎ.ಎಸ್. ಪ್ಯಾಸ್ ಮಾಡಿದ. ಬಲು ಬಡಾಯಿ ಮಾತಾಡ್ತಾನೆ ಕೆಂಚಪ್ಪ. ಗಟ್ಟಿಕುಳ ಏನಲ್ಲ. ಇವತ್ತಿಗಿದ್ದರೆ ನಾಳೆಗಿಲ್ಲ. ಆದರೆ ಅದೇನು ಬಡಾಯಿ ಅಂತ ; ನನ್ನ ಮಗ ಹಾಗೆ ಹೀಗೆ ಅಂತ ಕೊಚ್ಚಿಕೋತಾನೆ. ಅವನ ಮಾತನ್ನ ಭೈರಪ್ಪ ಯಾಕೆ ಎತ್ತಿದನೋ ನಾಕಾಣೆ' ಎಂದರು ತಂದೆ.

'ನೋಡು ಮಗಾ, ಐ.ಎ.ಎಸ್. ಆಗಲೇಬೇಕು ಅಂತ ನಿನ್ನ ಹಟ ಇದ್ದರೆ, ಅದೂ ಆಗಲಿ. ಆದರೆ ಈಗ ಸ್ವಸ್ಥವಾಗಿಲ್ಲ ನೀನು ! ಮುಂದಿನ ವರ್ಷ ಪರೀಕ್ಷೆಗೆ ಕೂತರಾಯಿತು. ಇನ್ನೂ ಎರಡು ಸಲ ಕೂರಬಹುದಲ್ಲ ನೀನು. ಈ ವರ್ಷಾನೇ ಆಗಬೇಕು ಅಂತ ಏನು ಶಾಸ್ತ್ರ !' ಎಂದರು ತಂದೆ.

ಆಗ ಡಾಕ್ಟರು ಅಂದರು, ಭೈರಪ್ಪ, ನೀ ಓದಿದ್ದೋನು. ಸ್ಪರ್ಧಾಪರೀಕ್ಷೆಯ ಆತಂಕವು ಅತಿಯಾಗಿದೆ, ದಿಗ್ಭ್ರಮೆ ಹಿಡಿಸಿದೆ. ಕೆಂಚಪ್ಪನ ಮಗ ನಿನ್ನ ಆತಂಕಕ್ಕೆ

ಹುಯ್ಲು ಹಾಕ್ತಿದ್ದಾನೆ. ಅದರಿಂದಲೇ Panic ದಿಗ್ಭ್ರಮೆ ಹಿಡಿದಂತಾಗಿದೆ. ಐ.ಎ.ಎಸ್.ಗೆ ಕೂರಲೇಬೇಕು ಅಂತ ನಿನ್ನ ಹಟ ಇದ್ದರೆ, ಈ ಸರ್ತೀನೇ ಕೂರಬೇಕು. ನಾ ಚಿಕಿತ್ಸೆ ಮಾಡಿಸ್ತೀನಿ. ಪರೀಕ್ಷೆಗೆ ಕೂರು. ನಿನ್ನ ಕೈಲಾದ್ದು ಮಾಡು. ಮಸಲಾ ಜಯಬರಲಿಲ್ಲ ಅನ್ನು, ಮುಂದಿನ ಸಲ ಕೂತರಾಯಿತು. ಆದರೆ ಈ ವರ್ಷ ನೀ ಕೂರದಿದ್ದರೆ ಮುಂದಿನ ಸರ್ತಿಕೂರಲು ಆಗುವುದೇ ಇಲ್ಲ. ಈ ದಿಗ್ಭ್ರಮೆಯೂ ಹೊರವಾಗಿಬಿಡುತ್ತದೆ. ಭೂತವಾಗಿಬಿಡುತ್ತದೆ. ಈ ಪರೀಕ್ಷೆಯ ಆಸೆಯನ್ನು ಬಿಟ್ಟುಬಿಡುತ್ತೇನೆ ಎಂದರೆ, ಅದೂ ಸಮ. ಚಿಕಿತ್ಸೆ ಹೇಗಾಗಬೇಕು ಎನ್ನುವುದನ್ನು ಬರಸಿಕೊಡುತ್ತೇನೆ. ಊರಿಗೆ ಹೋಗಿ ಔಷಧಿ ತಕ್ಕೋ, ಮುಂದೇನ್ಮಾಡಬೇಕು ಎನ್ನುವುದನ್ನು ಆಮೇಲೆ ಯೋಚಿಸಿದರಾಯಿತು' ಎಂದು ಹೇಳಿದರು.

'ಯಾಕೆ ಹಾಗಂತೀರೀ' ಎಂದು ಭೈರಪ್ಪ ಕುತೂಹಲದಿಂದ ಕೇಳಿದ.

ಅವನ ಕುತೂಹಲವನ್ನು ಕಂಡು ಡಾಕ್ಟರಿಗೆ ಸಂತೋಷವಾಯಿತು. ದಿಗ್ಭ್ರಮೆಯು ಅತಿಯಾಗಿಲ್ಲ, ಹೇಳಿದ್ದನ್ನು ತಿಳಿದುಕೊಳ್ಳುವ ಸ್ಥಿತಿಯಲ್ಲಿದ್ದಾನೆ ಎಂದು ದೃಢವಾಗಿತ್ತು. ಆದಕಾರಣ ಮನಸ್ಸಿನಲ್ಲಿರುವ ಆತಂಕವು ಸ್ಪರ್ಧಾ ಸನ್ನಿವೇಶಗಳಲ್ಲಿ, ಹೇಗೆ ದಿಗ್ಭ್ರಮೆಯಾಗುತ್ತದೆ ? ಆಗ ಹೆದರಿದರೆ, ಹಿಂದೆಗೆದರೆ, ಮುಂದೆಂದೂ ಧೈರ್ಯವು ಹೇಗೆ ಮೂಡುವುದಿಲ್ಲ. ಈಗ ಧೈರ್ಯವಾಗಿ ಎದುರಿಸಿದರೆ, ಆತಂಕದ ದುಷ್ಪರಿಣಾಮವು ಶಾಶ್ವತವಾಗುವುದಿಲ್ಲ. Abreaction ಎಂದಿದನ್ನು ಕರೆಯುತ್ತಾರೆ ಎಂದೆಲ್ಲವನ್ನೂ ವಿವರಿಸಿದರು.

ಪ್ರಾಣಿ ಶಾಸ್ತ್ರದ ಪ್ರೌಢ ವಿದ್ಯಾರ್ಥಿ, ಭೈರಪ್ಪ. ಹವ್ಯಾಸಕ್ಕಾಗಿ ಮನಃಶಾಸ್ತ್ರವನ್ನೂ ಅಷ್ಟು ಇಷ್ಟು ಓದಿಕೊಂಡಿದ್ದ. ಡಾಕ್ಟರು ವಿವರಿಸಿದುದನ್ನು ಅರ್ಥ ಮಾಡಿಕೊಂಡ.

'ಈ ಸರ್ತಿ ಪರೀಕ್ಷೆಗೆ ಕೂರುತ್ತೇನೆ, ಡಾಕ್ಟರೇ, ಸೊನ್ನೆ ನಂಬರು ಬಂದರೂ ಪರವಾಗಿಲ್ಲ. ಮಾಡಬೇಕದ ಚಿಕಿತ್ಸೆಯನ್ನು ನೀವು ಮಾಡಿ. ಇಷ್ಟರ ಮೇಲೆ ದೇವರಿದ್ದಾನೆ. ಅಪ್ಪನ ಆಶೀರ್ವಾದ ಇದೆ' ಎಂದ ಭೈರಪ್ಪ, ದಿಗ್ಭ್ರಮೆಯು ಬಹಳಷ್ಟು ಕರಗುತ್ತಿದ್ದುದು ಸ್ಪಷ್ಟವಾಗಿತ್ತು.

ಭೈರಪ್ಪನಿಗೆ ಐವತ್ತೆರಡನೇ ರ್‍ಯಾಂಕ್ ಬಂತು. ಆದರೆ ಆ ವರ್ಷ ಎಪ್ಪತ್ತೆಂಟು ಮಂದಿಯನ್ನು ಚಾಕರಿಗೆ ಸೇರಿಸಿಕೊಂಡರು. ಶ್ರೀ ಭೈರಪ್ಪ, ಎಂ.ಎಸ್‌ಸಿ., ಐ.ಎ.ಎಸ್. ಎಂದು ಕಾಗದಗಳ ಮೇಲೆ ಅಚ್ಚೊತ್ತಿಸಿಕೊಂಡ.

ಪರೀಕ್ಷೆಗೆ ಕೂರುವ ಜಾಣ ಹುಡುಗರಲ್ಲಿ, ಕೆಲವರು ಆತಂಕದಿಂದಾಗಿ, ದೇಹದ ಕಾಯಿಲೆಗಳಿಂದಲೂ ನರಳಬಹುದು. ಆತಂಕವು ಅತಿಯಾದಾಗ

ದಿಗ್ಭ್ರಮೆಯೂ (Panic & Phobia) ಆಗಬಹುದು. ಸೂಕ್ಷ್ಮವಾಗಿ ದೇಹದ ಚಿಹ್ನೆಗಳನ್ನು ಗಮನಿಸಿ, ಅವು ದೇಹದಿಂದ ಉಂಟಾದುವೇ, ಅಥವಾ ಆತಂಕದಿಂದ ಉತ್ಪತ್ತಿಯಾಗಿದೆಯೇ ಎಂಬುದನ್ನು ಕಂಡುಹಿಡಿಯಬೇಕು. ಹಾಗಲ್ಲದೆ ಇದು ಕೇವಲ ದೇಹದ ಬೇನೆ ಎಂದು ಚಿಕಿತ್ಸೆ ಮಾಡಿದರೆ, ಮನಸ್ಸಿನಲ್ಲಿರುವ ಪರೀಕ್ಷಾ ಆತಂಕವು ಬೇರೂರುತ್ತದೆ. ಪರೀಕ್ಷೆಯನ್ನು ಮುಂದೆ ಯಾವಾಗ ಎದುರಿಸಬೇಕಾದರೂ ಬೇರೂರಿದ ಆತಂಕದ ಭೂತವು ತಲೆಯೆತ್ತಿ ಕಾಡುತ್ತದೆ. ದಿಗ್ಭ್ರಮೆಯ ಹಂತಕ್ಕೆ ಏರಿದ ಆತಂಕವಾದರೆ, ಅತ್ಯಗತ್ಯವಾಗಿ ಅದನ್ನು ಆ ಕೂಡಲೇ ನಿವಾರಿಸಬೇಕು– Abreaction ಇಂದ. ಇಲ್ಲದಿದ್ದರೆ, ಆಲೆಯ ಮನೆಯ ದೆವ್ವದಂತೆ, ಆತಂಕದ ಪಿಶಾಚಿಯು, ಪ್ರತಿ ಪರೀಕ್ಷಾ ಸಮಯದಲ್ಲೂ ಇಣಿಕುತ್ತದೆ. ಇಣಿಕಿ ಕಾಡುತ್ತದೆ. ಬಾಳನ್ನು ಕೆಡಿಸುತ್ತದೆ.

ಆತಂಕದ ವಿರಾಡ್ರೂಪಗಳಲ್ಲಿ ಪರೀಕ್ಷೆಯ ರಾಕ್ಷಸ ಮುಖವಾಡವು ಭೀಕರವಾದುದು ದಿಗ್ಭ್ರಮೆಯಾಗುವಂತೆ ಭಯಾನಕವೂ ಆಗಬಹುದು.

ವಿದ್ಯಾರ್ಥಿಯರು, ಅವರ ತಾಯ್ತಂದೆಯರು, ಅಥವಾ ಪಾಲಿಸುವ ರಕ್ಷಕರು; ಇವರೆಲ್ಲರೂ ಈ ವಿಷಯವನ್ನು ತಿಳಿದುಕೊಂಡಿರಬೇಕು.

ನುರಿತ ವೈದ್ಯರನಕ ಇದನ್ನು ದಿನದಿನವೂ ಮನಗಾಣುತ್ತಾರೆ. ತಿಳಿದುಕೊಳ್ಳದೇ ಇರುವುದಕ್ಕಾಗಲೀ, ಒಮ್ಮೆ ತಿಳಿದ ಮೇಲೆ ಮರೆಯುವುದಕ್ಕಾಗಲೀ, ಸಾಧ್ಯವೇ ಇಲ್ಲ.

**ಮುಪ್ಪು – ಆತಂಕ**

'ಅರವತ್ತಕ್ಕೆ ಅರುಳು ಮರುಳು' ಎಂಬ ಅನುಭಾವೀ ಗಾದೆಯಿದೆ. ಉಷ್ಣವಲಯದ ನಮ್ಮ ದೇಶದಲ್ಲಿ, ಅರವತ್ತರ ಸುಮಾರಿಗೆ ಮೆದುಳಿನ ಚುರುಕು ಸ್ವಲ್ಪ ಮಂದವಾಗುತ್ತದೆ. ಜ್ಞಾಪಕಕ್ಕೆ ಬೇಗ ಬರದೇ ಇರುವುದೂ, ಮಾಡಬೇಕಾದ ಕೆಲಸದಲ್ಲಿ ಉತ್ಸಾಹವು ಕಡಿಮೆಯಾಗುವುದೂ, ಆ ವಯಸ್ಸಿನಲ್ಲಿ ಕಾಣಬರುತ್ತದೆ. ಅಭ್ಯಾಸವಿರುವ ಕೆಲಸವನ್ನು ಮಾಡುವಾಗ ಕೂಡ ಮೊದಲಿದ್ದ ಚೂಟಿಯು ಇರುವುದಿಲ್ಲ. 'ಅಯ್ಯಾ ! ನಿನ್ನ ಕಾಲ ಮುಗಿಯುತ್ತ ಬಂದಿದೆ' ಎಂದು ಪ್ರಕೃತಿಯು ಕೊಡುವ ಎಚ್ಚರಿಕೆಗಳಿವು. ಎಚ್ಚರಿಕೆಯನ್ನು ಗಮನಿಸುವವರು ಮಾತ್ರ ವಿರಳ.

ನ್ಯಾಯಾಧೀಶ ಎ.ಬಿ.ಸಿ. ಭಟ್ಟರು ತುಂಬಾ ಪ್ರಸಿದ್ಧಿಯನ್ನು ಪಡೆದಿದ್ದರು. ವಾದಿಸಲು ತಮ್ಮೆದುರು ಬಂದ ಹೆಸರಾಂತ ಚೂಟಿ ಲಾಯರುಗಳಿಗೆ ಕೂಡ ಉಪಾಯವಾಗಿ ಚಳ್ಳೇ ಹಣ್ಣು ತಿನ್ನಿಸುತ್ತಿದ್ದರು. ಭಟ್ಟರನ್ನು ಕಂಡರೆ ಲಾಯರುಗಳಿಗೆ

ಬಲು ಗೌರವ ಮತ್ತು ಆದರ ಕೂಡ. ಕೆಲಸದಿಂದ ಒಂದು ದಿವಸ ನಿವೃತ್ತಿ ಆಯಿತು. ಇಪ್ಪತ್ತಾರಕ್ಕೆ ಕೆಲಸಕ್ಕೆ ಸೇರಿದಾಗ, ದ್ವಿಜ ಎನ್ನುವುದು ಸಾರ್ಥಕವಾಗಲಿ ಎಂದು ಇಪ್ಪತ್ತೊಂದು ನನ್ನ ವಯಸ್ಸು ಅಂತ ದಾಖಲೆ ಹಾಕಿಸಿದ್ದರು. ಆದರೂ ವಿಶ್ರಾಂತಿ ವೇತನವನ್ನು ಎಂದಾದರೂ ಪಡೆಯಲೇ ಬೇಕಲ್ಲ ! ನಿವೃತ್ತರಾಗುವ ವಯಸ್ಸಿನಲ್ಲಿ ದೇಹಶಕ್ತಿಯು ಇಳಿಮುಖವಾಗಿದ್ದರೂ ಅಳಿದಿರಲಿಲ್ಲ. ದೀರ್ಘ ಕಾಲದ ಅನುಭವದಿಂದಾಗಿ ನ್ಯಾಯಶಾಸ್ತ್ರದ ತಿರುಳು ಕರಗತವಾಗಿತ್ತು. ಸಮಾಜದಲ್ಲಿ ಪ್ರಸಿದ್ಧಿಯೂ ಇತ್ತು. ಚಿಕ್ಕ ಪುಟ್ಟ ಲಾಯರುಗಳು ನನ್ನನ್ನು ಬಳಸಿಕೊಳ್ಳಲೇಬೇಕು, ಜಟಿಲ ಮೊಕದ್ದಮೆಗಳು ದೊರೆತಾಗ ; ಎಂದವರು ನಂಬಿದ್ದರು. ಆದಕಾರಣ ನಿವೃತ್ತರಾದಮೇಲೆ ಖಾಸಗಿ ಪ್ರಾಕ್ಟೀಸಿಗೆಂದು ಲಕ್ಷಣವಾದ ಸುಸಜ್ಜಿತವಾದ 'ಚೇಂಬರ್ಸ್' ಅನ್ನು ಗೊತ್ತು ಮಾಡಿಕೊಂಡರು. ಬಾರ್ ಅಸೋಸಿಯೇಷನ್ನಿಗೆ ತಪ್ಪದೆ ಹೋಗಿ ಇತರ ಲಾಯರುಗಳ ಪರಿಚಯವನ್ನು ಮಾಡಿಕೊಳ್ಳಲಾರಂಭಿಸಿದರು.

'ಪ್ರಾಕ್ಟೀಸ್ ಶುರು ಮಾಡಿದರೆ ಸಾಕು, ಕಕ್ಷಿಗಾರರು ಬೊಂತೆ ಬೊಂತೆಯಾಗಿ ಬಂದುಬಿಡುತ್ತಾರೆ; ಎಂದು ನಿರೀಕ್ಷಿಸಿದ್ದ ಭಟ್ಟರಿಗೆ ಕೆಲವು ತಿಂಗಳುಗಳಲ್ಲಿಯೇ ಭ್ರಮನಿರಸನವಾಯಿತು. ಮೊದಲ ಎರಡು ಮೂರು ತಿಂಗಳು ಚೇಂಬರ್ಸಿನ ತುಂಬಾ ಜನರಿರುತ್ತಿದ್ದರು. ಆದರೆ ಅವರಲ್ಲಿ ಸ್ನೇಹಿತರೇ ಹೆಚ್ಚು, ಕಕ್ಷಿಗಾರರು ಕಡಿಮೆ. ಒಂದು ವರ್ಷ ಮುಗಿಯುವುದರೊಳಗೆ ಪುಟ್ಟ ಎರಡು ಮೊಕದ್ದಮೆಗಳು ಮಾತ್ರ ಇದ್ದುವು. ಅವುಗಳ ಸಲುವಾಗಿ ಕೋರ್ಟಿಗೆ ಹೋಗಿ, ಒಮ್ಮೆ ತನಗೆ ಕಿರಿಯರಾಗಿದ್ದವರೆದುರು ನಿಂತು ವಕಾಲತ್ತು ನಡೆಸುವುದು ಭಟ್ಟರಿಗೆ ಪ್ರಿಯವೇನೂ ಆಗಿರಲಿಲ್ಲ. ದೊಡ್ಡ ದೊಡ್ಡ ಮೊಕದ್ದಮೆಯವರು ಇವರ ಬಳಿಗೆ ಬರಲೇ ಇಲ್ಲ. ಕೈತೋರಿಸಿ ಅವಲಕ್ಷಣ ಎನಿಸಿಕೊಂಡೆನಲ್ಲಾ ! ತೆಪ್ಪಗೆ ಮನೆಯಲ್ಲೇ ಕೂತಿದ್ದಿದ್ದರೆ ಮರ್ಯಾದೆಯಾದರೂ ಉಳಿಯುತ್ತಿತ್ತು ಎಂದವರಿಗೆ ಅನಿಸತೊಡಗಿತ್ತು. ಬೇಸರ ಮೂಡಿತ್ತು. ಪ್ರಾಕ್ಟೀಸ್ ನಿಲ್ಲಿಸಿಬಿಡೋಣ, ಎಂದೊಮ್ಮೆ ಅಂದುಕೊಳ್ಳುವರು. ಇನ್ನೆರಡು ವರ್ಷ ಹೀಗೆಯೇ ಮುಂದುವರಿದರೆ ಭವಿಷ್ಯವು ಉಜ್ವಲವಾಗಬಹುದು, ಎಂದು ಇನ್ನೊಮ್ಮೆ ಅಂದುಕೊಳ್ಳುವರು. ಈಗಾಗಲೇ ಮರವು ಜಾಸ್ತಿಯಾಗುತ್ತಾ ಇದೆ. ಕಕ್ಷಿಗಾರರಿಗೂ ಇದರ ಸುಳಿವು ತಿಳಿದಿದೆಯೇನೋ ಎಂದು ಒಮ್ಮೆ ಬೆದರುವರು. ಇದ್ದಕ್ಕಿದ್ದ ಹಾಗೆ ಚೇಂಬರ್ಸ್ ಮುಚ್ಚಿಬಿಟ್ಟರೆ, ಸರಿಸಾಟಿಯವರೆದುರಿಗೆ ಜಾರಿ ಮಂಡಿ ತರಚಿ ಕೊಂಡಂತೆ ಆಗುವುದಿಲ್ಲವೇ ಎಂದು ಒಮ್ಮೆ ಜುಗುಪ್ಸೆಗೊಳ್ಳುವರು. ಸರಿಯಾಗಿ ಯೋಚಿಸಿ ದೃಢ ತೀರ್ಮಾನವನ್ನು ನಿರ್ಧರಿಸಲು, ಮುಪ್ಪಿನ ದೆಸೆಯಿಂದಲೇ ಸಾಧ್ಯವಿರಲಿಲ್ಲ. ಇದೇ ದೊಡ್ಡ ಆತಂಕವಾಗಿತ್ತು.

ಇಂತಹ ಮನಃಸ್ಥಿತಿ ಇದ್ದಾಗ ಮನೆಯಲ್ಲೂ ಒಂದು ಆಘಾತವು ಕಾದಿತ್ತು. ಮನೆಯಾಕೆಯು ಎಂದಿನಿಂದಲೂ ಹಟವಾಣಿ ಮತ್ತು ಕಟುವಾಣಿ. ಆದರೆ ದೊಡ್ಡ ಅಧಿಕಾರದಲ್ಲಿ ಗಂಡ ಇದ್ದಾಗ ತಾನು ಮೆರೆಯಲು ಹಿತವಾಗಿತ್ತು ; ಅನುಕೂಲವೂ ಆಗಿತ್ತು. ಮನೆಯ ಮೂಲೆಯಲ್ಲಿ ಗಂಡ ಕುಳಿತಾಗ, ಆಳುಕಾಳುಗಳ ಸಂಖ್ಯೆ ಕಡಿಮೆಯಾಯಿತು. ಆಕೆಗೂ ಋಷಿಪಂಚಮಿಯ ವಯಸ್ಸು, ಮನಸ್ಸು ಎರ್ರಾಬಿರ್ರಿ ಆಗತೊಡಗಿತ್ತು. ಸಂಸ್ಕೃತಿಯ ಯಾವ ಸೋಂಕೂ ಇಲ್ಲದ, ಕೆಟ್ಟುಬದುಕಿದವರ ಮನೆಯ ಹೆಣ್ಣು. ಹುಟ್ಟಿದಂದಿನಿಂದಲೂ ಬುದ್ಧಿಯು ಅಸಾಧ್ಯ ಮಂದ. ಮೆರೆಯಲು ಗಂಡನ ಮನೆಯಲ್ಲಿ ಅವಕಾಶವು ದೊರೆತಾಗ, ಅರ್ಧರಾತ್ರಿಯಲ್ಲಿ ಅಂಗಳದಲ್ಲಿ ಕೊಡೆ ಹಿಡಿಸಲು ತೊಡಗಿದಳು. ಮನೆಗೆ ಬಂದ ಗಂಡನ ಸ್ನೇಹಿತರು, ಈಕೆಯ ನಡೆ ನುಡಿಗಳನ್ನು ಕಂಡು ತಡೆಯಲಾರದೆ ನಕ್ಕರೆ, ನಾನು ಆಡಿದ್ದನ್ನು ಕೇಳಿ, ಮಾಡಿದ್ದನ್ನು ನೋಡಿ, ಮೆಹನತ್ತಿನ ಮೆಚ್ಚಿಗೆಯನ್ನು ನಗೆಯ ಮೂಲಕ ಸೂಚಿಸುತ್ತಿದ್ದಾರೆ ಎಂದಂದುಕೊಳ್ಳುವ, ಮಂಕುಬುಡ್ಡಿ ಆಕೆ. ಆದರೂ ಗಂಡನ ಅಧಿಕಾರದ ದೆಸೆಯಿಂದ ಇದೆಲ್ಲವೂ ಮರೆಮಾಚಿತ್ತು.

ಗಂಡನು ರಿಟೈರ್ ಆಗುವ ವೇಳೆಗೆ ಹಿರಿಯ ಮಗನಿಗೆ ಮದುವೆಯಾಗಿತ್ತು. ಓದಿದ ಸೊಸೆ ಮನೆಗೆ ಬಂದಳು. ಮನೆಯಾಕೆಯ ಮೊಂಡುತನದ ಮದವೆಲ್ಲಾ ಸೊಸೆಯ ಮೇಲೆ ಎರಗಿತು. ಮುಖವನ್ನು ಸಿಂಡರಿಸಿಕೊಳ್ಳದೆ ಸೊಸೆಯೊಡನೆ ಮಾತಾಡುತ್ತಿರಲಿಲ್ಲ. ಪಾತ್ರೆ ತೊಳೆಯುವ ಕೂಲಿ ಹೆಣ್ಣಿಗೆ ಕೂಡ ಹೆಚ್ಚು ಮರ್ಯಾದೆ ಸಿಗುತ್ತಿತ್ತು ; ಆದರೆ ಸೊಸೆಗೆ ಸಿಗುತ್ತಿರಲಿಲ್ಲ. ಕೆಲಕಾಲ ಸೊಸೆಯು ಈ ಗೋಳನ್ನು ಅನುಭವಿಸಿದಳು. ನಂತರ 'ನನಗ್ಯಾಕೆ ಈ ಪೀಡೆ?' ಎಂದನಿಸಿತು. ಇದ್ದ ಸಂಗತಿಯನ್ನು ಗಂಡನಿಗೆ ಹೇಳಿದಳು. ಅಮ್ಮನಿಗೆ ಅವನು ಹಲವಾರು ತೆರನ ಜಾಣತನದ ಸಲಹೆಗಳನ್ನಿತ್ತ. ಮೊಂಡುತನದ ಹೆಣ್ಣಿಗೆ ಇದನ್ನು ತಿಳಿಯಲು ಸಾಧ್ಯವೇ ? ತಿಳಿದುಕೊಂಡಮೇಲಲ್ಲವೇ ನಡತೆಯನ್ನು ಮುಂದೆ ತಿದ್ದಿಕೊಳ್ಳಲು ಸಾಧ್ಯ. ಎರಡೂ ಇಲ್ಲ, ಮಗನಿಗೂ ಬೇಸರ ಬಂತು. ಬೇರೆ ಸಂಸಾರವನ್ನು ಹೂಡುವುದು ಲೇಸು ಎಂದು ಮಗ ಸೊಸೆ ನಿರ್ಧರಿಸಿದರು. ಭಟ್ಟರ ಬಳಿಗೆ ಮಗ ಒಂದು ಸಂಜೆ ಬಂದ. 'ಅಪ್ಪಾ ! ಅಮ್ಮನೊಂದಿಗೆ ಒಗ್ಗಿಕೊಂಡುಹೋಗಲು ನಾನೂ ಮತ್ತು ನನ್ನ ಹೆಂಡತಿಯೂ ಶತಪ್ರಯತ್ನ ಮಾಡಿದೆವು, ಸಾರ್ಥಕವಾಗಲಿಲ್ಲ. ಈಚೀಚೆಗನಕ ಅಮ್ಮನ ಹಲ್ಕ ನಡವಳಿಕೆಯು ಮಿತಿಮೀರುತ್ತಿದೆ, ಹಿರಿಯರೆದುರಿಗೆ ದನಿ ಎತ್ತಬಾರದು ಎಂದು ನಾವಿಬ್ಬರೂ ಈ ತನಕ ಎಲ್ಲವನ್ನೂ ಸಹಿಸಿಕೊಂಡೆವು. ಈ ಜನ್ಮದಲ್ಲಿ ಅಮ್ಮನಿಗೆ ಬುದ್ಧಿ ಬರುವುದಿಲ್ಲ ಎಂಬುದು ನಿಮಗೂ ತಿಳಿದಿದೆ.

ಆದುದರಿಂದ ಬೇರೆ ಸಂಸಾರವನ್ನು ನಾವು ಹೂಡಬೇಕು ಎಂದುಕೊಂಡಿದ್ದೇವೆ. ಇದರಿಂದ ನಿಮ್ಮ ಮನಸ್ಸಿಗೆ ಬೇಜಾರಾಗಬಹುದು. ನಿಮ್ಮನ್ನು ಒಂದು ಮಾತು ಕೇಳಿ, ನೀವು ಹ್ೞೂ ಅಂದರೆ ಮುಂದಿನ ಏರ್ಪಾಡು ಮಾಡುತ್ತೇವೆ. ಒಳ್ಳೆಯ ಮನಸ್ಸಿನಿಂದ ಆಶೀರ್ವಾದ ಮಾಡಿ ಕಳಿಸಿಕೊಟ್ಟರೆ ಹೋಗಬಯಸುತ್ತೇವೆ' ಎಂದು ಹೇಳಿ ಕಾಲು ಮುಟ್ಟಿ ನಮಸ್ಕಾರವನ್ನು ಮಾಡಿದ.

'ನೀವು ಸುಖವಾಗಿ ಬಾಳುವುದು ನನ್ನ ಹಂಬಲ. ಹಿತವಾಗಿ ಬಾಳಲು ನಿಮಗೊಂದು ಮನೆಯನ್ನು ಕೊಡಲು ನನಗೆ ಸಾಧ್ಯವಾಗಿಲ್ಲ. ಹೊಟ್ಟೆಗಿಲ್ಲದ ದೇವರು, ಪೂಜಾರಿಗೆ ಏನು ವರ ಕೊಟ್ಟಾನು ? ನನಗೆ ಹಿತವೀವ ಮನೆಯಿಲ್ಲದಾಗ, ನಿಮಗೆ ಅದನ್ನು ನೀಡಲು ಹೇಗೆ ಸಾಧ್ಯ ! ಆದ್ದರಿಂದ ಯಾವ ಅಳುಕನ್ನೂ ಪಡದೆ, ನಿಮ್ಮ ಪಾಡಿಗೆ ನೀವು ಹೋಗಿ. ಸುಖವಾಗಿ ಬಾಳಿ. ದೇವರು ಕೊಟ್ಟ ಬುದ್ಧಿಯನ್ನು ಸರಿಯಾಗಿ ಉಪಯೋಗಿಸಿಕೊಂಡಿದ್ದರೆ, ಈ ಸಲಹೆಯನ್ನು ನಾನೇ ಮೊದಲು ಮೊದಲಲ್ಲೇ ಮಾಡಬೇಕಾಗಿತ್ತು, ತಪ್ಪಿದೆ, ಹೋಗಿ ಬನ್ನಿ, ಮನೆಯಲ್ಲಿರುವ ಸಾಮಾನುಗಳಲ್ಲಿ ಯಾವುದು ನಿಮಗೆ ಬೇಕೆನಿಸುತ್ತೋ ಅವನ್ನು ನಿಸ್ಸಂಕೋಚವಾಗಿ ತೆಗೆದುಕೊಂಡು ಹೋಗಿ' ಎಂದು ಭಟ್ಟರು ಸಾಧ್ಯವಾದಷ್ಟು ನಿರ್ವಿಕಾರದ ದನಿಯಲ್ಲಿ ಹೇಳಿದರು.

ಒಂದು ಮಧ್ಯಾಹ್ನ ಮನೆಯ ಮುಂದೆ ಲಾರಿ ಬಂದು ನಿಂತಿತು. ತಮ್ಮ ಟ್ರಂಕು ಪೆಟ್ಟಿಗೆಗಳನ್ನು, ಮತ್ತಿತರ ಸಾಮಾನುಗಳನ್ನೂ ಮಗ ಸೊಸೆಯರು ತೆಗೆದಿಟ್ಟರು. ಕೂಲಿಯವರು ಲಾರಿಗೆ ಏರಿಸಿದರು. ಲಾರಿಯೂ ಹೊರಟಿತು. ಅದರ ಹಿಂದೆಯೇ ಕಾರಿನಲ್ಲಿ ಮಗ ಸೊಸೆಯರು ಹೊರಟರು. ಅವರು ಅತ್ತ ಹೋದ ಮೇಲೆ, ಮನೆಯಾಕೆಯು ದೊಡ್ಡ ಈ ಮನೆಯ ಅನುಕೂಲಗಳೂ ಬಾಡಿಗೆ ಮನೆಯಲ್ಲಿ ಎಲ್ಲಿ ದೊರಕುತ್ತೆ ? ತುದಿಗಾಲಿನ ಮೇಲೆ ನಿಂತಿದ್ದಳು, ಮಿಟಿಕಲಾಡಿ, ಬೇರೆ ಸಂಸಾರ ಹೂಡುಕ್ಕೆ. ನನ್ನ ಮಂಕು ಮಗನೋ ಅವಳು ಹೇಳಿದ ಹಾಗೆ ಕುಣೀತಾನೇ. ಅಲ್ಲಿ ಹೋಗಿ ಒದ್ದಾಡಲಿ, ಅಲ್ಲಿ ನರಳಿ ಅನುಭವಿಸಲಿ' ಎಂದು ಲೊಟಕಿದಳು. ತಮ್ಮದು ಎಂದುಕೊಂಡಿದ್ದ ಮನೆಯನ್ನು ನಿರ್ವಾಹವಿಲ್ಲದೆ ಬಿಟ್ಟು ಹೋಗುತ್ತಿರುವ ಮಗ ಸೊಸೆಯರು, ಎಲ್ಲಾದರೂ ಸುಖವಾಗಿರಲಿ ಎಂದನ್ನುವ ಔದಾರ್ಯ ಮನೆಯಾಕೆಗೆ ಬರಲಿಲ್ಲ. ಒದ್ದಾಡಲಿ, ನರಳಲಿ ಎಂದೇ ಅಂದಳು.

ಹೀಗೆ ಲೊಟಕಿದಾಗ ಮನೆಯಾಕೆಯನ್ನು ಒದ್ದುಬಿಡಲೇ ಎನ್ನುವಷ್ಟು ಕೋಪ ಭಟ್ಟರಲ್ಲಿ ಉಕ್ಕಿತು. ಒದ್ದರೆ ದೊರಕುವ ಪ್ರತಿಫಲವೇನು ? ಒದ್ದ ಕಾಲಿಗೆ ನೋವು. ಇನ್ನು ಯಾವ ಪರಿಣಾಮವೂ ಸಾಧ್ಯವಿಲ್ಲ. ಕೊಠಡಿಗೆ ಹಿಂತಿರುಗಿ

ಬಾಗಿಲು ಜಡಿದು ಕುಳಿತರು. ಸಂಸಾರದ ಅನುಭವವು ಸಾಕಷ್ಟು ಇತ್ತು. ವಯಸ್ಸೂ ಆಗಿ ಬುದ್ಧಿಯೂ ಅಲ್ಪಸ್ವಲ್ಪ ಬಂದಿತ್ತು. ಇವೆಲ್ಲವೂ ಸಾಮಾನ್ಯ ಘಟನೆಗಳು. ಎಷ್ಟೋ ಮನೆಗಳಲ್ಲಿ ಪರಿಸ್ಥಿತಿಯು ಇನ್ನೂ ಕುಲಗೆಟ್ಟು ಹೋಗಿರುತ್ತದೆ. ಅದಕ್ಕಿಂತ ಇದೇ ಮೇಲು ಎನ್ನುವುದೂ ತಿಳಿದಿತ್ತು. ಆದರೂ ಏಕೋ ಏನೋ ಯಾವುದೋ ಒಂದು ಗಂಟಲಿನಲ್ಲಿ ಸಿಕ್ಕಿಕೊಂಡು ಒತ್ತತೊಡಗಿತು. ಕಣ್ಣುಗಳು ಮಂಜಾದುವು. ಇದ್ದೊಬ್ಬ ಮಗನಿಗೆ ಆಸರೆ ಕೊಡಲು ಮನೆಯಿಲ್ಲವಾಯಿತೇ ಎಂದು ಕೊರಗಿದರು ಮುದುಕ ಭಟ್ಟರು.

ಕೆಲಸದ ಸಲುವಾದ ಆತಂಕವು ಭಟ್ಟರನ್ನು ಮೊದಲೇ ಮುತ್ತಿತ್ತು. ಆಸೆ, ಅವಮಾನದ ಭಯ, ಸ್ವಾಭಿಮಾನಕ್ಕೆ ಧಕ್ಕೆ, ಇವೆಲ್ಲವೂ ಅವರ ಮನಸ್ಸನ್ನು ಜಗ್ಗಾಡುತ್ತಿದ್ದುವು. ಸಂಸಾರದಲ್ಲಿ ಈ ತೆರನ ಆಘಾತವಾದಾಗ ಆತಂಕವು ತಳಮಳದ ಹಂತಕ್ಕೇರಿತು. ಮುಪ್ಪಿನ ವಯಸ್ಸಾದುದರಿಂದ ಮೆದುಳಿನ ಚಟುವಟಿಕೆಗಳೂ ಮಂದವಾಗಹತ್ತಿದ್ದುವು. ಅಂದರೆ ವಿವೇಚನಾ ಶಕ್ತಿಯೂ ದುರ್ಬಲಗೊಂಡಿತ್ತು. ಆದುದರಿಂದ ಯೋಚಿಸಿ ತಳಮಳವನ್ನು ತಡೆಗಟ್ಟಲು ಸಾಧ್ಯವಿರಲಿಲ್ಲ. ಹೀಗಾಗಿ ಆಡಲೂ ಆರ, ಅನುಭವಿಸಲೂ ಆರ, ಸರಿಪಡಿಸಲು ವಿಚಾರಶಕ್ತಿಯೂ ಕ್ಷಯಿಸುತ್ತಿತ್ತು. ಆ ವಯಸ್ಸಿಗೆ ಸ್ವಲ್ಪಹೆಚ್ಚಾದ ಬ್ಲಡ್‌ಪ್ರೆಷರ್ ಇತ್ತು. ಮನಸ್ಸಿನ ತಳಮಳದಿಂದ ಅದೂ ಹೆಚ್ಚಿತು. ಮೆಲ್ಲಮೆಲ್ಲಗೆ Senile cerebral degeneration ಪ್ರಾರಂಭವಾಯಿತು. ಫಲಿತಾಂಶ : ಕೆಲವು ತಿಂಗಳುಗಳಲ್ಲಿ ಅವರ ವರ್ತನೆಯು ವಿಚಿತ್ರವಾಗತೊಡಗಿತು.

ಅಸಂಬದ್ಧವಾಗಿ ಮಾತನಾಡುವುದು, ವಿನಾಕಾರಣ ರೇಗುವುದು, ಸುಮ್ಮಸುಮ್ಮನೆ ನಗುವುದು, ಇತ್ಯಾದಿಗಳಿಗೆ ಶುರುವಾಯಿತು. ಕಡೆಗೊಮ್ಮೆ ಕಾಫಿ ತಂದು ಕೊಟ್ಟ ಹೆಂಡತಿಯನ್ನು ಹೊಡೆಯಹೋದರು. ದೂರದ ನೆಂಟನು ಬಂದಾಗ ಅವನನ್ನು ಬಡಿಯ ಹೋದರು. ಕಡೆಗೆ ಮಾನಸಿಕ ಆಸ್ಪತ್ರೆಗೆ ಸೇರಿಸದೆ ಗತ್ಯಂತರವಿಲ್ಲದ ಹಾಗಾಯಿತು. ಅಲ್ಲಿ ಕೆಲವು ವಾರಗಳಿದ್ದರು. ದಯಾಮಯ ದೇವರು ಆಮೇಲೆ ಅವರ ಕಣ್ಣು ಮುಚ್ಚಿಸಿದ.

ಅರವತ್ತರ ಸುಮಾರಿನ ಮುಪ್ಪು ಅಡರಿದಾಗ, ಬಾಳಿನಿಂದ ಪಡೆದ ಅನುಭವವು ಸಾಕಷ್ಟು ಇರುತ್ತದೆ. ಇದರ ಫಲವಾಗಿ ಯುವಕರಿಗಿಂತಲೂ ಹೆಚ್ಚು ಪರಿಣಾಮಕಾರಿಯಾಗಿ ಕೆಲಸಗಳನ್ನು ಮಾಡಬಲ್ಲ, ಯುವಕರ ದೇಹದಾರ್ಢ್ಯವಿರದಿದ್ದರೂನೂ. ಈ ಕಾರಣದಿಂದ ಅವ ಕಾರ್ಯಕ್ಷೇತ್ರದಿಂದ ನಿಷ್ಕ್ರಮಿಸಲು ಬಡ ಪೆಟ್ಟಿಗೆ ಒಪ್ಪುವುದಿಲ್ಲ. ಅಧಿಕಾರಕ್ಕೆ ಅಂಟಿಕೊಳ್ಳುವ ಪ್ರವೃತ್ತಿಯು

ಅತಿಯಾಗುತ್ತದೆ. ಇನ್ನೂ ಹೆಚ್ಚಾಗಿ ಸಂಪಾದಿಸಿ ಶೇಖರಿಸಬೇಕು ಎನ್ನುವ ಯುವಕ ಕೆಚ್ಚು ಇರುವುದಿಲ್ಲ. ಅದರ ಬದಲು ಇದ್ದುದನ್ನು ಭದ್ರಮಾಡಬೇಕು. ಸುಭದ್ರವಾದ ವಿಧಾನಗಳಿಂದ ಇದ್ದುದನ್ನು ಬೆಳೆಸುವುದಾದರೆ ಆಗಲಿ ಎನ್ನುವ ಹುಚ್ಚು ಹೆಚ್ಚಾಗುತ್ತದೆ. ಆದಕಾರಣ ಕೆಲಸದಲ್ಲಿ ಮಗ್ನನಾಗಲು ಪ್ರಯತ್ನಿಸುತ್ತಾನೆ. ಬಹುಪಾಲು ಆ ಯತ್ನದಲ್ಲಿ ಜಯಗಳಿಸುತ್ತಾನೆ. ಒಂದೆರಡು ವರ್ಷಗಳು ಕಳೆಯುವುದರೊಳಗೆ, ಹೆಚ್ಚುಹೆಚ್ಚಾಗಿ ಪೆಚ್ಚು ಪೆಚ್ಚು ತಪ್ಪುಗಳನ್ನು ಮಾಡುತ್ತಿರುವುದನ್ನು ಗಮನಿಸುತ್ತಾನೆ. ಇತರರಿಗೆ ಎಲ್ಲಿ ಇದು ಗೊತ್ತಾಗುವುದೋ ಎಂಬ ಆತಂಕವು ಕೊರೆಯಲಾರಂಭಿಸುತ್ತದೆ. ಇಂತಹ ಸ್ಥಿತಿಯಲ್ಲಿರುವ ಮುದುಕನಿಗೆ ಸಂಸಾರದಲ್ಲಿ ಆಘಾತವಾದರೂ ಆಯಿತು; ಸಮಾಜದಲ್ಲಿ ಮಾನ ಹೋಗುವ ಸಂದರ್ಭಗಳು ಒದಗಿದರೂ ಆಯಿತು ; ಅಥವಾ ತಾನು ಶೇಖರಿಸಿದ್ದುದು, ಷೇರುಪೇಟೆಯಲ್ಲಿ ಕರಗಿಹೋದರೂ ಆಯಿತು; ಆಗ ಆತಂಕವು ಉಲ್ಬಣಗೊಂಡು ಧೃತಿಗೆಡುತ್ತಾನೆ. ಇತರ ವಿಧದ ಮಾನಸಿಕ ಬೇನೆಗಳು ಆತಂಕದ ಬೆನ್ನು ಹತ್ತಿ ಮನಸ್ಸನ್ನು ಹರಿದಿಡುತ್ತವೆ. ಅರುಳೂ ಮರುಳು, ಹುಚ್ಚು ಬೆಪ್ಪು ಶಿವಲೀಲೆಗಳಾಗುವುದು ಈ ರೀತಿಯಲ್ಲಿ.

ಮುಪ್ಪಿನಲ್ಲಿ ತೀವ್ರಾತಂಕವು ಉಂಟಾಗುವುದು ವಿರಳವೇನಲ್ಲ. ತಾನು ಬಯಸಿದಂತೆ ತನ್ನ ಮಕ್ಕಳು ಮರಿಗಳೂ ಬಾಳಬೇಕು ಎಂದು ಎಲ್ಲರೂ ಆಸೆಪಡುವುದು ಸ್ವಾಭಾವಿಕ. ಬಯಸಿದಂತೆ ಬಾಳುವುದು ಸುಲಭ ಸಾಧ್ಯವಿದ್ದರೆ, ಭೂಲೋಕ ಎಂದು ಏಕೆ ಕರೆಯುತ್ತಿದ್ದರು ; ಸ್ವರ್ಗ ಎಂದೇ ಅನ್ನುತ್ತಿದ್ದರು. ಕೇಳಿದುದನ್ನು ನೀಡುವ ಕಲ್ಪವೃಕ್ಷವು ಅಲ್ಲಿ ತಾನೆ ಇದೆ ಎಂದು ಪುರಾಣಗಳು ಹೇಳುವುದು ! ಅಂದರೆ ಬಹಳಷ್ಟು ಮಂದಿ ಮುದುಕರು ಆತಂಕಕ್ಕೆ ಬಲಿಯಾಗಲೇ ಬೇಕು. ಮೊದಮೊದಲ ಹಂತದಲ್ಲೇ ಅಂತಹವರು ಆಧ್ಯಾತ್ಮಿಕ ವಿಷಯಗಳಲ್ಲಿ ಆಸಕ್ತರಾದರೆ, ಯಾವುದು ಆತಂಕಕ್ಕೆ ಒಳಗಾಗಿರುವುದು ಎಂಬುದರ ವಿಶ್ಲೇಷಣೆಯನ್ನು ಮಾಡತೊಡಗಿದರೆ, ಆತಂಕವು ಕಡಿಮೆಯಾಗುತ್ತದೆ. ನೆಮ್ಮದಿಯೂ ಉಂಟಾಗುತ್ತದೆ. ಮುಪ್ಪಿನ ಆತಂಕಗಳಿಗೆ ಆಧ್ಯಾತ್ಮಿಕ ಅರಿವಿನ ಪ್ರಯತ್ನವು ಅತ್ಯುತ್ತಮ ಮಾನಸಿಕ ಚಿಕಿತ್ಸೆ. ಇಂತಹ ಆಧ್ಯಾತ್ಮಿಕ ಅರಿವು ಪೂರ್ಣ ಜ್ಞಾನಾರ್ಜನೆಯಿಂದ, ಕುಶಲಮತಿಗಳಲ್ಲಿ, ವಿಚಾರಪರರಲ್ಲಿ ಸಾಧ್ಯ. ಯಾವ ಸಮಾಜದಲ್ಲಿಯಾಗಲೀ ವಿಚಾರಪರರು ಅಲ್ಪಸಂಖ್ಯಾತರು. ಉಳಿದ ಬಹುಸಂಖ್ಯಾತರಿಗೆ ಪೂರ್ಣ ನಂಬುಗೆ ಮತ್ತು ಭಕ್ತಿ ಇವುಗಳೇ ಉತ್ತಮ ಮಾರ್ಗವಾಗಬಹುದು. ಆತ್ಮಕ್ಕಿಂತ ಅಧಿಯಾದ, ಆಧ್ಯಾತ್ಮಿಕದ ಕೂಟಸ್ಥವಾದ ಯಾವುದಾದರೂ ದೇವರಲ್ಲಿ ಸಂಪೂರ್ಣ ಶರಣಾಗತನಾದರೆ, ಆತಂಕದಿಂದ ವಿಮುಕ್ತನಾಗಬಹುದು. ದೇವರ ಮೇಲೆ ಹೊಣೆ

ಹಾಕಿದರೆ ದೇವರು ಆತಂಕವನ್ನು ಪಡಬೇಕು; ವ್ಯಕ್ತಿಯ ಹೊಣೆಯೇನೂ ಉಳಿದಿರುವುದಿಲ್ಲ. ಆಗ, ಆತಂಕದ ಸೋಂಕೂ ಇರಲು ಸಾಧ್ಯವಿಲ್ಲ, ಅಂತಹವರಲ್ಲಿ. ಅಥವಾ, ಇತರ ವಿಚಾರಪರರು ಮೌಢ್ಯವೆಂದು ಹೀಯಾಳಿಸುವ, ಮೂಢನಂಬಿಕೆ ಎಂದು ಅವಹೇಳನ ಮಾಡುವ, ವ್ರತ, ಪೂಜೆ, ಇತ್ಯಾದಿ ಕರ್ಮಗಳಲ್ಲಿ ಮಗ್ನರಾದರೂ, ಆತಂಕವು ಕಡಿಮೆಯಾಗುತ್ತದೆ. ಮುಪ್ಪಿನಲ್ಲಿ ಭ್ರಮನಿರಸನವು ಆಗುತ್ತದೆ. ಒಬ್ಬಂಟಿಯಾದೆವು ಎನ್ನುವ ಗಂಭೀರ ಭಾವನೆಯು ಉಂಟಾಗುತ್ತದೆ. ಶಿಥಿಲವಾಗುತ್ತಿರುವ ದೇಹವು ಕಾಡಲಾರಂಭಿಸುತ್ತದೆ, ಹಲವಾರು ವಿಧಾನಗಳಲ್ಲಿ; ನಾನಾ ರೋಗದ ರೂಪದಲ್ಲಿ. ಆಗ ಆಧ್ಯಾತ್ಮಿಕ ಅಭ್ಯಾಸವು, ಸಂಭವಿಸಿದುದನ್ನೆಲ್ಲ ಸಮಾಧಾನದಿಂದ ಅನುಭವಿಸುವಂತೆ ಭದ್ರವಾದ ಊರೆಗೋಲಾಗುತ್ತದೆ. ಆತಂಕಕ್ಕಾಗಲೀ, ಭವಿಷ್ಯ ಭಯಕ್ಕಾಗಲೀ ಅಂತಹವರು ಬಲಿಯಾಗುವುದಿಲ್ಲ.

ಹೀಗಾದರೆ ಮತ್ತೊಂದು ಅನಿರೀಕ್ಷಿತ ಫಲವೂ ದೊರಕುತ್ತದೆ. ಬಾಳಿಗೊಂದು ಅರ್ಥವನ್ನೂ ನೀಡುತ್ತದೆ. ಸ್ಪರ್ಧಾ ಜೀವನದಿಂದ ದೂರವಾದಾಗ, ಆ ಕಾರಣದಿಂದಲೇ ಎಂದರೂ ತಪ್ಪಲ್ಲ, ಸಮಾಜದ ಬಹುಮಂದಿಯಿಂದ ವಿಶ್ವಾಸವೂ ಗೌರವವೂ ದೊರಕುತ್ತದೆ. ಸಂಪಾದನೆ ಇರದಿದ್ದರೂ ಮನೆಯ ಕಿರಿಯರಿಂದ ಆದರವೂ ಮರ್ಯಾದೆಯೂ ಲಭಿಸುತ್ತದೆ. ಎಲ್ಲರಿಗೂ ಆಪ್ಯಾಯಮಾನವಾದ ಮನ್ನಣೆಯೂ ಸುತ್ತಮುತ್ತಲಿನ ಜನರಿಂದ ಸಿಗುತ್ತದೆ. ಬಾಳು ನಿರರ್ಥಕವಾಯಿತು ಎನ್ನುವ ಮುಪ್ಪಿಗರ ಮನಸ್ಸಿನ ಬೇಸರವು ಮಾಯವಾಗಿ, ಬಾಳು ಸಾರ್ಥಕವಾಯಿತು; ಬಂದು ಕೇಳಿದವರಿಗೆ ಅನುಭವದಿಂದ ಕಲಿತುದುದನ್ನು ಸರಳವಾಗಿ ಕಲಿಸುವುದು; ಆ ಮೂಲಕ ಕಿರಿಯರ ಬಾಳನ್ನು ಹಸನಾಗಿಸುವುದು ಬಾಳಿಗೆ ಅರ್ಥ ಮೂಡಿಸುವ ಹಿರಿಯ ಕೆಲಸ ಎನಿಸುತ್ತದೆ.

ಮುಪ್ಪು ಎಂದಾಗ ಜಾತಕದ ರೀತಿಯಾಗಿ ಲೆಕ್ಕಮಾಡಿದ ಅರವತ್ತು ವರ್ಷ ವಯಸ್ಸು ಎಂದೇನೂ ಅಲ್ಲ, ಉಷ್ಣವಲಯದಲ್ಲಿ ಸರಾಸರಿ ಅರವತ್ತಕ್ಕೆ ಹಾಗಾಗುತ್ತದೆ. ಆದರೆ ಎಷ್ಟೋ ಜನರು ಪಂಚಾಂಗದ ಪ್ರಕಾರ ನಲವತ್ತೇ ವಯಸ್ಸಾಗಿದ್ದರೂ ಮುಪ್ಪಿಗರಂತೆ ಅರುಳು ಮರುಳು ಆಗಿರುತ್ತಾರೆ. ತದ್ವಿರುದ್ಧ ಕೆಲವು ಜನ ಎಪ್ಪತ್ತು, ಎಂಭತ್ತು ವಯಸ್ಸಾಗಿದ್ದರೂ, ನಲವತ್ತರ ಮಾನಸಿಕ ಚಾಕಚಕ್ಯತೆಯನ್ನು ಉಳಿಸಿಕೊಂಡಿರುತ್ತಾರೆ. ದೇಹವು ಅನುಸರಿಸುವ ಕಾಲಮಾನಕ್ಕೂ, ಮನಸ್ಸು ನಡೆದುಕೊಳ್ಳುವ ಕಾಲಗತಿಗೂ, ಯಾವ ನೇರ ಸಂಬಂಧವೂ ಇರುವುದಿಲ್ಲ. ಇರಬೇಕಾಗಿಯೂ ಇಲ್ಲ. ಮೂವತ್ತರ ಯುವಕ ಶೃಂಗಾರ ಶತಕವನ್ನು ದೂರ ಎಸೆದು, ವೈರಾಗ್ಯ ಶತಕವನ್ನು ಜಪಿಸತೊಡಗಬಹುದು. ಎಪ್ಪತ್ತರ ಮುದುಕ ಬಿಳಿ

ಕೂದಲಿಗೆ ಕರೀ ಬಣ್ಣವನ್ನು ಹಚ್ಚಿಕೊಂಡು, ಯುವಕನಂತೆ ಶೃಂಗಾರ ಮಾಡಿಕೊಂಡು, ಮದನಮಸ್ತಿ ಲೇಹವನ್ನು ತಿನ್ನುತ್ತಾ, ವಾಲಾಡಬಹುದು.

ಮುಪ್ಪಿಗರಿಗೆ ಆತಂಕವು ಸ್ವಾಭಾವಿಕವಾದುದು; ಅರುಳು ಮರುಳು ಸಹಜವಾದುದು ಎಂದಾಗ, ಪಂಚಾಂಗದ ವಯಸ್ಸಿನ ಲೆಕ್ಕದಿಂದಲ್ಲ. ವೈಯಕ್ತಿಕವಾದ ದೇಹದ ವಯಸ್ಸು ; ಹಾಗೂ ಮಾನಸಿಕ ವಯಸ್ಸು ಇವನ್ನು ಗಮನಿಸಬೇಕು.

ಮುದುಕಿಯರನ್ನು ಆತಂಕವು ಕಾಡುವಾಗ, ವಿಚಿತ್ರ ನಡತೆಗಳು ಕಾಣಬರುತ್ತವೆ. ಸಾಕಷ್ಟು ಬೇಸರ, ಮತ್ತು ದುಃಖವನ್ನು ಸಂಸಾರದಲ್ಲಿ ಇತರರಿಗೆ ಉಂಟು ಮಾಡುತ್ತದೆ.

'ನಮಸ್ಕಾರ ಮಾಡೇ, ಡಾಕ್ಟರಿಗೆ' ಎಂದಳು ಹಿರಿಯ ಮುತ್ತೈದೆ. ಧ್ವನಿಯು ಮೆದುವಾಗಿದ್ದರೂ ಸಿಡುಕಿನ ಛಾಯೆಯಿತ್ತು. ಇಪ್ಪತ್ತಮೂರು ಇಪ್ಪತ್ತನಾಲ್ಕರ ಪದವೀಧರೆ ಹೆಣ್ಣು, ತಲೆ ತಗ್ಗಿಸಿಕೊಂಡು ಡಾಕ್ಟರ ಪಾದಗಳತ್ತ ಕೈ ಚಾಚಿ ನಮಸ್ಕರಿಸಿದಳು. 'ನನ್ನ ಸೊಸೆ, ಡಾಕ್ಟರೇ ! ಯೆಂಟನ ಹೆಂಡತಿ' ಎಂದು ಡಾಕ್ಟರಿಗೆ ಪರಿಚಯವನ್ನು ಮಾಡಿಸಿದಳು, ಮುತ್ತೈದೆ. 'ಹೌದೇನೇ, ತಾಯೀ, ನಮ್ಮ ಮನೆಗೆ ಭಾಗ್ಯಲಕ್ಷ್ಮಿಯಾಗಿ ಬಂದೆಯಮ್ಮ ತುಂಬಾ ಸಂತೋಷವಾಯಿತಮ್ಮ ನಿನ್ನ ನೋಡಿ; ಮುತ್ತೈದೆ ಸಾವಿತ್ರಿಯಾಗಿ, ಒಂದೆರಡು ಮಕ್ಕಳ ತಾಯಾಗಿ ಬಹುಕಾಲ ಹಿತವಾಗಿ ಬಾಳಮ್ಮ' ಎಂದು ಡಾಕ್ಟರು ಆದರದಿಂದ ಆಶೀರ್ವದಿಸಿದರು. ಸೊಸೆಯ ಮುಖದಲ್ಲಿ ಸಂತಸದ ಬೆಳದಿಂಗಳು ಹರಡಿತು. ಅತ್ತೆಗೂ ಇದು ಕಾಣಿಸಿತು.

'ಯಾರು ಯಾರೋ ಹೇಳಿದರು ಅಂತ ಈ ಹೆಣ್ಣನ್ನು ತಂದುಕೊಂಡೆ, ಡಾಕ್ಟರೇ ! ಆದರೆ ಈಗ ಅನುಮಾನ ಬರುತ್ತಾ ಇದೆ. ನಮ್ಮ ಯೆಂಟುವಿಗೆ ಅನ್ಯಾಯ ಮಾಡಿದೆನೇನೋ ಅಂತ. ಇವಳ ಹೆಗ್ಗತ್ತಿನಮೇಲೆ ಬಿಳಿ ಮಚ್ಚೆ ಇದ್ದ ಹಾಗಿದೆ ; ಸ್ವಲ್ಪ ಪರೀಕ್ಷೆಮಾಡಿ ನೋಡಿ,' ಎಂದಳು ಅತ್ತೆಮ್ಮ

'ಚೆನ್ನಾಗಿ ಪರೀಕ್ಷೆ ಮಾಡಿನೋಡಿ, ಡಾಕ್ಟರೇ, ಈ ಮನೆಗೆ ಕಾಲಿಟ್ಟ ಮೂರು ತಿಂಗಳುಗಳಿಂದ ಇದೇ ಮಾತನ್ನು ಅತ್ತೆಮ್ಮ, ಕಂಡವರೆದುರಿಗೆಲ್ಲಾ ದಿನಕ್ಕೆ ಎಂಟು ಹತ್ತು ಬಾರಿಯಾದರೂ ಲೊಟಕುತ್ತಲೇ ಇದ್ದಾರೆ. ಕಂಡ ಹೆಂಗಸರಿಗೆಲ್ಲಾ ಕತ್ತು ಬಗ್ಗಿಸಿ ತೋರಿಸಿ, ತೋರಿಸಿ, ನನಗೂ ತಲೆ ಚಿಟ್ಟು ಹಿಡಿದು ಹೋಗಿದೆ. ನೀವು ನೋಡಿ ಹೇಳಿದ ಮೇಲಾದರೂ ತೆಪ್ಪಗಿರುತ್ತಾರೇನೋ ಎಂಬ ಆಸೆ. ಮದುವೆಗೆ ಮುಂಚೆಯೇ ಬೇಕಾದ ಪರೀಕ್ಷೆಗಳನ್ನೆಲ್ಲಾ ಮಾಡಿಸಿ, ಮಾಡಿಕೋಬಾರದಾಗಿತ್ತೆ? ಈಗ ಯಾಕೆ ಹೀಗೆ ಮುಕ್ಕಬೇಕು, ನನ್ನ' ಎಂದು ಸೊಸೆಯೂ ಸಿಡುಕಿನಿಂದಲೇ ನುಡಿದಳು.

ಹೆಗ್ಗತ್ತನ್ನು ಡಾಕ್ಟರು ನೋಡಲೇ ಇಲ್ಲ. ಗಲ್ಲ ಹಿಡಿದು ಸೊಸೆಯ ತಲೆಯನ್ನೆತ್ತಿ, 'ತಾಯೀ! ನಿಮ್ಮತ್ತೆ ಹೀಗೆ ಲೊಟಕುತ್ತಾರೆ ಎಂದು ಕೊರಗಬೇಡ. ಕಳೆದ ಹದಿನೈದು ಹದಿನಾರು ವರ್ಷಗಳಿಂದ ಆಕೆಯು ಬ್ಲಡ್‌ಪ್ರೆಷರಿನ ಒತ್ತಡದಿಂದ ನರಳುತ್ತಿದ್ದಾರೆ. ಉಪ್ಪು ಇರದೆ ಇರುವ ಕಠಿಣ ಪಥ್ಯವನ್ನು ವರ್ಷಾನುಗಟ್ಟಲೆಯಿಂದ ನಡೆಸುತ್ತಿದ್ದಾರೆ. ಮೊದಲಿನಿಂದಲೂ ಚಟ್ಣಿಪುಡಿ ಮತ್ತು ಉಪ್ಪಿನಕಾಯಿ ಎಂದರೆ ಆಕೆಗೆ ಪಂಚಪ್ರಾಣ. ಅಂತಹವರು ಇಂತಹ ಪಥ್ಯವಿರಬೇಕಾದರೆ ಎಷ್ಟು ಬೇಜಾರಾಗುತ್ತೆ. ನೀನೇ ಊಹಿಸಮ್ಮ. ವಯಸ್ಸೂ ಐವತ್ತೈದಾಯಿತು. ಹೆಂಗಸರ ದೇಹದಲ್ಲಿ ಆಗ ಬದಲಾವಣೆಗಳಾಗುವ ಹಾಗೆಯೇ ಮನಸ್ಸೂ ಸ್ತಿಮಿತದಲ್ಲಿರುವುದಿಲ್ಲ. ಇವೆಲ್ಲ ಕಾರಣಗಳಿಂದ ಮನಸ್ಸಿನಲ್ಲಿ ಒಂದಲ್ಲ ಒಂದು ಭ್ರಮೆ ಮೂಡುತ್ತದೆ. ನಿಮ್ಮತ್ತೆಗೆ ಈ ಭ್ರಮೆ ಈಗ ಹಿಡಿದಿದೆ. ಕೆಲವು ದಿನಗಳಲ್ಲಿ ಇದು ಮಾಯವಾಗುತ್ತೆ. ಇದನ್ನು ಓದಿದ ಹುಡುಗಿ ನೀನು, ತಿಳಿದುಕೊಂಡರೆ ನಂತರ ಅತ್ತೆಯು ಮಾತಾಡಿದರೆ ಜುಗುಪ್ಸೆಯಾಗುವುದಿಲ್ಲ. ಬದಲು ಕನಿಕರ ಉಂಟಾಗುತ್ತದೆ' ಎಂದು ಕೇಳಿದರು.

ನಂತರ ಅತ್ತೆಯ ಕಡೆಗೆ ತಿರುಗಿ 'ಲಕ್ಕವ್ವಾ ! ಹೆಗ್ಗತ್ತಿನ ಮೇಲೆ ಸೊಸೆಗೆ ಬಿಳಿ ಮಚ್ಚೆ ಇದ್ದರೆ ಮಗನಿಗೆ ಕೊಳ್ಳೆ ಹಣ ದೊರಕುತ್ತೆ ಅಂತ ಶಾಸ್ತ್ರಾ ಕೇಳಿಲ್ಲವಾ? ಇಂತಹ ಹಣ ತರುವ ಹೆಣ್ಣನ್ನ ಹೆಂಗಾರ ನೀ ಹುಡುಕಿ ತಂದೆ ? ನಮ್ಮ ಯೆಂಟನ ಪುಣ್ಯ ಅಂತೀನಿ. ಅಷ್ಟು ವರ್ಷ ಮದುವೆಗೆ ಅವ ಕಾದಿದ್ದೂ, ಸಾರ್ಥಕವಾಯಿತು. ಇಂತ ಪುಣ್ಯವಂತ ಹೆಣ್ಣು ಸಿಕ್ತು' ಎಂದರು.

ಲಕ್ಕವ್ವನ ಆರನೆಯ ಬಸಿರಿನಲ್ಲಿ ಬ್ಲಡ್‌ಪ್ರೆಷರ್ ಹೆಚ್ಚಾಗಿತ್ತು. ಏಳನೇ ತಿಂಗಳ ವೇಳೆಗೆ ಇನ್ನೂರು ಮೂವತ್ತಕ್ಕೆ ಏರಿತ್ತು. ಹೆರಿಗೆಯ ಆಸ್ಪತ್ರೆಯ ಡಾಕ್ಟರು 'ಗರ್ಭ ಮುಂದುವರೆಯುವುದಕ್ಕೆ ಬಿಡಬಾರದು. ಪ್ರಾಣಕ್ಕೆ ಸಂಚು ತರುವ ಇತರ ಯಾವುದಾದರೂ ರೋಗವು ತೊಡರಿಕೊಳ್ಳಬಹುದು–ಆದ್ದರಿಂದ ಗರ್ಭಪಾತವನ್ನು ಅತ್ಯಗತ್ಯವಾಗಿ ತತ್‌ಕ್ಷಣ ಮಾಡಬೇಕು' ಎಂದು ಹೇಳಿದ್ದರು. ಲಕ್ಕವ್ವನ ಗಂಡ ಒಪ್ಪಿದ್ದ. ಚಿಕಿತ್ಸೆ ಅದರಂತೆಯೇ ನಡೆಯಿತು. ದೊಡ್ಡಜೀವ ಉಳಿದುಕೊಂಡಿತು. ಆದರೆ ಆಗ ಏರಿದ್ದ ರಕ್ತದ ಒತ್ತಡವು, ಗರ್ಭವು ಇಳಿದ ಮೇಲೂ, ಮೊದಲಿದ್ದಂತೆಯೇ ಉಳಿದುಕೊಂಡಿತು. ಇಳಿಯಲೇ ಇಲ್ಲ. ಅಂದಿನಿಂದಲೂ ಪಥ್ಯ ಔಷಧಿಗಳ ಬಾಳು.

ಇದ್ದ ಒಬ್ಬನೇ ಮಗನಿಗೆ ಬೇಗ ಮದುವೆಯನ್ನು ಮಾಡಬೇಕು. ಅವನ ಮಗುವನ್ನು ಎತ್ತಿ ಮುದ್ದಾಡಿ ನಂತರ ಕಣ್ಣು ಮುಚ್ಚಬೇಕು ಎಂಬ ಹಿರಿಯಾಸೆ ಲಕ್ಕವ್ವನಿಗೆ. ಆದರೆ ವೆಂಕಟರಮಣನಿಗೆ ಕಂಕಣ ಕೂಡಿಬರಲಿಲ್ಲ. ನಾಲ್ಕೈದುನೂರು

ಸಂಬಳವನ್ನು ತರುತ್ತಿದ್ದರೂ, ನಯ ವಿನಯ ನಡವಳಿಕೆಯು ಇದ್ದರೂ, ಅವನ ಜಾತಿಯಲ್ಲಿ ಯಾರೂ ಹೆಣ್ಣು ಕೊಡಲು ಬರಲಿಲ್ಲ. ಹೆಣ್ಣನ್ನು ಕೇಳಲು ಆ ಪಂಗಡದವರಲ್ಲಿ ಗಂಡಿನವರು ಹೋಗುವ ವಾಡಿಕೆಯಿರಲಿಲ್ಲ. ಹಾಗಾಗಿ ಮದುವೆಯ ಮಾತು ಎದ್ದಿರಲಿಲ್ಲ. ಕಡೆಗೊಮ್ಮೆ ಧರ್ಮ ಕರ್ಮ ಸಂಯೋಗವಾಯಿತು ; ಅಂದರೆ ನಾಯಿ ಹಸಿದಿತ್ತು ; ಅನ್ನವೂ ಹಳಸಿತ್ತು ; ಮದುವೆಯೂ ಆಯಿತು. ತಾಳಿದವ ಬಾಳಿಯಾನು ಎಂದು ಹಿರಿಯರಂದಿದ್ದರು. ಯೆಂಟ ತಾಳಿದ್ದ, ಕಡೆಗೆ ತಾಳಿ ಕಟ್ಟಿದ ಅವಳಿಗೆ, ಪದವೀಧರೆಯಾದ ಸೌಜನ್ಯಮೂರ್ತಿಯಾದ ಸುಲಕ್ಷಣ ಹೆಂಡತಿಯು ದೊರೆತಿದ್ದಳು. ನ್ಯಾಯವಾಗಿ ಲಕ್ಕವ್ವ ಹಿರಿ ಹಿಗ್ಗಬೇಕು.

ಆದರೆ ಲಕ್ಕವ್ವನಿಗೆ ಬ್ಲಡ್‌ಪ್ರೆಷರ್ ಅತಿಯಾಗಿತ್ತು. ಹೆಣ್ತನದ ಸಂತಾನ ಸೌಭಾಗ್ಯದ ವಯಸ್ಸು ಮೀರಿ ಹೋಗಿತ್ತು. ಆದರದ ಮಾತುಗಳನ್ನಾಡಿ ಆರೈಕೆ ಮಾಡಲು ಮುದಿ ಗಂಡ ಮುಂದೆ ಬರುತ್ತಿರಲಿಲ್ಲ. ಮಗನೊಬ್ಬನೇ ಹೇಗಿದ್ದೀ ಅಮ್ಮಾ ಎಂದನ್ನುತ್ತಿದ್ದ. ಔಷಧಿಗಳನ್ನು ತಂದುಕೊಡುತ್ತಿದ್ದ. ಮದುವೆಯಾದಮೇಲೆ, ಎಂದಿನಂತೆಯೇ ಮಗ ಆದರಿಸುತ್ತಾನೆಯೇ? ಎನ್ನುವ ಅನುಮಾನವು ಸ್ವಾಭಾವಿಕವಾಗಿ ಹುಟ್ಟಿತು. ಮುಂದೆ ನನ್ನ ಗತಿ ಏನು ಎನ್ನುವ ಆತಂಕವೂ ಕಾಡತೊಡಗಿತು. ಹಿಡಿದಿದ್ದೊಂದು ನಡೆಗೋಲು ಈಗ ಜಾರಿಕೊಂಡರೆ ರೋಗಗ್ರಸ್ತಳಾದ ತನ್ನ ಭವಿಷ್ಯವು ಏನಾಗಬಹುದು ಎಂಬ ಭಯವೂ ಮುತ್ತಿಕೊಂಡಿತು. ಇವೆಲ್ಲದರಿಂದ ಆಕೆಯ ಮನಸ್ಸಿನಲ್ಲಿ ಭ್ರಮೆ (Hallucination) ಉಂಟಾಯಿತು. ಮುಳುಗುವವರಿಗೆ ಸಿಕ್ಕ ಹುಲ್ಲು ಕಡ್ಡಿಯಂತೆ ಭ್ರಮೆಯು ಮನಸ್ಸಿಗೆ ನಡೆಗೋಲಾಯಿತು. ಲಕ್ಕವ್ವನ ಮನಸ್ಸಿನಲ್ಲಿ, ಸೊಸೆಯ ಹೆಗ್ಗತ್ತಿನ ಮೇಲಿನ ಬಿಳಿಯ ಮಚ್ಚೆಯು, ಆ ಭ್ರಮೆಯ ಫಲಿತಾಂಶ. ಮೋಸ ಮಾಡಿ ಈ ಹೆಣ್ಣನ್ನು ನನ್ನ ಮಗನಿಗೆ ಕಟ್ಟಿದರು. ಮುಂದೆ ಇವಳ ಮೈಮೇಲೆಲ್ಲಾ ಇದು ಹರಡಿ ಅವಲಕ್ಷಣವಾದ ಬಿಳಿ ತೊನ್ನಾಗುತ್ತದೆ ಎನ್ನುವ ನಂಬಿಕೆಯನ್ನು ಮಗನಲ್ಲಿ ಮೂಡಿಸಿದರೆ, ಹೆಂಡತಿಯತ್ತ ಮಗ ಹೆಚ್ಚು ವಾಲುವುದಿಲ್ಲ. ಅಮ್ಮನ ಪಕ್ಷಕ್ಕೇ ಬೆಂಬಲವಾಗುತ್ತಾನೆ. ಹೀಗೆಲ್ಲಾ ವಿಚಾರವನ್ನು ಲಕ್ಕವ್ವನು ಮಾಡಲಿಲ್ಲ. ವಿಚಾರವನ್ನು ಎಲ್ಲರೂ ಒಪ್ಪುವಂತೆ ಮಾಡುವ ಸ್ಥಿತಿಯಲ್ಲಿ ಅವಳಿರಲಿಲ್ಲ. ಅವಳ ಅರಿವಿಲ್ಲದೆಯೇ ಆಳ ಮನಸ್ಸು ಈ ಜಾಲವನ್ನು ಹೂಡಿ, ಬಿಳಿ ಮಚ್ಚೆಯ ಭ್ರಮೆಯನ್ನು ಹುಟ್ಟಿಸಿತ್ತು. ಅದನ್ನು ಲಕ್ಕವ್ವ ನಂಬಿದಳು. ನಂಬದೆ ಇದ್ದರೆ ಅದನ್ನು ಭ್ರಮೆ ಎಂದು ಏಕೆ ಹೆದರಿಸುತ್ತಾರೆ ? ಭ್ರಮೆ ಹಿಡಿದವರಿಗೆ ಭ್ರಮೆಯೇ ನಿತ್ಯ, ಅದೇ ಸತ್ಯ. ಹೆಣ್ಣಿನ

ಹೆಗ್ಗತ್ತಿನ ಮೇಲಿರುವ ಬಿಳಿಯ ಮಚ್ಚೆಯನ್ನು ಪತ್ತೆ ಹಚ್ಚುವುದಕ್ಕೆ ಯಾವ ಗಂಡೂ ಯತ್ನಿಸುವುದಿಲ್ಲ. ಹುಡುಗಿಯನ್ನು ನೋಡಿ ಹಸಿದ ಯುವಕರು ಮದುವೆಯಾಗುವುದು. ಕೈತುಂಬಾ ತೂಕ, ಕಣ್ತುಂಬ ಬಣ್ಣ, ಬಾಯ್ತುಂಬ ಒಲವಿನ ಮಾತು, ಇವು ವಿಫುಲವಾಗಿ ದೊರಕಿತು. ಯೆಂಟ ಆನಂತರ ಕಂಡ ಬಿಳಿಯ ಮಚ್ಚೆಯನ್ನು ಸೌಂದರ್ಯದ ಕೇಂದ್ರ ಎಂದು ಆರಾಧಿಸುತ್ತಿದ್ದ. ಅಮ್ಮ ಹೂಡಿದ ಭ್ರಮಾಜನಿತ ಅಸ್ತ್ರ, ನಿಶ್ಯಸ್ತ್ರವಾಯಿತು.

ಯೆಂಟನ ಹೆಂಡತಿ ಜಾಣೆ, ಡಾಕ್ಟರು ಹೇಳಿದುದನ್ನು ಸರಿಯಾಗಿ ಅರ್ಥಮಾಡಿ ಕೊಂಡಳು. ಗಂಡನ ಕಿವಿ ಕಚ್ಚಿ ಅವನಿಗೂ ತಿಳಿಸಿದಳು. ಅತ್ತೆಮ್ಮನಿಗೆ ಅರುಳು ಮರುಳು. ಜತೆಗೆ ಬ್ಲಡ್‌ಪ್ರೆಷರಿನ ಕೆಟ್ಟ ಬೇನೆ. ಅವರ ಹತ್ತಿರ ನೀವು ಬಾಯಿ ತುಂಬಾ ಮಾತನಾಡಿ; ಸಣ್ಣ ಪುಟ್ಟ ಸೇವೆಯನ್ನು ಮಾಡಿದರೆ ಅವರಿಗೆ ಎಷ್ಟೋ ನೆಮ್ಮದಿಯಾಗುತ್ತದೆ. ನಾನು ಎಷ್ಟು ಮಾಡಿದರೂ ಹೇಗೆ ಮಾಡಿದರೂ ಆಕೆಗೆ ಹಿತವಾಗುವುದಿಲ್ಲ. ನನ್ನ ಮೇಲಿನ ಆಕ್ಷೇಪಣೆಗಳನ್ನು ಅತ್ತೆಮ್ಮನ ಎದುರಿಗೆ ಬೇಕಾದಷ್ಟು ಹೇಳಿ–ಆಗ ಆಕೆಗೆ ಹಾಯ್ ಎನಿಸುತ್ತೆ. ನನ್ನ ಮಟ್ಟಿಗೆ ಹೇಳುವುದಾದರೆ, ಅವರೇನೇ ಇನ್ನು ಮುಂದೆ ಅನ್ನಲಿ. ಕೋಲೆ ಬಸವನ ತರಹಾ ತಲೆಯಾಡಿಸುತ್ತ, ತೆಪ್ಪಗಿದ್ದುಬಿಡುತ್ತೇನೆ. ಮಾತಿಗೆ ಮಾತು ಬೆಳಸುವುದಕ್ಕೆ ಹೋಗುವುದಿಲ್ಲ' ಎಂದು.

ಅಮ್ಮನ ಹತ್ತಿರ ಮುದ್ದುಗರೆಯುವುದಕ್ಕೆ ಬೆಳೆದ ಮಗ ಶುರುಮಾಡಿದ. ಒಂದು ಸಂಜೆ ಮನೆಗೆ ಬಂದಾಗ, ದೇವರ ಪ್ರಸಾದವನ್ನು ತಂದಿದ್ದ. 'ಅಮ್ಮಾ, ಇವತ್ತು ಲಾಟರಿಯಲ್ಲಿ ಸಾವಿರ ರೂಪಾಯಿ ಬಂತು. ದೇವರ ಸೇವೆ ಮಾಡಿಸಿಕೊಂಡು ಬಂದೆ, ಪ್ರಸಾದಾನ ತಂದಿದ್ದೀನಿ, ನಿನಗೆ ಹೇಗೆ ಬೇಕೋ ಹಾಗೆ ಈ ಹಣವನ್ನು ಖರ್ಚು ಮಾಡಿಕೊ' ಎಂದು ಹೇಳಿ ಅಷ್ಟೂ ನೋಟುಗಳ ಕಂತೆಯನ್ನು ಅಮ್ಮನ ಕೈಲಿಟ್ಟ. 'ನನಗ್ಯಾಕೋ ಮರಿ, ಇಷ್ಟು ದುಡ್ಡನ್ನು ನಾನೇನು ಮಾಡಲಿ' ಎಂದಳು ಅಮ್ಮ.

ಆ ಮಾತು ಈ ಮಾತು ಆಡುತ್ತಾ ; 'ಅಂದ ಹಾಗೆ ಅಮ್ಮಾ ! ನಿನ್ನ ಸೊಸೆಯ ಹೆಗ್ಗತ್ತಿನ ಮೇಲಿರುವ ಬಿಳಿ ಮಚ್ಚೆಯ ಪ್ರಭಾವದಿಂದ ಲಕ್ಷ್ಮಿ ಒಲಿಯುತ್ತಾಳೆ ಅಂತ ಜನ ಅಂತಾರಲ್ಲಮ್ಮ. ನನಗನಕ ಇಂತಹ ಮೂಢ ಹೇಳಿಕೆಗಳಲ್ಲಿ ಸುತರಾಂ ನಂಬಿಕೆ ಇಲ್ಲ. ಆದರೂ ಲಾಟರಿಯಲ್ಲಿ ದುಡ್ಡು ಬಂತು ಅಂದರೆ ಯಾಕೋ ಅನುಮಾನ ಬರುತ್ತೆ. ಇದೂ ದಿಟವಿರಬಹುದೇನಮ್ಮ' ಎಂದು ಮಗ ಕೇಳಿದ.

ಆ ತನಕ ಅದರ ಸುದ್ದಿಯನ್ನು ಮಗನೆದುರಿಗೆ ನೇರವಾಗಿ ಆಕೆ ಎತ್ತಿದ್ದಿಲ್ಲ.

ಮಗನೇ ಆ ಮಾತನ್ನೆತ್ತಿದಾಗ ಅವಳಿಗೆ ಸ್ವಲ್ಪ ಅಳುಕಾಯಿತು. ಮನಸ್ಸೂ ಅರುಳು ಮರುಳಾಗಿತ್ತು. ಮಗ ಅಂದುದನ್ನೇ ತಾನೂ ಎತ್ತಿ ಆಡಿದಳು. 'ಹೌದು ಕಣೋ ಮರಿ ! ಹಿಂದಿನ ಕಾಲದವರು ಹಾಗನ್ನುತ್ತಿದ್ದರು. ನಮ್ಮನೆ ಡಾಕ್ಟರಿದ್ದಾರೆ ನೋಡು, ಓದಿದವರು, ತಿಳಿದವರು, ಅನುಭವಸ್ಥರು; ಅವರೂ ಕೂಡ ಒಂದು ಸರ್ತಿ ಹೀಗೆ ಅಂದರು, ಕಣೋ !' ಎಂದು ಹೇಳಿದಳು. ಬಿಳಿ ಮಚ್ಚೆಯು ಮುಂದೆ ಬಿಳಿ ತೊನ್ನಾಗುತ್ತೆ ಎನ್ನುವ ಭ್ರಮೆಯು ಹೋಯಿತು. ಬಿಳಿ ಮಚ್ಚೆಯಿಂದ ಭಾಗ್ಯವು ಬರುತ್ತೆ ಎನ್ನುವ ಹೊಸ ಭ್ರಮೆಯು ಹಿಡಿದುಕೊಂಡಿತು. ಹೊಸ ಭ್ರಮೆಯಿಂದ ಸೊಸೆಯ ಪಾಡು ಎಷ್ಟೋ ಸುಧಾರಿಸಿದ ಹಾಗಾಯಿತು.

ಮುಪ್ಪಿನ ವಯಸ್ಸು ಮೂಡಿದಾಗ, 'ಯಾರಿಗೂ ನಾನು ಬೇಡ, ಗಂಡನಿಗೆ ಬೇಡ. ಮಕ್ಕಳಿಗೆ ಬೇಡ,' ಎಂದನ್ನುವ ಜುಗುಪ್ಸೆಯು ಉಂಟಾಗುತ್ತದೆ. ಮುಂದೆ ನನ್ನ ಗತಿ ? ಎನ್ನುವ ಭಯವುಂಟಾಗುತ್ತದೆ. ಕಾರಣ ಆತಂಕವೂ ಮುತ್ತಿಕೊಳ್ಳುತ್ತದೆ; ಹೆಂಗಸರಲ್ಲಿ ಭಯ ಆತಂಕಗಳ ಚಲ್ಲಾಟವೇ ಅತ್ತೆಯ ಕಾಟಕ್ಕೆ ಮೂಲ ಪ್ರೇರಕ.

ವ್ರತಗಳು : ಪುರಾಣ ಪುಣ್ಯ ಕತೆಗಳು ; ಮೊಮ್ಮಕ್ಕಳೊಂದಿಗೆ ದ್ವಿತೀಯ ಬಾಲ್ಯವನ್ನು ಕಳೆಯುವುದು, ಇವೇ ಇಂತಹ ಆತಂಕಕ್ಕೆ ಸೂಕ್ತವಾದ ಚಿಕಿತ್ಸಾ ಮಾರ್ಗಗಳು. ಇವುಗಳೊಂದಿಗೆ ಅಗತ್ಯವಾದ ಔಷಧಿಗಳನ್ನು ಬಳಸಬೇಕಾಗಬಹುದು.

* * * *

# ೨. ಪ್ಯಾರನಾಯ್ಡ್ ಅವಸ್ಥೆಗಳು
# Paranoid Syndromes

**ಕರ್ಣಪಿಶಾಚಿ**

'ಪಿಶಾಚಿಗಳು ಇವೆ. ಇದ್ದು ಕೆಲವರನ್ನು ಹಿಡಿದು ಕಾಡುತ್ತವೆ ಎಂಬುದನ್ನು ನೀವು ನಂಬುತ್ತೀರಾ, ಸಾರ್' ಎಂದು ಕಲ್ಲಪ್ಪ ಕೇಳಿದ

'ಹ್ಞೂ ಕಣಪ್ಪ, ನಂಬುತ್ತೀನಿ. ಪಿಶಾಚಿಗಳು ಇರದೇ ಹೋಗಿದ್ದಿದ್ದರೆ, ನಮ್ಮ ದೇಶ ಹೀಗೆ ದುಃಸ್ಥಿತಿಗೆ ಇಳಯುತ್ತಿತ್ತೇ?' ಎಂದೆ. ಯಥಾಪ್ರಕಾರದ ಕುಹಕದ ಧ್ವನಿಯಲ್ಲಿ.

'ಈ ಉತ್ತರವನ್ನು ಕೇಳಿ ಕಲ್ಲಪ್ಪ ನಗಲಿಲ್ಲ. ಅಂದರೆ ನಾನಾಡಿದ ಮಾತು ಗುರಿ ತಪ್ಪಿತ್ತು, ಕುಹಕವನ್ನಾಡಹೋದ ನನ್ನ ಮಾತನ್ನು ಅವ ಸತ್ಯ ಎಂದು ನಂಬಿದನೋ ಎಂಬ ಅನುಮಾನವು ಉಂಟಾಯಿತು. ಆದಕಾರಣ ನಾನೂ 'ಗಂಭೀರ' ವಾದೆ.

'ಈ ಪ್ರಶ್ನೆಯನ್ನು ಯಾಕೆ ಕೇಳಿದೆ? ಕಲ್ಲಪ್ಪ. ಮನೆಗೆ ಬಂದ ಅಜ್ಜಿ ಯಾವುದಾದರೂ ಪಿಶಾಚಿಯ ಕತೆ ಹೇಳಿತೇ ? ಅಥವಾ ದೆವ್ವದ ಕತೆಗಳನ್ನು ಪತ್ರಿಕೆಯಲ್ಲಿ ಓದಿದೆಯಾ?' ಎಂದೆ.

'ಪಿಶಾಚಿಗಳು ಇವೆ ಎಂದು ನೀವೂ ನಂಬುವುದಾದರೆ, ಅವು ಇರಲೇ ಬೇಕು. ಅವೇನಾದರೂ ಕಿವಿಗಳಲ್ಲಿ ಸೇರಿಕೊಂಡು ಕಾಡುತ್ತವೆಯೇ ಸಾರ್!' ಎಂದ;ಗಂಭೀರ ಧ್ವನಿಯಲ್ಲಿ ಕೇಳಿದನೇ ಹೊರತು ಪರಿಹಾಸ್ಯದ ಸೋಂಕೂ ಇರಲಿಲ್ಲ. ನಾನೂ ಗಂಭೀರವಾಗಿಯೇ

'ಇರಬಹುದು, ಕಲ್ಲಪ್ಪ ; ಆದರೆ ಇದೇ ಬಾರಿ, ಅವುಗಳ ವಿಷಯವನ್ನು ಮೊದಲು ಕೇಳುತ್ತಿರುವುದು, ನಾನು, ಅವುಗಳ ವಿಷಯ ನಿನಗೇನು ಗೊತ್ತು? ಹೇಳು; ಎಂದೆ.

'ನಾನು ಹೇಳುವುದನ್ನು ನೀವು ನಂಬುತ್ತೀರೋ ಇಲ್ಲವೋ? ಒಂದೊಂದು ಸರ್ತಿ ನಂಬುವುದಕ್ಕೆ ನನಗೇ ಕಷ್ಟವಾಗುತ್ತೆ. ಅವರಿವರು ಹೇಳಿದ ಮಾತಲ್ಲ ಸಾರ್ ಇದು, ನನ್ನ ಸ್ವಂತ ಅನುಭವಕ್ಕೆ ಬಂದಿದ್ದು. ಕೆಲವು ತಿಂಗಳುಗಳಿಂದ ನನ್ನ

ಕಿವಿಯಲ್ಲಿ ಅವು ಸೇರಿಕೊಂಡು, ಸದಾಕಾಲವೂ ಏನನ್ನಾದರೂ ಹೇಳುತ್ತಿರುತ್ತವೆ. ಸ್ಪಷ್ಟವಾಗಿ ಕಿವಿಯ ಹತ್ತಿರವೇ ಮಾತನಾಡಿದ ಹಾಗೆ ಕೇಳಿಸುತ್ತೆ. ಯಾರೂ ಇರುವುದಿಲ್ಲ. ಅಂದ ಮೇಲೆ ಕಿವಿಯೊಳಗೇ ಯಾವುದೋ ಸೇರಿಕೊಂಡು ಕಾಡುತ್ತಿರಬೇಕು. ಕೇಳಿ ಕೇಳಿ ಹುಚ್ಚು ಹಿಡಿದು ಹೋಗುವಂತೆ ಆಗಿಬಿಟ್ಟಿದೆ, ಸಾರ್' ಎಂದ.

ಸ್ಪಷ್ಟವಾಗಿ ಮಾತನಾಡಿದ ಹಾಗೆ ಕೇಳಿಸುತ್ತದೆಯೋ? ಅಥವಾ ರೈಲ್ ಕೂಗಿದ ಹಾಗೆ ಗುಂಯ್‌ಅಂತ ಬರೀ ಸದ್ದಾಗುತ್ತದೆಯೋ? ಕಿವಿಗಳಲ್ಲಿ ಗುಗ್ಗೆ ಕಟ್ಟಿಕೊಂಡರೂ ಹಾಗೆ ಶಬ್ದವಾಗುವುದುಂಟು' ಎಂದು ನುಡಿದೆ. ಹೇಗೇ ಇರಲಿ ಕಿವಿಗಳನ್ನು ಪರೀಕ್ಷೆ ಮಾಡಿ ನೋಡೋಣ' ಎಂದು ಹೇಳಿ ಪರೀಕ್ಷೆ ಮಾಡಿದೆ. ಹೊರ ಕಿವಿಗಳು ಸ್ವಚ್ಛವಾಗಿದ್ದವು. ಕಿವಿಯ ಡ್ರಂಗಳೂ ಸ್ಪಷ್ಟವಾಗಿ ಆರೋಗ್ಯವಾಗಿ ಕಾಣಿಸಿದುವು. 'ಏನಂತ ಹೇಳುತ್ತವೆ, ಕಲ್ಲಪ್ಪ.' ಎಂದು ಸಹಾನುಭೂತಿಯಿಂದ ಕೇಳಿದೆ.

'ನೀನು ಷಂಡ, ನೀ ಗಂಡುಸಲ್ಲ, ಷಂಡ' ಎಂದು ಒತ್ತಿ ಒತ್ತಿ ಹೇಳುತ್ತವೆ, ಎಂದ.

ಸುಮಾರು ಐದಾರು ವರ್ಷಗಳಿಂದಲೂ ಉಬ್ಬಸದ ಚಿಕಿತ್ಸೆಗಾಗಿ, ಕಲ್ಲಪ್ಪ ನನ್ನ ಬಳಿಗೆ ಬರುತ್ತಿದ್ದ. ತೀರಾ ಸಣಕಲ ಶರೀರ ; ಸುಮಾರು ಆರಡಿ ಎತ್ತರ. ತುಂಬಾ ಬುದ್ಧಿವಂತನಲ್ಲದಿದ್ದರೂ ಮಡ್ಡಿಯೇನೂ ಅಲ್ಲ. ಕಾಲೇಜಿನ ಮೊದಲ ಮೆಟ್ಟಿಲನ್ನು ಹತ್ತಿ ಸಂಸಾರದ ಬೇಗೆಯಿಂದಾಗಿ, ಮುಂದುವರೆಯಲಾರದೆ, ಮೆಟ್ಟಿಲು ಇಳಿದಿದ್ದ. ಕಂಪನಿಯೊಂದರಲ್ಲಿ ನಾಲ್ಕುನೂರು ರೂಪಾಯಿಗಳ ಪಗಾರವನ್ನು ಪಡೆಯುತ್ತಿದ್ದ. ೩೬ ಪ್ರಾಯದ ಅವಿವಾಹಿತ. ಮುಪ್ಪಿನ ತಾಯಿತಂದೆಯರನ್ನೂ ಇದ್ದೊಬ್ಬ ತಮ್ಮನನ್ನೂ ಇವನೇ ಪೋಷಿಸಬೇಕಾಗಿತ್ತು. ಉಬ್ಬಸದ ಬೇನೆಯು ವರ್ಷಾಕಾಲವೂ ಕಾಡುತ್ತಿತ್ತು. ಬಾಲ್ಯದಿಂದಲೂ ಕಾಡುತ್ತಿತ್ತು. ಆರೋಗ್ಯವೂ ಆ ಕಾರಣದಿಂದ ಸಮರ್ಪಕವಾಗಿರಲಿಲ್ಲ. ವಾರಕ್ಕೆರಡು ದಿನ ಉಬ್ಬಸದ ಕಾರಣದಿಂದ ರಜ ಪಡೆಯುವಂತಾದರೆ, ಯಾರಿಗೂ ಬೇಸರವೇ ! ಕಂಪನಿಯವರು ಇವನ ದೇಹಸ್ಥಿತಿಯನ್ನು ಅರಿತಿದ್ದರು. ಆದರೆ ತುಂಬಾ ನಂಬಿಕಸ್ಥ ಮತ್ತು ದಕ್ಷನಾದುದರಿಂದ ಕಿರುಕುಳವನ್ನು ಕೊಡುತ್ತಿರಲಿಲ್ಲ. ಅಷ್ಟರ ಮಟ್ಟಿಗೆ ಅವ ಪುಣ್ಯಶಾಲಿ ಎನ್ನಬೇಕು.

ಉಬ್ಬಸಕ್ಕಾಗಿ ಚಿಕಿತ್ಸೆಯನ್ನು ಪಡೆದು ಹೆಚ್ಚು ಮಾತುಗಳನ್ನಾಡದೆ ಹೊರಟು ಹೋಗುತ್ತಿದ್ದ. ಆದರೆ ಇವತ್ತು ದವಾಖಾನೆಯಲ್ಲಿ ಹೆಚ್ಚು ಜನರು ಇರದಿದ್ದ

ಕಾರಣ, ಮಾತಿಗೆ ಆರಂಭಿಸಿದ್ದ. ಆಗಲೇ ಅವನ ಇತರ ನರಳುವಿಕೆಯು ನನಗೆ ತಿಳಿದಿದ್ದು. ನನ್ನ ಕುತೂಹಲವೂ ಕೆರಳಿತು. ಕಾರಣ ಒಳಕ್ಕೆ ಕರೆದುಕೊಂಡು ಹೋಗಿ ವಿವರವಾಗಿ ವಿಚಾರಿಸಿದೆ.

ಹೆಣ್ಣು ಕೊಡಲು ಬಂದ ಮೂರು ನಾಲ್ಕು ಮಂದಿ, ಇವನನ್ನು ನೋಡಿದ ಮೇಲೆ, ಸದಾಕಾಲವೂ ಉಬ್ಬಸದಿಂದ ನರಳುವವ ಎಂದು ತಿಳಿದ ಮೇಲೆ ಮಾತನ್ನು ಮುಂದುವರಿಸದೆ, ಹಿಂತಿರುಗಿದ್ದರು. ಅಲ್ಲದೆ ಇವನ ತಮ್ಮ ೨೮ರ ಪ್ರಾಯದವ ಸೈಂಧವನಂತೆ ಬೆಳೆದು ರಾಕ್ಷಸನಂತೆ ಊಟ ಮಾಡುತ್ತಿದ್ದ. ಆದರೆ ಹದಿನೈದು ಹದಿನಾರು ವರ್ಷಗಳಿಂದ ಅವನಿಗೆ ಬುದ್ಧಿ ವಿಕಲ್ಪವಾಗಿ, ಬೆಪ್ಪು ಬಡಿದವನಂತೆ ಕೂತಲ್ಲೇ ಕುಳಿತಿರುತ್ತಿದ್ದ. ಮಸಲಾ ಎದ್ದರೆ ಮನೆಯಲ್ಲೇ ಅಡ್ಡಾಡುವುದು. ಮಾನಮರ್ಯಾದೆಯ ಮೇಲೆ ಗಮನವೇ ಇರಲಿಲ್ಲ. ಈ ಕಾರಣದಿಂದಾಗಿ ಮನೆಗೆ ಹೋಗಿಬರುವವರು ಇರಲಿಲ್ಲ. ನೆಂಟರೊಂದಿಗೆ ಸಂಪರ್ಕವೂ ಕಡಿಮೆಯಾಗಿತ್ತು. ಇಂತಹ ಮನೆಯ ಮಗನಿಗೆ ಹೆಣ್ಣು ಕೊಡಲು ಯಾರೂ, ಕಡು ಬಡವರೂ ಕೂಡ, ಒಪ್ಪದೆ ಇದ್ದುದು ನ್ಯಾಯವೇ !

ಕಲ್ಲಪ್ಪನಿಗೆ ೩೬ರ ಪ್ರಾಯ. ಸಂಪಾದಿಸುತ್ತಲೂ ಇದ್ದ. ಉಬ್ಬಸದ ಅನಾರೋಗ್ಯವಿತ್ತಾದರೂ ದೇಹದ ಅಗತ್ಯಗಳ ಒತ್ತಡವು ಮಿಡಿಯುತ್ತಿದ್ದಿರಲೇ ಬೇಕು. ಅವುಗಳನ್ನು ಸಂತೃಪ್ತಿಪಡಿಸಲಾಗದುದರಿಂದ ಅವನ ಮನಸ್ಸು ಕಾಲಾ ನಂತರ, ' ಪ್ಯಾರನಾಯ್ಡ್' ಅವಸ್ಥೆಯನ್ನು ಹೊಂದಿರಬೇಕು. ಯಾವುದೋ ಕರ್ಣ ಪಿಶಾಚಿಗಳು 'ನೀನು ಷಂಡ, ನೀನು ಷಂಡ' ಎಂದು ನಿರಂತರನಾಗಿ ನುಡಿಯಲಾರಂಭಿಸಿದ್ದುವು.

ಪ್ಯಾರನಾಯ್ಡ್ ಅವಸ್ಥೆಗೆ ಒಳಗಾದವರು ತಮ್ಮ ಮನಸ್ಸಿನ ಒಂದು ಭಾಗವು ಈ ರೀತಿ ಹತೋಟಿ ತಪ್ಪಿ ಕಾಡುವುದನ್ನು ಅನುಭವಿಸುತ್ತಾರೆ. ಮನಸ್ಸಿನ ಇಂತಹ ಭಾಗವನ್ನು 'ಪಿಶಾಚಿ' ಎಂದು ಕಲ್ಲಪ್ಪ ಕರೆದುದು ಸಮಂಜಸವಾಗಿತ್ತು.

ಕಲ್ಲಪ್ಪನ ಕಿವಿಯಲ್ಲಿದ್ದ ಪಿಶಾಚಿಗಳು ಅವನನ್ನು Persecute ಮಾಡುತ್ತಿದ್ದುವು. ಪ್ಯಾರನಾಯ್ಡ್ ಅವಸ್ಥೆಯನ್ನು ಮನಸ್ಸು ಹೂಡಿದಾಗ, ಕಿವಿಯಲ್ಲಿ ಎಂತದೋ ಮಾತುಗಳು ಸ್ಪಷ್ಟವಾಗಿ ಕೇಳಿಸಬಹುದು. ಅಂತಹ ಮಾತುಗಳನ್ನು ಯಾರೂ ಆಡುತ್ತಿಲ್ಲ ಎನ್ನುವುದು ನಮಗೆ ತಿಳಿದಂತೆ ಕಲ್ಲಪ್ಪನಿಗೂ ಗೊತ್ತು. ಆದುದರಿಂದಲೇ ಅವನದನ್ನು 'ಪಿಶಾಚಿ'–ಯಾರಿಗೂ ಕಾಣಿಸದೆ ಇರುವ ಪಿಶಾಚಿ, ಎಂದು ಹೇಳಿದ್ದು. ಅದನ್ನು 'ಭ್ರಮೆ'–Delusion–ಎಂದು ನಾವು ಹೆಸರಿಸಬಹುದು. ಆದರೆ ಕಲ್ಲಪ್ಪನಿಗೆ ಆ ಭ್ರಮೆಯು 'ಸತ್ಯ'ವಾಗಿಯೇ ಇರುತ್ತದೆ. ಅವನ ಕಿವಿಯಲ್ಲಿ ಆ ಮಾತುಗಳು

ಸ್ಪಷ್ಟವಾಗಿ, ನಿಸ್ಸಂಶಯವಾಗಿ ಕೇಳಿಸುತ್ತಿರುತ್ತಲ್ಲ ! ವೈದ್ಯರು 'ಅದು ಭ್ರಮೆ ಕಣಯ್ಯಾ' ಎಂದು ಎಷ್ಟು ಒತ್ತಿ ಹೇಳಿದರೂ ಕಲ್ಲಪ್ಪನ ಕೊರಗು ಕಡಿಮೆಯಾಗುವುದಿಲ್ಲವಲ್ಲ!

ಎಷ್ಟೋ ಮಂದಿಗೆ ಸದಾಕಾಲವೂ ಕಾಡುವ ಉಬ್ಬಸದ ಕಾಟವಿರುತ್ತದೆ. ಆದರೂ ಅವರೆಲ್ಲಾ ಬಾಳಿ ಬದುಕಿಲ್ಲವೇ? ನಮ್ಮ ನಾಡಿನಲ್ಲಿ ನಾಲ್ಕು ನೂರು ಪಗಾರ ಪಡೆಯುವವರನ್ನು ಬಡವರು ಎನ್ನಲಾದೀತೇ! ಆದರೆ ಕಲ್ಲಪ್ಪನಿಗೆ ಮಾತ್ರ ಹೀಗೇಕಾಯಿತು?

ಬಹಳ ವರ್ಷಗಳಿಂದ ಅವನ ತಮ್ಮ ತೀವ್ರತರದ ಬುದ್ಧಿ ವಿಕಲ್ಪದಿಂದ ನರಳುತ್ತಿದ್ದ. ಯಾವುದೊಂದು ಪ್ರಯೋಜನಕ್ಕೆ ಬರದಿದ್ದರೂ ಸಂಪಾದಿಸುವ ಅಣ್ಣನ ಕೊರಳಿಗೆ ಉರುಳಾಗಿದ್ದ. ತಮ್ಮನ ಮನಸ್ಸು ವಿಕಲ್ಪವಾಗಬೇಕಾದರೆ, ಹಾಗಾಗುವ ಆನುವಂಶಿಕ ಪ್ರವೃತ್ತಿಯನ್ನು ಅವ ಪಡೆದಿರಬೇಕು. ಅಂತಹ ಆಜನ್ಮ ಪ್ರವೃತ್ತಿಯು ಕಲ್ಲಪ್ಪನಿಗೂ ಇದ್ದಿರಬೇಕು. ಆದರೆ ಮನೆಯ ಪರಿಸರದ ಪ್ರಭಾವದಿಂದ ಕಲ್ಲಪ್ಪ ಸ್ವಲ್ಪಮಟ್ಟಿಗಾದರೂ ಓದಿದ. ಆದರೆ ತಮ್ಮನ ಕಾಲಕ್ಕೆ ಪರಿಸ್ಥಿತಿಯು ಬಿಗಡಾಯಿಸಿಕೊಂಡಿತ್ತು. ಸೂಕ್ತ ಚಿಕಿತ್ಸೆಯು ಸಕಾಲದಲ್ಲಿ ದೊರೆಯದೆ ಇದ್ದುದರಿಂದ ತಮ್ಮನ ಬುದ್ಧಿವಿಕಲ್ಪವು ಬೇರೂರಿ ಬಲವಾಗಿ ದೃಢವಾಯಿತು. ಸರಿಪಡಿಸಲಾಗದಂತಹ ಸ್ಥಿತಿಯನ್ನು ಮುಟ್ಟಿತು. ಮನಸ್ಸಿನ ಹತೋಟಿಯನ್ನು ಕಳೆದುಕೊಂಡ ದೇಹವು ತಾನೇತಾನಾಗಿ ಸ್ವಚ್ಛಂದವಾಗಿ ಹದ್ದುಮೀರಿ ಬೆಳೆಯಲಾರಂಭಿಸಿತು.

ಇಂತಹ ಮನೆಯ ವಾತಾವರಣದಲ್ಲಿ ಕಲ್ಲಪ್ಪ ಯಾವ ಸುಖವನ್ನು ಪಟ್ಟಾನು? ಯಾವ ಆಸೆಯನ್ನು ಇಟ್ಟುಕೊಂಡಾನು? ಆದಷ್ಟುಕಾಲ ಒದ್ದಾಡಿದ. ಕಡೆಗೆ ಮನಸ್ಸಿನ ಒಂದು ಭಾಗವು ಮೊಂಡು ಹಿಡಿದುಕೊಂಡು ಪಿಶಾಚಿಯಾಯಿತು. ಕಣ್ಣಿಗೆ ಕಾಣಿಸದೆ ಇದ್ದರೂ, ಕಿವಿಯಲ್ಲಿ ಬೊಬ್ಬೆ ಹೊಡೆಯಲು ಪ್ರಾರಂಭಿಸಿತು.

ಇಂತಹ ಕರ್ಣಪಿಶಾಚಿಗಳನ್ನು ಪ್ಯಾರನಾಯ್ಡ್ ಅವಸ್ಥೆ ಅಥವಾ ಪ್ಯಾರನಾಯ್ಡ್ ಪ್ರತಿಕ್ರಿಯೆ ಎಂದು ಕರೆಯುತ್ತಾರೆ.

ಸಾಮಾನ್ಯವಾಗಿ ಪ್ಯಾರನಾಯ್ಡ್ ಅವಸ್ಥೆಯು ಪ್ರತ್ಯೇಕವಾಗಿ ಒಂದೇ ಇರುವುದಿಲ್ಲ. ಇತರ ಮಾನಸಿಕ ಬೇನೆಗಳೊಂದಿಗೆ ಇದೂ ಮಿಳಿತವಾಗಿರುತ್ತದೆ. ಹಾಗೂ ಸ್ಕಿಜೋಫ್ರೀನಿಯ ಎಂಬ ಕಾಯಿಲೆಯಲ್ಲಿ ಕರ್ಣಪಿಶಾಚಿಗಳ ಹಾವಳಿಯು ಇದ್ದರೂ, Persecution ತಪ್ಪಿರುವುದಿಲ್ಲ. ಈ ಕಾರಣದಿಂದ ಕಲ್ಲಪ್ಪನನ್ನು ಮಾನಸಿಕ ತಜ್ಞರ ಬಳಿಗೆ ಪೂರ್ಣ ಪರೀಕ್ಷೆಗೆಂದು ಕಳುಹಿಸಲಾಯಿತು. ಅವನ ತಮ್ಮನ ಮಾನಸಿಕ ಬೇನೆಯನ್ನು ಕಂಡನಂತರ ಸ್ಕಿಜೋಫ್ರೀನಿಯಾದ ಅನುಮಾನವು

ಬಲವಾಯಿತು.

ಮಾನಸಿಕ ರೋಗಗಳ ಪ್ರವೀಣರು ಕಲ್ಲಪ್ಪನನ್ನು ಪರೀಕ್ಷಿಸಿ, ಸ್ಕಿಜೋಫ್ರಿನಿಯಾದ ಮೊದಲ ಹಂತವಿದು ಎಂದು ತೀರ್ಮಾನಿಸಿದರು. ಶ್ರದ್ಧೆಯಿಂದ ಚಿಕಿತ್ಸೆಯನ್ನು ನಡೆಸಿದರು. ಬಹಳಷ್ಟು ಮಟ್ಟಿಗೆ ಕಲ್ಲಪ್ಪನ ಗುಣಮುಖನಾಗಿದ್ದಾನೆ. ನಾವಿನ್ನೂ ಇದ್ದೀವಿ ಎಂದು ಕರ್ಣಪಿಶಾಚಿಗಳು ಕೆಲವೊಮ್ಮೆ ನೆನಪು ಕೊಡುತ್ತವೆ. ಆದರೆ ಬಾಳು ಬೇಸರವಾಗುವಂತೆ ಕಾಡುವುದಿಲ್ಲ.

ಆಸ್ತಮಾದಿಂದ ಈಗಲೂ ನರಳುತ್ತಾನೆ ; ಆದರೆ ಔಷಧಿಗಳಿಂದ ಬೇಗ ಗುಣವನ್ನೂ ಪಡೆಯುತ್ತಾನೆ. ಅಂದರೆ ಆಸ್ತಮಾದ ಹಾವಳಿಯು, ಕರ್ಣಪಿಶಾಚಿಗಳಿದ್ದ ಕಾಲದಲ್ಲಿ ಔಷಧಿಗಳಿಗೆ ಬೇಗ ಬಗ್ಗುತ್ತಿರಲಿಲ್ಲ. ಕರ್ಣಪಿಶಾಚಿಗಳು ಕರಗಿದಾಗ ಅದೇ ಔಷಧಿಗಳು ಆಸ್ತಮಾವನ್ನು ಪರಿಣಾಮಕಾರಿಯಾಗಿ ಕಡಿಮೆ ಮಾಡಿದುವು ಅನ್ನಬಹುದು.

ಆಸ್ತಮಾದಂತೆಯೇ ಇತರ ಹಲವಾರು ದೈಹಿಕ ಬೇನೆಗಳೂ ಇತರ ಮಾನಸಿಕ ಬೇನೆಗಳೂ ಇದ್ದಾಗ, ಸೂಕ್ತ ಚಿಕಿತ್ಸೆಗೆ ಎಣಿಸಿದ ಫಲಿತಾಂಶವನ್ನು ಕೊಡುವುದಿಲ್ಲ. ಮಾನಸಿಕ ಬೇನೆಗಳಿಗೂ ತಕ್ಕ ಚಿಕಿತ್ಸೆಯು ದೊರೆತರೆ ಆಗ ದೈಹಿಕ ಬೇನೆಗಳೂ ಇನ್ನಷ್ಟು ಸುಲಭವಾಗಿ ಗುಣವಾಗುತ್ತವೆ, ಅದೇ ಚಿಕಿತ್ಸೆಯನ್ನೇ ಹೂಡಿದರೂ ಕೂಡ.

ಅಂದರೆ ಯಾವ ಬೇನೆಯು ಬಡಿದರೂ, ದೈಹಿಕಾಂಶವು ಎಷ್ಟು? ಮಾನಸಿಕ ಅಂಶವು ಎಷ್ಟು? ಎಂದು ವೈದ್ಯರು ಕಣ್ಣಲ್ಲಿ ಕಣ್ಣಿಟ್ಟು ಪರೀಕ್ಷಿಸುತ್ತಾರೆ. ಕಾರಣಗಳೆರಡಕ್ಕೂ, ಚಿಕಿತ್ಸೆಯನ್ನು ಮಾಡಲೆತ್ನಿಸುತ್ತಾರೆ. ಹೊಟ್ಟೆಯ ನೋವು ಅಂತ ಡಾಕ್ಟರ ಬಳಿಗೆ ಹೋದರೆ, ತಲೆ ತಂಪಾಗಲಿ ಅಂತ ಟ್ರಾಂಕ್ವಿಲೈಸರ್‌ಗಳನ್ನು ಕೊಡುತ್ತಾರೆ ಎಂದು ಜನರು ಕುಹಕವಾಡುವುದು ಕೇವಲ ಅಜ್ಞಾನದಿಂದ ಮಾತ್ರ. ಸಮಾಜದಲ್ಲಿ ಇಂತಹ ಅಜ್ಞಾನವನ್ನು ತೊಡೆದುಹಾಕಲು ಇಂತಹ ಹೊತ್ತಗೆಗಳು ಅಗತ್ಯ. ಈ ತೆರನ ಪ್ರಚಾರವೂ ಅತ್ಯಗತ್ಯ.

## ಬ್ರಹ್ಮಯ್ಯನ ನಕ್ಷತ್ರಿಕ

'ಮೈಸೂರು ಅರಸರ ಚರಿತ್ರೆಯನ್ನು ಎಷ್ಟು ಆಳವಾಗಿ ಅಭ್ಯಾಸ ಮಾಡಿದ್ದಾನೆ ಅಂತಲೇ ಅವನ ಹತ್ತಿರ ಹೋಗಿ ಮಾತನಾಡಿದರೆ, ಅದೇ ಒಂದು ಸಫಲ ವಿದ್ಯಾಭ್ಯಾಸವಾಗುತ್ತೆ' ಎಂದು ಗೆಳೆಯನೊಬ್ಬ ಹೇಳಿದ. ನನ್ನ ಕುತೂಹಲವೂ ಕೆರಳಿತು. ಆದುದರಿಂದ ಹೋಗೋಣ ಈಗಲೇ ಎಂದೆ. ಆಗ ಸಂಜೆ ಐದರ

ಸಮಯ. ಇಬ್ಬರೂ ಬ್ರಹ್ಮಯ್ಯನ ಕೊಠಡಿಗೆ ಹೋದೆವು. ಗೆಳೆಯ ಬಾಗಿಲನ್ನು ತಟ್ಟಿದಾಗ ಬ್ರಹ್ಮಯ್ಯ ಬಾಗಿಲು ತೆಗೆದ. ಗೆಳೆಯನನ್ನು ಕಂಡು ಒಳಕ್ಕೆ ಬನ್ನಿ ಎಂದು ಆದರದಿಂದ ಕರೆದ. ಕೊಠಡಿಯೊಳಕ್ಕೆ ಹೋದ ಕೂಡಲೇ, ಹಾಸಿದ್ದ ಮಂದಲಿಗೆಯ ಮೇಲೆ ನಮ್ಮಿಬ್ಬರನ್ನೂ ಕೂರಿಸಿ, ಬಾಗಿಲನ್ನು ಭದ್ರವಾಗಿ ಮುಚ್ಚಿ ಅಗಳಿ ಹಾಕಿದ. ನಂತರ ಎದುರಿನಲ್ಲಿ ಸುತ್ತಿಟ್ಟಿದ್ದ ಹಾಸಿಗೆಯನ್ನು ಒರಗಿಕೊಂಡು ತಾನೂ ಕುಳಿತ. 'ಏನು ಬಂದಿದ್ದು ಎಂದೂ ಇಲ್ಲದೆ ಇವತ್ತು' ಎಂದು ಗೆಳೆಯನನ್ನು ಕೇಳಿದ. 'ಇವತ್ತು ಸ್ವಲ್ಪ ವಿರಾಮವಿತ್ತು, ನಿನ್ನ ನೋಡಿ ತುಂಬಾ ದಿನಗಳಾಗಿತ್ತು ನೋಡಿಕೊಂಡು ಹೋಗೋಣ ಅಂತ ಬಂದೆ. ನಿನಗೇನಯ್ಯಾ ಯಾವಾಗಲೂ ಆರಾಮವಾಗಿ ವಿರಾಮವಾಗಿ ರಾಜನಂತೆ ಇರುತ್ತಿ. ನಮ್ಮ ಹಾಗೆ ಹೆಂಡತಿ, ಮಕ್ಕಳು, ಮನೆಮಠ ಎಂದು ತಾಪತ್ರಯಗಳೇನಾದರು ನಿನಗಿವೆಯೇ ?' ಎಂದು ನನ್ನ ಗೆಳೆಯ, ನಂತರ ನನ್ನ ಪರಿಚಯವನ್ನು ಬ್ರಹ್ಮಯ್ಯನಿಗೆ ಮಾಡಿಕೊಟ್ಟ. ಮೊದಲೇ ಮಾಡಿಕೊಡಬೇಕಾಗಿತ್ತು, ಬ್ರಹ್ಮಯ್ಯ. ಮನ್ನಿಸು ಎಂದು ಕ್ಷಮಾಪಣೆಯನ್ನು ಕೇಳಿಕೊಂಡ. 'ತುಂಬಾ ಸಂತೋಷವಾಯಿತು. ನಿಮ್ಮ ಪರಿಚಯವಾದದ್ದು' ಎನ್ನುತ್ತಾ ನನ್ನ ಕಡೆಗೆ ತಿರುಗಿದ. 'ನಿಮ್ಮಂತಹ ವಿದ್ವಾಂಸರ ಪರಿಚಯವಾದುದು ನನ್ನ ಪುಣ್ಯ' ಎಂದು ಹೇಳಿದೆ.

'ಈಗ ಯಾವುದನ್ನು ಬರೆಯುತ್ತಿದ್ದಿ ? ಏನನ್ನು ಓದುತ್ತಿದ್ದಿ ?' ಎಂದು ಗೆಳೆಯ ಕೇಳಿದ.

'ಯದುಕುಲದರಸರ ನಾಟಕವೊಂದನ್ನು ಗುರ್ತು ಹಾಕುತ್ತಿದ್ದೀನಿ. ರಾಜವೈಭವ ಅಂದರೆ ಆ ಅರಸನದಯ್ಯ ! ಎಂದು ಹೇಳುತ್ತಾ ಅರಮನೆಯ ಅಂದಿನ ವೈಭವವನ್ನು ಬಣ್ಣಿಸತೊಡಗಿದ. ಹಾಗೆ ಮಾಡುವಾಗ ಮಾನವಸಹಜವಾದ ಸುಗುಣ ಮತ್ತು ದುರ್ಗುಣಗಳನ್ನು ವರ್ಣಿಸಬೇಕು. ಸುಗುಣಗಳನ್ನು 'ಕೇಳಿದವರ ಎದೆ ಮುಟ್ಟುವಂತೆ ವರ್ಣಿಸಿದ. ಆದರೆ ದುರ್ಗುಣಗಳನ್ನು ಬಣ್ಣಿಸುವಾಗ ಮೂದಲಿಕೆಯ ಧ್ವನಿಯಾಗಲೀ, ಅವಹೇಳನದ ಸೋಂಕಾಗಲಿ ಸ್ವಲ್ಪವೂ ಇರಲಿಲ್ಲ. ಎಂತಹ ಭಾಷೆ ! ಕಡಲೆ ಹುರಿದ ಹಾಗೆ ಚಟಪಟ ಅಂತ ಅಚ್ಚ ಕನ್ನಡದಲ್ಲಿ ಮಾತನಾಡಿದ. ಕನ್ನಡ ಭಾಷೆಯಲ್ಲಿ ಇಷ್ಟು ಸೊಬಗಿರುತ್ತದೆ ಎಂದು ಆಗ ತಾನೇ ನನಗೆ ಹೊಳೆಯಿತು. ಒಂದೆರಡು ದಶಕಗಳು ನಿರಂತರವಾಗಿ ಅಭ್ಯಾಸವನ್ನು ಮಾಡಿದ ಫಲ. ಅಥವಾ ಪೂರ್ವಜನ್ಮದ ಸ್ಮರಣೆಯೋ? ಯಾವುದೋ ಜನ್ಮದಲ್ಲಿ ಆ ಕಾಲದರಸದೊಡನೆ ಇವನೂ ಆಪ್ತಸಂಗಡಿಗನಾಗಿದ್ದನೋ ? ಎಂಬ ಅನುಮಾನವೂ ನನಗೆ ಬಂತು.

ಇಷ್ಟು ಸುರಸವಾಗಿ ಮಾತನಾಡುತ್ತಿದ್ದರೂ, ಕ್ಷಣಕ್ಕೊಮ್ಮೆ ಕಿಟಕಿಯ ಬಳಿಗೆ ಕಣ್ಣು ಹಾಯಿಸುತ್ತಿದ್ದ. ಬಾಗಿಲ ಕಡೆಗೆ ಎರಡು ಮೂರು ಬಾರಿ ದೃಷ್ಟಿಯನ್ನು ನೆಟ್ಟ. ಚರಿತ್ರೆಯನ್ನು ಕತೆಯಂತೆ ಹೇಳುವ ಉದ್ವೇಗದಲ್ಲಿ ಕಣ್ಣಿನ ಕರಪಲವು ಈ ರೀತಿ ಆಗುತ್ತಿರಬಹುದು ಎಂದುಕೊಂಡೆ. ಸ್ವಲ್ಪ ವಿಪರೀತ ವರ್ತನೆಯೇ ಅನ್ನಿ. ಆದರೂ ಮಿಕ್ಕಂತೆ ಸರಿಯಾಗಿಯೇ ಇದ್ದ. ತಲೆಕೂದಲು ಬಾಚಲ್ಪಟ್ಟಿರಲಿಲ್ಲ. ಹಾಕಿದ್ದ ಬಟ್ಟೆಗಳು ಕೊಳೆಯಾಗಿದ್ದುವು. ಕೊಠಡಿಯೂ ಅವ್ಯವಸ್ಥೆಯಲ್ಲಿತ್ತು. ಆದರೆ ಇವೆಲ್ಲಾ ಕಲೆಗಾರನ ಸಾಮಾನ್ಯ ವಾತಾವರಣ. ಹಾಗಾಗಿ ಆಗ ಬೇರೆ ಯಾವ ಅನುಮಾನಕ್ಕೂ ಎಡೆಮಾಡಿಕೊಡಲಿಲ್ಲ.

ಸಂಭಾಷಣೆಯು ಮುಗಿದ ಮೇಲೆ ನಾವಿಬ್ಬರೂ ಹೊರಡಲು ಎದ್ದೆವು. ಇಷ್ಟು ಬೇಗ ಹಿಂತಿರುಗಬೇಕಲ್ಲ ಎಂದು ನನಗನ್ನಿಸಿದರೂ, ಬ್ರಹ್ಮಯ್ಯನಿಗೆ ಬೇಜಾರು ಬರುವಂತೆ ಮಾಡಬಾರದು ಎಂದು ಎದ್ದಿದ್ದೆ. ಬಾಗಿಲು ದಾಟಿ ಹೊರಡುವಾಗ 'ಗೇಟನ್ನು ಭದ್ರವಾಗಿ ಹಾಕಿಕೊಂಡು ಹೋಗಿ. ಇಲ್ಲದಿದ್ದರೆ ದಣ್ಣಾಯಕರ ಸಿಬ್ಬಂದಿ ಯಾರಾದರೂ ಕಳ್ಳತನದಲ್ಲಿ ಒಳಕ್ಕೆ ನುಗ್ಗಿ ನನ್ನನ್ನು ಹಿಂಸಿಸಬಹುದು' ಎಂದು ಹೇಳಿದ. ಬಹಳ ಗಂಭೀರವಾಗಿ, ಹೇಳಿದ.

ಗೇಟನ್ನು ಸರಿಯಾಗಿ ಮುಚ್ಚಿ ರಸ್ತೆಗೆ ಇಳಿದಾಗ 'ಅದು ಯಾಕೋ ಬ್ರಹ್ಮಯ್ಯ ಹಾಗೆ ಅಂದ. ಹಾಸ್ಯಕ್ಕಾಗಿ ಮಾತಾಡಿದಂತಿಲ್ಲ' ಎಂದು ಗೆಳೆಯನನ್ನು ಕೇಳಿದೆ. 'ಈ ಹಾಳು ಪಾಂಡಿತ್ಯವು ಅಧಿಕವಾದಷ್ಟೂ ಸ್ವಲ್ಪ ಕ್ರಾಕ್ ತರಹ ಆಡಲು ಪ್ರಾರಂಭಿಸುತ್ತಾರೆ, ಕಣೋ ! ಬ್ರಹ್ಮಯ್ಯನ ಪಾಂಡಿತ್ಯಕ್ಕೆ ಸರಿಯಾದ ಪುರಸ್ಕಾರ ದೊರೆಯಲಿಲ್ಲ ಎಂದವನ ಕೋಪ. ತಕ್ಕ ಪುರಸ್ಕಾರ ದೊರೆಯದೆ ಇರುವುದಕ್ಕೆ, ಅರಸರ ಕಡೆಯ ಪೋಲೀಸಿನವರು ಕಾರಣ ಎಂದವನ ಭ್ರಮೆ. ಎಂದಾದರೂ ಆ ಪೋಲೀಸಿನವರು ಹೇಗಾದರೂ ಬಂದು ಹಿಡಿದು ಪರಮ ಶಿಕ್ಷೆಗೆ ಗುರಿಮಾಡುತ್ತಾರೆ ಎನ್ನುವ ತೀವ್ರ ಭಯ ಅವನಿಗೆ. ಅಸಾಧ್ಯವಾದ ಈ ಭ್ರಮೆಯೊಂದರಿಂದಲೇ ಅವ ಬಾಗಿಲು ಭದ್ರ ಮಾಡುತ್ತಾನೆ. ಕಿಟಕಿಯನ್ನು ಸಂಶಯದಿಂದ ನೋಡುತ್ತಾನೆ. ಹೊರಗೆ ಅಪರೂಪಕ್ಕೆ ಬಂದಾಗ, ಪೋಲೀಸನ ಸಮವಸ್ತ್ರವನ್ನು ಕಂಡರೆ ಗಲ್ಲಿಗೆ ತಿರುಗಿ ತಲೆ ಮರೆಸಿಕೊಳ್ಳುತ್ತಾನೆ. ದುರಭ್ಯಾಸಗಳಾವುದೂ ಇಲ್ಲ ನೋಡು, ಆದರೆ ಈ ಹುಚ್ಚೊಂದು ಬಲವಾಗಿ ಹಿಡಿದಿದೆ ಅವನಿಗೆ' ಎಂದು ಗೆಳೆಯ ಹೇಳಿದ. 'ಬುದ್ಧಿಯನ್ನು ಕೊಟ್ಟ ದೇವರು ಅದರ ಜತೆಗೆ ಈ ರೀತಿ ಬರೆಯನ್ನೂ ಹಾಕುತ್ತಾನಲ್ಲಾ; ಅಯ್ಯೋ ಪಾಪ' ಎಂದಂದುಕೊಂಡೆ.

ಕೆಲವು ತಿಂಗಳುಗಳಾಗಿರಬೇಕು. ಒಂದು ಬೆಳಗ್ಗೆ ಪರಿಚಿತನಾದ ಪೋಲೀಸಿನವನೊಬ್ಬ ನನ್ನ ಬಳಿಗೆ ಬಂದ. ಬ್ರಹ್ಮಯ್ಯನ ಪರಿಚಯವಿದೆಯೇ ?' ಎಂದು ಕೇಳಿದ. 'ಪರಿಚಯವೇನೋ ಇದೆ. ಆದರೆ ಅಂತಹ ಹೇಳಿಕೊಳ್ಳುವಂತಹ ಸ್ನೇಹವಲ್ಲ. ಇಷ್ಟು ಮಾತ್ರ ಚೆನ್ನಾಗಿ ಇತ್ತು. ಅವರು ಉದ್ದಾಮ ಪಂಡಿತರು,' ಎಂದೆ. 'ನಿಕಟ ಪರಿಚಯವಿಲ್ಲವೇ, ಹಾಗಾದರೆ ?' ಎಂದು ಕೇಳಿದ, ಅವ. 'ಇಲ್ಲವಪ್ಪಾ ! ಆದರೆ ಹಾಗೆ ಯಾಕೆ ಕೇಳ್ತಿ ?' ಎಂದೆ.

'ವೈಸ್‌ರಾಯರಿಗೆ, ಬ್ರಿಟಿಷ್ ರೆಸಿಡೆಂಟರಿಗೆ, ಮತ್ತು ಬ್ರಿಟಿಷ್ ಚಕ್ರವರ್ತಿಗೆ ಕೂಡ, ಬ್ರಹ್ಮಯ್ಯನವರು ಮೇಲಿಂದ ಮೇಲೆ ಅಹವಾಲು ಕಾಗದಗಳನ್ನು ಬರೆಯುತ್ತಿದ್ದಾರೆ. ಸ್ಥಳೀಯ ಪೋಲೀಸಿನವರು ಕಿರುಕುಳ ಕೊಡುತ್ತಿದ್ದಾರೆಂದೂ, ಪ್ರಾಣ ತೆಗೆಯಬಹುದೆಂದೂ, ಕಾರಣ ರಕ್ಷಣೆಯು ಬೇಕೆಂದೂ ಮೂರು ನಾಲ್ಕು ಸಾವಿರ ಅರ್ಜಿಗಳನ್ನು ಬರೆದು ಹಾಕಿದ್ದಾರೆ, ಅಲ್ಲಿಂದ ಅವು ತನಿಖೆಗೆಂದು ನಮ್ಮ ಬಳಿಗೆ ಬಂದಿವೆ. ತನಿಖೆ ಮಾಡಿ ಉತ್ತರವನ್ನು ದಿಳ್ಳಿಗೆ ಕಳಿಸಬೇಕು. ನನಗೆ ತಿಳಿದ ಹಾಗೆ ಬ್ರಹ್ಮಯ್ಯನ ಬಳಿಗೆ ಯಾವ ಪೋಲೀಸಿನವನೂ ಸುಳಿದಿಲ್ಲ. ಅಂತಹವನೊಬ್ಬ ಈ ಊರಿನಲ್ಲಿ ಇದ್ದಾನೆ ಎನ್ನುವುದೂ ತಿಳಿಯದು. ವಿಳಾಸವನ್ನು ಪತ್ತೆಹಚ್ಚಿ ಅವರನ್ನು ಭೇಟಿಯಾಗುವುದೇ ಮಹಾ ಪ್ರಯಾಸವಾಯಿತು. ಪೋಲೀಸಿನ ಸಮವಸ್ತ್ರ ಧರಿಸದೆ, ಸಾಮಾನ್ಯ ಪಂಚೆ ಷರಟಿನಲ್ಲಿ ಅವರನ್ನು ಕಾಣಲು ಹೋದೆ. ಬಾಗಿಲನ್ನು ಅವ ಬಡಪೆಟ್ಟಿಗೆ ತೆರೆಯಲಿಲ್ಲ. ಕಡೆಗೊಮ್ಮೆ ಬಾಗಿಲನ್ನು ತೆರೆದರು. 'ಬ್ರಹ್ಮಯ್ಯನವರು ನೀವೇನಾ' ಎಂದು ಕೇಳಿದೆ. 'ಅಲ್ಲ, ಈಗ ಅವರು ಬರಬಹುದು, ಇಲ್ಲೇ ಇರಿ' ಎಂದು ಹೇಳಿ ಬಾಗಿಲನ್ನು ಹಾಕಿಕೊಂಡು ಹೊರಟು ಹೋದರು. ಸ್ವಲ್ಪ ಹೊತ್ತಿನ ಮೇಲೆ ಎದುರು ಮನೆಗೆ ಹೋಗಿ ವಿಚಾರಿಸಿದೆ. ನನ್ನೊಡನೆ ಮಾತನಾಡಿ ಹೊರಟು ಹೋದವರೇ ಬ್ರಹ್ಮಯ್ಯನವರೆಂದು, ಅದನ್ನು ಕಂಡುದಾಗಿ, ಎದುರು ಮನೆಯವರು ಹೇಳಿದರು. 'ಆಳಧಿಕಾರಿಗಳಿಗೆ ಹೀಗೆ ಅರ್ಜಿ ಬರೆಯುವ ಗೀಳು ಕೆಲವು ವರ್ಷಗಳಿಂದಲೂ ಬ್ರಹ್ಮಯ್ಯನವರಿಗಿರುವುದು ಕೇರಿಯಲ್ಲಿರುವವರಿಗೆಲ್ಲಾ ತಿಳಿದ ವಿಷಯ' ಎಂದು ಹೇಳಿದರು. 'ಕೇವಲ ಹುಚ್ಚನಿವ' ಎಂದು ವರದಿ ಕಳುಹಿಸುವ ಮೊದಲು, ಪರಿಚಯಸ್ಥರನ್ನು ವಿಚಾರಿಸಿ ಬರೀ ಹುಚ್ಚೋ ? ಅಥವಾ ಇನ್ನೇನಾದರೂ ಮಸಲತ್ತು ಇರಬಹುದೋ ಎಂಬುದನ್ನು ಪರಿಶೀಲಿಸಲು ಬಂದೆ. ರಾಜಕೀಯದಲ್ಲಿ ಇವರಿಗೆ ಆಸಕ್ತಿಯೂ ಇರಲಿಲ್ಲವೇ ? ಅದಾದರೂ ನಿಮಗೆ ತಿಳಿದಿದೆಯೇ ? ಎಂದು ಕೇಳಿದ. 'ನನಗೆ ತಿಳಿದ ಮಟ್ಟಿಗೆ ಅವರು ರಾಜಕೀಯದಿಂದ ಬಲು ದೂರವಪ್ಪಾ, ಯಾವ ಮಸಲತ್ತನ್ನೂ ಅಂತಹ

ಪಂಡಿತರು ಮಾಡಲು ಅಸಾಧ್ಯ. ಅಷ್ಟು ಮಾತ್ರ ನನಗೆ ಚೆನ್ನಾಗಿ ಗೊತ್ತು' ಎಂದೆ. ಹಾಗಂದು ಜಾರಿಕೊಂಡೆ.

ಎರಡು ಮೂರು ವರ್ಷಗಳಾಗಿರಬೇಕು ! ಪತ್ರಿಕೆಗಳಲ್ಲಿ ಕೆಟ್ಟ ಸುದ್ದಿಯೊಂದು ಪ್ರಕಟವಾಗಿತ್ತು. ಬೆಳಗಾಗುತ್ತಲೇ ಅದನ್ನು ಓದಿದೆ. 'ಬಾಡಿಗೆಗೆ ಕೊಟ್ಟಿದ್ದ ಕೊಠಡಿಯೊಂದರಿಂದ ದುರ್ನಾತ ಬರುತ್ತಿದ್ದ ಕಾರಣ ಪೋಲೀಸಿನವರ ಸಹಾಯದಿಂದ, ಮನೆಯ ಮಾಲೀಕರು, ಬಾಗಿಲನ್ನು ಒಡೆಸಿದರು. ಆಗ ನೋಡಿದರೆ, ಬಾಡಿಗೆಗೆ ಪಡೆದಿದ್ದ ವ್ಯಕ್ತಿ ಅಲ್ಲಿ ಸತ್ತು ಬಿದ್ದಿರುವುದನ್ನು ಕಂಡರು. ಶವದ ಸ್ಥಿತಿಯನ್ನು ನೋಡಿದಾಗ ಸತ್ತು ಎರಡು ಮೂರು ದಿನಗಳಾದರೂ ಆಗಿರಬೇಕು ಎಂದು ವೈದ್ಯರಂದರು,' ಎನ್ನುವ ಸುದ್ದಿ.

ಓದಿದ ಕೂಡಲೇ ಬ್ರಹ್ಮಯ್ಯನವರ ನೆನಪಾಯಿತು. ಇದು ಅವರೇ ಏನೋ ಎಂದನ್ನಿಸಿತು. ಅಲ್ಲಿಗೆ ಧಾವಿಸಿದೆ. ಅವರಿದ್ದ ಕೊಠಡಿಯ ಬಳಿಯಲ್ಲೇ ಜನಸಂದಣಿಯು ಸೇರಿತ್ತು. ನನ್ನ ಸಂಶಯವು ದಿಟವಾಗಿತ್ತು. ಅಂತಹ ಉದ್ದಾಮ ಪಂಡಿತನಿಗೆ ಇಂತಹ ದುರ್ಮರಣ! ಹೀಗೇಕೆ? ಎಂದು ಯೋಚಿಸುತ್ತಾ ಖಿನ್ನನಾಗಿ ಮನೆಗೆ ಹಿಂತಿರುಗಿದೆ.

ಬ್ರಹ್ಮಯ್ಯನಿಗೆ ಪ್ಯಾರನಾಯ್ಡ್ ಪ್ರತಿಕ್ರಿಯೆಯ ಕಾಟವಿತ್ತು. ಆಳರಸರ ಪೋಲೀಸಿನವರು ಹಿಡಿದು ಕಾಡುತ್ತಾರೆ ಎಂಬ ಬೇರೂರಿದ ಭ್ರಮೆಯು ಅವನ ಪಾಲಿಗೆ ಸತ್ಯವೇ ಆಗಿತ್ತು, ಕಾಡುತ್ತಿತ್ತು. ನನ್ನ ವಿದ್ಯಾ ಪ್ರೌಢಿಮೆಗೆ ತಕ್ಕ ಸನ್ಮಾನವು ದೊರೆಯಲಿಲ್ಲ, ಸಮಾಜದಿಂದ, ಎಂಬ ಕ್ರೋಧವು ಉಕ್ಕುತ್ತಲಿತ್ತು.

ನನಗೆ ಅನ್ಯಾಯವಾಯಿತು ಎನ್ನುವ ಕ್ರೋಧವು, ಇನ್ನು ಯಾವ ರೀತಿಯಿಂದಲೂ ಶಮನವನ್ನು ಪಡೆಯಲಾರದೆ, ಮನಸ್ಸನ್ನು ಹರಿದು ಛಿದ್ರಿಸಿತ್ತು. ಅಂದರೆ ಸ್ಕಿಜೋಫ್ರೇನಿಯಾ ಆಗುವ ಪರಿಸ್ಥಿತಿಯು ಇತ್ತು. ಯಾರಿಗೂ ನಾನು ಬೇಡ, ಆದುದರಿಂದ ಯಾರೂ ನನಗೆ ಬೇಡ ಎನ್ನುವ ಅಹಂಕಾರವು ಉಲ್ಬಣಿಸುತ್ತಿತ್ತು. ಲೋಕವು ನನ್ನನ್ನು ಮರೆತಿದೆ. ನಾನೂ ಲೋಕವನ್ನು ಮರೆಯುತ್ತೇನೆ, ಎನ್ನುವ ಮಮಕಾರದ ಸೇಡು ಹೆಚ್ಚಿತ್ತು.

ಸೊಗಸು ಕಾವ್ಯಗಳನ್ನು ಬರೆಯುವಾಗ, ಊಹಾಲೋಕದಲ್ಲಿ ಸ್ವಚ್ಛಂದವಾಗಿ ವಿಹರಿಸುವಾಗ Persecution ಭ್ರಮೆಯು, ನಕ್ಷತ್ರಿಕನಂತೆ ಕಾಡುತ್ತಿರಲಿಲ್ಲ. ಮಿಕ್ಕಂತೆ ಆ ಭ್ರಮೆಯು ಘೋರವಾಗಿ, ನಿರಂತರವಾಗಿ ಕಾಡುತ್ತಿತ್ತು. ಬ್ರಹ್ಮಯ್ಯನ ಮನಸ್ಸಿನಲ್ಲಿ ಉದ್ಭವಿಸಿದ ಭ್ರಮಾ ನಕ್ಷತ್ರಿಕನು ಹಗಲಿರುಳೂ ಕುಕ್ಕುತ್ತಲೇ ಇದ್ದ, ಬೆದರಿಸುತ್ತಲೇ ಇದ್ದ. ಮೊದಲೇ ಮನಃಛಿದ್ರದ ಸ್ವಭಾವವಿತ್ತು ಅದರ ಮೇಲೆ ಈ ನಕ್ಷತ್ರಿಕನ

ಹಾವಳಿ. ಇವೆರಡೂ ಕಾಟಗಳನ್ನು ತಡೆಯಲಾರದೆ, ಅವ ಆತ್ಮಹತ್ಯೆಯನ್ನು ಮಾಡಿಕೊಂಡಿದ್ದ. ಯಾವ ರೀತಿಯಲ್ಲಿ ಆತ್ಮಹತ್ಯವನ್ನು ಮಾಡಿಕೊಂಡನೋ ತಿಳಿಯಲಿಲ್ಲ. ಯಾವುದಾದರೂ ವಿಷವನ್ನು ನುಂಗಿದನೊ? ಅಥವಾ ಬೇನೆ ಯಾವುದಾದರೂ ಬಂದು, ಚಿಕಿತ್ಸೆಗೆ ಅವ ಹೋಗದೆ, ಅಥವಾ ಹೋಗಲಾರದೆ, ಸತ್ತನೋ, ಭಗವಂತನೇ ಬಲ್ಲ.

'ನೀನು ಹೇಗಿದ್ದರೂ ಆಯಿತು, ನನಗೆ ಅಗತ್ಯ. ನೀನು ನನ್ನ ನೆಂಟ' ಎಂದು ಯಾರಾದರೂ ಅವನನ್ನು ಆದರಿಸಿದ್ದರೆ, ಸೂಕ್ತ ಕಾಲದಲ್ಲಿ ತಕ್ಕ ಚಿಕಿತ್ಸೆಯನ್ನು ಆತನಿಗೆ ಒದಗಿಸಿದ್ದಿದ್ದರೆ, ಭ್ರಮಾ ನಕ್ಷತ್ರಿಕನ ಕಾಟವು ಬಲುಪಾಲು ಕಡಿಮೆಯಾಗುತ್ತಿತ್ತು. ಹಾಗೂ ಆತನಲ್ಲಿ ಸುಪ್ತವಾಗಿದ್ದ ಸ್ಕಿಜೋಫ್ರೆನಿಯಾದ ಹಾವಳಿಯನ್ನು ಬಲು ಮಟ್ಟಿಗೆ ತಡೆಯಬಹುದಾಗಿತ್ತು. ಹೊಗಳುವ ಸ್ನೇಹಿತರಿದ್ದರು, ಬ್ರಹ್ಮಯ್ಯನಿಗೆ; ಆದರೆ ಹೃದಯವನ್ನು ಒಲಿಸುವ ಸ್ನೇಹಿತರಾಗಲಿ ನೆಂಟರಾಗಲಿ ಇರಲಿಲ್ಲ. ಎಷ್ಟೋ ಜನರಿಗೆ ಬಾಳಿನಲ್ಲಿ ಈ ಅನುಭವವು ಉಂಟಾಗುತ್ತದೆ. ಅವರಲ್ಲಿ ತುಂಬಾ ಜನರು 'ನೆಂಟ ನೀನೊಬ್ಬನೇ! ವೆಂಕಟರಮಣ' ಎಂದು ಅವನಿಗೆ ಗಂಟು ಬೀಳುತ್ತಾರೆ. ಹಾಗಾಗಿ ಬಾಳಿನಲ್ಲಿ ಜಯಗಳಿಸುತ್ತಾರೆ. ಆದರೆ ಬ್ರಹ್ಮಯ್ಯನ ಚುರುಕು ಬುದ್ಧಿಯು, ವೆಂಕಟರಮಣನಿಗೆ ಶರಣಾಗುವುದನ್ನು ತಪ್ಪಿಸಿತ್ತು. ಕಾರಣ, ಸುಲಭವಾಗಿ ದೊರಕುವ ಚಿಕಿತ್ಸೆಯೊಂದನ್ನು ಅವ ಕಳೆದುಕೊಂಡಿದ್ದ.

ಎಂತಹ ಪಾಂಡಿತ್ಯವಿದ್ದವರೇ ಆಗಲಿ, ಎಷ್ಟು ಚುರುಕು ಬುದ್ಧಿಯೇ ಇರಲಿ; ಭ್ರಮೆಯಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ. ಏಕೆಂದರೆ ಪಾಂಡಿತ್ಯ, ಚುರುಕು ಬುದ್ಧಿ, ಇವೆರಡೂ ಮೆದುಳಿನ ನವ್ಯ ನೂತನ ಭಾಗವಾದ Cortex ಇಂದ ಸಾಧಿಸಲ್ಪಡುತ್ತವೆ. ಆದರೆ ಪುರಾತನ ಹಾಗೂ ಸನಾತನ ಮೆದುಳಿನ ಕಾರ್ಯವಾದ 'ಭಾವನಾ' ಚಟುವಟಿಕೆಗಳು ಬದುಕಿ ಬಾಳಲು ಅತ್ಯಗತ್ಯ. ಇವುಗಳಲ್ಲಿ ದೋಷವಿದ್ದರೆ, ಲೋಪವುಂಟಾದರೆ, ಆಗ ನಕ್ಷತ್ರಿಕನು ಉದ್ಭವಿಸುತ್ತಾನೆ, ಮನಸ್ಸಿನಲ್ಲಿ. ಪ್ರೇಮ, ಆದರ, ಪ್ರೀತಿ, ಒಲವು ಇವುಗಳು ದೊರಕದೆ ಇದ್ದರೆ, ನಕ್ಷತ್ರಿಕನ ಭ್ರಮೆಗಳು ಕಾಲಿಡುತ್ತವೆ, ಕಾಡುತ್ತವೆ. ಪ್ರೇಮ, ಆದರ, ಪ್ರೀತಿ, ಇತ್ಯಾದಿಗಳು ಇರದೆ ಇದ್ದರೆ, ಅಂತಹ ಬಾಳು ನಿರರ್ಥಕ ಎಂದು ಅಂತಹ ಮನಸ್ಸು ಇಂತಹ ಭ್ರಮೆಗಳನ್ನು ಮೂಡಿಸಿ, ಬಾಳನ್ನು ಮುಗಿಸಿಬಿಡುತ್ತದೆಯೋ ? ಏನೋ ?

ಮೇಲಿಂದ ಮೇಲೆ ಅಸಂಖ್ಯಾತ ಅರ್ಜಿಗಳನ್ನು ತಳದಿಂದ ತುದಿಯವರೆಗೂ ಇದ್ದ ಅಧಿಕಾರಿಗಳಿಗೆ ಕಳುಹಿಸುವ ಪ್ರವೃತ್ತಿ ಕಂಡುಬಂದಾಗ, ಅಂತಹವರನ್ನು ಪ್ರೀತಿಸುವವರು, ನುರಿತ ವೈದ್ಯರಲ್ಲಿಗೆ ಕರೆದುಕೊಂಡು ಹೋದರೆ, ಯಶಸ್ವೀ

ಚಿಕಿತ್ಸೆಯನ್ನು ಮಾಡಿಸಬಹುದು. ‘ಅದೊಂದು ಗೀಳು ಅವನಿಗೆ ; ನಿರುಪದ್ರವಿಯಾದ ಹವ್ಯಾಸ, ಎಂದು ನಿರ್ಲಕ್ಷಿಸಿದರೆ, ಕೇಡು, ಅಂತಿಮವಾಗಿ, ಖಂಡಿತ.

ಸತ್ಯ ಹರಿಶ್ಚಂದ್ರನಿಗೆ, ವಿಶ್ವಾಮಿತ್ರನು ಕೊಟ್ಟ ಕಾಟವು, ನಕ್ಷತ್ರಿಕನ ಮೂಲಕ. ಮನಸ್ಸಿನಲ್ಲಿ ನಡೆಯುವ ವಿರಾಟ್ ನಾಟಕಗಳನ್ನು ನಮ್ಮ ಹಿರಿಯರು, ಕತೆಗಳ ರೂಪದಲ್ಲಿ, ಪುರಾಣಗಳ ಚೌಕಟ್ಟಿನಲ್ಲಿ, ಬೋಧಿಸುತ್ತಿದ್ದರು. ಕತೆ, ಪುರಾಣ, ಇತ್ಯಾದಿ, ಜಾನಪದ ಪ್ರಿಯಸಾಹಿತ್ಯ ಪ್ರಕಾರಗಳು ಜನಸಾಮಾನ್ಯರಿಗೆಲ್ಲ ಸುಲಭವಾಗಿ ಅರ್ಥವಾಗುವ ಬೋಧನೆಗಳು. ಆದುದರಿಂದಲೇ ನಮ್ಮ ಹಿರಿಯರು, ಕತೆ, ಪುರಾಣಗಳ, ಸಂಪರ್ಕ ಮಾಧ್ಯಮವನ್ನು, ತಮ್ಮ ಬೋಧನೆಗೆ ಬಳಸಿಕೊಂಡರು. ಆ ದೃಷ್ಟಿಯಿಂದ ಹರಿಶ್ಚಂದ್ರನ ಕತೆಯನ್ನು ಗಮನಿಸುವ.

ಹರಿಶ್ಚಂದ್ರ ಚಕ್ರವರ್ತಿಗೆ ಅತುಳ ಐಶ್ವರ್ಯವಿತ್ತು. ಅನುಪಮ ಹೆಂಡತಿ, ಅನುರಾಗದ ಮಗ, ಎಲ್ಲವೂ ಇದ್ದಿತು. ಆದರೆ ಅವನಿಗೊಂದು ಹೆಮ್ಮೆ ;ಗೀಳು, ನಾನು  ಸತ್ಯವಂತ, ನುಡಿದಂತೆ ನಡೆಯುವವ, ಎಂಬ ಅಹಂಕಾರ.

ಪುರಾಣದ ಕತೆ ಎಲ್ಲರಿಗೂ ತಿಳಿದೇ ಇದೆ. ವಿಶ್ವಾಮಿತ್ರಮುನಿ ಬಂದು ದಕ್ಷಿಣೆಯನ್ನು ಬೇಡಿದ. ಹರಿಶ್ಚಂದ್ರ ಮದಾಂಧನಾಗಿ ಹ್ಞೂ ಎಂದ. ನುಡಿದ ಮಾತನ್ನು ನಡಸಲಾರದೆ, ಹರಿಶ್ಚಂದ್ರ ಶ್ಮಶಾನದ ಪಾಲಕನಾದ. ಅನುರಾಗದ ಮಗನ ಶವವನ್ನು ಹೊತ್ತುಕೊಂಡು ತಾಯಿಯು ಶ್ಮಶಾನಕ್ಕೆ ಬಂದಳು, ಒಲವಿನ ಮಗನ ಅಂತ್ಯಕ್ರಿಯೆಗೆ. ಸತ್ಯ ಹರಿಶ್ಚಂದ್ರ ಅಲ್ಲವೇ? ಅವನಿಗೆ ಕಾಣಿಸಿತು, ಹೆಂಡತಿಯ ಕೊರಳಿನಲ್ಲಿದ್ದ ಮಾಂಗಲ್ಯ. ಇತರರಾರಿಗೂ ಅದು ಕಾಣಿಸುತ್ತಿರಲಿಲ್ಲ.ಆಗ ಹೆಂಡತಿ ಅಂದಳು ‘ನೀನು ನನ್ನ ಗಂಡ, ಈ ಶವ ನಿನ್ನ ಮಗನದು, ಇದಕ್ಕೆ ಅಂತ್ಯ ಕ್ರಿಯೆಯನ್ನು ಮಾಡಿಸುವುದು ನಿನ್ನ ಧರ್ಮ, ನಾನು ಈ ಮಾಂಗಲ್ಯವನ್ನು ಕಿತ್ತು ಕೊಡಲಾರೆ. ಅದಿಲ್ಲದೆ ನಾನೂ ಇಲ್ಲ.’ ಎಂದು.

ಖಡ್ಗವನ್ನೆತ್ತಿದ ಅವಳನ್ನು ಕೊಲ್ಲಲು, ಹಾಗೆ ಮಾಡಿ ತಾನು ಕಟ್ಟಿದ ಮಾಂಗಲ್ಯದ ಚಿನ್ನದಿಂದ, ಮಗನ ಶ್ಮಶಾನದ ಕಾಣಿಕೆಯನ್ನು ಪಡೆಯಲೋಸುಗ. ಅಂದರೆ ಅವನಿಗೆ ರಾಜ್ಯ ಐಶ್ವರ್ಯವೆಲ್ಲವೂ ಹೋಗಿತ್ತು. ಈಗ ಹೆಂಡತಿ, ಮಗ ಎನ್ನುವುದೂ ಇಲ್ಲವಾಯ್ತು, ಅಂದರೆ ಹಠದಿಂದಲೇ ಅವ, ತನ್ನ ಅಹಂ–ಕಾರವನ್ನು ಖಡ್ಗದಿಂದ ಹೊಡೆದು ಹೆಂಡತಿಯ ನೆಪದಲ್ಲಿ ಕಳೆದುಕೊಳ್ಳಲು ಸಿದ್ಧನಾಗಿದ್ದ.

ಅಹಂ–ಕಾರವು ಹೋದಮೇಲೆ, ನಾನು ಎನ್ನುವುದು ಇಲ್ಲವಾದಂತಾದಾಗ; ಭಗವಂತನು ಪ್ರತ್ಯಕ್ಷನಾದ. ಭಗವಂತನ ದರ್ಶನವಾದ ಮೇಲೆ ದುಃಖಕ್ಕೆ ಅವಕಾಶ

ಉಂಟೇ?

ಇದು ಹರಿಶ್ಚಂದ್ರನ ಕತೆ.

ವಿಶ್ವಾಮಿತ್ರನು, ಹರಿಶ್ಚಂದ್ರನ ಅಹಂ–ಕಾರವನ್ನು ಹರಿದು ಉದ್ಧರಿಸಲೋಸುಗ, ನಕ್ಷತ್ರಿಕನನ್ನು ಅಂಟಿಸಿದ. ಅಂದರೆ ತಾನಾಡಿದುದನ್ನು ಮರೆತರೆ, ಅವ ನೆನಪುಕೊಡಲು ಎಂದು.

'ನಕ್ಷತ್ರಿಕ'ನು ಹರಿಶ್ಚಂದ್ರನ ಮನಸ್ಸಿನಲ್ಲಿ ಮೂಡಿಬಂದ ದೃಢವಾದ ಪ್ಯಾರನಾಯ್ಡ್ ಭ್ರಮೆ. ಆ ಭ್ರಮೆಯಿಂದಲೇ, ಅದು ನಿತ್ಯ ಮತ್ತು ಸತ್ಯ ಎಂದು ಹರಿಶ್ಚಂದ್ರನಿಗೆ ಅನಿಸಿದುದರಿಂದಲೇ, ಅವ ತನ್ನ ಹಟವನ್ನು ಕಡೆಯತನಕ ಸಾಧಿಸಿದ. ತನ್ನ ಅಹಂ–ಕಾರವನ್ನು ಕಳೆದುಕೊಂಡ.

ಈ ದೃಷ್ಟಿಯಿಂದ ನೋಡಿದರೆ ಪ್ಯಾರನಾಯ್ಡ್ ಪರಿಸ್ಥಿತಿಯು ಅಹಂ–ಕಾರದ ನಿರ್ಮೂಲನೆಗೆಂದು ಮನಸ್ಸು ಹೂಡಿದ ಪ್ರತಿಕ್ರಿಯೆ ಎಂದನ್ನುವುದು ತಪ್ಪಲ್ಲ.

ಮನಃಶಾಸ್ತ್ರದಲ್ಲಿ ಪ್ಯಾರನಾಯ್ಡ್ ಸ್ಥಿತಿಯನ್ನು ನಿರ್ಮೂಲ ಮಾಡುವುದು ಅಸಾಧ್ಯ ಎನ್ನುತ್ತಾರೆ. ಅನುಭವದಿಂದ ನುಡಿದ ಸತ್ಯದ ಮಾತು, ಇದು. ಹೀಗೇಕೆ?

ಪ್ಯಾರನಾಯ್ಡ್, ಸ್ಥಿತಿಯು, ಮನಸ್ಸಿನಲ್ಲಿ ಉಲ್ಬಣಗೊಂಡಿರುವ ಅಹಂ, ನಾನು ಎಂದೆನ್ನುವ ಭ್ರಮೆಯ ಒಂದು ರೂಪ. ಅದಕ್ಕೆ ಚಿಕಿತ್ಸೆಯು ಅಹಂ ಎಂದೆನಿಸಿಕೊಂಡುದುದನ್ನು ವಿಶ್ಲೇಷಿಸಿ ಅರಿತು, ಅದೂ ಒಂದು ಭ್ರಮೆ ಎಂದು ಅರಿಯುವುದರಿಂದ. ಇಂತಹ ಚಿಕಿತ್ಸೆಯನ್ನು ಆಧ್ಯಾತ್ಮಿಕ ಚಿಕಿತ್ಸೆ ಎನ್ನಬಹುದು. ಪ್ಯಾರನಾಯ್ಡಿನ ಮೂಲ ಕಾರಣವನ್ನು ಈ ರೀತಿಯಲ್ಲಿ ಮಾತ್ರ ನಿರ್ಮೂಲಗೊಳಿಸಲು ಸಾಧ್ಯ.

ಆದರೆ ತಾತ್ಕಾಲಿಕ ದಮನಗಳೂ ಸಾಧ್ಯವಿರಬಹುದಲ್ಲ. ಅವುಗಳನ್ನು ನಡಸಿದ ಮೇಲೆ, ಅಂತಹ ರೋಗಿಯು ಆಧ್ಯಾತ್ಮಿಕ ಚಿಕಿತ್ಸೆಗೆ ಅನುವಾಗುತ್ತಾನೆ. ಆದುದರಿಂದ ಉಪಶಮನಕ್ಕೆರಿದು, ಪೂರ್ಣ ಆಧ್ಯಾತ್ಮಿಕ ಚಿಕಿತ್ಸೆಗೆ ಅಣಿಮಾಡಿಕೊಡಲೆಂದು, ಇತರ ವೈಜ್ಞಾನಿಕ ಚಿಕಿತ್ಸೆಗಳನ್ನು ಅತ್ಯಗತ್ಯವಾಗಿ ಮಾಡಲೇಬೇಕು.

**ಸಂಶಯ ಪಿಶಾಚಿ**

ಭರ್ಜರಿ ಆಳು, ಪಾಟೀಲ್ ಪುಟ್ಟಣ್ಣ. ಪ್ರಾಯದಲ್ಲಿ ಅವನ ಜಬರ್ದಸ್ತಿಯು ಸುತ್ತಮುತ್ತಲಿನ ಗ್ರಾಮಗಳಲ್ಲಿ ಪ್ರಸಿದ್ಧವಾಗಿತ್ತು. ಎಪ್ಪತ್ತರ ಮುಪ್ಪಡರಿದಾಗ,

ಕೈಕಾಲುಗಳಲ್ಲಿ ತ್ರಾಣವು ಕಡಿಮೆಯಾದಾಗ, ಅವನ ವರ್ತನೆಯಲ್ಲಿ ಸ್ವಲ್ಪ ವಿಪರೀತವು ಕಂಡುಬಂದಿತು. ಮನೆಯವರನ್ನಾಗಲೀ ಕೇರಿಯವರನ್ನಾಗಲೀ ಗಾಬರಿ ಪಡಿಸುವಂತಹ ವಿಪರೀತವಲ್ಲ. ಆದರೆ ಮನೆಮಕ್ಕಳು ಕೂಡ ನಗುವಂತಹ ವರ್ತನೆ. ಸಾಮಾನ್ಯವಾಗಿ ದೊಡ್ಡಗಂಟಲಿನ ವ್ಯಕ್ತಿ. ಈಚೀಚೆಗೆ ಅಂದರೆ ೨–೩ ವರ್ಷಗಳಿಂದ ಪಿಸುಮಾತಿನಲ್ಲಿ ಮಾತನಾಡುತ್ತಿದ್ದ.

'ಬೇಲಿಯಾಚೆ ಎಂಟು ಹತ್ತು ಜನ ಪೋಲೀಸಿನವರು ಗಸ್ತು ತಿರುಗುತ್ತಾ ಇದ್ದಾರೆ, ಮಗಾ ! ದೊಡ್ಡ ಬಾಗಿಲನ್ನು ತೆಗೀಲೇಬೇಡ. ನನ್ನ ಕೋಣೆ ಬಾಗಿಲನ್ನೂ ಭದ್ರ ಮಾಡಿದ್ದೀನಿ.' ಎಂದು ದೊಡ್ಡ ಮಗನಿಗೆ ಪಿಸುಮಾತುಗಳಲ್ಲಿ ಎಚ್ಚರಿಕೆಯನ್ನು ಕೊಡಲಾರಂಭಿಸಿದ. ದೊಡ್ಡ ಮಗನಿಗೆ ಮಾತ್ರವಲ್ಲ. ಹೀಗೆ ಎಚ್ಚರಿಕೆಯನ್ನು ಕೊಡುವುದು, ಮೂರು ನಾಲ್ಕು ವರ್ಷದ ಮನೆಯ ಮಕ್ಕಳಿಗೂ ಈ ತೆರನ ಎಚ್ಚರಿಕೆಯನ್ನು ಕೊಡುತ್ತಿದ್ದ. ದಿನಕ್ಕೆ ಏನಿಲ್ಲ ಅಂದರೂ ಐವತ್ತು ಅರವತ್ತು ಬಾರಿ ಹೀಗೆ ಎಚ್ಚರಿಕೆಯನ್ನು ಕೊಡಲಾರಂಭಿಸಿದ್ದ.

ವಯಸ್ಸು ಎಪ್ಪತ್ತಾದರೂ, ಲಕ್ಷಣವಾಗಿ ಎಂದಿನಂತೆ ಮುದ್ದೆ ಮುಗಿಸುತ್ತಿದ್ದ. ಸಾಕಷ್ಟು ನೆಲ–ಹೊಲ ಇದ್ದುದರಿಂದ, ಹಣದ ತಾಪತ್ರಯವೇನೂ ಇರಲಿಲ್ಲ. ಬೆಳೆದ ನಾಲ್ಕು ಗಂಡು ಮಕ್ಕಳು, ಹೊಲ ಗದ್ದೆಗಳ ಜವಾಬ್ದಾರಿಯನ್ನು ಹೊತ್ತು ಕೊಂಡಿದ್ದರು. ಅವಿಭಕ್ತ ಕುಟುಂಬ, ಮನೆಯಲ್ಲಿದ್ದ ಬೈತಲೆಗಳೆಲ್ಲವೂ ಅನ್ಯೋನ್ಯವಾಗಿದ್ದ ಹಳೆಯ ಕಾಲದ ಸಂಪ್ರದಾಯದ ಸಂಸಾರ. ವಿಧುರನಾಗಿದ್ದರೂ ಪಟೇಲ್ ಪುಟ್ಟಣ್ಣ, ನೆಮ್ಮದಿಯಿಂದ ಇರಬೇಕಾದ ಹಿತವಾತಾವರಣ, ಮನೆಯಲ್ಲಿ.

ಆದರೆ ಪುಟ್ಟಣ್ಣನಿಗೆ, ಅರವತ್ತು, ಅರವತ್ತೆರಡರ ವಯಸ್ಸಾದಾಗ, ಮರೆವು ಜಾಸ್ತಿಯಾಗತೊಡಗಿತ್ತು. ಎಲಡಿಕೆಯ ಚೀಲವನ್ನು ಎಲ್ಲಿಟ್ಟೆ, ಎಂದು ಹುಡುಕಿ, ಹುಡುಕಿ, ಕಡೆಗೆ ಸೊಂಟದಲ್ಲಿದೆ ಎಂದು ಕಂಡುಹಿಡಿಯುವಂತಾಯಿತು. ಆದರೂ ಜಮೀನಿನತ್ತ ಹೋಗಿಬರುತ್ತಿದ್ದ. ದಿನದ ಕೆಲಸವು ಸುವ್ಯವಸ್ಥೆಯಾಗಿ ನಡೆಯುವಂತೆ ಬಂದೋಬಸ್ತು ಮಾಡುತ್ತಿದ್ದ. ಅರ್ಧ ಶತಮಾನಕ್ಕೂ ಹೆಚ್ಚು ದಿನಗಳಿಂದ ಕೆಲಸವನ್ನು ಮಾಡಿದ ಅಭ್ಯಾಸ ಬಲದಿಂದ, ಜಮೀನಿನ ಉಸ್ತುವಾರಿಯನ್ನು ತಕ್ಕ ಮಟ್ಟಿಗೆ ಲಕ್ಷಣವಾಗಿಯೇ ನಡಸುತ್ತಿದ್ದ. ಅದನ್ನೇನೂ ಮರೆತಿರಲಿಲ್ಲ. ಅಗತ್ಯವಾದ ಸಣ್ಣಪುಟ್ಟ ವಿಷಯಗಳನ್ನು, ಆಗತಾನೇ ನಡೆದಿದ್ದರೂ, ಬಲು ಬೇಗ ಮರೆತು ಬಿಡುತ್ತಿದ್ದ. 'ಎರಡು ಎಲೆ ತಂದುಕೊಡೊ ಲಿಂಗ,' ಎಂದು ಮೊಮ್ಮಗನನ್ನು ಕೂಗಿ ಹೇಳುವ. ಒಳಕ್ಕೆ ಹೋಗಿ ಎರಡು ವೀಳೆಯದೆಲೆಯನ್ನು ಇಸುಕೊಂಡು, ಲಿಂಗ ತಂದು, 'ತೊಗೋ ಅಜ್ಜಯ್ಯ,' ಎಂದು ಕೊಟ್ಟರೆ, 'ನಾನೆಲ್ಲಿ ಎಲೆ ತಾ ಅಂದೆನೋ'

ಎಂದು ಅವನನ್ನೇ ಕೇಳತೊಡಗುತ್ತಿದ್ದ. ಪುಟ್ಟಣ್ಣಜ್ಜನಿಗೆ ಅರಳು–ಮರಳು ಎಂದು ಮೊಮ್ಮಕ್ಕಳು ಅಂದುಕೊಂಡರೂ, ಹೊರಗೆ ತೋರ್ಪಡಿಸುತ್ತಿರಲಿಲ್ಲ. ಹಿರಿಯರಲ್ಲಿ ಗೌರವವನ್ನು ತೋರಿಸುವುದು ಮನೆಮಂದಿ ಮಕ್ಕಳಲ್ಲೆಲ್ಲಾ ರೂಢಿಯಾಗಿತ್ತು.

ಮರೆವು ಅಧಿಕವಾಗತೊಡಗಿತು. ೭೮–೮೯ರ ವಯಸ್ಸಿನ ಹೊತ್ತಿಗೆ, ಪುಟ್ಟಣ್ಣನಲ್ಲಿ ಗಮನೀಯವಾದ ವ್ಯತ್ಯಾಸಗಳು ಕಂಡುಬಂದುವು. ಜಮೀನಿನತ್ತ ಹೋಗಿ ಬರುವುದು ಕಡಿಮೆಯಾಯಿತು. ಮನೆಯ ಅಂಗಳದಲ್ಲಿ ಕಂಬಕ್ಕೆ ಒರಗಿಕೊಂಡು ಕಾಲ ಕಳೆಯುವುದು ಹೆಚ್ಚಾಯಿತು. ಬಾಯಿ ತುಂಬ ಮಾತನಾಡುತ್ತಿದ್ದವನು, ಈಗ ಮಿತಭಾಷಿಯಾಗತೊಡಗಿದ್ದ. ಧ್ವನಿಯೂ ಕಡಿಮೆಯಾಗಹತ್ತಿತ್ತು. ಹಳೆಯ ದೋಸ್ತಿಗಳು ಬಂದರೂ, ಮೊದಲಿನಂತೆ ಮಾತಾಡುತ್ತಿರಲಿಲ್ಲ.

ಬರಬರುತ್ತಾ ಕೊಠಡಿಯಿಂದ ಹೊರಬರುವುದನ್ನು ಪುಟ್ಟಣ್ಣ ಕಡಿಮೆ ಮಾಡಿದ. ಆ ಸುಮಾರಿಗೆ ಸಂಶಯದ ಈ ಪಿಶಾಚಿಯು ಕಾಡತೊಡಗಿತ್ತು. 'ಪೋಲೀಸಿನವರು ನನ್ನನ್ನು ಹಿಡಿದುಕೊಂಡು ಹೋಗಲು ಮಸಲತ್ತು ಮಾಡುತ್ತಿದ್ದಾರೆ. ಹಗಲೂ ರಾತ್ರಿ ಸಮಯ ಕಾಯುತ್ತಿದ್ದಾರೆ' ಎನ್ನುವ ಸಂಶಯ ! ಯಾವ ಮಾಯದಲ್ಲಿ ಅದು ಬಡಿಯಿತೋ ಯಾರಿಗೂ ತಿಳಿಯದು. ಆದರೆ ಈ ಸಂಶಯದ ಪಿಶಾಚಿಯ ಕಾಟವು ದಿನದಿನಕ್ಕೂ ಹೆಚ್ಚುತ್ತ ಹೋಯಿತು.

ಕೊಠಡಿಯಲ್ಲಿ ಕುಳಿತು, ಕಿಟಕಿಯ ಬಾಗಿಲುಗಳನ್ನು ಭದ್ರವಾಗಿ ಹಾಕಿ, ಕಿಟಕಿಯ ಕಂಡಿಯಿಂದ ಎದುರು ಕಾಣುತ್ತಿದ್ದ ರಸ್ತೆಯನ್ನು ದುರುಗುಟ್ಟಿಕೊಂಡು ತಾಸು ತಾಸು ಕೂರುತ್ತಿದ್ದ. ದೂರದಲ್ಲಿ ಎಲ್ಲಿಂದಲಾದರೂ ಬರುತ್ತಿದ್ದಾರೆಯೇ ಎಂದು ತಿಳಿದುಕೊಳ್ಳಲು.

'ನಿನ್ನ ಹಿಡಿದುಕೊಳ್ಳೊಕ್ಕೆ ಪೋಲೀಸಿನವರು ಯಾಕೆ ಬರ್ತಾರೆ, ಅಪ್ಪಯ್ಯ ! ಅಂತಹುದೇನನ್ನು ಮಾಡಿದ್ದಿ. ಸುಮ್ಮಸುಮ್ಮನೆ ಯಾಕೆ ಹೆದರಿಕೋತಿ' ಎಂದು ಹಿರಿಯ ಮಗ ಒಮ್ಮೆ ಕೇಳಿದಾಗ.

'ನಿನಗ್ಗೊತ್ತಿಲ್ಲ, ಮಗಾ ! ಲಂಚದ ಆಸೆಗೋಸ್ಕರ ಅವರು ಬರ್ತಾರೆ. ಹೋದ ಸಲ ಅವರು ಬಂದಿದ್ದಾಗ, ನಮ್ಮ ಶಾನುಭೋಗರ ಕೈಲಿ ಗುಟ್ಟಾಗಿ ಅವರಿಗೆ ಐವತ್ತು ಸಾವಿರ ಕೊಡಿಸಿದೆ. ಆಗ ಅವರು ಹೊರಟುಹೊದರು. ತಿರುಗಿ ಬರುಕ್ಕೆ ಶುರುಮಾಡಿದ್ದಾರೆ. ಈಗ ಒಂದು ವಾರದಿಂದ ನಮ್ಮ ಮನೆ ಸುತ್ತಲೂ ಗಸ್ತು ಹೊಡೀತಿದ್ದಾರೆ. ನೀ ಹೋಗಿ ಶ್ಯಾನುಭೋಗರಿಗೆ ಹೇಳು–ನಾ ಹೇಳೀದೆ ಅಂತ ಹೇಳು. ಒಂದೋ ಎರಡೋ ಲಕ್ಷ ಕೊಟ್ಟು ಅವರನ್ನು ಸಾಗ

ಹಾಕು ಅಂತ.' ಎಂದು ಗಂಭೀರವಾಗಿ ಹೇಳಿದ. ತಾನು ಹೇಳಿದ್ದು ದಿಟ, ಅದನ್ನು ಎಲ್ಲರೂ ನಂಬುತ್ತಾರೆ ಎಂದು ಆಗ ಪುಟ್ಟಣ್ಣನಿಗೆ ಖಂಡಿತವಾಗಿತ್ತು.

ಅಪ್ಪನ ಅರಳು–ಮರಳು ವಿಪರೀತಕ್ಕಿಟ್ಟುಕೊಂಡಿದೆ. ಇವರ ಹತ್ತಿರ ಚರ್ಚೆ ಮಾಡುವುದು ಪ್ರಯೋಜನವಲ್ಲ. ಇವರಿಗೆ ಬಡಿದಿರುವ ಭ್ರಮೆಗೆ ನಾವೂ ಹ್ಞೂ ಗುಡುವುದು ಒಳ್ಳೆಯದು, ಎಂದು ಮಕ್ಕಳು ಮತ್ತು ಮನೆಯ ದೊಡ್ಡವರು ತೀರ್ಮಾನಿಸಿ, ಹಾಗೆಯೇ ನಡದುಕೊಳ್ಳಲಾರಂಭಿಸಿದರು.

ಅಪ್ಪಯ್ಯಾ ! ನೀ ಹೇಳಿದ್ದನ್ನು ಶಾನುಭೋಗರಿಗೆ ಹೇಳಿದೆ. ಅವರಾಗಲೇ ಎಂಟು ಲಕ್ಷ ಕೊಟ್ಟಾಯಿತಂತೆ. ಕಮೀಷನರಿಗೆ ನಿನ್ನೆ ಒಂದು ಲಕ್ಷ ಟೆಲಿಗ್ರಾಫ್ ಮೂಲಕ ಕಳಿಸಿದಂತೆ. ಇನ್ನು ಮೇಲೆ ಪೋಲೀಸಿನವರನ್ನು ಇಲ್ಲಿಗೆ ಕಳಿಸುವುದಿಲ್ಲ ಎಂದು ತಾರು ಮೂಲಕ ಉತ್ತರವೂ ಬಂದಿದೆಯಂತೆ' ಎಂದು ದೊಡ್ಡ ಮಗ, ನಿರ್ವಿಕಾರವಾಗಿ ಹೇಳಿದಾಗ, 'ನಂಗೊತ್ತಿತ್ತು ಮಗಾ ! ಲಂಚಕ್ಕೇ ಅವರು ಬರೋದು ಅಂತ' ಎಂದು ಪುಟ್ಟಣ್ಣನೂ ಹೇಳಿದ.

ಇದೇ ಅಭ್ಯಾಸವು ಮುಂದುವರೆಯಿತು. ಪೋಲೀಸರು ಹೊಂಚು ಹಾಕುತ್ತಿದ್ದಾರೆ ಎಂದು ಪುಟ್ಟಣ್ಣ ಹೇಳಿದರೆ, ಶಾನುಭೋಗರ ಕೈಲಿ ಈಗಲೇ ಲಂಚ ಕೊಡಿಸುತ್ತೇನೆ ಎಂದು ಮಗ ಸಮಾಧಾನ ಮಾಡುತಿದ್ದ. ಒಂದು ವಾರದಲ್ಲಿ ಶಾನುಭೋಗರು ಕೊಟ್ಟ ಲಂಚವು ಮೂವತ್ತು ಲಕ್ಷವನ್ನೂ ಮೀರಿತ್ತು.

ಇದೊಂದು ಸಂಶಯವನ್ನು ಬಿಟ್ಟರೆ, ಮಿಕ್ಕ ಎಲ್ಲಾ ಅರುಳು ಮರುಳಿನ ಮುದುಕರಂತೆಯೇ ಪುಟ್ಟಣ್ಣ ಇರುತ್ತಿದ್ದ. ಊಟ ಉಪಚಾರದಲ್ಲಿ ಮೋಸವನ್ನು ಮಾಡಿಕೊಳ್ಳುತ್ತಿರಲಿಲ್ಲ. ಮಾನ ಮರ್ಯಾದೆಯಿಂದ ನಡೆದುಕೊಳ್ಳುತ್ತಿದ್ದ. ಆದರೆ ಮರೆವು ಹೆಚ್ಚಾದುದರಿಂದ ಹೇಳಿದ್ದನ್ನೇ ಹೇಳುವುದು ; ಎಂದಿನ ಕಾಲದ ಮಾತುಗಳನ್ನೇ ಆಡುವುದು. ಇವೆಲ್ಲವೂ ಅತಿಯಾದುವು.

ಮುಪ್ಪು ಬಂದಾಗ, ಕೂದಲು ನರೆತು ಬಿದ್ದುಹೋಗುವಂತೆ, ಚರ್ಮವು ಸುಕ್ಕುಗಟ್ಟಿ ಕಾಂತಿಹೀನವಾಗುವಂತೆ, ಕಿವಿಯು ಮಂದವಾಗುವಂತೆ, ದೃಷ್ಟಿಯು ಅಸ್ಪಷ್ಟವಾಗುವಂತೆ, ಮೆದುಳಿನ ಕೆಲವು ಭಾಗಗಳೂ ಶಿಥಿಲವಾಗತೊಡಗುತ್ತವೆ. ಆಗ ಹಿಂದಿನ ಚಾಕಚಕ್ಯತೆಯನ್ನು ಮನಸ್ಸು ಅನಿವಾರ್ಯವಾಗಿ ಕಳೆದುಕೊಳ್ಳುತ್ತದೆ. ಹಳೆಯ ಸ್ಮರಣೆಯು ಹಸಿರಾಗಿ ಉಳಿದರೂ, ಹೊಸಹೊಸದಾದ ನೆನಪುಗಳು ಮರೆಯಲ್ಪಡುತ್ತವೆ.

ಮುಪ್ಪು ಬಂದಾಗ ಎಂದರೆ, ಪಂಚಾಂಗದ ಪ್ರಕಾರ ಇಂತಿಷ್ಟು ವಯಸ್ಸು ಎಂದೇನಲ್ಲ. ಮುಪ್ಪಿಗೂ ವಯಸ್ಸಿಗೂ ನಿಕಟವಾದ ನೇರ ಸಂಬಂಧವು ಇಲ್ಲ.

ಅರವತ್ತರ ಸುಮಾರಿಗೆ ಅರುಳು ಮರುಳು ಬಡಿಯಬಹುದು. ೮೦ ರ ಮುದುಕನಿಗೆ ಮನಸ್ಸು ಚುರುಕಾಗಿಯೇ ಇರಬಹುದು. ಅಲ್ಲದೆ ದೇಹದ ವಿವಿಧ ಭಾಗಗಳೂ ಬೇರೆ ಬೇರೆ ಪ್ರಮಾಣದಲ್ಲಿ ಮುಪ್ಪಾಗುತ್ತವೆ. ಮೆದುಳಿನ ವಿವಿಧ ಭಾಗಗಳು ಕೂಡ ಬೇರೆ ಬೇರೆ ಪ್ರಮಾಣದಲ್ಲಿ ಮುಪ್ಪಾಗುತ್ತವೆ.

ಯೋಚನೆಗೆ ಮೀಸಲಾದ, ಸ್ಮರಣೆಗೆ ಸಂಬಂಧಪಟ್ಟ, ಮೆದುಳಿನ ಭಾಗಗಳು ಪುಟ್ಟಣ್ಣನಲ್ಲಿ ಮುಪ್ಪಿನಿಂದ ತುಂಬಾ ಶಿಥಿಲವಾಗಿದ್ದುವು. ಹೀಗೆ ಶಿಥಿಲವಾಗಲು ರಕ್ತದ ಒತ್ತಡವು ಮೆದುಳಿನಲ್ಲಿ ಅತಿಯಾಗಿ, ರಕ್ತನಾಳಗಳು ಸೆಡೆದುಕೊಂಡು, ರಕ್ತ ಸಂಚಾರಕ್ಕೆ ಅಡಚಣೆಯಾಗುವುದು ಒಂದು ಕಾರಣ. ಮೆದುಳಿಗೆ ತಾಕುವ ಇತರ ಕಾಯಿಲೆಗಳೂ ಕಾರಣಗಳಾಗಬಹುದು. ಮೆದುಳಿನಲ್ಲಿ ಬೆಳೆಯುವ ಕೆಲವು ಗಡ್ಡೆಗಳೂ, ಮೊದಮೊದಲ ಹಂತದಲ್ಲಿ ಈ ತೆರನ ನಡವಳಿಕೆಗೆ ಕಾರಣವಾಗ ಬಹುದು.

ಪುಟ್ಟಣ್ಣನ ಮೆದುಳಿನಲ್ಲಿ ಸಾಮಾನ್ಯವಾದ ಮುಪ್ಪಿನಿಂದಾದ ಶಿಥಿಲತೆಯು ಉಂಟಾಗಿತ್ತು. ಆಗ ಮಹಾ ಭ್ರಮೆಯೊಂದು, ಸಂಶಯದ ಪಿಶಾಚಿಯಾಗಿ ಅವತರಿಸಿ ಕಾಡತೊಡಗಿತ್ತು. ಹೊಟ್ಟೆಗೆ ಸಾಕಷ್ಟು ಇರದ ಶ್ಯಾನುಭೋಗನು ಮೂವತ್ತು ಲಕ್ಷ ರೂಪಾಯಿಗಳನ್ನು ಲಂಚವಾಗಿ ಕೊಟ್ಟ ಎನ್ನುವುದನ್ನೂ ನಂಬುವಷ್ಟು ಮೆದುಳಿನ ಒಂದು ಭಾಗವು ಶಿಥಿಲವಾಗಿತ್ತು. ಆದುದರಿಂದ ವಿವೇಚನಾ ಶಕ್ತಿಯು ಸಾಕಷ್ಟು ನಾಶವಾಗಿತ್ತು.

ಪುಟ್ಟಣ್ಣನ ಸಂಶಯ ಪಿಶಾಚಿಯು ಒಂದು ಭ್ರಮೆಯೇ ! ಬ್ರಹ್ಮಯ್ಯನ ನಕ್ಷತ್ರಿಕನೂ, ಕಲ್ಲಪ್ಪನ ಕರ್ಣಪಿಶಾಚಿಗಳೂ, ಯಾವ ರೀತಿಯಲ್ಲಿ ನರಳಿಸಿದವೋ ಅದೇ ರೀತಿಯಲ್ಲಿ ಪುಟ್ಟಣ್ಣನ ಸಂಶಯ ಪಿಶಾಚಿಯೂ ಕಾಡುತ್ತಿತ್ತು. ಆದರೆ ಮೊದಲೆರಡರಲ್ಲಿ ಮಾನಸಿಕ ಅವ್ಯವಸ್ಥೆಯಿಂದ ಹಾಗಾಗಿತ್ತು. ಪುಟ್ಟಣ್ಣನಲ್ಲಿ ಮೆದುಳಿನ ಶಿಥಿಲತೆಯಿಂದ ಆಗಿತ್ತು. ಒಂದೇ ತೆರನ ಅಂತಿಮ ಪರಿಣಾಮವು ವಿಭಿನ್ನವಾದ, ವಿಧವಿಧವಾದ ಕಾರಣಗಳಿಂದ ಉಂಟಾಗುವುದು ಸಾಮಾನ್ಯ.

**ಪ್ಯಾರನಾಯ್ಡ್ ಭ್ರಮೆಗಳು**

ಪ್ಯಾರನಾಯ್ಡ್ ಅವಸ್ಥೆಯನ್ನು ಅನುಭವಿಸುತ್ತಿರುವವರಿಗೆ, 'ಇದು ಕೇವಲ ಭ್ರಮೆಯಯ್ಯಾ ! ವಾಸ್ತವಿಕವಾಗಿ ಸುಳ್ಳು' ಎಂದು ಹೇಳಿದ ಮಾತ್ರಕ್ಕೆ ಅವರ ನರಳುವಿಕೆಯು ತಪ್ಪುವುದಿಲ್ಲ. ಭ್ರಮೆಗಳು ಹೇಗೆ ಹುಟ್ಟಿದುವು, ಯಾಕೆ ಹುಟ್ಟಿದುವು, ಎಂಬುದನ್ನು ತಿಳಿದುಕೊಂಡರೆ ನಂತರ ಅವುಗಳ ಉಚ್ಚಾಟನೆಯನ್ನು ಮಾಡಲು

ಸಾಧ್ಯವಾಗಬಹುದು. ಇಂದಿನ ವೈಜ್ಞಾನಿಕ ಹಂತದಲ್ಲಿ, ಕಾರಣಗಳು ಸ್ಪಷ್ಟವಾಗಿಲ್ಲವಾದರೂ, ಹೀಗಿರಬಹುದು ಎಂದು ಊಹಿಸಲು ಸಾಕಷ್ಟು ಸಾಕ್ಷ್ಯಗಳಿವೆ.

ಆದಿಮಾನವನು ಯೋಚನೆಯನ್ನು ಮಾಡಲು ಆರಂಭಿಸಿದಾಗ ಊಹಿಸುವುದನ್ನೂ ಪ್ರಾರಂಭಿಸಿದ. ತಾನು ಕಂಡುದೊಂದು ವಿಷಯವನ್ನು ವಿಶ್ಲೇಷಿಸಿ, ಈ ಕಾರಣಗಳಿಂದ ಆಗಿರಬಹುದು ಎಂದು ತೀರ್ಮಾನಿಸುವುದು ಒಂದು ಊಹೆಯೇ ! ಊಹಿಸಿದುದು ಸರಿ ಎನ್ನುವುದನ್ನು ಪ್ರಯೋಗಗಳನ್ನು ನಡಸಿ ಖಚಿತಮಾಡಬೇಕು. ಇದೇ ವಿಜ್ಞಾನದ ಸಾಮಾನ್ಯ ಕಾರ್ಯಕ್ರಮ. ಅನಂತರ ಮೊದಲಿನ ಊಹೆಯು ಸಿದ್ಧಾಂತವೆನಿಸಿಕೊಳ್ಳುತ್ತದೆ. ಪ್ರಗತಿಯನ್ನು ಮನಸ್ಸು ಸಾಧಿಸಿದಂತೆಲ್ಲ, ವೈಜ್ಞಾನಿಕ ಪ್ರಯೋಗಗಳು ಸೂಕ್ಷ್ಮವೂ ಮಹತ್ತರವೂ ಆಗುತ್ತವೆ. ಆನಂತರ ಊಹಿಸುವ ಪ್ರವೃತ್ತಿಯೂ ಹರಿತವಾಗುತ್ತದೆ. ಅದಕ್ಕೆ ಅವಕಾಶವೂ ವಿಫುಲವಾಗುತ್ತದೆ. ಈ ಎಲ್ಲ ಹಂತಗಳಲ್ಲಿಯೂ ಏಕಸೂತ್ರವಾಗಿರುವುದು, ಸ್ಫೂರ್ತಿಯ ಊಹೆ, ಅನುಮಾನಿಸುವುದು.

ಇದೇ ಮಾನವ ವರ್ಗದ, ಸಂಘ ಜೀವನದ ನಾಗರಿಕತೆಯನ್ನು, ನಾಂದಿಯನ್ನು, ನಮ್ಮದೇಶದಲ್ಲಿನ ವೇದಗಳ ಕಾಲದ ಋಷಿಗಳು ನುಡಿದರು ಎಂದನ್ನಬಹುದು. ಸಕಾಲದಲ್ಲಿ ಮಳೆಯು ಬಿದ್ದರೆ ಸಾಕಷ್ಟು ಬೆಳೆಯು ಲಭಿಸುವುದು ಎಂಬುದನ್ನು ಪ್ರತ್ಯಕ್ಷವಾಗಿ ಕಂಡರು. ಹೆಪ್ಪುಗೂಡಿದಂತಿದ್ದ ಕಾರ್ಮೋಡಗಳು ನೈರುತ್ಯದಲ್ಲಿ ಕಾಣಿಸಿದರೆ, ಖಂಡಿತವಾಗಿ ಮಳೆ ಬೀಳುತ್ತದೆ ಎಂಬುದನ್ನು ಅನುಭವದಿಂದ ಅರಿತಿದ್ದರು. ಅಂದಿನ ಸನಾತನ ಸಮಾಜದಲ್ಲಿ, ಕಂಡ ವಿಷಯವನ್ನು ವಿಚಾರದ ಒರೆಗೆ ಹಚ್ಚುವ ಪ್ರವೃತ್ತಿಯು ಕೆಲವು ಮನನಿಗರಿಗೆ ಮಾತ್ರ ಮೀಸಲಾಗಿತ್ತು. ಅವರೇ ಋಷಿಗಳು. ಇಂದೂ ಹಾಗೆಯೇ ಅನ್ನಿ. ಮನನಿಗ ಅಲ್ಪಸಂಖ್ಯಾತರಿಂದಲೇ ಮಾನವ ಕುಲದ ಪ್ರಗತಿಯ ನಾಂದಿಯು ಹಾಡಲ್ಪಡುವುದು.

ತಾವು ಕಂಡುದನ್ನು ವಿಚಾರಮಾಡಿ, ಹೀಗಾಗಿರಬಹುದು ಎಂದು ಅನುಮಾನಿಸಿದರು. ಸಮಾಜದ ಸಾಮಾನ್ಯರಿಗೆ, ವಿಚಾರಮಾಡುವ ಯೋಗ್ಯತೆ ಇಲ್ಲದವರಿಗೆ, ಈ ವಿಷಯವನ್ನು ತಿಳಿಸುವ ಬಗೆ ಎಂತು? ಕತೆ ಎಂದರೆ ಸಾಮಾನ್ಯರಿಗೆ ಬಲು ಪ್ರಿಯ. ಕತೆಯ ಪ್ರಕಾರವನ್ನು ಋಷಿಗಳು ಬಳಸಿಕೊಂಡರು. ಕತೆ ಹೇಳಿದರು.

ಕತೆಯ ಹರವನ್ನೂ, ಅದರ ಹಿಂದೆ ಅಡಗಿರುವ ಅನುಭವಾಂಶಗಳ ಸತ್ಯತೆಯನ್ನೂ ಇಂದು ಸುಲಭವಾಗಿ ಗುರುತಿಸಬಹುದು. ಆದರೆ ಇಂದು ಕೂಡ ವೈಜ್ಞಾನಿಕರು ನಕ್ಷತ್ರಗಳ ವಿಷಯದಲ್ಲಾಗಲೀ ನಭೋಮಂಡಲದಲ್ಲಿರುವ ಇತರ

ಶಕ್ತಿ ಸಮೂಹಗಳನ್ನಾಗಲೀ ನಿಖರವಾಗಿ ಅರಿತಿಲ್ಲ. ದೊರೆತ ಹಲ ಕೆಲವು ಸಾಕ್ಷ್ಯಗಳಿಂದ ಅವುಗಳ ಸ್ವರೂಪವು ಹೀಗೆ ಹೀಗೆ ಇರಬಹುದು ಎಂದು ಊಹಿಸುತ್ತಾರೆ. ಹೀಗೂ ಇರಬಹುದೋ ಎಂದು ಅನುಮಾನಿಸುತ್ತಾರೆ. ಪೂರ್ಣವಾಗಿ ನಿರ್ಧಾರವಾಗುವನಕ, ವೈಜ್ಞಾನಿಕನು ತಾನು ಅನುಮಾನಿಸಿದುದರ ಬೆಂಬೊತ್ತುತ್ತಲೇ ಇರುತ್ತಾನೆ. ಆದಕಾರಣ, ಪ್ರತ್ಯಕ್ಷ ಪ್ರಮಾಣದಂತೆ ಅನುಮಾನ ಪ್ರಮಾಣವನ್ನೂ, ಅರಿವಿಗೆ ಆಧಾರ ಎಂದು ಹಿರಿಯ ಮನನಿಗರು ಅಂದಿರುವುದು.

ಅಂದರೆ, ಊಹಿಸುವ, ಅನುಮಾನಿಸುವ ಪ್ರವೃತ್ತಿಯು ಮಾನವ ಸಹಜವಾದುದು ; ಅಗತ್ಯವೂ ಆದುದು ಎಂದಂತಾಯಿತು. ಊಹಿಸುವ ಪ್ರವೃತ್ತಿಯು ವಿಜ್ಞಾನದಲ್ಲಿ ಅಗತ್ಯವಾದಂತೆ, ಮಾನವನ ನಡವಳಿಕೆಯಲ್ಲಿಯೂ ಕಂಡುಬರುತ್ತದೆ. ಉದಾಹರಣೆಗೆ :–

ಯಾವುದಾದರೂ ಒಂದು ಸಭೆಗೆ ಸ್ವಲ್ಪ ತಡವಾಗಿ ಹೋದರೆ, 'ಎಲ್ಲರೂ ನನ್ನನ್ನೇ ನೋಡುತ್ತಾರೆ' ಎಂಬ ಅನುಮಾನವು ಬಹಳ ಜನರಲ್ಲಿ ಉಂಟಾಗುತ್ತದೆ. ಮೂಲೆಯಲ್ಲಿ ಹೋಗಿ ಮರೆಯಾಗಿ ಕೂರಲೆತ್ನಿಸುತ್ತಾರೆ. ಇನ್ನು ಕೆಲವರಲ್ಲಿ ಇಂತಹ ಅನುಮಾನವು ಅವರಿಗೆ ಸುಖ ಕೊಡುತ್ತದೆ. ನಾನು ದೊಡ್ಡ ಮನುಷ್ಯ, ಗಣ್ಯ, ಆದ್ದರಿಂದ ಎಲ್ಲರೂ ಗೌರವದಿಂದ, ಅಸೂಯೆಯಿಂದ ನೋಡುತ್ತಾರೆ ಎಂದು ಊಹಿಸುತ್ತಾರೆ. ಅಂತಹ ಪ್ರವೃತ್ತಿ ಇದ್ದವರು ಠೀಕಾಗಿ ನಡೆದು ಮುಂದಿನ ಸಾಲುಗಳಲ್ಲಿ ಸ್ಥಾನವನ್ನು ಹಿಡಿಯಹೋಗುತ್ತಾರೆ.

ಹತ್ತೂ ಜನರು ಮಾತನಾಡುತ್ತಿರುವ ಮದುವೆಯ ಮಂಟಪಕ್ಕೆ ಹೋದಾಗ; ಅವರೆಲ್ಲರೂ ಮಾತನಾಡುವುದನ್ನು ನಿಲ್ಲಿಸಿದರೆ, ನನ್ನ ವಿಷಯವನ್ನೇ ಮಾತನಾಡುತ್ತಿದ್ದಿರಬೇಕು ; ಎಂದು ಊಹಿಸುವುದೂ ಸುಮಾರು ಜನರ ಲಕ್ಷಣ.

ವೇಳೆಯಾದುದರಿಂದ ಮುಖಕ್ಷೌರವನ್ನು ಎಂದಿನಂತೆ ಮಾಡಿಕೊಳ್ಳದೇ ಕಾಲೇಜಿಗೆ ಹೋದ ಅಧ್ಯಾಪಕನು 'ವಿದ್ಯಾರ್ಥಿಗಳೆಲ್ಲರೂ ನನ್ನ ಮುಖವನ್ನು ನೋಡಿ ಒಳಗೊಳಗೇ ನಗುತ್ತಾರೆ' ಎಂದಂದುಕೊಳ್ಳುವುದೂ ಸಾಮಾನ್ಯ.

ಇಂತಹ ಊಹೆಗಳೆಲ್ಲವೂ ಕ್ಷಣಿಕವಾದುವು. ಸ್ವಲ್ಪ ಸಮಯದಲ್ಲಿ ಮಾಯವಾಗುತ್ತದೆ. ಹಾಗೂ ಊಹೆಯು ತಲೆದೋರಿದಾಗಲೂ, ಇದು ನನ್ನ ಮನಸ್ಸಿನ ಭ್ರಮೆಯಾಗಿದೆ ಎನ್ನುವ ಅರಿವು ಇದ್ದೇ ಇರುತ್ತದೆ.

ಪ್ಯಾರನಾಯ್ಡ್ ರೋಗಿಗಳಲ್ಲಿ ಇಂತಹ ಊಹೆಗಳು ಕ್ಷಣಿಕವಾಗಿರದೆ ಭದ್ರವಾಗಿ ಬೇರೂರಿ ಬೆಳೆಯುತ್ತವೆ. ದೃಢವಾದ ಇಂತಹ ಅನುಮಾನಗಳು, ತಕ್ಕ ಪ್ರತಿಕ್ರಿಯೆಯನ್ನು ನಡಸುವಂತೆ, ಮನಸ್ಸನ್ನು ಒತ್ತಾಯಪಡಿಸುತ್ತವೆ. ಪೋಲೀಸಿನವರು

ಕಿರುಕುಳವನ್ನು ಕೊಡುತ್ತಾರೆ ಎಂದು ಅರ್ಜಿಗಳನ್ನು ಪುಂಖಾನುಪುಂಖವಾಗಿ ಬರೆಯುವಂತೆ ಮಾಡುತ್ತವೆ. ಬಾಗಿಲು ಕಿಟಕಿಗಳನ್ನು ಭದ್ರಮಾಡಿ, ಕಿಂಡಿಯಲ್ಲಿ ಕಣ್ಣಲ್ಲಿ ಕಣ್ಣಿಟ್ಟುಕೊಂಡು ನೋಡುವಂತೆ ಮಾಡುತ್ತದೆ. ಅಸಾಮಾನ್ಯವಾದ ಇಂತಹ ನಡವಳಿಕೆಯು ಕಾಣಬಂದಾಗ, ಪ್ಯಾರನಾಯ್ಡ್ ಅವಸ್ಥೆಯು ಬಂದಿದೆ ಎನ್ನುತ್ತಾರೆ.

ಮಾನವ ಸಹಜವಾದ ಊಹಾ ಪ್ರವೃತ್ತಿಯು, ಕಲ್ಲಪ್ಪನಲ್ಲಾಗಲೀ, ಬ್ರಹ್ಮಯ್ಯನಲ್ಲಾಗಲೀ ರೋಗದ ಮಟ್ಟಕ್ಕೆ ಏಕೆ ಏರಿತು ?

ಇಂತಹವರ ಮನಸ್ಸಿನಲ್ಲಿ ಅಲ್ಲೋಲಕಲ್ಲೋಲವು ಆಗುತ್ತಿರುತ್ತದೆ. ಯಾಕೆ, ಏನು ಎಂಬುದು ಅವರಿಗೆ ತಿಳಿದಿರುವುದಿಲ್ಲ ; ಇವೆಲ್ಲವೂ ಆಳಮನಸ್ಸಿನ ಬುಡವನ್ನೇ ಅಳ್ಳಾಡಿಸುತ್ತವೆ, ತೋರಮನಸ್ಸಿಗೆ ಕಾರಣಗಳು ತಿಳಿಯುವುದಿಲ್ಲ. ವಿಚಾರವನ್ನು ಮಾಡುವ, ಯೋಚನೆಯನ್ನು ಗೈಯುವ ಮೆದುಳಿನ ಭಾಗವು, The cortex ಸಾಕಷ್ಟು ಆರೋಗ್ಯವಾಗಿಯೇ ಇರುತ್ತದೆ. ಆದುದರಿಂದ ಅವರುಗಳು, ಪ್ಯಾರನಾಯ್ಡ್ ಭ್ರಮೆಗೆ ತಕ್ಕಂತೆ ಕೆಲಸ ಮಾಡುವಾಗ, ಉದಾ : ಅರ್ಜಿಗಳನ್ನು ಗುಜರಾಯಿಸುವಾಗ, ನಂಬುವಂತಹ ಕಾರಣಗಳನ್ನು ವೈನವಾಗಿತ್ತು, ಸಮಂಜಸವಾದ ಲಕ್ಷಣವಾದ ಅರ್ಜಿಗಳನ್ನು ಬರೆಯುತ್ತಾರೆ. ಇಷ್ಟು ವಿಚಾರಪೂರಿತವಾಗಿ ಬರೆಯಬಲ್ಲವರಿಗೆ ಮನಸ್ಸು ಅಚ್ಚುಕಟ್ಟಾಗಿರದೆ ಇರಲು ಸಾಧ್ಯವೇ ? ಎಂದು ಇವರನ್ನು ಕಂಡವರು ಅಚ್ಚರಿಪಡಬೇಕಾಗುತ್ತದೆ.

ಆಳ ಮನಸ್ಸಿನ ತೀವ್ರ ಅಲ್ಲೋಲಕಲ್ಲೋಲದಿಂದಾಗಿ, ಮುಂದೆ ಇತರ ಮಾನಸಿಕ ಬೇನೆಗಳೂ ಉಂಟಾಗಬಹುದು. ಪ್ಯಾರನಾಯ್ಡ್ ಪ್ರತಿಕ್ರಿಯೆಗಳು, ಅಂತಹ ಬೇನೆಗಳಿಗೆ ಮುನ್ಸೂಚಿಯಾಗುತ್ತವೆ. ಪಟೇಲ್ ಪುಟ್ಟಣ್ಣನಲ್ಲಿ ಆದಂತೆ ಮೆದುಳಿನ ಶಿಥಿಲತೆಯನ್ನೂ ಕಾಣಿಸಬಹುದು.

ಇಂತಹ ರೋಗಿಗಳು, ತಮ್ಮ ನರಳುವಿಕೆಯನ್ನು ಇತರರಿಗೆ ತಿಳಿಯದೆ ಇರುವಂತೆ ಸಾಧಿಸುತ್ತಾರೆ. ಸ್ವಲ್ಪ ಕಾಲ, ವಿಚಾರ ಮಾಡುವ ಮನಸ್ಸು ಅಣಿಯಾಗಿರುವುದರಿಂದ ಇದು ಸಾಧ್ಯ. ಆದರೆ ವಿಚಿತ್ರ ವರ್ತನೆಯು ವಿಪರೀತವಾದಾಗ, ಮುಚ್ಚಿಡುವುದು ಅಸಾಧ್ಯ. ಹಾಗಾದಾಗ ಚಿಕಿತ್ಸೆಯೂ ಕಠಿಣ, ಸಫಲವಾಗಲಾರದು. ಆದುದರಿಂದ ಅಂತಹವರನ್ನು, ಅವರ ಮನೆಯವರು, ನಿಕಟ ಸಂಬಂಧವನ್ನು ಹೊಂದಿದ ಗೆಳೆಯರು, ವಿಚಿತ್ರ ವರ್ತನೆಯು ವಿಪರೀತವಾಗತೊಡಗಿದ ಮೊದ ಮೊದಲ ಹಂತದಲ್ಲಿ ಗುರುತಿಸಿ ಸೂಕ್ತ ಚಿಕಿತ್ಸೆಯನ್ನು ಮನಃಶಾಸ್ತ್ರಜ್ಞರಿಂದ, ಸಕಾಲದಲ್ಲಿ ಮಾಡಿಸಿದರೆ ಗುಣಪಡಿಸಲು ಸಾಧ್ಯ.

# ೩. ಹಿಸ್ಟಿರಿಯಾ ಪ್ರದರ್ಶನಗಳು

**ಕನಕವಲ್ಲಿಯ ಗಂಟಲ ಬೇನೆ**

'ಉಕ್ರು, ಉಕ್ರೂ, ಕ್ರೋ' ಎಂದು ನಿಮಿಷಕ್ಕೆ ಇಪ್ಪತ್ತು ಬಾರಿ ಕರ್ಕಶ ಸದ್ದನ್ನು ಹೂಡುತ್ತಾ ಅತಿ ಪ್ರಯಾಸದಿಂದ ಉಸಿರನ್ನು ಎಳೆದು ಬಿಡುತ್ತಿದ್ದ ರೋಗಿಯನ್ನು, ಇಬ್ಬರು ಹಿರಿಯ ಮುತ್ತೈದೆಯರು ಮತ್ತೊಬ್ಬ ಗಂಡಸು, ಹಿಡಿದುಕೊಂಡು ನಡೆಸುತ್ತಾ, ಕರೆತಂದರು. ರೋಗಿಗೆ ಸುಮಾರು ಮೂವತ್ತರ ಪ್ರಾಯ. ತಕ್ಕ ಮಟ್ಟಿಗೆ ಮಜಭೂತಾಗಿ ಬೆಳೆದ ರೋಗಿಯ ಮುಖದಲ್ಲಿ ಕಾತರದ ಕಳೆಯಿತ್ತು.

ಈ ರೀತಿ ಉಸಿರು ಕಟ್ಟಿಕೊಂಡು, ಕರ್ಕಶ ಶಬ್ದ ಮಾಡುತ್ತಾ ಹೊರಬರ ಬೇಕಾದರೆ, ಗಂಟಲಿನಲ್ಲಿ ಯಾವುದಾದರೂ ಅಡಚಣೆಯಿರಬೇಕು. ಒಳಕ್ಕೆ ಉಸಿರು ಸುಲಭವಾಗಿ ಹೋಗಿ, ಹೊರಕ್ಕೆ ಬರುವಾಗ ಅಡಚಣೆಯಾದರೆ ಸಿರ್ ಗುರ್ ಅಂತ ಬೆಕ್ಕುಗಳು ಕಾದಾಡಿದ ಸದ್ದು ಕೇಳಿಸುತ್ತದೆ. ಉಬ್ಬಸ ರೋಗದಲ್ಲಿ ಹೀಗಾಗುವುದು ಸಾಮಾನ್ಯ. ಒಳಕ್ಕೆಳೆದುಕೊಳ್ಳಬೇಕಾದರೆ, ತೊಂದರೆಯಾದರೆ ಆಗ ಡಿಫ್ತಿರಿಯಾ ಅಥವಾ ಬೇರೆ ಯಾವುದಾದರೂ ವಸ್ತುವು ಗಂಟಲಿನಲ್ಲಿ ಅಥವಾ ಶ್ವಾಸಮಾರ್ಗಗಳಲ್ಲಿ ಸಿಕ್ಕಿಕೊಂಡು ಕಾಟ ಕೊಡುತ್ತಿದೆ, ಎಂದು ನಿರ್ಧರಿಸಬೇಕು. ಇಂತಹ ಅವಸ್ಥೆಯು ತೀವ್ರ ಅಪಾಯಕಾರಿಯಾದುದು. ತುರ್ತಾಗಿ ಪರೀಕ್ಷೆಮಾಡಿ ನೋಡಬೇಕು. ಆದುದರಿಂದ ರೋಗಿಯನ್ನು ತತ್‌ಕ್ಷಣ ಒಳಕ್ಕೆ ಕರೆದುಕೊಂಡು ಹೋಗಿ ಗಂಟಲು ಮತ್ತು ಶ್ವಾಸನಾಳಗಳನ್ನು ಪರೀಕ್ಷೆ ಮಾಡಿದೆ. ಯಾವ ಅಡಚಣೆಯೂ ಇರಲಿಲ್ಲ. ರೋಗಿಯ ಮುಖವನ್ನೂ, ಆಕೆಯ 'ಕ್ರೂ ಉಕ್ರೂ ಕ್ರೋ' ಪ್ರದರ್ಶನವನ್ನು ನೋಡಿದಾಗಲೇ ಇದು ಹಿಸ್ಟೀರಿಯಾ ತರಹದ್ದು ಎಂದು ತಿಳಿದಿತ್ತು. ಆದರೂ ವಿವರವಾಗಿ ಪರೀಕ್ಷೆಯನ್ನು ಮಾಡಿದರೆ, ರೋಗಿಯ ಮನಸ್ಸಿಗೆ ತೃಪ್ತಿಯಾಗುತ್ತದೆ. ಹಾಗೂ ಆಕೆಯ ಜತೆ ಬಂದಿದ್ದವರಿಗೆ ಸಮಾಧಾನವಾಗುತ್ತದೆ. ಆದುದರಿಂದಲೇ ಪರೀಕ್ಷೆಯನ್ನು ನಡೆಸಿದ್ದುದು. ಹೀಗೆ ಪರೀಕ್ಷೆಯನ್ನು ಮಾಡುವುದು, ಚಿಕಿತ್ಸೆಯ ಒಂದು ಹಿರಿಯ ಅಂಶವು ಕೂಡ. ಆಕೆಯ ಜತೆಯಲ್ಲಿ ಬಂದಿದ್ದ ಮುತ್ತೈದೆಯರು ತುಂಬ ಕಾತರರಾಗಿದ್ದರು.

ಪರೀಕ್ಷೆಯಾದನಂತರ, 'ಏನೂ ಗಾಬರಿಯಿಲ್ಲವೇ, ಡಾಕ್ಟರೇ ! ಪ್ರಾಣಕ್ಕೇನೂ ಅಪಾಯವಿಲ್ಲವೇ ?' ಎಂದು ಕೇಳಿದರು. 'ಅಂತಹುದೇನೂ ಇಲ್ಲಮ್ಮಾ ! ಜೀವಕ್ಕೆ ಏನೂ ಅಪಾಯವಿಲ್ಲ' ಎಂದು ಭರವಸೆಯನ್ನು ಇತ್ತಾಗ ಅವರಿಗೂ ಸಮಾಧಾನವಾದಂತೆ ಕಂಡಿತು. ಜೊತೆಯಲ್ಲಿ ಬಂದಿದ್ದ ಗಂಡಸು ಅಷ್ಟು ಕಾತರನಾಗಿರದಿದ್ದರೂ, ತುಸು ಬೇಸರಪಟ್ಟವನಂತೆ ಕಾಣುತ್ತಿದ್ದ. ಆದುದರಿಂದ ಅವನೇ ಈಕೆಯ ಗಂಡನಿರಬೇಕು ಎಂದುಕೊಂಡೆ. ಆಮೇಲೆ ಒಬ್ಬರೇ ಬನ್ನಿ ನಿಮ್ಮ ಹತ್ತಿರ ಮಾತನಾಡಬೇಕು 'ಎಂದು ಗುಟ್ಟಾಗಿ ಅವನಿಗೆ ಹೇಳಿದೆ.

'ಉಕ್ರೂ, ಕ್ರೂ, ಕ್ರೋ,' ಹೀಗೆ ಬಿಕ್ಕುತ್ತಿದ್ದಾಕೆಯು ಮೂರು ಮಕ್ಕಳ ತಾಯಿ. ಕನಕವಲ್ಲಿಯು ಇಂಟರ್‌ಮೀಡಿಯೇಟ್ ಪರೀಕ್ಷೆಯನ್ನು ಪಾಸು ಮಾಡಿದ್ದಳು. ಆದರೆ ಹೈಸ್ಕೂಲಿನಲ್ಲಿದ್ದಾಗಲೇ ತಂದೆ ತಾಯಿಯರು ಹೇಳಿದಂತೆ ಕೇಳಿ ಪುರೋಹಿತನ ಮಗನನ್ನು ಮದುವೆಯಾಗಿದ್ದಳು. ಓದುವುದಕ್ಕೆ ಇಷ್ಟವಿದ್ದರೆ ಓದಲಿ ಎಂದು ಪುರೋಹಿತ ಗಂಡ ಒಪ್ಪಿಗೆಯನ್ನಿತ್ತಿದ್ದ. ಆದರೆ ಇಂಟರ್ ಮೀಡಿಯಟ್ ಪರೀಕ್ಷೆಗೆ ಕೂರುವ ಹೊತ್ತಿಗೆ, ಕನಕವಲ್ಲಿಯ ಮಾವನವರು ತೀರಿಕೊಂಡಿದ್ದರು. ಅವರು ಬಿಟ್ಟು ಹೋದ ಆಸ್ತಿಯೆಲ್ಲಾ ದರ್ಭೆ ಸಮಿತ್ತು. ಬೇರೆ ಮಾರ್ಗವಿಲ್ಲದೆ ಮಗ ತಂದೆಯ ಕಸುಬನ್ನು ಮುಂದುವರೆಸತೊಡಗಿದ. ಸಣ್ಣದೊಂದು ಅಂಗಡಿಯನ್ನಿಟ್ಟುಕೊಂಡು ವ್ಯಾಪಾರವನ್ನು ಮಾಡಬೇಕು ಎಂದು ಮಗನ ಆಸೆ ಇತ್ತು. ತಂದೆಯ ಮನಸ್ಸನ್ನು ಈ ರೀತಿ ಒಲಿಸಲು ಅವ ಪ್ರಯತ್ನಪಡುತ್ತಿದ್ದ. ತಿಳಿದ ಸಾಹುಕಾರರಿಗೆ ಹೇಳಿ ಅಂಗಡಿಯನ್ನು ತೆರೆಯಲು ಸೌಕರ್ಯವನ್ನು ಮಾಡಿಸಿಕೊಡುವುದಾಗಿ ತಂದೆ ಹೇಳಿದ್ದರು. ಆದರೆ ಕಾರ್ಯಗತ ಮಾಡುವ ಮೊದಲೇ ಆತ ತೀರಿಕೊಂಡಿದ್ದರು. ಕನಕವಲ್ಲಿಯ ಗಂಡನಿಗೆ ದರ್ಭೆ ಸಮಿತ್ತುಗಳು ಭದ್ರವಾದುವು. ದೊಡ್ಡ ಪಟ್ಟಣದಲ್ಲಿ ಪೌರೋಹಿತ್ಯದಿಂದ ಬಾಳುವುದು ಸ್ವಲ್ಪ ಕಷ್ಟವೆ. ಹಾಗಾಗಿ ಮೂರು ಮಕ್ಕಳಾದ ಮೇಲೆ, ಕೆಲಸಕ್ಕೆ ಸೇರಿಕೊಂಡು ನಾನೂ ಸಂಪಾದಿಸುತ್ತೇನೆ ಎಂದು ಕನಕವಲ್ಲಿಯು ಹೇಳಿದಾಗ ಗಂಡನೂ ಒಪ್ಪಿದ್ದ.

ಸಂಪಾದಿಸಲು ಶುರು ಮಾಡಿದ ಮೇಲೆ, ಕನಕವಲ್ಲಿಯ ಸಂಸಾರವು ತುಸು ಹಗುರವಾಯಿತು. ಅದರ ಜೊತೆಗೆ ಸಮಾಜದಲ್ಲಿ ಇತರ ಹೆಣ್ಣುಗಳು ಮಜವಾಗಿ ಬಾಳುವುದನ್ನು ಕಣ್ಣಾರೆ ಹತ್ತಿರದಿಂದ ಕಾಣುವಂತೆಯೂ ಆಯಿತು. ಅವರಂತೆಯೇ ತಾನೂ ಸಂಪಾದಿಸುತ್ತಿದ್ದರೂ, ಲಕ್ಷಣವಾಗಿದ್ದರೂ, ಪೌರೋಹಿತ್ಯದ ಗಡ್ಡದ ಗಂಡನೊಡನೆ ಸಂಪ್ರದಾಯಸ್ಥ ಬಾಳನ್ನು ನಡೆಸಬೇಕಾಯಿತಲ್ಲ ಎನ್ನುವ ಕೊರಗೂ ಉಂಟಾಗಿತ್ತು. ಕೆಟ್ಟದೆನಿಸಿದರೂ ಕ್ರಾಂತಿಕಾರಿಯಾದ ತೀರ್ಮಾನವನ್ನು

ಕೈಗೊಂಡು ಹೊಸಬನೊಂದಿಗೆ ಹೊಸ ಬಾಳನ್ನು ಪ್ರಾರಂಭಿಸುವ ಎಂದರೆ ಸೊಂಟಕ್ಕೆ ಕಟ್ಟುಬಿದ್ದ ಮೂರು ಮಕ್ಕಳು ! ಮನಸ್ಸಿನಲ್ಲಿ ಆಸೆಯು ಹೆಡೆಯಾಡಿಸಿದರೆ, ಮಕ್ಕಳು ಹೆಡೆಯನ್ನು ಮರ್ದಿಸುತ್ತಿದ್ದುವು. ಹೀಗಾಗಿ ಮನಸ್ಸಿನಲ್ಲಿಯಾದರೂ ಊಹಾ ಜೀವನವನ್ನು ಮಾಡಲಾರದೆ, ಆಕೆಯು ಯಾಂತ್ರಿಕವಾಗಿ ಸಂಸಾರವನ್ನು ನಿರ್ವಹಿಸುತ್ತಿದ್ದಳು.

ಆಸೆ ನಿರಾಸೆಗಳನ್ನು ತೋರ ಮನಸ್ಸಿನಿಂದ ದೂಡದೆ ಇದ್ದರೆ ದಿನದಿನದ ಕೆಲಸವನ್ನು ಆದಷ್ಟು ಅಣಿಯಾಗಿ ಮಾಡಲಾಗುವುದಿಲ್ಲ. ಆದಕಾರಣ ಪ್ರಕೃತಿಯು ಮನಸ್ಸಿಗೆ ಒಂದು ಉಪಾಯವನ್ನು ಕಲಿಸಿದೆ ; ಆಸೆ ನಿರಾಸೆ ಇತ್ಯಾದಿಗಳನ್ನು ತೋರಮನಸ್ಸಿನಿಂದ ಆಳ ಮನಸ್ಸಿಗೆ ದೂಡಿಬಿಡುವುದೇ, ಈ ಉಪಾಯ. ಕಸವನ್ನೆಲ್ಲಾ ಕಾಣುವ ಸ್ಥಳಗಳಿಂದ ಗುಡಿಸಿ, ನಂತರ ಕಾಣಿಸದೆ ಇರುವಂತಹ, ಜಮಖಾನದ ಕೆಳಕ್ಕೆ ದೂಡಿಬಿಡುವುದಿಲ್ಲವೇ, ಹಾಗೆಯೇ. ಅಪ್ರಿಯವಾದುದನ್ನೂ, ಸಾಧಿಸಲಾಗದ ಆಸೆ ಆಕಾಂಕ್ಷೆಗಳನ್ನೂ ತೋರ ಮನಸ್ಸಿನಿಂದ, ಆಳ ಮನಸ್ಸಿನ ಹಗೇವುಗಳಿಗೆ ಸಾಗಿಸಿ ಬಿಡುವುದು, ಮನಸ್ಸಿನ ಅಗತ್ಯವಾದ ಒಂದು ಕೆಲಸ.

ಆಳಮನಸ್ಸಿಗೆ ದೂಡಲ್ಪಟ್ಟ ಆಸೆ ಅಪ್ರಿಯಗಳು, ಹಗೇವುಗಳಲ್ಲಿ ಸ್ತಬ್ಧವಾಗಿದ್ದರೆ ಬಲು ಚೆನ್ನು. ಬಹಳ ಪಾಲು ಹಾಗೆಯೇ ಇರುತ್ತವೆ. ಆದರೆ ಕೆಲವು ವೇಳೆ ಅವುಗಳು ಪ್ರಬಲವಾಗಿದ್ದುದಾದರೆ, ತೋರಮನಸ್ಸಿಗೆ ಬರಲು ಆಗದೆ ಇರುವುದರಿಂದ ಇಚ್ಛಾಚಾಲಿತ ನರಗಳ ಮೂಲಕ ದೇಹದ ಯಾವುದಾದರೂ ಒಂದು ಅಂಗಕ್ಕೆ ವಕ್ರಿಸುತ್ತದೆ, ಶನಿಯಂತೆ. ಕನಕವಲ್ಲಿಯಲ್ಲಿ ಗಂಟಲಿಗೆ ಹೀಗೆ ಆಳ ಮನಸ್ಸಿನ ಶನಿಗಳು ವಕ್ರಿಸಿದುವು. 'ಉಕ್ರೂ, ಕ್ರೂ, ಕ್ರೋ,' ಮಾಡಲಾರಂಭಿಸಿದಳು ಕನಕವಲ್ಲಿ. ಆಳ ಮನಸ್ಸಿನ ಅಟಾಟೋಪವೇ ಇವುಗಳೆಲ್ಲಾ, ತೋರಮನಸ್ಸು ಈ ವ್ಯವಹಾರದಲ್ಲಿ ಯಾವ ಪಾತ್ರವನ್ನೂ ವಹಿಸುವುದಿಲ್ಲ. ಅಂದರೆ ಹೀಗೇಕೆ ಆಗುತ್ತಿದೆ ಎನ್ನುವುದು ಕನಕವಲ್ಲಿಗೆ ತಿಳಿಯುವುದೇ ಇಲ್ಲ. ವಕ್ರವಕ್ರವಾಗಿ ಹೀಗೆ ಆಡಿದರೆ, ಕಂಡ ಜನ ನಗುತ್ತಾರೆ ಎನ್ನುವ ಶಂಕೆಯೂ ಇರುವುದಿಲ್ಲ. ನಾಚಿಕೆಯೂ ಇರುವುದಿಲ್ಲ. ಇಂತಹ ನಡವಳಿಕೆಯು ಅವಳಿಗೆ ಅನಿವಾರ್ಯವಾಗಿರುತ್ತದೆ. ಹೀಗಾಡುವುದರಿಂದ ಆಳ ಮನಸ್ಸಿನಲ್ಲಿ ತುಸು ನೆಮ್ಮದಿಯೂ ಆಗುತ್ತದೆ.

ಹೀಗಾಡುವುದರಿಂದ, ಇವಳಿಗೆ ಯಾವುದೇ ಆಪತ್ತು ಬರಬಹುದು, ಎಂದು ಸುತ್ತಲೂ ಇರುವ ನೆಂಟರು, ಇಷ್ಟರು, ಸ್ನೇಹಿತರು, ಕಾತರಗೊಳ್ಳುತ್ತಾರೆ. ಕನಕವಲ್ಲಿಗೆ ಸಹಾನುಭೂತಿಯನ್ನು ತೋರುತ್ತಾರೆ. ಎಲ್ಲರ ಗಮನವೂ ನರಳುತ್ತಿರುವ ಕನಕವಲ್ಲಿಯುತ್ತ ಹರಿಯುತ್ತದೆ. ಹೀಗಾದಾಗ ಕನಕವಲ್ಲಿಯ ಆಳ ಮನಸ್ಸಿನಲ್ಲಿ

'ನನ್ನನ್ನು ಕಂಡರೆ ಇವರಿಗೆಲ್ಲಾ ಮಮತೆ. ನನಗಾಗಿ ಇವರೆಲ್ಲರೂ ಆತಂಕ ಪಡುತ್ತಾರೆ, ಎಲ್ಲರಿಗೂ ಬೇಕಾದವಳು ನಾನು' ಎನ್ನುವ ಅಹಂಕಾರವನ್ನು ಸಂತೋಷ ಪಡಿಸುವ ಭಾವನೆಯು ಆಕೆಯಲ್ಲಿ ಉಂಟಾಗುತ್ತದೆ. ಅದರಿಂದ ಸಮಾಧಾನವೂ ಆಗುತ್ತದೆ.

ಈ ಕಾರಣದಿಂದಾಗಿ ಈ ಬೇನೆಯ ಪ್ರದರ್ಶನವು ಅತಿ ಘೋರವಾಗಿ ಕಂಡರೂ ಅತಿ ಕ್ರೂರವಾಗಿ ಇತರರಿಗೆ ಕಾಣಿಸಿದರೂ, ರೋಗಿಗೆ ಉಪಾಯಕಾರಿಯಾಗುವುದಿಲ್ಲ. ಹಾಗೂ ಅತ್ಯಗತ್ಯವೂ ಆಗಿರುತ್ತದೆ. ಆದುದರಿಂದಲೇ ಇಂತಹ ಬೇನೆಯು ಬಡ ಪೆಟ್ಟಿಗೆ ವಾಸಿಯಾಗುವುದಿಲ್ಲ. ಬೇನೆಯ ಕಾಟವು ಹೆಚ್ಚು ಕಡಿಮೆಯಾದರೂ, ರೋಗಶೇಷವು ಬಲು ಕಾಲ ಉಳಿದಿರುತ್ತದೆ. ಆದರೆ ಬಾಳು ನಡೆಸುವುದಕ್ಕೆ ಕಂಟಕವಾಗುವುದಿಲ್ಲ.

ಗಂಟಲ ಡಾಕ್ಟರ ಬಳಿಗೆ ಕನಕವಲ್ಲಿಯು ಹೋದಳು. ಹಿಸ್ಟಿರಿಯಾ ಪ್ರದರ್ಶನವಿದು ಎಂದು ತಿಳಿದಾಯಿತು. ಆದರೆ ಅಹೋ ರಾತ್ರಿ 'ಉಕ್ರೊ, ಕ್ರೊ, ಕ್ರೋ,' ಮಾಡುತ್ತ ಇದ್ದರೆ ; ಸುಸ್ತಾಗುವುದಿಲ್ಲವೇ? ಇದನ್ನು ಮನೆಯವರಾದರೂ ತಡೆದುಕೊಳ್ಳುವುದು ಹೇಗೆ? ಉಪಶಮನವನ್ನಾದರೂ ಮಾಡಬೇಕು ; ಡಾಕ್ಟರು, ರೋಗ ನಿರ್ಮೂಲನವನ್ನು ಸಾಧಿಸಲಾಗದಿದ್ದರೂನೂ.

ಆದಕಾರಣ ಡಾಕ್ಟರು ಅಂದರು :– 'ಗಂಟಲಿನ ಒಂದು ನರ ಕೆರಳಿದೆ, ಅದರಿಂದ ಹೀಗೆ ಆಗುತ್ತದೆ. ಆ ನರವನ್ನು ಸುಡುತ್ತೇನೆ. ತತ್‌ಕ್ಷಣ, 'ಉಕ್ರೊ' ನಿಲ್ಲುತ್ತದೆ. ನಿನ್ನ ಬೇನೆಯು ಜಟ್ಟಂತ ವಾಸಿಯಾಗುತ್ತದೆ' ಎಂದು ಒತ್ತಿ ಒತ್ತಿ ಹೇಳಿದರು. ಕನಕವಲ್ಲಿಯ ಮನಸ್ಸಿನಲ್ಲಿ ವಾಸಿಯಾಗುತ್ತೆ ; ತತ್‌ಕ್ಷಣ ವಾಸಿಯಾಗುತ್ತೆ, ಎನ್ನುವ ನಂಬಿಕೆಯು ನಾಟಲಿ, ಎಂದು.

ಆನಂತರ ಕೆಂಪಗೆ ಭಯಂಕರವಾಗಿ ಕಾಣುತ್ತಿದ್ದ ಇಲೆಕ್ಟ್ರಿಕ್ ಗುಳವನ್ನು, ಚೆನ್ನಾಗಿ ಕನಕವಲ್ಲಿಗೆ ಕಾಣಿಸುವಂತೆ, ಅಣಿ ಮಾಡಿಕೊಂಡು, ಗಂಟಲ ಒಳಭಾಗವೊಂದಕ್ಕೆ ತಾಕಿಸಿದರು, ಡಾಕ್ಟರು.

ಸಾಮಾನ್ಯವಾಗಿ ಗಂಟಲು ಬಲು ಸೂಕ್ಷ್ಮ. ಬೆರಳೂ ಮುಟ್ಟಿದರೂ ವಾಂತಿಯಾಗುವ ಹಾಗಾಗುತ್ತದೆ. ವಾಕರಿಕೆಯು ಬರುತ್ತದೆ. ಆದರೆ ಕನಕವಲ್ಲಿಯು ಕಿಮಕ್ ಕಮಕ್ ಅನ್ನಲಿಲ್ಲ, ಸಾಕಷ್ಟು ಸುಟ್ಟು ಬರೆ ಹಾಕಿದಂತಾದರೂ, ತೆಪ್ಪಗೇ ಇದ್ದಳು.

ಹಿಸ್ಟಿರಿಯಾ ಪ್ರದರ್ಶನದಲ್ಲಿ ಅನಿಸ್ತಿಟಿಕ್ ಆಗುವುದು ಒಂದು ಸಾಮಾನ್ಯವಾದ

ಚಿಹ್ನೆ. ಆ ಭಾಗದಲ್ಲಿರುವ ನರಗಳು ಝೋಂವು ಹಿಡಿದಂತೆಯೋ ಸತ್ತಂತೆಯೋ ಆಗಿರುತ್ತದೆ. ಆದ್ದರಿಂದ ಚಿಟಿಕೆ ಹಾಕಲಿ, ಬರೆ ಹಾಕಲಿ, ಚುಚ್ಚಲಿ, ಕತ್ತರಿಸಲಿ, ರೋಗಿಯು ತೆಪ್ಪಗಿರುತ್ತಾಳೆ. ಒಂದು ಹಂತದ ತನಕ ಹೀಗೆ ಇರುತ್ತದೆ. ನಂತರ ಯಾತನೆಯು ಕಾಣಬರುತ್ತದೆ. ಆಗ ಕನಕವಲ್ಲಿಯು ಉರಿ ಉರಿ ಎಂದಳು. ಚಿಕಿತ್ಸೆಯನ್ನು ನಿಲ್ಲಿಸಲಾಯಿತು. 'ಉಕ್ರೂ, ಕ್ರೂ, ಕ್ರೋ,' ಈ ಗಲಾಟೆಯಲ್ಲಿ ನಿಂತು ಹೋಗಿತ್ತು. 'ಈಗ ಗುಣವಾದ ಹಾಗಿದೆ. ಉಸಿರು ಸರಾಗವಾಗಿ ಆಡುತ್ತಿದೆ. ಆದರೆ ಗಂಟಲಿನಲ್ಲಿ ಸ್ವಲ್ಪ ರಣವಾದಂತಿದೆ' ಎಂದಳು ಕನಕವಲ್ಲಿ.

ತಿರುಗಿ 'ಉಕ್ರೂ, ಕ್ರೂ, ಕ್ರೋ,' ಮರುಕಳಿಸಲಿಲ್ಲ.

ಆದರೆ ಮೂರನೆಯ ದಿನದಿಂದ, ತೋಳಿನ ನರ ಸೆಳೆಯುತ್ತದೆ, ಎತ್ತಎತ್ತಲೋ ಎಳೆಯುತ್ತದೆ ಎಂದು ಕನಕವಲ್ಲಿಯು ನರಳಲಾರಂಭಿಸಿದಳು. ಭುಜವನ್ನು ಕಂಡೂ ಕಾಣದ ಹಾಗೆ ಕುಣಿಸಲು ಆರಂಭಿಸಿದಳು. ಇದೂ ಹಿಸ್ಟಿರಿಯಾದ ಇನ್ನೊಂದು ತರಹ ಪ್ರದರ್ಶನ !

ಆದರೆ ಈ ಪ್ರದರ್ಶನದಿಂದ ರೋಗಿಗೇನೂ ಸುಸ್ತು ಬಡಿಯುವುದಿಲ್ಲ. ಮನೆಯವರಿಗೆ ಕಾಟವನ್ನು ಕೊಡುವುದಿಲ್ಲ. ಹಾಗೂ ದೊಡ್ಡದಾದ ಘೋರವಾದ ಆ ಬೇನೆಯನ್ನು ವಾಸಿಮಾಡಿದ ವೈದ್ಯರು ಈ ಅಲ್ಪ ಬೇನೆಯನ್ನೂ ಸರಿಪಡಿಸುತ್ತಾರೆ ಎನ್ನುವ ನಂಬಿಕೆಯೂ ಕನಕವಲ್ಲಿಯಲ್ಲಿ ಉಂಟಾಗಿತ್ತು. ಇಂತಹ ಬೇನೆಗಳಲ್ಲಿ ವೈದ್ಯರಲ್ಲಿರುವ ಪೂರ್ಣ ನಂಬಿಕೆಯೇ ಗುಣಪಡಿಸುವ ಅಂಶಗಳಲ್ಲಿ ಮುಖ್ಯವಾದುದೊಂದು.

ಹಿಸ್ಟಿರಿಯಾ ಪ್ರದರ್ಶನವು ಉಗ್ರವಾಗಿ ಕಂಡು ಬಂದವರಲ್ಲಿ, ನಿಶ್ಶೇಷವಾಗಿ, ಬೇನೆಯು ನಿವಾರಣೆಯಾಗುತ್ತದೆ ಎಂದು ಹೇಳಬರುವುದಿಲ್ಲ. ಏಕೆಂದರೆ, ಅವರ ಹುಟ್ಟು ಗುಣ; ಬಾಳಿನ ಪ್ರಸಂಗಗಳು; ಸಂಸಾರ ಮತ್ತು ಸಾಮಾಜಿಕ ಪರಿಸರ; ಇವುಗಳನ್ನು ರೋಗಿಗೆ ಅನುಕೂಲವಾಗಿರುವಂತೆ ಮಾಡಲು ಅಸಾಧ್ಯ. ಆದರೆ ಸಾಮಾನ್ಯ ಬಾಳು ನಡಸುವುದಕ್ಕೆ ಕಂಟಕವಾಗದಂತೆ ಘೋರ ಪ್ರದರ್ಶನವನ್ನು ಸೌಮ್ಯ ಪ್ರದರ್ಶನವನ್ನಾಗಿ ರೂಪಾಂತರಿಸಬಹುದು. ರೋಗಿಯ ಮತ್ತು ಆಕೆಯ ಮನೆಯವರ ದೃಷ್ಟಿಯಿಂದ, ಈ ಫಲಿತಾಂಶವು ಪರಿಣಾಮಕಾರಿಯಾದುದು.

ಕನಕವಲ್ಲಿಯು ಈಗಲೂ ಅಂದರೆ ಏಳೆಂಟು ವರ್ಷಗಳಾದ ಮೇಲೆ, ಒಮ್ಮೊಮ್ಮೆ ಭುಜವನ್ನು ಕುಣಿಸುತ್ತಾಳೆ. ಒಮ್ಮೊಮ್ಮೆ ಮೊಣಕೈಯನ್ನು ಭಂಗಿಸುತ್ತಾಳೆ. ಆದರೆ ಚಾಕರಿಗೆ ತಪ್ಪದೆ ಹೋಗುತ್ತಿದ್ದಾಳೆ. ಮಕ್ಕಳ ತಾಯಾಗಿ ಸಂಸಾರವನ್ನೂ ಮಾಡಿಕೊಂಡಿದ್ದಾಳೆ. ಸಮಾಜದಲ್ಲೂ ಸರಸವಾಗಿರುತ್ತಾಳೆ. ಹೊರನೋಟಕ್ಕೆ

ಈಕೆಗೆ ಹಿಸ್ಟಿರಿಯಾ ಚಿಹ್ನೆಗಳಿವೆ ಎಂದು ತಿಳಿಯುವುದೇ ಇಲ್ಲ.

ಆದರೆ ತಿಳಿದವರಿಗೆ ಅವಳ ಮುಖದಲ್ಲಿರುವ ಕಾತರವು ಆಗಿಂದಾಗ್ಗೆ ಸ್ಪಷ್ಟವಾಗಿ ಕಾಣುತ್ತದೆ. ಹಿಸ್ಟಿರಿಯಾ ಪ್ರದರ್ಶನವು ಉಲ್ಬಣಗೊಳ್ಳದಂತೆ, ಆಗಿಂದಾಗ್ಗೆ, ಆಕೆಗೆ ವೈದ್ಯರು ಭರವಸೆಯನ್ನು ಕೊಡುತ್ತಲಿರಬೇಕು. ಉಪಶಮನಕ್ಕೆಂದು ಆಕೆಯು ವೈದ್ಯರ ಬಳಿಗೆ ಹೋದಾಗಲೆಲ್ಲ ಯಾವುದಾದರೂ ನಿರುಪದ್ರವಿಯಾದ ಔಷಧಿಯನ್ನು ಪಡೆದು, ಅದರಿಂದ ಗುಣವನ್ನೂ ಕಾಣುತ್ತಾಳೆ.

**ಮಾತು ನಿಂತ ಮುದ್ದುಗುವರಿ**

ತುಂಬಾ ಪ್ರಯಾಸಪಡುತ್ತಾ ಇದ್ದಳು. ಎರಡು ಮಾತುಗಳನ್ನಾಡುವುದಕ್ಕೆ ಆದರೂ ಆಕೆಯು ಆಡಿದ ಮಾತು ಇತರರಿಗೆ ಕೇಳಿಸುತ್ತಲೇ ಇರಲಿಲ್ಲ. ಪ್ರಯಾಸ ಪಡುವುದು ಎಂದರೆ ಅಂತಿಂತಹ ಪ್ರಯಾಸವಲ್ಲ ! ತಲೆಯನ್ನು ಹಿಂದಕ್ಕೆ ಬಾಗಿಸಿ, ಕತ್ತನ್ನು ಉದ್ದಮಾಡಿ, ಮುಖದ ಮಾಂಸಖಂಡಗಳನ್ನೆಲ್ಲ ಸೆಟೆಸುತ್ತಿದ್ದಳು ; ಧ್ವನಿಯನ್ನು ಮೂಡಿಸುವುದಕ್ಕೆ, ಮಾತುಗಳನ್ನು ಬಿಡಿಸುವುದಕ್ಕೆ, ಬಾಯಿಯನ್ನು ನರಸಿಂಹ ದೇವರ ತರಹ ದೊಡ್ಡದಾಗಿ ಬಿರಿಸಿ, ಹಲ್ಲುಗಳೆಲ್ಲವೂ ಬಿರಿಬಿರಿ ಕಾಣುವಂತೆ ಮಾಡಿಕೊಂಡು, ನಾಲಿಗೆಯನ್ನು ಚಾಚಿ ಹೊರಳಿಸುತ್ತಿದ್ದಳು. ಆದರೂ ಮಾತು ಹೊರಡುತ್ತಲೇ ಇರಲಿಲ್ಲ. ನೋಡುವುದಕ್ಕೆ ಆಕೆಯ ಮುಖ ಭಯಂಕರವಾಗಿತ್ತು.

'ನಿನ್ನ ಹೆಸರೇನಮ್ಮಾ ? ನೀನೇ ಹೇಳು ; ನಿಮ್ಮಮ್ಮ ಹೇಳುವುದು ಬೇಡ' ಎಂದು ನಾನು ಕೇಳಿದಾಗ ಹೆಸರನ್ನು ಉಚ್ಚರಿಸಹೋದ ರೋಗಿಯು ಈ ತೆರನ ಪ್ರದರ್ಶನವನ್ನು ನೀಡಿದಳು.

ಭರ್ಜರಿಯಾಗಿ ಬೆಳೆದ ಹೆಣ್ಣು ; ಸುಮಾರು ೨೦–೨೨ರ ಪ್ರಾಯ. ಸ್ವಲ್ಪ ಕುಳ್ಳು ಹುಡುಗಿ, ತುಸು ಮಾಸಲು ಕಪ್ಪು ಬಣ್ಣ. ಅಮ್ಮನ ಎಡಗೈಯನ್ನು ತನ್ನೆರಡೂ ಕೈಗಳಿಂದ ಭದ್ರವಾಗಿ ಹಿಡಿದುಕೊಂಡು, ಸೆಟೆದು ಕುಳಿತಿದ್ದಳು. ದುಂಡು ಮುಖದಲ್ಲಿ ಕಾತರವು ಎದ್ದು ಕಾಣುತ್ತಿತ್ತು.

'ನನ್ನ ಮಗೂಗೆ ಗಂಟಲು ಸರಿಹೋಗುತ್ತ್ಯೇ ಡಾಕ್ಟರೇ ! ಐದು ದಿನಗಳಾಯಿತು, ಅವಳ ಗಂಟಲು ಈ ರೀತಿ ಸೇದಿಕೊಂಡು, ಎಷ್ಟೋ ಕಷ್ಟಪಡ್ತಾಳೆ, ಆದರೆ ಒಂದು ಮಾತನ್ನೂ ಆಡಲು ಸಾಧ್ಯವಾಗುಲ್ಲ. ಒಂದು ತುತ್ತು ನುಂಗುವುದಕ್ಕೆ ತುಂಬಾ ಕಷ್ಟಪಡುತ್ತಾಳೆ. ಎರಡು ಗುಟುಕು ನೀರು ಕುಡಿದರೇನೆ, ಒಂದು ತುತ್ತು ಒಳಕ್ಕೆ ಇಳಿಯುವುದು,' ಎಂದು ಹೇಳಿ ರೋಗಿಯ ತಾಯಿಯು ಗುಳುಗುಳು

ಅಂತ ಅಳುಕ್ಕೆ ಶುರು ಮಾಡಿದಳು. ತಾಯಿಯ ಕಡೆಗೆ ನೋಡುತ್ತಾ ಕೈ ಬಾಯಿ ಸನ್ನೆ ಮಾಡಿದಳೇ ವಿನಹಾ, ರೋಗಿಯು 'ಅಳಬೇಡ ಅಮ್ಮಾ' ಅನ್ನಲಿಲ್ಲ.

'ನಿನ್ನ ಹೆಸರು ಹೇಳುಕ್ಕೆ ಆಗುಲ್ಲವೇನೇ ಗುಂಡೂ ! ಎಷ್ಟು ಹೊತ್ತು ಅಂತ ಡಾಕ್ಟರು ಕಾದಿರುವುದಕ್ಕೆ ಆಗುತ್ತೆ ? ನಿಂಗಾಗೋದನ್ನು ಬೇಗ ಹೇಳಿದರೆ, ವಾಸಿ ಮಾಡುವುದಕ್ಕೆ ಆಗುತ್ತೆ. ಐದು ದಿನಗಳಿಂದ ನಮ್ಮ ಪ್ರಾಣಾ ತೆಗೀತಾ ಇದೀಯಲ್ಲೇ ?' ಎಂದು ಗುಂಡಮ್ಮನ ತಂದೆ, ಕೋಪ ಮಿಶ್ರಿತ ಬೇಸರದ ದನಿಯಲ್ಲಿ ಗುಡುಗಿದರು.

'ಆಗೋ ಹಾಗಿದ್ದರೆ, ಮರಿ ಮಾತಾಡ್ತಿರಲಿಲ್ಲವೇ ? ಅಲವತ್ತುಕೊಂಡರೆ, ಪಾಪ, ಅದೇನು ಮಾಡುತ್ತೆ. ಅದೇ ಕಾಯಿಲೆ ಅದಕ್ಕೆ.' ಎಂದು ತಾಯಿ ಗಂಡನ ಮೇಲೆ ತಿರುಗಿಬಿದ್ದಳು.

ಈ ಮರಿ, ಈ ಗುಂಡಮ್ಮ, ಐದು ದಿನಗಳಿಂದಲೂ ಹೀಗೆ ನರಳುತ್ತಿದ್ದಳು. ತುಟಿಗಳನ್ನು ಬಿರಿಬಿರಿ ಬಿರಿಸುತ್ತಾಳೆ ; ಹಲ್ಲುಗಳೆಲ್ಲವೂ ಬಿಗಿಯಾಗಿ ಗದಿ ಹಾಕಿಕೊಂಡಿರುವುದು ಕಾಣಿಸುತ್ತೆ, ಕತ್ತಿನ ಮಾಂಸಖಂಡಗಳೆಲ್ಲವೂ ಬಿಗಿಯಾಗಿ ಸೆಟೆದಿರುತ್ತವೆ. ಮುಖದ ಅದರಲ್ಲೂ ಬಾಯಿನ ಮಾಂಸಖಂಡಗಳೆಲ್ಲವೂ ಬಿಗಿದುಕೊಂಡಿವೆ. ಯಾವ ಯಾವ ಮಾಂಸಖಂಡಗಳನ್ನು ಮಾತನಾಡಲು ಬಳಸುತ್ತೇವೆ, ಎಂದು ಗುಂಡಮ್ಮ ತಿಳಿದುಕೊಂಡಿದ್ದಾಳೋ ಅವೆಲ್ಲವೂ ಸೆಟೆದಿವೆ. ಬಾಯಿನಲ್ಲಿರುವ ನಾಲಿಗೆ, ಶ್ವಾಸನಾಳಗಳು, ಇವನ್ನು ಪ್ರದರ್ಶಿಸುವಂತಿಲ್ಲ. ಇವುಗಳಿಂದಲೇ ಮಾತಿನ ಉಚ್ಚಾರಣೆಯಾಗುವುದು. ಆದರೆ ಗುಂಡಮ್ಮನಿಗೆ ಇದು ಗೊತ್ತಿಲ್ಲ.

ಹಿಸ್ಟೀರಿಯಾದ ಒಂದು ಪ್ರದರ್ಶನ ಇದು, ಎಂದು ಸುಲಭವಾಗಿ ತಿಳಿಯಿತು. ಮಾನಸಿಕ ಕಾರಣಗಳಿಂದ ನಿರ್ಧ್ವನಿಯಾಗುವುದು ಹಿಸ್ಟೀರಿಯಾದ ಒಂದು ರೂಪ. ಮನಸ್ಸಿನಲ್ಲಿ ಹುದುಗಿಕೊಂಡು ಕಾಡುತ್ತಿರುವ ತಾಪತ್ರಯಗಳು ಇಚ್ಛಾಚಾಲಿತ ನರಗಳ ಮೂಲಕ ಗುಂಡಮ್ಮನ ಗಂಟಲಿನಲ್ಲಿ ಶನಿ ವಕ್ರಿಸಿದಂತೆ ವಕ್ರಿಸಿತ್ತು. ಗಂಟಲಿಗೆ, ಅದರ ಸಂಬಂಧಪಟ್ಟ ಭಾಗಗಳಿಗೆ ಚಿಕಿತ್ಸೆಯನ್ನು ಮಾಡಿದಂತೆ ನಟಿಸಿದರೆ, ರೋಗಿಯ ಮನಸ್ಸಿಗೂ ಒಂದು ರೀತಿಯ ಸಮಾಧಾನವಾಗುತ್ತದೆ. ರೋಗಿಯ ಸಂಬಂಧಿಗಳಿಗನಕ ತುಂಬಾ ಸಮಾಧಾನವಾಗುತ್ತದೆ.

ಆದುದರಿಂದ ಗಂಟಲನ್ನು ಪರೀಕ್ಷಿಸಲು, ಗದಿ ಹಾಕಿಕೊಂಡಿರುವ ಹಲ್ಲುಗಳ ಮಧ್ಯೆ, ಟಂಗ್ ಡಿಪ್ರೆಸರ್‌ಅನ್ನು ಬಲವಂತದಿಂದ ತೂರಿಸಿ, ನಾಲಿಗೆಯನ್ನು ಅದುಮಲು ಪ್ರಯತ್ನಿಸಿದೆ. ಒಂದೆರಡು ಕ್ಷಣ ರಾಕ್ಷಸ ಶಕ್ತಿಯನ್ನು ಬಳಸಿ ಒತ್ತಿದ ಮೇಲೆ, ಬಾಯಿ ತೆರೆಯಿತು, ಗಂಟಲು ಕಾಣಿಸಿತು. ಆದರೆ ಅರೆಕ್ಷಣದಲ್ಲಿ ಟಪ್

ಅಂತ ಬಾಯಿಯು ಮುಚ್ಚಿಕೊಂಡಿತು. ಟಂಗ್ ಡಿಪ್ರೆಸರನ್ನು ಬಲವಾಗಿ ಕಚ್ಚಿಕೊಂಡು ಮುಚ್ಚಿಕೊಂಡಿತು. ಟಂಗ್ ಡಿಪ್ರೆಸರನ್ನು ಹೊರಕ್ಕೆ ಕೀಳಲು ಶತ ಪ್ರಯತ್ನವನ್ನು ಮಾಡಬೇಕಾಯಿತು.

ಪಶುವೈದ್ಯರಂತೆ ನಡೆಸಿದ ಈ ರಾಕ್ಷಸ ಪ್ರಯೋಗವನ್ನು ಕಣ್ಣಾರೆ ಕಂಡ ತಾಯಿಯು, ಆ ತನಕ ತಾನೂ ಬಾಯಿ ಬಾಯಿ ಬಿಡುತ್ತಿದ್ದಳು. ಮಗಳ ಬಾಯಿ ನಿಂದ ಟಂಗ್ ಡಿಪ್ರಸರ್ ಹೊರಕ್ಕೆ ಬಂದಮೇಲೆ,

'ಅಯ್ಯೋ ಮರಿ ! ತುಂಬಾ ನೋವಾಯಿತೇನೇ ? ನರಗಿರ ಏನಾದರೂ ಹೊರಳ್ತೇನೆ ?' ಎಂದು ಬಲು ಮುದ್ದಿನ ದನಿಯಲ್ಲಿ ಕೇಳಿದಳು. 'ಹ್ಞೂ' 'ಹ್ಞೂ' ಅನ್ನುವಂತೆ ತಲೆಯನ್ನು ಮೇಲಕ್ಕೂ ಕೆಳಕ್ಕೂ ಆಡಿಸಿದಳು. ಧ್ವನಿ ಮಾತ್ರ ಹೊರಡಲೇ ಇಲ್ಲ.

'ಮುಂದಿನ ವಾರ ಹೆಣ್ಣು ನೋಡುಕ್ಕೆ ಅಂತ ಬರ್ತಾರೆ. ಏನಾದರೂ ಮಾಡಿ ಬೇಗ ವಾಸಿಮಾಡಿ. ನಾಲ್ಕೈದು ವರ್ಷಗಳಿಂದ ಅದೆಷ್ಟು ಒದ್ದಾಡ್ತಾ ಇದೀನಿ, ಅಂತ ; ಇವಳ ಮದುವೆ ಮಾಡಿ, ಸೆರೆ ಬಿಡಿಸೋಣ ಅಂತ ; ಆ ಕಷ್ಟ ಪರಮಾತ್ಮನಿಗೇ ಗೊತ್ತು ! ಈ ಸರ್ತಿ ಬರುವವರು ಪ್ರಾಯಶಃ ಒಪ್ಪಬಹುದು ಅಂತ ಕಾಣಿಸುತ್ತೆ. ಇಂತಹ ಹೊತ್ತಿಗೆ ಇವಳಿಗೆ ಈ ಬೇನೆ ಬಡಿಯಬೇಕೇ ? ಮದುವೆಯಾದ ಮೇಲೆ, ಗಂಡನ ಮನೆಗೆ ಹೋದಾಗ ಬಡಿದಿದ್ದರೆ ಯಾರು ಬೇಡ ಅಂತಿದ್ದರು ?' ಎಂದು ತಂದೆ ಗೊಣಗಿದರು.

'ಕತ್ತಿನಲ್ಲಿ ಈ ನರ ಇದೆ ನೋಡು, ಗುಂಡಮ್ಮ ; ಇದು ಹೊರಳಿದೆ. ಈಗ ಅದನ್ನು ಸರಿಯಾದ ಸ್ಥಾನಕ್ಕೆ ನೀವಿ ಇಡ್ತೀನಿ. ಆಮೇಲೆ ಸುಲಭವಾಗಿ ಮಾತನಾಡಬಹುದು' ಎಂದು ಅವಳ ಕತ್ತಿನ ಒಂದು ಪಾರ್ಶ್ವವನ್ನು ನೋವಾಗುವಂತೆ ಬಿಗಿಯಾಗಿ ಹಿಡಿದು 'ಎಲ್ಲಿ ಈಗ ನಾಲಿಗೆಯನ್ನು ಹೊರಕ್ಕೆ ಆದಷ್ಟು ಚಾಚು' ಎಂದೆ. ನಾಲಿಗೆಯು ಬಾಯಿಯಿಂದ ಹೊರಕ್ಕೆ ಸ್ವಲ್ಪ ಬಂತು. 'ಓಹೋ ಪರವಾಗಿಲ್ಲ,' ಎನಿಸಿತು. ಕತ್ತಿನಲ್ಲಿ ಆದ ನೋವಿನಿಂದ, ಬೇನೆಯು ಹತೋಟಿಗೆ ಬಂದು, ನಾಲಿಗೆಯನ್ನು ಚಾಚುವಂತಾದುದು ; ರೋಗವು ಅತಿ ಉಲ್ಬಣ ಸ್ಥಿತಿಗೆ ಬಂದಿಲ್ಲ ಎನ್ನುವುದರ ಕುರುಹಾಗಿತ್ತು. ಆದುದರಿಂದ ಪರವಾಗಿಲ್ಲ ಎನ್ನಿಸಿತು.

'ಗುಂಡಮ್ಮ, ಕತ್ತಿನ ನರ ಸರಿಹೋಗಿದೆ. ಆದರೆ ತಿರುಗಿ ಹೊರಳಬಹುದು. ಅದಾಗದಂತೆ, ನಾಲಿಗೆಯನ್ನು ಸ್ವಲ್ಪ ಎಳೆಯಬೇಕು. ಸ್ವಲ್ಪ ನೋವಾಗುತ್ತೆ ಆದರೆ ಹೆದರಬೇಡ. ಈ ಘೋರ ಕಾಯಿಲೆಯನ್ನು ಅನುಭವಿಸಿದ್ದಿ. ಈ ಯಾತನೆಯ ಮುಂದೆ ಅವೇನೂ ಲೆಕ್ಕಕ್ಕೆ ಬರುವುದಿಲ್ಲ ಎಂದು ಒಮ್ಮೆ ಹೆದರಿಸಿ, ಅದೇ

ಕ್ಷಣದಲ್ಲಿ ಧೈರ್ಯವನ್ನು ತುಂಬಿ, ಅವಳ ನಾಲಿಗೆಯನ್ನು ಹಿಡಿದು ಬಲವಾಗಿ ಎಳೆದೆ 'ನೋಡು ಗುಂಡಮ್ಮ ನಾಲಿಗೆಯ ಬುಡದಲ್ಲೇ ನರವು ಇರುವುದು. ಸ್ವಸ್ಥಾನಕ್ಕೆ ಆ ನರವು ಹೋಗಿ ಭದ್ರವಾಗಿ ಕೂತುಕೊಳ್ಳಬೇಕಾದರೆ, ಈ ಚಿಕಿತ್ಸೆಯು ಅಗತ್ಯ' ಎಂದು ಹೇಳುತ್ತಾ ಎಳೆದೆ.

'ಅಯ್ಯೋ ಅಯ್ಯೋ' ಎನ್ನುವ ಎರಡು ಮಾತುಗಳೂ ಅವಳ ಕೊರಲಿನಿಂದ ಹೊರಬಿದ್ದುವು. ಅಸ್ಪಷ್ಟವಾಗಿದ್ದರೂ, ನನ್ನ ಕಿವಿಗೆ ಸಂಗೀತದಂತಿತ್ತು. ನಾಲಿಗೆಯ ಹಿಡಿತವನ್ನು ಮೆಲ್ಲಗೆ ಬಿಡಿಸಿ, 'ಈಗ ದೊಡ್ಡದಾಗಿ ಉಸಿರು ಬಿಡಮ್ಮಾ, ಆಮೇಲೆ ಮಾತನಾಡುಕ್ಕೆ ಆಗುತ್ತೆ' ಎಂದೆ.

ಹಾಗೆಯೇ ಮಾಡಲೆತ್ನಿಸಿದಳು. ಆದರೆ ದೊಡ್ಡ ಉಸಿರನ್ನು ತೆಗೆದುಕೊಳ್ಳಲಿಲ್ಲ. ಒಂದೆರಡು ಬಾರಿ ಒತ್ತಾಯಪಡಿಸಿದನಂತರ, ತಿರುಗಿ ನಾಲಿಗೆಯನ್ನು ಎಳೆಯ ಬೇಕಾಗುತ್ತದೆ ಎಂದು ಹೆದರಿಸಿದ ನಂತರ, ದೊಡ್ಡದಾಗಿ ಉಸಿರಾಡಿದಳು. ನಂತರ 'ಅಮ್ಮಾ ಬಾಯಾರಿಕೆ, ನೀರು, ಸ್ವಲ್ಪ ನೀರು' ಎಂದಳು. ಕಷ್ಟಪಟ್ಟುಕೊಂಡು, ಮುಖವನ್ನು ವಿಕಾರಮಾಡಿಕೊಂಡು, ಹೇಳಿದ್ದಳು. ಆದರೆ ಮಾತು ಮೂಡಿತ್ತು. ಎರಡು ಮೂರು ದಿನಗಳು, ದಿನಕ್ಕೆ ಒಂದೆರಡು ಬಾರಿ ಹೀಗೆ ಪ್ರಯೋಗವನ್ನು ನಡಸಿದ ನಂತರ, ಗುಂಡಮ್ಮನು ಮಾತನಾಡುವಂತಾದಳು.

ಮೂರು ಮಕ್ಕಳು, ಹುಟ್ಟಿದ ಕೂಡಲೇ ಸತ್ತುಹೋಗಿದ್ದುವು. ನಾಲ್ಕನೆಯ ಹೆರಿಗೆಯಲ್ಲಿ ಗುಂಡಮ್ಮ ಹುಟ್ಟಿದ್ದು. 'ಇದಾದರೂ ಗುಂಡುಕಲ್ಲಿನ ಹಾಗೆ ಬೆಳೆಯಲಿ' ಎಂಬ ಆಸೆಯಿಂದ, ಗುಂಡಮ್ಮ ಎಂದು ನಾಮಕರಣ ಮಾಡಿದ್ದರು. ಗುಂಡಮ್ಮ ತಾಯ ಮಡಿಲಿನಲ್ಲೇ ಹೆಚ್ಚಾಗಿ ಬೆಳೆದವಳೂ ತೊಟ್ಟಿಲಿನಲ್ಲಿ ಮಲಗಿಸಿದರೆ ರಚ್ಚೆ ಮಾಡುತ್ತಿದ್ದಳು. ಶಾಲೆಗೆ ಹೋಗುವ ವಯಸ್ಸಿನಲ್ಲಿ, ಅಂತಹ ಜಾಣತನವನ್ನೇನೂ ತೋರಿಸಿರಲಿಲ್ಲ. ಮುದ್ದು ಮುದ್ದಾಗಿ ಬೆಳೆದವಳು ; ಮೊದ್ದು ಮೊದ್ದಾಗಿಯೇ ವಯಸ್ಸಿಗೆ ಬಂದಮೇಲೆಯೂ ತಾಯಿ ಸೆರಗನ್ನು ಹಿಡಿದುಕೊಂಡೇ ಮುದ್ದುಗರೆಯುತ್ತಿದ್ದಳು. ಓದಿನಲ್ಲಿ ಚಾಲೂಕನ್ನು ತೋರಿಸದೇ ಇದ್ದರೂ ಮನೆಗೆಲಸದಲ್ಲಿ ಅಮ್ಮನ ಜತೆಗೂ ನಗುನಗುತ ದುಡಿಯುತ್ತಿದ್ದಳು. ಆದರೆ ಅಮ್ಮನೇನಾದರೂ ಒಂದೆರಡು ದಿನ ಜಡ್ಡು ಬಿದ್ದರೆ, ಮನೆಗೆಲಸವನ್ನು ಒಬ್ಬಳೇ ಮಾಡಲು ಅಸಮರ್ಥಳಾಗುತ್ತಿದ್ದಳು. ಮದುವೆಯ ವಯಸ್ಸು ಬಂತು. ಭಾವಿ ವರಗಳನ್ನು ಕರೆದು ತರಲು ಆರಂಭವಾಯಿತು. ಆಗ ಗುಂಡಮ್ಮ ಸಿಡುಕುತನವನ್ನು ಕೆಲವೊಮ್ಮೆ, ಅತಿ ನಾಚಿಕೆಯನ್ನು ಮತ್ತೊಮ್ಮೆ ; ಉತ್ಸಾಹವನ್ನೊ ಒಂದೊಂದು ಸರ್ತಿ ; ತೋರತೊಡಗಿದಳು. ಅಪ್ಪನು ಗದರಿಸಿಕೊಂಡರೆ, ಮೊಂಡು ಬಿದ್ದು

ಮೂಲೆ ಹಿಡಿಯುವುದು. ಅಮ್ಮನು ಗದರಿಸಿದರೆ ಅಳುವುದು ; ಹೀಗಾಗುತ್ತಿತ್ತು. ಕಡೆಗೆ ಹಿಸ್ಟಿರಿಯಾದ ನಿರ್ದ್ವನಿ ಪ್ರದರ್ಶನವೂ ಕಾಣಬಂದಿತ್ತು.

ಇದೆಲ್ಲವೂ ಆಕೆಯ ತಂದೆಯು ಒಪ್ಪಿಸಿದ ವರದಿ ; ಅವರನ್ನು ವಿವರವಾಗಿ ಪ್ರಶ್ನಿಸಿದಾಗ.

ವಯಸ್ಸು ಪಂಚಾಂಗ ಮತ್ತು ಜಾತಕದ ಪ್ರಕಾರ ೨೩ ಆಗಿದ್ದರೂ, ಗುಂಡಮ್ಮನ ಮನಸ್ಸು ೧೦–೧೨ ವರ್ಷದ ಹುಡುಗಿಯ ಮನಸ್ಸಿನಂತೆಯೇ ಇತ್ತು. ಬಾಲ್ಯದ ಮುಗ್ಧತೆಯಿಲ್ಲ ; ಬೆಳೆದವರ ದೃಢತೆಯೂ ಇಲ್ಲ. ಮನಸ್ಸು ಬೆಳೆಯುವುದು ; ಪರಿಸರದಿಂದ ಕಲಿತು ಪ್ರವೃದ್ಧವಾಗುವುದು ; ಒಂದು ರೀತಿಯಲ್ಲಿ ನಿಂತುಹೋಗಿತ್ತು. Immature Personality-Inadequate Personality ಎಂದು ಕರೆಯುತ್ತಾರೆ, ಇಂತಹವರನ್ನು. ಇಂತಹವರಲ್ಲಿ ಮಾನಸಿಕ ಪಲ್ಲಟಗಳು ಆಗುವುದು ಹೆಚ್ಚು.

ಗುಂಡಮ್ಮನಿಗೆ ಇಂತಹ ಅಪೂರ್ಣ, ಅಪ್ರಬುದ್ಧ ವ್ಯಕ್ತಿತ್ವವಿತ್ತು. ಮದುವೆಯಾಗಿ ಗಂಡನ ಮನೆಗೆ ಹೋಗಬೇಕು ಎನ್ನುವ ಆಸೆಯೂ ಇತ್ತು. ಪ್ರಕೃತಿ ಸಹಜವಾದ, ದೇಹದ ಅಗತ್ಯಗಳ ಪೂರೈಕೆಗಾಗಿ, ಅವಳ ID, ಪುರಾತನ ಮನಸ್ಸು ಹಾತೊರೆಯುತ್ತಿತ್ತು. ಆದರೆ ವಿಚಾರಮಾಡುವ ಮನಸ್ಸು, ವಯಸ್ಸಿಗೆ ತಕ್ಕಂತೆ ಬೆಳೆಯದೆ ಇರುವ ಕಾರಣದಿಂದ; ಅಮ್ಮನ ಸೆರಗನ್ನು ಹಿಡಿದುಕೊಂಡೇ ಇರುವುದು ಚೆನ್ನು ಎನ್ನುತ್ತಿತ್ತು. ದ್ವಂದ್ವ ಕಾದಾಟದಲ್ಲಿ, ಮನಸ್ಸು ಹಿಸ್ಟಿರಿಯಾ ಪ್ರದರ್ಶನವನ್ನು ಆರಂಭಿಸಿತು. ಗದರಿಸುತ್ತಿದ್ದ ಅಪ್ಪನ ಆದರವನ್ನು ಈ ಪ್ರದರ್ಶನವು ಸಾಧಿಸುತ್ತದೆ ಎಂದು ಗುಂಡಮ್ಮನ ಹುಡುಗು ಮನಸ್ಸು ಹೇಳುತ್ತಿತ್ತು. ಇದು ನಗೆಪಾಟಲಾಗಬಹುದು ಎನ್ನುವ ಯೋಚನೆಯು ಹುಡುಗು ಮನಸ್ಸಿಗೆ ಬರುವುದೇ ಇಲ್ಲ.

ಗುಂಡಮ್ಮನಿಗೆ ಮದುವೆಯೂ ಆಯಿತು. ಮೂರು ಮಕ್ಕಳೂ ಆಗಿವೆ. ಮದುವೆಯಾದ ಗಂಡನು ಹೊಟ್ಟೆಗೆ ಬಟ್ಟೆಗೆ ಸಾಕಾದಷ್ಟು ಸಂಪಾದಿಸುತ್ತಾನೆ. ಅವನಿಗೂ ಅಪ್ರಬುದ್ಧ ವ್ಯಕ್ತಿತ್ವ. ಹಾಗಾಗಿ ಗಂಡಹೆಂಡಿರಿಬ್ಬರೂ ಸಾಕಷ್ಟು ಜಗಳವಾಡುತ್ತಾರೆ. ದಾಂಧಲೆ ಎಬ್ಬಿಸುತ್ತಾರೆ, ರಂಪ ಮಾಡುತ್ತಾರೆ. ಉಂಡು ಮಲಗುವತನಕ.

ಹಿಸ್ಟಿರಿಯಾ ಪ್ರದರ್ಶವು ತುಸು ಹೆಚ್ಚು ತುಸು ಕಡಿಮೆ ಪ್ರಮಾಣದಲ್ಲಿ, ಗುಂಡಮ್ಮನಲ್ಲಿ ಆಗುತ್ತಲೇ ಇವೆ. ಆದರೆ ಸಂಸಾರವನ್ನು ನಡೆಸಿಕೊಂಡು ಹೋಗುವುದಕ್ಕೆ ಅಡಚಣೆಯಾಗುವಂತಹ ಉಲ್ಬಣಸ್ಥಿತಿಗೆ ಹತ್ತಿಲ್ಲ. ಸಮಾಜದ

ದೃಷ್ಟಿಯಲ್ಲಿ ಗುಂಡಮ್ಮನದು ವೈನವಾದ ಸಂಸಾರವೇ. ಅಷ್ಟಾದರೆ ಸಾಲದೆ ?

**ಜ್ಞಾನ ತಪ್ಪಿದ ಇರುದಯ ಮೇರಿ**

'ತತ್‌ಕ್ಷಣ ಬರಬೇಕು, ಡಾಕ್ಟರೇ !' ಎಂದು ಏದುಬ್ಬಸಪಡುತ್ತ ಬಂದಿದ್ದವ ಅವಸರ ಪಡಿಸಿದ.

'ಏನಾಗಿದೆ ? ಯಾರಿಗೆ ? ವಿವರಗಳನ್ನು ಸ್ವಲ್ಪ ತಿಳಿಸಿದರೆ, ಸೂಕ್ತವಾದ ಔಷಧಿಗಳನ್ನೂ ಇತರ ಸಲಕರಣೆಗಳನ್ನೂ ಸಿದ್ಧಪಡಿಸಿಕೊಂಡು ಬರಬಹುದು. ಬರೀ ಸ್ಟೆತಾಸ್ಕೋಪು ಹಿಡಿದುಕೊಂಡು ಬಂದರೆ, ಏನು ಪ್ರಯೋಜನ ? ಗಾಬರಿಯಾಗಬೇಡ ; ಸ್ವಲ್ಪ ಸುಧಾರಿಸಿಕೋ, ಏನಾಯ್ತು ಹೇಳು, ಖಂಡಿತ ಬರ್ತೀನಿ' ಎಂದು ಹೇಳಿದೆ. ಅವನೇನೂ ಕುಳಿತು ಸುಧಾರಿಸಿಕೊಳ್ಳಲಿಲ್ಲ. ನಿಂತಲ್ಲೇ ಮೇಲುಸಿರು ಎಳೆಯುತ್ತಲೇ 'ಮಾತಾಡ್ತಾ ಕೂತಿದ್ದಿವಿ, ಇದ್ದಕ್ಕಿದ್ದ ಹಾಗೆಯೇ, ಜ್ಞಾನತಪ್ಪಿ ಬಿದ್ದು ಬಿಟ್ಟಳು, ನಮ್ಮ ಅಕ್ಕ ; ಬೇಗ ಬನ್ನಿ ಡಾಕ್ಟರೇ ! ಇಷ್ಟು ಹೊತ್ತಿಗೆ ಅವಳ ಪ್ರಾಣವೇ ಹೋಗಿಬಿಟ್ಟಿರುತ್ತೇನೋ ?' ಎಂದ.

'ಎಷ್ಟು ವಯಸ್ಸು ನಿಮ್ಮಕ್ಕಂಗೆ' ಎಂದೆ.

'ನನಗಿಂತ ಐದಾರು ವರ್ಷ ದೊಡ್ಡೋಳು. ಮೂವತ್ತಾಗಿರಬಹುದು. ನನಗೆ ಅವಳೊಬ್ಬಳೇ ಅಕ್ಕ. ಇನ್ನಾರೂ ನನಗಿಲ್ಲ' ಎಂದು ಹೇಳಿ ಅಳತೊಡಗಿದ.

ಅವನ ಸೈಕಲ್ಲನ್ನು ನಮ್ಮ ಮನೆಯಲ್ಲೇ ಬಿಟ್ಟ. ಕಾರಿನಲ್ಲಿ ನನ್ನ ಜೊತೆ ಕುಳಿತ. ಅವನ ಮನೆಗೆ ಹೋದೆವು.

ಮಂಚದ ಮೇಲೆ ರೋಗಿಯನ್ನು ಮಲಗಿಸಿದ್ದರು. ದೃಢ ಆರೋಗ್ಯದಿಂದಿದ್ದ ಮೂವತ್ತರ ಪ್ರಾಯದಾಕೆ. ಮೂರು ಮಕ್ಕಳೂ ಮಂಚದ ಸುತ್ತಾ ಅಳುಮುಖ ಮಾಡಿಕೊಂಡು ಕುಳಿತಿದ್ದರು. ನನ್ನನ್ನು ಕಂಡಕೂಡಲೆ, ರೋಗಿಯ ಕಾಲುಗಳನ್ನು ತಿಕ್ಕುತ್ತಾ ಮಂಚದ ತುದಿಯಲ್ಲಿ ಕೂತಿದ್ದ ಗಂಡ ಎದ್ದು 'ಅರ್ಧ ಗಂಟೆಯ ಹಿಂದೆ ತಟ್ಟಂತ ಜ್ಞಾನ ತಪ್ಪಿತು, ಡಾಕ್ಟರೇ ! ಚೆನ್ನಾಗಿಯೇ ಮಾತನಾಡುತ್ತಿದ್ದಳು. ಯಾವ ಕಾಯಿಲೆಯೂ ಇರಲಿಲ್ಲ. ಹೀಗೇಕಾಯಿತೋ, ದೇವರಿಗೇ ಗೊತ್ತು. ಸ್ವಲ್ಪ ಕಾಫಿಯನ್ನು ಕುಡಿಸಿದರೆ ಚೇತರಿಸಿಕೊಳ್ಳುತ್ತಾಳೇನೋ ಅಂತ, ಸ್ಟ್ರಾಂಗ್‌ಕಾಫಿ ಮಾಡಿ ತಂದೆ. ಗದುಗು ಹಾಕಿಕೊಂಡಿರುವ ಬಾಯಿನಂಚಿನಲ್ಲಿ ಒಂದು ಚಮಚ ಕಾಫಿ ಹಾಕಿದೆ. ಕಟವಾಯಿನಲ್ಲಿ ಅದು ಹೊರಕ್ಕೆ ಬಂತು. ಎಷ್ಟು ಕೂಗಿದರೂ ಮಾತಿಲ್ಲ. ಏನಾದರೂ ಮಾಡಿ ಬದುಕಿಸಿ, ಡಾಕ್ಟರೇ!' ಎಂದು ಕೇಳಿದ.

'ಅಂಗಳದಲ್ಲಿ ಮಾತಾಡುತ್ತಾ ನಾವೆಲ್ಲಾ ಕುಳಿತಿದ್ದೆವು. ಅಲ್ಲೇ ಜ್ಞಾನ ತಪ್ಪಿ

ಬಿದ್ದದ್ದು. ಎಲ್ಲರೂ ಕೂಡಿ, ಎತ್ತಿಕೊಂಡು ಬಂದು ಮಂಚದ ಮೇಲೆ ಮಲಗಿಸಿದೆವು.' ಎಂದ ನನ್ನ ಕರೆದಿದ್ದ ತಮ್ಮ ಹೇಳಿದ.

ರೋಗಿಯ ಕೈಕಾಲುಗಳೆಲ್ಲವೂ ಸೆಟೆದುಕೊಂಡು ಅಸ್ತಾವಸ್ಥೆಯಾಗಿ ಬಿದ್ದಿದ್ದುವು. ದಿಟವಾಗಿ ಜ್ಞಾನವು ತಪ್ಪಿದ್ದರೆ, ಮಾಂಸಖಂಡವು ಸೆಟೆದುಕೊಂಡಿರುವುದು ವಿರಳ. ನಾಡಿಯು ಸರಿಯಾಗಿ ಬಡಿಯುತ್ತಿತ್ತು. ಕಣ್ಣುಗಳು ಮುಚ್ಚಿಕೊಂಡಿದ್ದುವು. ಆದರೆ ರೆಪ್ಪೆಗಳು ಥರಥರಿಸುತ್ತಿದ್ದುವು. ಕಟವಾಯಿನಿಂದ ಹರಿದು ಬಂದಿದ್ದ ಕಾಫಿಯು ಗಲ್ಲದ ಮೇಲೆ ಹೆಪ್ಪುಗಟ್ಟಿದಂತಿತ್ತು. ಅದನ್ನು ಗಂಡ ಒರೆಸುವುದಕ್ಕೆ ಮುಂಚೆಯೇ ನಾನು ಬಂದಿದ್ದಿರಬೇಕು.

ಹಿಸ್ಟಿರಿಯಾ ಪ್ರದರ್ಶನವಿದು ಎಂಬುದು ಸ್ಪಷ್ಟವಾಗಿತ್ತು. 'ಏನಾಗುತ್ತಾ ಇದೆಯಮ್ಮಾ, ತಲೆ ತಿರುಗ್ತಾ ಇದೆಯೇ ?' ಎಂದು ಕೇಳುತ್ತಾ, ಮುಚ್ಚಿಕೊಂಡಿದ್ದ ಕಣ್ಣು ರೆಪ್ಪೆಗಳನ್ನು ಬಿಡಿಸತೊಡಗಿದೆ. ಭದ್ರವಾಗಿ ರೆಪ್ಪೆಗಳನ್ನು ಆಕೆ ಮುಚ್ಚಿಕೊಂಡಿದ್ದಳು. ಬಲಪ್ರಯೋಗವನ್ನು ಮಾಡಿ, ನೋವಾದರೂ ಚಿಂತೆಯಿಲ್ಲ ಎಂದು ಜುಲುಮಿನಿಂದ ರೆಪ್ಪೆಗಳನ್ನು ಬಿಡಿಸಿದೆ, ಮೇಲು ರೆಪ್ಪೆಯನ್ನು ಎತ್ತಿದೆ. ಆಗ ಆಕೆಯ ಕಣ್ಣುಗಳ ಕಪ್ಪು ಗುಡ್ಡೆಗಳು ನನ್ನನ್ನು ನೋಡಲೇಬೇಕಾಯಿತು. ನೋಡಿದಳು. ಡಾಕ್ಟರು ಎಂಬುದನ್ನು ಗುರುತಿಸಿದಳು. ಆಕೆಯ ರೆಪ್ಪೆಗಳಿಂದ ಬೆರಳುಗಳನ್ನು ತೆಗೆದೆ. ಕಣ್ಣು ಕಣ್ಣು ಬಿಟ್ಟು ಪಿಳ ಪಿಳ ನೋಡಿದಳು. ಎದ್ದು ಕುಳಿತು ಸೆರಗನ್ನು ಸರಿಮಾಡಿಕೊಂಡಳು.

'ಏನಾಯ್ತು ? ನನಗೆ. ತಲೆಯೆಲ್ಲಾ ಯಾಕೆ ಒದ್ದೆಯಾಗಿದೆ ?' ಎಂದು ಕೇಳಿದಳು.

'ಅಂಗಳದಲ್ಲಿ ಮಾತನಾಡುತ್ತಾ ಇದ್ದುದು ಜ್ಞಾಪಕವಿಲ್ಲವೇ, ಅಕ್ಕ ! ಜ್ಞಾನ ತಪ್ಪಿ ಹಠಾತ್ತನೆ ಬಿದ್ದು ಬಿಟ್ಟೆ. ನೆತ್ತಿಗೆ ತಣ್ಣೀರು ತಟ್ಟಿ ಇಲ್ಲಿಗೆ ಎತ್ತಿಕೊಂಡು ಬಂದು ಮಲಗಿಸಿದೆವು' ಎಂದು ತಮ್ಮ ಆತುರ ಆತುರವಾಗಿ ಹೇಳಿದ.

'ಈಗ ಸರಿಯಾಗಿದ್ದಾರಲ್ಲಾ ! ಇನ್ನೇನೂ ಗಾಬರಿ ಇಲ್ಲವಲ್ಲ. ಒಂದೊಂದು ಸರ್ತಿ ಪಿತ್ತ ಹೆಚ್ಚಾದರೆ, ಹೀಗೆ ಜ್ಞಾನ ತಪ್ಪಿದಂತಾಗುತ್ತೆ. ಬಿಸಿಬಿಸಿ ಕಾಫಿಯನ್ನು ಕುಡಿಸಿರಿ. ಊಟವಾಗಿದೆ ತಾನೆ ? ನಾನೂ ಮನೆಗೆ ಹಿಂತಿರುಗಿ ಊಟವನ್ನು ಮುಗಿಸುತ್ತೇನೆ' ಎಂದು ಹೇಳಿ ಹೊರಕ್ಕೆ ಬಂದೆ.

ಕಾಫಿಯನ್ನು ಆಕೆ ಕುಡಿದಳು. ಬಾಗಿಲು ತನಕ ಆಕೆಯೂ, ಗಂಡ, ಮಕ್ಕಳೂ ಬಂದು ನನ್ನನ್ನೂ ಆಕೆಯ ತಮ್ಮನನ್ನೂ ಬೀಳ್ಕೊಟ್ಟರು. ನಮ್ಮ ಮನೆಯಲ್ಲಿ ಬಿಟ್ಟಿದ್ದ ಸೈಕಲ್ಲನ್ನು ಅವ ಹಿಂತಿರುಗಿ ತೆಗೆದುಕೊಂಡು ಹೋಗಬೇಕಾಗಿದ್ದುದರಿಂದ,

ಅವನೂ ನನ್ನ ಜೊತೆಯಲ್ಲಿ ಹಿಂತಿರುಗುವವನಿದ್ದ.

ಕಾರಿನಲ್ಲಿ ಹಿಂತಿರುಗುವಾಗ, ಆ ಮಾತು ಈ ಮಾತು ಆಡುತ್ತಾ, ವಿವರಗಳನ್ನು ತಮ್ಮನಿಂದ ತಿಳಿದುಕೊಂಡೆ. ತಮ್ಮನಿಗೆ ನಾಲ್ಕು ವರ್ಷ ವಯಸ್ಸಾಗಿದ್ದಾಗ, ತಾಯಿಯು ತೀರಿಕೊಂಡಿದ್ದಳು. ಅಂದಿನಿಂದ ಇರುದಯ ಮೇರಿಯು ತಮ್ಮನನ್ನು ಸಾಕುತ್ತಿದ್ದಳು. ಮದುವೆಯಾಗಿ ಗಂಡನ ಮನೆಗೆ ಆಕೆಯು ಪಟ್ಟಣಕ್ಕೆ ಬಂದಳು. ಪಟ್ಟಣದಲ್ಲಿ ಓದುವುದಕ್ಕೆ ಹೆಚ್ಚು ಸೌಕರ್ಯವಿರುತ್ತೆ ಎಂದು, ಎರಡನೆಯ ಮದುವೆಯನ್ನು ಮಾಡಿಕೊಂಡಿದ್ದ ತಂದೆಯು ಸಂತೋಷದಿಂದ ಮೊದಲ ಹೆಂಡತಿಯ ಮಗನನ್ನು ಕಳುಹಿಸಿಕೊಟ್ಟಿದ್ದ. ಪಟ್ಟಣದಲ್ಲಿ ಅಕ್ಕನ ಮನೆಯಲ್ಲಿರಬೇಕಾದಾಗ, ಭಾವನು ಯಾವ ರೀತಿಯಲ್ಲಿ ನಡೆದುಕೊಳ್ಳುತ್ತಾನೋ ಎನ್ನುವ ಕಾತರವು ತಮ್ಮನಿಗೆ ಇರುತ್ತೆ. ಆದರೆ ಭಾವನು ಕೂಡ ಬಲು ಆದರದಿಂದ ಇವನನ್ನು ನಡಸಿಕೊಂಡನಂತೆ. ದಂಪತಿಗಳು ಬಹಳ ಅನ್ಯೋನ್ಯವಾಗಿದ್ದ ಸಂಸಾರ. ಶ್ರೀಮಂತರಲ್ಲದಿದ್ದರೂ, ಬಡತನದ ಬೇಗೆಯು ಅವರನ್ನು ತಟ್ಟಿರಲಿಲ್ಲ. ದೇವರು ದಿಂಡರು ಎಂದರೆ ತುಂಬಾ ಭಕ್ತಿ. ಮನೆಯವರೆಲ್ಲರೂ ಪ್ರತಿ ಭಾನುವಾರವೂ ಇಗರ್ಜಿಗೆ ತಪ್ಪದೆ ಹೋಗಿ ಪ್ರಾರ್ಥನೆ ಸಲ್ಲಿಸಿ ಬರುತ್ತಿದ್ದರು. ಈ ಮಾತು ಹೇಳಿದಾಗ ತಮ್ಮನು ತುಸು ಉದ್ವೇಗಿಯಾದ.

'ನಾನೂ ತಪ್ಪದೆ ಇಗರ್ಜಿಗೆ ಹೋಗಿ ಬರುತ್ತೇನೆ, ಡಾಕ್ಟರೇ ! ಅಕ್ಕನಿಗೆ ಸಂತೋಷವಾಗಲಿ ಅಂತ, ಆದರೆ ಜಾತಿ ಮತ ಎನ್ನುವ ಅತಿ ಮಡಿವಂತಿಕೆ ನನಗೆ ಹಿಡಿಸುಲ್ಲ' ಎಂದು ಹೇಳಿದ.

ಇವನ್ಯಾಕೆ ಉದ್ವೇಗಗೊಂಡ ಎಂದು ನನ್ನ ಕುತೂಹಲವು ಕೆರಳಿತು. ಆದ ಕಾರಣ 'ಹಾಗೇಕೆ ಅಂತೀ' ಎಂದೆ. 'ನಿನ್ನ ಅಭಿಪ್ರಾಯವೇ ನನ್ನದೂನೂ ಈ ವಿಷಯದಲ್ಲಿ. ಆದರೆ ನೀನು ಸಂಪ್ರದಾಯಸ್ಥರ ಮನೆಯಲ್ಲಿ ಬೆಳೆದವ. ಹೀಗನ್ನ ಬೇಕಾದರೆ ಏನಾದರೂ ಕಾರಣವಿರಬೇಕು' ಎಂದು ಕುಮ್ಮಕ್ಕು ಕೊಟ್ಟೆ, ಅವನ ಬಾಯಿ ಬಿಡಿಸಲು. ಸ್ವಲ್ಪಕಾಲ ಎಳ್ಳಂಬಳಸೆ ಮಾಡಿದ ಮೇಲೆ ಅವನು ವಿಷಯವನ್ನು ತಿಳಿಸಿದ.

ಇವ ಆಡಿಟರ್ ಪರೀಕ್ಷೆಗೆ ಓದುತ್ತಿದ್ದ. ಜೊತೆಯಲ್ಲಿ ಓದುತ್ತಿದ್ದ ತರುಣಿ ಯೊಬ್ಬಳಲ್ಲಿ ಇವ ಅನುರಕ್ತನಾಗಿದ್ದ. ಇವನನ್ನು ಕಂಡರೆ ಆಕೆಯೂ ಬಾಯಿ ಬಿಡುತ್ತಿದ್ದಳು. ಇವನನ್ನು ಮದುವೆಯಾಗುವುದಕ್ಕೆ ಅವಳೂ ಸಮ್ಮತಿಸಿದ್ದಳು. ಆದರೆ ಅವಳು ಅನಾಥಾಲಯದಲ್ಲಿ ಬೆಳೆದ ಹುಡುಗಿ. ಜಾಣ ವಿದ್ಯಾರ್ಥಿನಿ. ಆದುದರಿಂದ ವಿದ್ಯಾರ್ಥಿವೇತನವನ್ನು ತಪ್ಪದೆ ಪಡೆದು ಓದನ್ನು ಮುಂದುವರಿಸಿದ್ದಳು.

ಆದರೆ ಅವಳು ಕ್ರಿಶ್ಚಿಯನ್ ಹುಡುಗಿಯಲ್ಲ. ರೋಮನ್ ಕ್ಯಾಥೋಲಿಕ್ ಅಲ್ಲ. ತಂದೆ ತಾಯಿಯರ ಜಾತಿ ಯಾವುದು ಎಂದು ತಿಳಿಯದೆ ಇದ್ದಿದ್ದರೂ, ಹಿಂದೂ ಅನಾಥಾಲಯದಲ್ಲಿ ಶೈಶವದಿಂದ ಬೆಳೆದಿದ್ದಳು. ಹಿಂದೂ ಎಂದು ನಂಬಿಕೊಂಡಿದ್ದಳು.

ಈ ವಿಷಯದಲ್ಲಿ ಅಕ್ಕ ಮತ್ತು ಭಾವನ ಜೊತೆಯಲ್ಲಿ ಹಲವಾರು ತಿಂಗಳುಗಳಿಂದಲೂ ಇವನು ವಾಗ್ವಾದ ಮಾಡುತ್ತಿದ್ದ. ಈ ಮಧ್ಯಾಹ್ನ ವಾಗ್ವಾದದ ಬಿಸಿ ಏರಿತ್ತು. 'ಏನೇ ಹೇಳಿ ನೀವು, ನಾನು ಖಂಡಿತ ಅವಳನ್ನೇ ಮದುವೆಯಾಗುವುದು. ಮನೆ ಬಿಟ್ಟು ಈಗಲೇ ಹೋಗು ಅಂದರೆ ಹೋಗುತ್ತೀನಿ. ಜಾತಿ ಮತ ಇವುಗಳಲ್ಲಿ ನನಗೆ ನಂಬಿಕೆ ಇಲ್ಲ.' ಎಂದು ಖಡಾ ಖಂಡಿತವಾಗಿ ಹೇಳಿದ್ದ. 'ಎಳೆಯ ಮಗುವಾಗಿದ್ದಾಗಿನಿಂದಲೂ ನಿನ್ನ ಸಾಕಿದ್ದೆನಲ್ಲಾ ! ತಾಯಿಯಿಲ್ಲದ ತಬ್ಬಲಿ ಅಂತ ಎಷ್ಟೆಲ್ಲಾ ಆದರಿಸಿದೆ. ಇಷ್ಟೆಲ್ಲಾ ಪ್ರೀತಿಯನ್ನು ತೋರಿಸಿದ್ದಕ್ಕೆ ಇದೇ ನಿನ್ನ ಕಡೆಯ ಮಾತೇನೋ?' ಎಂದು ಇರುದಯ ಮೇರಿ ಉದ್ವೇಗದಿಂದ ನುಡಿದಿದ್ದಳು. ಹಠಾತ್ತನೆ ಜ್ಞಾನ ತಪ್ಪಿ ಬಿದ್ದು ಬಿಟ್ಟಿದ್ದಳು.

ಹೊಟ್ಟೆಯಲ್ಲಿ ಹುಟ್ಟಿದ ಮಗನಿಗಿಂತ ಹೆಚ್ಚು ಆದರದಿಂದ ಇರುದಯ ಮೇರಿ ತಮ್ಮನನ್ನು ಸಲಹಿದ್ದಳು. ತಾನು ಹೇಳಿದಂತೆ ಕೇಳುತ್ತಾನೆ. ತಾನು ನಿಶ್ಚಯಿಸಿದ ಹುಡುಗಿಯನ್ನು ಮರು ಮಾತಾಡದೆ ಒಪ್ಪಿ ಮದುವೆಯಾಗುತ್ತಾನೆ. ತಾನು ಮೆರೆಯಬಹುದು ಎಂದೆಲ್ಲಾ ಇರುದಯ ಮೇರಿ ಮನಸ್ಸಿನಲ್ಲಿ ಮಂಡಿಗೆಯನ್ನು ಮೆಲ್ಲುತ್ತಿದ್ದಳು. ಇನ್ನೊಂದು ಜಾತಿಯ ಹುಡುಗಿಯನ್ನು ಮದುವೆಯಾಗಿ, ಬೇರೆ ಹೋಗಿ ಸಂಸಾರ ಮಾಡುತ್ತಾನೆ ಎಂದಾಗ ಅವಳ ಮನಸ್ಸಿಗೆ ತೀವ್ರ ಆಘಾತವಾಯಿತು.

ಆಗ ಹಿಸ್ಟಿರಿಯಾ ಪ್ರದರ್ಶನವು, ಜ್ಞಾನ ತಪ್ಪಿರುವಂತೆ, ನಾಟಕ ನಡೆಸಿತು. 'ಹಿಸ್ಟಿರಿಕಲ್ ಫಿಟ್' ಬಡಿಯಿತು. ಹೀಗೆಲ್ಲಾ ನಾಟಕವಾಡಿ ಫಿಟ್ ಬಂದಂತೆ ಆಗಬೇಕು ಎಂದು ಇರುದಯ ಮೇರಿ ಖಂಡಿತವಾಗಿ ಯೋಚಿಸಿರಲಿಲ್ಲ. ಅವಳ ಅರಿವಿಲ್ಲದೇ, ಆಳಮನಸ್ಸಿನಲ್ಲಿ ಹೂಡಿದ ಯೋಜನೆ ಇದು. ಫಿಟ್ ಬಡಿದಾಗ ತಮ್ಮನೇನೋ ಅಕ್ಕನ ವಿಷಯದಲ್ಲಿ ತುಂಬಾ ಕಾತರವನ್ನು ತೋರಿಸಿದ. ಆದರೆ ಅದೇ ರೀತಿ ಬಾಳಿನುದ್ದಕ್ಕೂ ಇರಲು ಸಾಧ್ಯವೇ ? ಇದೆಲ್ಲಾ ವಿಚಾರಗಳನ್ನು ಹಿಸ್ಟಿರಿಯಾ ರೋಗಿಗಳು ಮಾಡಲು ಸಾಧ್ಯವಿರುವುದಿಲ್ಲ.

**ರಾಮಾಂಜನಿಯ ತೋಳು**

ಸುಮಾರು ೨೦ ವರ್ಷಗಳಾಗಿರಬಹುದು, ನಮ್ಮ ರಾಮಾಂಜನಿಗೆ, ಕಳೆದ

ಎಂಟು ಹತ್ತು ವರ್ಷಗಳಿಂದ ನಮ್ಮ ಬಡಾವಣೆಯಲ್ಲಿ ಅಂಚೆಪೇದೆಯಾಗಿದ್ದಾನೆ. ಸ್ವಲ್ಪ ಮಂಕು ಅಂತಲೇ ಹೇಳಬೇಕು. ಆದುದರಿಂದಲೇ ಏನೋ ಗಾಣದ ಎತ್ತಿನಂತೆ ದುಡಿಯುತ್ತಿದ್ದ. ನೆಗಡಿ, ಕೆಮ್ಮು, ತಲೆನೋವು, ಮೂಗು ನೋವು, ಅಂತ ಆಗಿಂದಾಗ್ಗೆ ಚಿಕಿತ್ಸೆಗೆ ಬರುತ್ತಿದ್ದ. ಹೆಚ್ಚು ಮಾತನಾಡುವ ಸ್ವಭಾವದವನಲ್ಲ. ಹ್ಞು, ಉಹ್ಞುಗಳಿಂದಲೇ ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಡುತ್ತಿದ್ದ.

ಒಂದು ಬೆಳಿಗ್ಗೆ ಸಂಪಿಗೆ ಮರದ ಮನೆಗೆ ಕಾಗದವನ್ನು ವಿಲೇವಾರಿ ಮಾಡಲು ಹೋಗಿದ್ದನಂತೆ. ಆ ಮನೆಯವರು ಹೊಸ ನಾಯಿಯೊಂದನ್ನು ತಂದಿಟ್ಟುಕೊಂಡಿದ್ದರಂತೆ. ಇವನನ್ನು ಕಂಡು, ಕಟ್ಟಿ ಹಾಕಿದ್ದ ನಾಯಿಯು ಬೊಗಳಿತಂತೆ. ಧಡೂತಿ ನಾಯಿಯ ಭರ್ಜರಿ ಬೊಗಳುವಿಕೆಗೆ, ರಾಮಾಂಜನಿಯು ಬೆಬ್ಬರ ಬೆದರಿದನಂತೆ. ಕಾಂಪೌಂಡಿನಿಂದ ರಸ್ತೆಗೆ ಹಿಂದೇಟು ನೆಗೆದನಂತೆ.

ರಸ್ತೆಯಲ್ಲಿ ಆ ವೇಳೆಗೆ ಸರಿಯಾಗಿ ಲಾರಿಯೊಂದು ಬರುತ್ತಿತ್ತಂತೆ. ಸೇಂದಿಯನ್ನು ತುಂಬಿಕೊಂಡು ಬರುತ್ತಿದ್ದ ಲಾರಿ. ಅಂದಮೇಲೆ ಅದರ ವಜನ್ ಕೇಳಬೇಕೆ? ಸೇಂದಿಯನ್ನು ತುಂಬಿಕೊಂಡು, ಡ್ರೈವರ್ ಲಾರಿಯನ್ನು ಚಲಾಯಿಸುತ್ತಿದ್ದ. ಅಂದಮೇಲೆ ಲಾರಿಯ ವೇಗವನ್ನು ಕೇಳಬೇಕೇ ?

ಹಠಾತ್ತನೆ ಹಿಮ್ಮೆಟ್ಟಿ ರಸ್ತೆಗೆ ಬಿದ್ದಿದ್ದ ರಾಮಾಂಜನಿಯ ಎಡ ತೋಳಿಗೆ ಲಾರಿಯ ಬಲಗಡೆಯ ಮಡ್‌ಗಾರ್ಡ್ ಗುಮ್ಮಿತು. ಅವನ ಪುಣ್ಯ. ಇಲ್ಲದೆ ಇದ್ದಿದ್ದರೆ ಲಾರಿಯ ಚಕ್ರದ ಕೆಳಗೆ ಸಿಕ್ಕಿಹಾಕಿಕೊಂಡು ರಾಮಾಂಜನಿಯು ಅಪ್ಪಚ್ಚಿಯಾಗಬೇಕಾಗಿತ್ತು. ಎಡತೋಳಿಗೆ ಮೂಗುಪೆಟ್ಟು ಬಲವಾಗಿ ಬಿದ್ದಿತ್ತು.

ಅದೇ ಲಾರಿಯಲ್ಲಿ, ಡ್ರೈವರು ರಾಮಾಂಜನಿಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋದ. ಅಲ್ಲಿದ್ದ ಡಾಕ್ಟರು ಸಂಪೂರ್ಣವಾಗಿ ಪರೀಕ್ಷೆಯನ್ನು ಮಾಡಿ, ಎಕ್ಸ್‌ರೇಗಳನ್ನು ತೆಗೆಸಿನೋಡಿ, 'ಅಂತಹುದೇನೂ ಪೆಟ್ಟು ಬದ್ದಿಲ್ಲ. ಮೂರು ನಾಲ್ಕು ದಿನಗಳಲ್ಲಿ ವಾಸಿಯಾಗುತ್ತೆ' ಎಂದು ಭರವಸೆಯನ್ನು ಕೊಟ್ಟರು. ಸೂಕ್ತ ಚಿಕಿತ್ಸೆಯನ್ನು ಮಾಡಿದರು. ಅಪಘಾತದ ಸುದ್ದಿಯನ್ನು ಕೇಳಿದ ಲಾರಿಯ ಮಾಲಿಕರು, ಆಸ್ಪತ್ರೆಗೆ ಧಾವಿಸಿ ಬಂದು ರಾಮಾಂಜನಿಯನ್ನು ವಿಚಾರಿಸಿದರು. ಮುಂದೆ ಅನಾನುಕೂಲವಾಗದಿರಲಿ ಎಂದು ಪೋಲಿಸ್ ಠಾಣೆಗೆ ಹೋಗಿ ವರದಿಯನ್ನು ಒಪ್ಪಿಸಿದರು.

'ಪೊಲೀಸ್ ಮೊಕದ್ದಮೆಯಾಗುತ್ತದೆ. ಆದಕಾರಣ ವಿವರಗಳೆಲ್ಲವೂ ತೃಪ್ತಿಕರವಾಗಿರಬೇಕು, ಡಾಕ್ಟರೆ' ಎಂದು ವಾರ್ಡಿನ ಡಾಕ್ಟರಿಗೆ ಎಚ್ಚರಿಕೆಯನ್ನು ಕೊಟ್ಟರು.

ವಾರ್ಡಿನ ಡಾಕ್ಟರು, ಅಗತ್ಯವಾದುದೆಲ್ಲವನ್ನೂ ಮಾಡಿದ್ದರು. ಆದರೆ ನ್ಯಾಯಾಸ್ಥಾನದಲ್ಲಿ ಎಂತೆಂತಹ ಪ್ರಶ್ನೆಗಳನ್ನು ಕೇಳುತ್ತಾರೋ ಏನೋ ! ನನಗ್ಯಾಕೆ ಇದರ ಜವಾಬ್ದಾರಿ ಎಂದುಕೊಂಡು, ಆಸ್ಪತ್ರೆಯ ಹಿರಿಯ ವೈದ್ಯರು ಮೂವರನ್ನು ಕರಸಿ, ಅವರ ಸಲಹೆಗಳನ್ನು ಗುರ್ತು ಮಾಡಿಸಿದರು, ರೋಗಿಯ ವರದಿಯಲ್ಲಿ.

ಮೂರು ನಾಲ್ಕು ದಿನಗಳಲ್ಲಿ ವಾಸಿಯಾಗುತ್ತೆ ಎಂದು ಡಾಕ್ಟರು ಮೊದಲು ಹೇಳಿದಾಗ, ರಾಮಾಂಜನಿಗೆ ಸಂತೋಷವಾಗಿತ್ತು. ಘೋರವಾಗಬಹುದಾಗಿದ್ದ ಆಘಾತವು ಇಷ್ಟರಲ್ಲೇ ಪರ್ಯವಸಾನವಾಯಿತಲ್ಲ ಎನ್ನುವ ಸಮಾಧಾನ. ಆದರೆ ಮೂರು ನಾಲ್ಕು ಜನ ಡಾಕ್ಟರುಗಳು ಬಂದು, ಮೇಲಿಂದ ಮೇಲೆ ಪರೀಕ್ಷೆಯನ್ನು ಮಾಡಿ, ಸ್ವಹಸ್ತದಲ್ಲಿ ವರದಿಯ ಹಾಳೆಗಳನ್ನು ತುಂಬಿದ್ದನ್ನು ನೋಡಿದ, ಇಷ್ಟೆಲ್ಲಾ ತಪಾಸು ಮಾಡಬೇಕಾದರೆ, ನನಗೇನೋ ಆಗಿದೆ, ಅಥವಾ ಮುಂದೆ ಆಗಬಹುದು ಎನ್ನುವ ಅನುಮಾನವು ಮೂಡಿತು.

ರಾಮಾಂಜನಿಯ ಹೇಳಿಕೆಯನ್ನು ಬರೆದುಕೊಳ್ಳಲು ಪೋಲೀಸಿನವರು ಬಂದರು. ಆದುದನ್ನು ಸರಿಯಾಗಿ ಹೇಳು, ಸಾಕಷ್ಟು ಪರಿಹಾರ ಧನವನ್ನು ಲಾರಿಯ ಮಾಲೀಕರಿಂದ ಗಿಟ್ಟಿಸಬಹುದು. ಅವರು ತಾನೇ ತಮ್ಮ ಕೈಯಿಂದ ಕೊಡುತ್ತಾರೆಯೇ? ಇನ್ಸೂರೆನ್ಸ್ ಕಂಪನಿ ಪೀಕುತ್ತೆ. ಪೀಕಲಿ ಕಣೋ,' ಎಂದು ಲಘುವಾಗಿ ಹೇಳಿದ್ದರು.

ಐದಾರು ದಿನಗಳಾದವು. ಎಡತೋಳನ್ನೆತ್ತಲು ರಾಮಾಂಜನಿಗೆ ಸಾಧ್ಯವಾಗಲಿಲ್ಲ. ಎರಡು ವಾರಗಳಾದರೂ ಗುಣಮುಖವಾಗಲಿಲ್ಲ. ಬದಲು ನೋವು ಕಾಣಿಸಿಕೊಂಡಿತು. ಹೆಚ್ಚಾಗುತ್ತಲೂ ಹೋಯಿತು. ಡಾಕ್ಟರು ಎಷ್ಟು ಭರವಸೆಯನ್ನು ಕೊಟ್ಟು ತೋಳನ್ನೆತ್ತು ಎಂದು ಹುರಿದುಂಬಿಸಿದರೂ, ರಾಮಾಂಜನಿಯು ತೋಳನ್ನು ಎತ್ತಲು ಸಾಧ್ಯವಾಗಲೇ ಇಲ್ಲ.

ನ್ಯಾಯಾಸ್ಥಾನದಲ್ಲಿ ಮೊಕದ್ದಮೆಯು ಮೂರು ವರ್ಷಗಳ ಕಾಲ ನಡೆಯಿತು. ಕಡೆಗೆ ಎಂಟುನೂರು ರೂಪಾಯಿಗಳ ಪರಿಹಾರ ಧನವು ದೊರಕಿತು, ಆದರೆ ಬಿದ್ದ ತೋಳು ಪುನಃ ಸ್ವಸ್ಥವಾಗಲೇ ಇಲ್ಲ.

ನನಗೆ ಸಂಭವಿಸಿದ ಅಪಘಾತವು ಅಷ್ಟೇನೂ ಘೋರವಾದುದಲ್ಲ ಎಂದು ರಾಮಾಂಜನಿಗೆ ಆಸ್ಪತ್ರೆಗೆ ಹೋಗಿ, ಮೊದಲ ಪರೀಕ್ಷೆಯಾದ ನಂತರ, ಸಮಾಧಾನವಾಗಿತ್ತು. ಆದರೆ ಮೇಲಿಂದ ಮೇಲೆ ಹಲವಾರು ಡಾಕ್ಟರುಗಳು ಬಂದು ವಿಧ ವಿಧ ಪರೀಕ್ಷೆಗಳನ್ನು ಮಾಡಿದಾಗ, ನನಗೇನೋ ಆಗಬಾರದ್ದು

ಆಗುತ್ತೆ ಎನ್ನುವ ಸಂಶಯವು ಮೂಡಿತ್ತು. ಅದು ದೃಢವಾಗುತ್ತಲೂ ಇತ್ತು. ಪರಿಹಾರ ಧನವು ದೊರಕುತ್ತದೆ. ಅಪಘಾತದ ನೆಪದಿಂದಾಗಿ ಲಾಭವನ್ನು ಪಡೆಯಬಹುದು, ಎಂಬುದು ತಿಳಿಯಿತು. ವಿಚಾರ ಮಾಡುವ ಯೋಗ್ಯತೆಯು ಇರಲಿಲ್ಲ. ತೋಳು ಸರಿಹೋಗಿ ಕೆಲಸಕ್ಕೆ ಹಿಂತಿರುಗಿದರೆ ಇನ್ನೂ ಹೆಚ್ಚು ಸಂಪಾದಿಸಬಹುದು ಎನ್ನುವ ವಿವೇಚನೆಯು ಬರಲಿಲ್ಲ. ಆಗ ಹಿಸ್ಟಿರಿಯಾ ತೆರನ ಪ್ರದರ್ಶನವು ಭದ್ರವಾಯಿತು. ಬಲವಾಗಿ ಬೇರೂರಿದ ಈ ಪ್ರವೃತ್ತಿಯು ಸ್ಥಿತವಾಯಿತು. ಪರಿಹಾರ ಧನವು ದೊರೆತರೂ, ಸ್ಥಿರವಾಗಿದ್ದುದರಿಂದ ಹಿಸ್ಟಿರಿಯಾ ಪ್ರದರ್ಶನವು ಮುಂದುವರೆಯಿತು.

ಇದೇ ರೀತಿಯಲ್ಲಿ ಅಪಘಾತಗಳಾದಾಗ, ತಲೆಗೆ ಅಲ್ಪ ಸ್ವಲ್ಪ ಪೆಟ್ಟು ಬಿದ್ದರೂ, ಅದೇ ಕಾರಣದಿಂದಾಗಿ ಸದಾಕಾಲ ಕಾಡುವ ತೀವ್ರವಾದ ತಲೆ ಶೂಲೆಯು ಉಂಟಾಗಬಹುದು. ಅದರಂತೆಯೇ ದೃಷ್ಟಿ ದೋಷವೂ ಪ್ರಾರಂಭವಾಗಬಹುದು. ಕಿವುಡೂ ಕಾಣಿಸಿಕೊಳ್ಳಬಹುದು. ಇತರರ ಕಣ್ಣಿಗೆ ಬಡಿಯುವಂತೆ ಕಾಣಿಸುವ ನ್ಯೂನತೆಗಳನ್ನೇ ಹಿಸ್ಟಿರಿಯಾ ಪ್ರದರ್ಶನದಲ್ಲಿ ಕಾಣುತ್ತೇವೆ.

ಅಪಘಾತದ ಹಿಸ್ಟಿರಿಯಾ ಪ್ರದರ್ಶನಕ್ಕೆ ಇತಿಮಿತಿಯೇ ಇಲ್ಲ. ಇವುಗಳಲ್ಲಿ ಮುಖ್ಯವಾದ ಅಂಶಗಳೆಂದರೆ ೧. ಹಿಸ್ಟಿರಿಯಾ ಪ್ರವೃತ್ತಿಯು ಹುಟ್ಟು ಜಾಯಮಾನವಾಗಿರುವುದು. ೨. ಅದಕ್ಕಿಂತಲೂ ಪರಿಣಾಮಕಾರಿಯಾದ ಅಂಶವೆಂದರೆ ಪರಿಸರದ ಪ್ರಭಾವ–Environmental Factors. ೩. ಯಾವುದಾದರೂ ಒಂದು ರೀತಿಯ ಪ್ರಯೋಜನವನ್ನಾಗಲೀ ಲಾಭವನ್ನಾಗಲೀ ಪಡೆಯುವುದು. ಮೂಲವಾದ ಈ ಮೂರೂ ಕಾರಣಗಳಿಂದ Traumatic Hysteria, ಅಪಘಾತದ ಹಿಸ್ಟಿರಿಯಾ ಉಂಟಾಗುತ್ತದೆ.

ಆದರೆ ಇನ್ನು ಕೆಲವರಲ್ಲಿ ದೊರಕಬಹುದಾದ ಲಾಭದ ಅರಿವು ತೋರಮನಸ್ಸಿನಲ್ಲಿ ಸ್ಪಷ್ಟವಾಗಿರುತ್ತದೆ. ಅವರುಗಳೂ ನ್ಯೂನತೆಯ ಪ್ರದರ್ಶನವನ್ನು ಮಾಡುತ್ತಾರೆ. ಆದರೆ ಸ್ವಂತ ಇಚ್ಛೆಯಿಂದ, ಯೋಚನೆ ಮಾಡಿ, ಯೋಜನೆಯನ್ನು ಹೂಡುತ್ತಾರೆ. Malingerers, ನಟಿಸುವವರು, ಎಂಬ ಗುಂಪು ಇವರದು. ಸೈನ್ಯದ ಹಾಜರಾತಿಯಿಂದ ತಪ್ಪಿಸಿಕೊಳ್ಳುವವರಲ್ಲಿ ಇಂತಹವರು ಬಹುಸಂಖ್ಯೆಯಲ್ಲಿರುತ್ತಾರೆ.

ಮಗುವಿಗೆ ಹುಟ್ಟಿದ ಹಬ್ಬವನ್ನು ಮಾಡಬೇಕು, ಎಂದು ಆಫೀಸಿನಲ್ಲಿ ರಜವನ್ನು ಕೇಳಿದರೆ, ಕೊಡುತ್ತಾರೆಯೇ? ಅದರ ಬದಲು ತಲೆನೋವು, ಹೊಟ್ಟೆ ಮುರಿತ ಎಂದು ರಜೆ ಬೇಡಿದರೆ ಸುಲಭವಾಗಿ ದೊರೆಯುತ್ತದೆ. ಲಘುವಾದ

ಈ ಸಾಮಾನ್ಯ ವರ್ತನೆಯ ಉಲ್ಬಣಿಸಿದ ಘೋರ ರೂಪಾಂತರವೇ ನಟನೆ, Malingering.

ಅಪಘಾತದ ಹಿಸ್ಟಿರಿಯಾವನ್ನು, ನಟನೆಯ ಪ್ರದರ್ಶನಗಳಿಂದ ಬೇರ್ಪಡಿಸ ಬೇಕಾದರೆ, ಬಹಳ ಶ್ರಮವನ್ನು ವಹಿಸಬೇಕು. ಕಣ್ಣಲ್ಲಿ ಕಣ್ಣಿಟ್ಟುಕೊಂಡು ಪರೀಕ್ಷಿಸಬೇಕು. ತುಂಬಾ ಅನುಭವವನ್ನು ಪಡೆದ ನುರಿತ ವೈದ್ಯರ ಕಣ್ಣಿಗೂ ಹಲವು Malingerers ಮಣ್ಣೆರಚುತ್ತಾರೆ.

**ಮುದ್ದುಕೃಷ್ಣನ ರಚ್ಚೆ**

ಮುದ್ದು ಮುದ್ದಾಗಿತ್ತು. ಮೂರು ವರ್ಷದ ಗಂಡು ಮಗು. ದುಂಡುದುಂಡಾಗಿ ಬೆಳೆದಿದ್ದ ಮಗು, ಸುಂದರವಾಗಿದ್ದ ಮಗು, ಕಂಡವರಿಗೆ ಕೆನ್ನೆ ಚಿವುಟೋಣ ಎನ್ನಿಸುತ್ತಿತ್ತು. ಹುಟ್ಟಿದಾಗಲೇ ದುಂಡುದುಂಡಾಗಿದ್ದುದರಿಂದ ಅದರ ಅಜ್ಜಿ 'ಮುದ್ದು ಕೃಷ್ಣ' ಎಂದು ನಾಮಕರಣವನ್ನು ಹಠಹಿಡಿದು ಮಾಡಿಸಿದಳು. ಅಜ್ಜಿಯ ತದ್ರೂಪ ಮಗು. 'ಮುಂದೆ ಬೇಕಾದರೆ ಇನ್ನು ಯಾವುದಾದರೂ ಹೆಸರಿಟ್ಟುಕೊಳ್ಳಿ. ನಾನನ್ಕ ಮುದ್ದು ಕೃಷ್ಣ ಅಂತಲೇ ಕರೆಯುವುದು' ಎಂದು ಅಜ್ಜಿಯ ವಾದ. ಕಡೆಗೆ ಅದೇ ಹೆಸರು ಶಾಶ್ವತವಾಯಿತು.

ಒಂದು ವರ್ಷದ ಮಗುವು ಓಡಾಡುವುದಕ್ಕೆ ಪ್ರಾರಂಭಿಸಿತು. ಅದರ ಕಾಲಿನಲ್ಲಿ ಭಗವಂತ ಚಕ್ರವನ್ನು ಇಟ್ಟಿದ್ದನೋ ಏನೋ, ಮನೆಯಲ್ಲೆಲ್ಲಾ ಎಡಬಿಡದೆ ಸುತ್ತಾಡುತ್ತಿತ್ತು. ಅರೆಕ್ಷಣ ಒಂದು ಕಡೆ ನಿಲ್ಲದು. ಅರಿಶಿನ ಕುಂಕುಮಕ್ಕೆಂದು, ಪಕ್ಕದ ಮನೆಗೆ ಮಗುವನ್ನೆತ್ತಿಕೊಂಡು ಅಮ್ಮ ಹೋದರೆ, ಅಲ್ಲಿ ತೆಪ್ಪಗಿತ್ತು ಅಂತೀರಾ! ಹೊಸ ಸ್ಥಳ, ಹೊಸ ಮುಖ ಅಂತ ಸಂಕೋಚವೇನಾದರೂ ಇತ್ತು ಅಂತೀರಾ? ಉಹ್ಞೂ, ಅಡೆತಡೆಯಿಲ್ಲದೆ ಆ ಮನೆಯಲ್ಲೆಲ್ಲಾ ಮುದ್ದು ಕೃಷ್ಣ ಅಡ್ಡಾಡುತ್ತಿದ್ದ. ಕಂಡದ್ದಕ್ಕೆ ಕೈ ಹಾಕುವುದು, ಸಿಕ್ಕಿದ್ದನ್ನು ಹಿಡಿಯುವುದು, ಪಾದರಸದಂತೆ ಹರಿದಾಡುವುದು. 'ಎಷ್ಟು ಚೂಟಿಯಾಗಿದೆಯೇ, ಮಗು.' ಅಂತ ಹೆಣ್ಣುಗಳೆಲ್ಲಾ ಎತ್ತಿಕೊಂಡು ಮುದ್ದಿಡುತ್ತಿದ್ದರು.

ಹದಿನೆಂಟು ತಿಂಗಳು ವಯಸ್ಸಾದಾಗ, ಮಗುವಿನ ಕೈಯಲ್ಲಿದ್ದ ಚಾಕುವನ್ನು ಅಮ್ಮ ಒಂದು ಮಧ್ಯಾಹ್ನ ಕಿತ್ತುಕೊಂಡಳು. 'ಇದೆಲ್ಲಿ ಸಿಕ್ತು ಇದರ ಕೈಗೆ. ಕಣ್ಣು ಮೂಗನ್ನು ಊನ ಮಾಡಿಕೊಂಡು ಬಿಡುತ್ತಲ್ಲಾ, ಅರಿಯದ ಮಗು' ಎಂದು ಗಾಬರಿಯಾದ ತಾಯಿ ಚಾಕುವನ್ನು ಕಂಡಕೂಡಲೇ ಜಟ್ಟಂತ ಕಿತ್ತುಕೊಂಡುಬಿಟ್ಟಳು. ಹಠಹಿಡಿದು ಮಗು ಅಳುವುದಕ್ಕೆ ಶುರು ಮಾಡಿತು. ಎಷ್ಟು ಸಮಾಧಾನ ಮಾಡಿದರೂ

ರಚ್ಚೆಯನ್ನು ಮಗು ನಿಲ್ಲಿಸಲಿಲ್ಲ. ಚಂಡಿ ಹಿಡಿದು ಮಗು ಗಟ್ಟಿಯಾಗಿ ಅಳತೊಡಗಿತು. ಅರೆಕ್ಷಣದಲ್ಲಿ ಉಸಿರು ಸಿಕ್ಕಿಕೊಂಡಿತು. ಕೆಲವು ಸೆಕೆಂಡುಗಳು, ಒಳಕ್ಕೆ ಉಸಿರು ಹೋಗಲೇ ಇಲ್ಲ. ಮುಖವು ನೀಲಿಗಟ್ಟಿತು. ಕೈ ಕಾಲುಗಳು ಒಂದೆರಡು ಬಾರಿ ಚಿಮ್ಮಿದುವು, ಅಮ್ಮ, ಅಜ್ಜಿ, ಎಲ್ಲರೂ 'ಅಯ್ಯಯ್ಯೋ' ಅಂತ ಅಳುವುದಕ್ಕೆ ಶುರು ಮಾಡಿದರು. ಮುದ್ದು ಕೃಷ್ಣನ ಆಟ ಮುಗಿಯಿತೇನೋ ಎಂದವರ ಭಯ. ಒಂದೆರಡು ನಿಮಿಷಗಳಲ್ಲಿ, ಮನೆಯಲ್ಲಿ ಕೆಲಸಮಾಡುತ್ತಿದ್ದಾಕೆಯು ಇದನ್ನು ಕಂಡು ಚಿಟಿಕಿ ಹಾಕಿದಳು. ದೊಡ್ಡ ಉಸಿರನ್ನು ಮುದ್ದು ಕೃಷ್ಣ ಎಳೆದುಕೊಂಡ. ನಂತರ ಸರಾಗವಾಗಿ ಉಸಿರಾಡಲು ಆರಂಭಿಸಿದ. ನೀಲಿಯಾಗಿದ್ದ ಮುಖವು ಕೆಂಚಗಾಯ್ತು. ಹಾಗೆಯೇ ನಿದ್ರೆ ಹೋದ. ಹದಿನೈದು ಇಪ್ಪತ್ತು ನಿಮಿಷಗಳಾದ ಮೇಲೆ ಮಗು ಎಚ್ಚರಗೊಂಡಿತು. ಯಥಾಪ್ರಕಾರ ಸರಿದಾಡಲು ಪ್ರಾರಂಭಿಸಿತು. ಚಾಕು ಎಲ್ಲಿ ಎಂದು ತಿರುಗಿ ಕೇಳಲಿಲ್ಲ. ಮರೆತೇ ಬಿಟ್ಟಿತ್ತು.

ಮೂರು ನಾಲ್ಕು ವರ್ಷಗಳಾಗುವ ತನಕ, ಚಂಡಿಹಿಡಿದು ಅತ್ತಾಗಲೆಲ್ಲ, ಮುದ್ದು ಕೃಷ್ಣನಿಗೆ, ಹೀಗೆಯೇ ಆಗುತ್ತಿತ್ತು. ಮೊದಮೊದಲು ವಾರಕ್ಕೊಂದೆರಡು ಬಾರಿ ಹೀಗಾಗುತ್ತಿತ್ತು. ವಯಸ್ಸು ಹೆಚ್ಚಿದಂತೆಲ್ಲ ತಿಂಗಳಿಗೊಮ್ಮೆ ಮೂರು ತಿಂಗಳಿಗೊಮ್ಮೆ ಆಗತೊಡಗಿತು. ನಾಲ್ಕನೆಯ ಹುಟ್ಟಿದ ಹಬ್ಬದ ಹೊತ್ತಿಗೆ ಹೀಗಾಗುವುದು ನಿಂತುಹೋಯಿತು.

Tantrums ಎಂದು ಕರೆಯಲ್ಪಡುವ ಈ ಪ್ರವೃತ್ತಿಯು ಕೆಲವು ಮಕ್ಕಳಲ್ಲಿ ಕಾಣಬರುತ್ತದೆ.

ಮೆದುಳು ಮತ್ತು ನರಮಂಡಲವು ಮಕ್ಕಳಲ್ಲಿ ಸಂಪೂರ್ಣವಾಗಿ ವ್ಯವಸ್ಥೆಯಾಗದೆ ಇರುವುದರಿಂದ, ರೇಗಿ ಚಂಡಿ ಹಿಡಿದಾಗ ಒಂದೆರಡು ಕ್ಷಣ ಉಸಿರು ನಿಂತು ಹೋಗುತ್ತದೆ. ಮಗುವಿನ ಮುಖವು ಆಗ ನೀಲಿಗಟ್ಟುತ್ತದೆ. ಕೆಲವೊಮ್ಮೆ ಜ್ಞಾನವೂ ತಪ್ಪಿ ಹೋಗುತ್ತದೆ. ಕೆಲವು ನಿಮಿಷಗಳಲ್ಲಿ ಉಸಿರಾಡುವುದು ಸರಿಹೋಗುತ್ತದೆ. ನೋಡುತ್ತಿರುವವರಿಗೆ ಆ ಕೆಲವು ನಿಮಿಷಗಳು ಯುಗಗಳಂತೆ ಭಾಸವಾಗುತ್ತದೆ.

ಕೆಲವು ಎಳೆಯ ಮಕ್ಕಳಲ್ಲಿ ಮಾತ್ರ ಹೀಗಾಗುತ್ತದೆ. ಬೆಳಯುತ್ತ ಬೆಳೆಯುತ್ತ ಕಡಿಮೆಯಾಗುವ, ಕೊನೆಗೆ ನಿಂತು ಹೋಗುವ, ಈ ಬೇನೆಗೆ ತಾತ್ಕಾಲಿಕ ಶಮನವು ಮಾತ್ರ ಸಾಕು, ದೀರ್ಘಕಾಲದ ಯಾವ ಚಿಕಿತ್ಸೆಯ ಅಗತ್ಯವೂ ಇರುವುದಿಲ್ಲ. ಮಗುವಿನ ಮನಸ್ಸು ಚಂಚಲ ಸ್ವಭಾವದ್ದು. ಕ್ಷಣಕ್ಷಣಕ್ಕೂ ಬದಲಾಯಿಸುತ್ತಿರುತ್ತದೆ. ಆದರೆ ಆ ಕ್ಷಣದಲ್ಲಿದ್ದ ಗೀಳು ಬಲವಾಗಿರುತ್ತದೆ. ಆ ಗೀಳು ಮಗುವನ್ನು ಪಟ್ಟು

ಹಿಡಿದಿರುತ್ತದೆ. ಆದುದರಿಂದ ಮಗುವೂ ಪಟ್ಟು ಹಿಡಿಯುತ್ತದೆ.

ಇದೇ ತೆರನ ನಡವಳಿಕೆಯು ವಯಸ್ಕರಲ್ಲಿ ಕಂಡು ಬಂದರೆ, ಆಗ ಅದು ಹಿಸ್ಟಿರಿಯಾ ಬೇನೆಯಾಗುತ್ತದೆ. ವಯಸ್ಸಾದ ಮೇಲೆ, ಮೆದುಳು ಮತ್ತು ನರ ಮಂಡಲಗಳು ದೃಢವಾದ ಮೇಲೆ, ಲೋಕಾನುಭವದಿಂದ ಪಕ್ವವಾದ ಮೇಲೆ ಕೂಡ, ಚಂಡಿ ಹಿಡಿದು ರೇಗಿ ರಚ್ಚೆ ಮಾಡಿದರೆ, 'ಇದೇನು, ಇವ ಹಿಸ್ಟರಿಕಲ್ ಆಗಿ ಆಡ್ತಾನೆ' ಎಂದು ಅನ್ನುವುದಿಲ್ಲವೇ?

ಸಾಮಾನ್ಯ ನಡವಳಿಕೆಯಲ್ಲೂ, ಅತಿಯಾಗಿ ಉತ್ಪ್ರೇಕ್ಷೆಮಾಡುವ ಪ್ರವೃತ್ತಿಯು ಕೆಲವರಲ್ಲಿ ಕಾಣಬರುತ್ತದೆ. 'ರಂಗಜ್ಜಿ ಕರಿದ ಕೋಡುಬಳೆಯು ಎಷ್ಟು ರುಚಿಯಾಗಿತ್ತು ಅಂತೀ ; ಎಷ್ಟು ಗರಿಗರಿಯಾಗಿತ್ತು ಅಂತ' ಎಂದು ಹೇಳುವಾಗ ಕೋಡು ಬಳೆಯನ್ನು ಕೈಯಲ್ಲಿ ಹಿಡಿದು, ಜೊಲ್ಲು ಸುರಿಸುತ್ತ, ಮೆಲ್ಲುವಂತೆಯೇ, ಹಾವ ಭಾವ ವಿಲಾಸಗಳಿಂದ ಕೆಲವರು ನಾಟಕ ಮಡುವುದನ್ನು ನೋಡಿಲ್ಲವೇ? ಇಂತಹ ವಿಪರೀತ ನಡವಳಿಕೆಯು ಸರ್ವೇಸಾಮಾನ್ಯವಲ್ಲದಿದ್ದರೂ, ಬೇನೆಯೇನೂ ಅಲ್ಲ. ಒಂದು ಹಂತವನ್ನು ಇದು ಮೀರಿದರೆ ಸಾಮಾನ್ಯ ಜೀವನಕ್ಕೆ ಕಂಟಕವನ್ನುಂಟು ಮಾಡುವಂತಾದಾಗ 'ಹಿಸ್ಟಿರಿಯಾ' ಆಗುತ್ತದೆ.

ಕೆಲವರು ಹಾಸಿಗೆಯನ್ನು ಹಾಸಿಕೊಳ್ಳುವುದನ್ನು ನೋಡಿದರೆ ಮೋಜೆನಿಸುತ್ತದೆ. ಮೊದಲು ಚಾಪೆಯನ್ನು ನೆಲದ ಮೇಲೆ ಹಾಸುತ್ತಾರೆ. ನಂತರ ಅದರ ಮೇಲೆ ಮಲಗಿ ಉದ್ದ ಸರಿಯಾಗುತ್ತದೆಯೇ ಎಂದು ನೋಡುತ್ತಾರೆ. ಹಾಸಿಗೆಯ ಸುರುಳಿಯನ್ನು ಬಿಚ್ಚಿ, ಚಾಪೆಯ ಮೇಲೆ ಹರಡುತ್ತಾರೆ. ಅದರ ಮೇಲೆ ಮತ್ತೊಮ್ಮೆ ಮಲಗಿ ಪರೀಕ್ಷಿಸುತ್ತಾರೆ. ನಂತರ ಎದ್ದು, ಬೆಡ್‌ಷಿಟನ್ನು ಹಾಸುತ್ತಾರೆ. ಸುಕ್ಕು ಬರದಂತೆ ಅದನ್ನು ವೈನ ಮಾಡುತ್ತಾರೆ. ಆ ಮೇಲೆ ದಿಂಬಿನ ಎತ್ತರವು ಸರಿಯಾಗಿದೆಯೇ ಎನ್ನುವುದನ್ನು ಪರೀಕ್ಷಿಸುತ್ತಾರೆ. ನಂತರ ಬ್ಲಾಂಕೆಟ್ಟನ್ನು ಅಣಿಯಾಗಿ ಮಡಿಸಿ ಕಾಲದಸಿಯಲ್ಲಿಡುತ್ತಾರೆ.

'ಬಿದ್ದುಗೊಂಡು ಮಲಗುವುದಕ್ಕೆ, ಅದೂ ಆಯಾಸವಾಗಿರುವಾಗ, ಕಣ್ಣು ಎಳೆದುಕೊಂಡು ಹೋಗುತ್ತಿರುವಾಗ, ಇದೆಲ್ಲಾ ಕರ್ಮ ಯಾಕೋ?' ಎಂದು ರೂಂ ಮೇಟ್ ಹೇಳಿದರೆ, ರೇಗಿ ಹೊಡೆಯುವುದಕ್ಕೆ ಬರುತ್ತಾರೆ.

ಇದು ಕೂಡ ತುಸು ವಿಪರೀತವಾದ ನಡವಳಿಕೆಯೇ. ಕೆಲವು ಪ್ರೌಢರಲ್ಲಿ ಕಾಣಬರುವ ಈ ಮಾಮೂಲು, ಬೇನೆಯೂ ಅಲ್ಲ, ರೋಗವೂ ಅಲ್ಲ. ಒಂದು ರೀತಿಯ ಅಪ್ರಬುದ್ಧ ಮಗುತನ ಅನ್ನಬಹುದು. ಆದರೆ ವಿಪರೀತ ನಡವಳಿಕೆಯು ಉಲ್ಬಣಗೊಂಡರೆ, ಅದರ ಜತೆಗೆ ಸಾಮಾಜಿಕ ಪರಿಸರವೂ ಕ್ರೂರವಾದರೆ ಅನಿರೀಕ್ಷಿತ

ಆಘಾತಗಳು, ಮನಸ್ಸಿಗಾಗಲೀ, ಮೈಯ್ಯಿಗಾಗಲೀ ಸಂಭವಿಸಿದರೆ, ಆಗ ಹಿಸ್ಟಿರಿಯಾದ ವಿವಿಧ ರೂಪಾಂತರ ಪ್ರದರ್ಶನಗಳಲ್ಲಿ ಪರ್ಯವಸಾನವಾಗಬಹುದು. ಅಥವಾ ಇತರ ಮಾನಸಿಕ ಬೇನೆಗಳೂ ಕಾಣಬರಬಹುದು.

ಮುದ್ದು ಕೃಷ್ಣನ ರಚ್ಚೆಯು, ಮೆದುಳು ಸಂಪೂರ್ಣ ಅಭಿವೃದ್ಧಿಯಾಗದೆ ಇರುವ ಆ ವಯಸ್ಸಿನಲ್ಲಿ ಸಹಜವಾದುದು. ಪ್ರೌಢರಾದಮೇಲೂ ಇದೇ ನಡವಳಿಕೆಯು ಮತ್ತೂ ಉಗ್ರವಾಗಿ ಕಾಣಿಸಿಕೊಂಡರೆ, ಹಿಸ್ಟಿರಿಯಾ ಪ್ರದರ್ಶನದಲ್ಲಿ ಅಂತ್ಯವಾಗಬಹುದು. ವ್ಯಾವಹಾರಿಕವಾದ ಪಂಚಾಂಗದ ವಯಸ್ಸಿನಂತೆಯೇ ಮೆದುಳೂ ಅಭಿವೃದ್ಧಿಯಾಗುತ್ತದೆ ಎಂದೇನೂ ಇಲ್ಲ. ಇದನ್ನು ಆಗಲೇ ತಿಳಿದಿದ್ದೇವೆ. ಹಿಸ್ಟಿರಿಯಾ ಬಡಿದವರ ಮನಸ್ಸು immature ಆಗಿರುತ್ತದೆ.

ಈ ತೆರನ ಜನರು ರಾಗಭಾವಗಳನ್ನು ಅತಿಯಾಗಿ ಪ್ರದರ್ಶಿಸುತ್ತಾರೆ. ಕೆಲವು ದಿನಗಳಿಂದ ಕಾಣದೆ ಇದ್ದ ಸ್ನೇಹಿತನನ್ನು ನೋಡಿದರೆ, ಬಾಚಿ ಬಿಗಿಯಾಗಿ ತಬ್ಬಿಕೊಂಡು ತಮ್ಮ ವಿಶ್ವಾಸದ ಪ್ರದರ್ಶನವನ್ನು ಸಂಕೋಚವಿಲ್ಲದೆ ಮಾಡುತ್ತಾರೆ. ಆದರೆ ರಾಗಭಾವಗಳು ಗಾಢವಾಗಿರುವುದಿಲ್ಲ. 'ಏನಮ್ಮಾ ಲೋ' ಎಂದು ಎಲ್ಲರೆದುರಿಗೂ ಬಾಚಿ ತಬ್ಬಿಕೊಂಡು ಆನಂದಭಾಷ್ಪಗಳನ್ನು ತೊಟ್ಟಿಕ್ಕಿಸಿದವರು ; ಅದೇ ಸ್ನೇಹಿತನ ಕಾಲು ಮುರಿದಿದೆ, ಆಸ್ಪತ್ರೆಯಲ್ಲಿದ್ದಾನೆ, ಎಂದು ಕೆಲವು ಕಾಲಾನಂತರ ಹೇಳಿದರೆ 'ಹಾಗಾ' ಎಂದಂದು ತಮ್ಮ ಪಾಡಿಗೆ ತಾವಿರುತ್ತಾರೆ.

ಇತರ ಮಾನಸಿಕ ಉಪದ್ರವಗಳಲ್ಲಿರುವಂತೆ ಹಿಸ್ಟಿರಿಯಾ ಬೇನೆಯಲ್ಲಿಯೂ, ರೋಗಿಯು ಮಾನಸಿಕವಾಗಿ 'ತಾನು' 'ತನ್ನದು' ಎಂಬ ಸ್ವಾರ್ಥ ಭಾವನೆಯನ್ನು ಉಗ್ರವಾಗಿ ಹೊಂದಿರುತ್ತಾನೆ. ಸ್ವಾರ್ಥೀ ಪ್ರವೃತ್ತಿಯು ವಿಚಿತ್ರ ರೂಪುಗಳನ್ನು ಧರಿಸುತ್ತದೆ. ತನ್ನ ಕುರ್ಚಿಯಲ್ಲಿ ಇತರರು ಯಾರೂ ಕೂರಬಾರದು ; ತನ್ನ ಗೆಳತಿಯನ್ನು ಇತರ ಹೆಣ್ಣುಗಳು ಕೂಡ ಮಾತನಾಡಿಸಬಾರದು ; ತನಗೆ ಬಿದ್ದ ಪೆಟ್ಟೇ ಅತಿ ಭಯಂಕರವಾದುದು ; ತನ್ನನ್ನು ಕುಟುಕಿದ ಚೇಳಿಗೆ ಎರಡಂಗುಲದ ಕೊಂಡಿಯಿತ್ತು ; ಇತ್ಯಾದಿ ಇತ್ಯಾದಿ 'ತನ್ನ' ತನವನ್ನೇ ಮುಂದು ಮಾಡುತ್ತಾನೆ.

ಕನಕವಲ್ಲಿಯ 'ಉಕ್ಕೂ ಕ್ರೂ ಕ್ರೋ'ದಲ್ಲಿಯೂ, ಗುಂಡಮ್ಮನ ನಿರ್ಧ್ವನಿಯಲ್ಲಿಯೂ, ಇರುದಯ ಮೇರಿಯು ಜ್ಞಾನ ತಪ್ಪಿದುದರಲ್ಲಿಯೂ ; ಈ ಎಲ್ಲಾ ಹಿಸ್ಟಿರಿಯಾ ಪ್ರದರ್ಶನಗಳಲ್ಲಿ ಮುದ್ದುಕೃಷ್ಣನ ರಚ್ಚೆಯ ಕುರುಹನ್ನು ಕಾಣಬಹುದು. ಕಾಲಕ್ಕೆ ಅನುಗುಣವಾಗಿ, ಮೆದುಳು ಮತ್ತು ಮನಸ್ಸು ಅಭಿವೃದ್ಧಿಯಾಗದೆ ಇರುವುದು ; 'ತನ್ನ' ತನವನ್ನೇ ವಿಪರೀತವಾಗಿ ಬೆಳೆಸಿಕೊಂಡು, 'ತನ್ನತನದ' ಕೋಟೆಯನ್ನು ತನ್ನ ಸುತ್ತಲೂ ನಿರ್ಭೇದ್ಯವಾಗಿ ಕಟ್ಟಿಕೊಳ್ಳುವುದು ;

ರಾಗಭಾವಗಳಲ್ಲಿ ಆಳವಿಲ್ಲದೆ ಇರುವುದು ; ಇವೆಲ್ಲವೂ ಹಿಸ್ಟಿರಿಯಾ ಪ್ರದರ್ಶನದ ಮುಖ್ಯವಾದ, ಹಾಗೂ ಮೂಲಭೂತವಾದ ಕಾರಣಗಳು.

**ಅಜ್ಜನ ಅವಾಂತರ**

ಅರವತ್ತೈದು ವರ್ಷಗಳಾಗಿದ್ದುವು ; ನಮ್ಮ ಮೂಡಲಗಿರಿ ಅಜ್ಜಯ್ಯನಿಗೆ ಕೂದಲು ನರೆತಿದ್ದರೂ ಹೊರವಾಗಿತ್ತು. ಒಂದೆರಡು ಹಲ್ಲುಗಳೇನೋ ಬಿದ್ದಿದ್ದುವು; ಆದರೆ ಎಲಡಿಕೆಯನ್ನು ಜಗಿಯುತ್ತಿದ್ದ. ಬೈಸಾರೆ ಬೇಗನೆದ್ದು ತೋಟದ ಕಡೆಗೆ ಹೋಗಿ ಸುತ್ತಾಡಿಕೊಂಡು ಬರುತ್ತಿದ್ದ. ಹಟ ಅಂದರೆ ಹಟದ ಸ್ವಭಾವ ಅವನದು; ಆ ವಯಸ್ಸಿನಲ್ಲಿ ಕೂಡ ತೆಂಗಿನ ಮರವನ್ನು ಹತ್ತಿ ಕಾಯಿಗಳನ್ನು ಇಳಿಸುತ್ತಿದ್ದ. ಅಷ್ಟು ಧೃಡಕಾಯನೂ ಆರೋಗ್ಯವಂತನೂ ಆಗಿದ್ದ.

ಗ್ರಾಮದಲ್ಲಿರುವ ಯಾವ ಮನೆಯಲ್ಲಾಗಲೀ, ಯಾರಿಗಾದರೂ ಸಮಸ್ಯೆ ಉಂಟಾದರೆ, ಅವರೆಲ್ಲರೂ ಅಜ್ಜಯ್ಯನ ಬಳಿಗೆ ಬಂದು ಸಲಹೆಯನ್ನು ಪಡೆಯುತ್ತಿದ್ದರು. ಅಜ್ಜಯ್ಯನ ಅನುಭವವೂ, ವಾಸ್ತವಿಕ ಜಾಣತನವೂ ಅಧಿಕವಾಗಿದ್ದುದರಿಂದ, ಕೊಟ್ಟ ಸಲಹೆಯನ್ನು ಇತರರು ಅನುಸರಿಸುತ್ತಿದ್ದರು. ವಯಸ್ಸು ಅರವತ್ತನ್ನು ಮೀರಿದ್ದರೂ ಅರುಳು–ಮರುಳಿನ ಛಾಯೆಯೂ ಇರಲಿಲ್ಲ. ಇತರರನ್ನು ಮರುಳು ಮಾಡುವ ಚಾಲೂಕು ಸಾಕಷ್ಟಿತ್ತು.

ವರ್ಷಾವಧಿ ಹಬ್ಬದ ಹಿಂದಿನ ದಿನ ತೆಂಗಿನಕಾಯಿಗಳನ್ನು ಇಳಿಸಲು ತಾನೇ ಮರ ಹತ್ತಿದ. ಅವತ್ತೇನು ಗ್ರಹಚಾರವೋ ಕಾಲು ಜಾರಿತು. ಮೂರಾಳು ಎತ್ತರದಿಂದ ದುಡುಂ ಅಂತ ಬಿದ್ದ. ನೆಲದ ಮೇಲಿದ್ದ ಬೆಣಚುಕಲ್ಲು, ಹಣೆಯ ಮೇಲಂಚಿಗೆ ತಾಕಿತು. ಧಾರಾಕಾರವಾಗಿ ರಕ್ತ ಹರಿಯಿತು. ಬಿದ್ದ ಶಬ್ದವನ್ನು ಕೇಳಿ ತೋಟದ ಆಳುಗಳು ಓಡೋಡಿ ಬಂದರು. ಜ್ಞಾನ ತಪ್ಪಿದ್ದ ಅಜ್ಜಯ್ಯನ ತಲೆಗೆ ಬಿಗಿಯಾಗಿ ಪಟ್ಟಿ ಕಟ್ಟಿ, ಮನೆಗೆ ಎತ್ತಿಕೊಂಡು ಬಂದು ಮಲಗಿಸಿದರು.

ಡಾಕ್ಟರನ್ನು ಕರೆಸಿದರು. ಆತ ಬಂದು ಪರೀಕ್ಷಿಸಿದಾಗ, ಹಣೆಯ ಮೇಲ್ಭಾಗದಲ್ಲಿ ತಲೆಯ ಚಿಪ್ಪು ಒಡೆದಿದೆ ಎಂದು ತಿಳಿಯಿತು. ಸೂಕ್ತ ಚಿಕಿತ್ಸೆಯನ್ನು ನಡಸಿದರು. ಪ್ರಜ್ಞೆಯು ಹಿಂತಿರುಗಲು ಮೂರು ದಿನಗಳಾದುವು. ಒಂದೆರಡು ವಾರಗಳಲ್ಲಿ ಗಾಯವೂ ಮಾಯವಾಯಿತು. ಹಳ್ಳ ಬಿದ್ದ ಗಾಯದ ಕಲೆಯೊಂದನ್ನು ಬಿಟ್ಟರೆ, ಅಜ್ಜಯ್ಯನ ಆರೋಗ್ಯ ಸ್ಥಿತಿಯು ಹಿಂದಿದ್ದಂತೆಯೇ ಸರಿಯಾಗಿತ್ತು.

ಎರಡು ಮೂರು ತಿಂಗಳುಗಳಾದ ಮೇಲೆ ಅಜ್ಜಯ್ಯನ ನಡವಳಿಕೆಯಲ್ಲಿ ತುಸು ಬದಲಾವಣೆಗಳು ಕಂಡುಬಂದುವು. ಎಂದಿನಂತೆ ಬೆಳಗಾಗುತ್ತಲೂ,

ದೈನಂದಿನ ಪ್ರಾತರ್ವಿಧಿ ಮುಗಿಸಿ, ಊಟದ ಹಜಾರಕ್ಕೆ ತಿಂಡಿಯನ್ನು ತಿನ್ನಲು ಬರುತ್ತಿರಲಿಲ್ಲ. ಇದ್ದಲ್ಲಿಂದಲೇ ಮನೆಯವರನ್ನು ಕೂಗಿ 'ಇಷ್ಟು ಹೊತ್ತಾದರೂ, ಮುದುಕನಿಗೆ ಒಂದಿಷ್ಟು ತಿಂಡಿಯನ್ನು ಕೊಡಬಾರದೇನ್ರೇ' ಎಂದು ಸೊಸೆಯರನ್ನು ಗದರಿಸುತ್ತ, ಹಾಗೂ ಮಕ್ಕಳಂತೆ ಗೋಗರೆಯುತ್ತಲೂ ಇದ್ದ. ಸ್ನಾನಕ್ಕೆ ಹೋದಾಗ, ಕೊಳದಪ್ಪಲೆಯಲ್ಲಿ ಸಾಕಷ್ಟು ಬಿಸಿನೀರನ್ನು ತುಂಬಿಟ್ಟಿಲ್ಲ ಎಂದು ಹತ್ತು ಹದಿನೈದು ನಿಮಿಷಗಳು ರಂಪ ಮಾಡುತ್ತಿದ್ದ. ಅಜ್ಜಯ್ಯನನ್ನು ಸಮಾಧಾನಕ್ಕೆ ತರಲು ಬೆಳೆದ ಮಕ್ಕಳಿಗೆ ಸಾಕು ಸಾಕಾಗಿ ಹೋಗುತ್ತಿತ್ತು. ಯೋಗಕ್ಷೇಮವನ್ನು ವಿಚಾರಿಸಲು ಗ್ರಾಮದ ಹಿರಿಯರು ಬಂದರೆ, ಆಮಾತು ಈಮಾತು ಆಡುತ್ತಾ, ಹತ್ತು ವರ್ಷಗಳ ಹಿಂದೆ ತಾ ಮೈಸೂರಿಗೆ ಹೋದುದನ್ನು, ದಸರಾ ಪೋಲೀಸಿನವರನ್ನು ಬೆದರಿಸಿದುದನ್ನೂ ಬಣ್ಣಿಸತೊಡಗಿ, ಬೊಗಳೆ ಕೊಚ್ಚಲಾರಂಭಿಸಿದ. ಗಂಭೀರವಾಗಿ ಮಾತನಾಡುತ್ತಿದ್ದವ ಈಗ ಅಭಿನಯಗಳೊಂದಿಗೆ ನಾಟಕೀಯವಾಗಿ ಆಡಲು ಪ್ರಾರಂಭಿಸಿದ.

ಮಾಮೂಲಾಗಿ ಹಜಾಮತ್ತು ಮಾಡುವ ಕ್ಷೌರಿಕನು ಎಂದಿನಂತೆ ಬಂದ. ಅಜ್ಜಯ್ಯನಿಗೂ ಅವನಿಗೂ ಮೂವತ್ತು ವರ್ಷದ ಪರಿಚಯ. ಆ ದಿನ ಅಜ್ಜಯ್ಯನಿಗೆ ಕ್ಷೌರವನ್ನು ಮಾಡುವಾಗ, ಅಜ್ಜಯ್ಯ ಅಳ್ಳಾಡಿದುದರಿಂದ, ಕೆನ್ನೆಯ ಮೇಲೆ ಸ್ವಲ್ಪ ಚುರುಕ್ ಎನಿಸಿತು. ಐದಾರು ತೊಟ್ಟು ರಕ್ತವೂ ಬಿತ್ತು. ಅಷ್ಟಕ್ಕೆ ಅಜ್ಜಯ್ಯ ಎಷ್ಟು ಅವಾಂತರ ಎಬ್ಬಿಸಿದ ಅಂತ ! ಯಾರದಾದರೂ ಖೂನಿ ಆಗಿದ್ದರೂ ಅಷ್ಟು ಗಲಭೆ ಮಾಡುತ್ತಿರಲಿಲ್ಲ. ಮನೆಯ ಸೂರು ಮುರಿದು ಬೀಳುವ ಹಾಗೆ ಬೊಬ್ಬೆ ಇಟ್ಟ. ಕ್ಷೌರಿಕನ ಮುಖದಿಂದ ನೀರು ಇಳಿಸಿಬಿಟ್ಟ. ಆದರೆ ಇದೇ ಅಜ್ಜಯ್ಯ ಕೇವಲ ಒಂದು ವರ್ಷದ ಹಿಂದೆ ಕಬ್ಬನ್ನು ಕತ್ತರಿಸುತ್ತಿದ್ದ, ಹೆಬ್ಬೆರಳಿಗೆ ಭಾರಿ ಪೆಟ್ಟಾಗಿತ್ತು. ಸುತ್ತಲೂ ಇದ್ದ ಮನೆಯವರೆಲ್ಲಾ ಅಯ್ಯಯ್ಯೋ ಎಂದು ಬೊಬ್ಬಿರಿದರು. ಆದರೆ ಅಜ್ಜಯ್ಯ ಏನು ಮಾಡಿದ್ದ ಗೊತ್ತೆ ? ಒದ್ದೆ ಬಟ್ಟೆಯನ್ನು ಬಿಗಿಯಾಗಿ ಬೆರಳಿಗೆ ಕಟ್ಟಿ, ಕಬ್ಬು ಹೆಚ್ಚುವುದನ್ನು ಮುಂದುವರೆಸಿದ್ದ. ಅಂತಹ ಧೈರ್ಯಶಾಲಿ, ಇವತ್ತು ಕೆನ್ನೆಯಲ್ಲಿ ತುಸು ಚುರುಕ್ ಆದರೆ ಏನೆಲ್ಲಾ ಅವಾಂತರವನ್ನೆಬ್ಬಿಸಿದ.

ಹಾಗಿದ್ದ ಅಜ್ಜಯ್ಯ ಈಗ ನಾಟಕೀಯವಾಗಿ ಮಾತನಾಡುತ್ತ ; ಮಕ್ಕಳಂತೆ ಹಟಹಿಡಿದು ರಂಪ ಮಾಡುತ್ತ ; ಕೆಲವೊಮ್ಮೆ ಎಳೆಯ ಮಕ್ಕಳಂತೆ ಗೋಗರೆಯುತ್ತ; ತಾನು, ತಾನು ಮಾಡಿದ್ದು ಅತಿಶಯ ; ಇತ್ಯಾದಿ ಬೊಗಳೆ ಕೊಚ್ಚುತ್ತಾ ; ಕಂಡವರೆದುರು ನಗೆಪಾಟಲು ಆಗಲು ಕಾರಣವೇನು ? ಇಂತಹ ಪರಿವರ್ತನೆಯು ಹೇಗೆ ಆಯಿತು?

ತೆಂಗಿನಮರದಿಂದ ಬಿದ್ದಾಗ, ತಲೆಯ ಚಿಪ್ಪು ಒಡೆದು, ಮೆದುಳಿನ ಮುಂಭಾಗಕ್ಕೆ ಘಾಸಿ ಮಾಡಿತ್ತು. ಅದೊಂದು ಅರೆಕ್ಷಣ. ಅನಂತರ ಚಿಪ್ಪು ಮಿಡಿದೆದ್ದು ಸ್ವಸ್ಥಾನವನ್ನು ಪಡೆದಿತ್ತು. ಆದರೂ ಆ ವೇಳೆಗೆ ಮೆದುಳಿನಲ್ಲಿ ಗಾಯವಾಗಿತ್ತು. ಹಣೆಯ ಮೇಲೆ ಆಗಿದ್ದ ಗಾಯವು ಕೆಲವು ದಿನಗಳಲ್ಲಿ ವಾಸಿಯಾಯಿತು.

ಆದರೆ ಮೆದುಳಿನಲ್ಲಿ ಹರಿದು ಹೋಗಿದ್ದ ಭಾಗವು ವಾಸಿಯಾಗಲು ಸ್ವಲ್ಪ ಹೆಚ್ಚು ಕಾಲವಾಯಿತು. ಹೀಗಾಗುವಾಗ, ಚರ್ಮದಲ್ಲಿ ಆದಂತೆಯೇ ಮೆದುಳಿನಲ್ಲೂ Scar Tissue ಬೆಳೆಯಿತು. Scar ಅಥವಾ ಗಾಯದ ಕಲೆಯು, ಹಣೆಯ ಮೇಲೆ ಮೊದಲಿನಂತಿದ್ದ ಚರ್ಮದಂತಿರುವುದಿಲ್ಲ ; ಮೆದುಳಿನಲ್ಲಿಯೂ ಹಾಗೆಯೇ, ಚರ್ಮದ Scar ಬೆವರುವುದಿಲ್ಲ. ಚರ್ಮದಂತೆ ಅದು ಇಂದ್ರಿಯ ಕೆಲಸಗಳನ್ನು ಮಾಡಲು ಸಾಧ್ಯವಿಲ್ಲ. ಅದೊಂದು ನಿರ್ಜೀವವಾದ ರಕ್ಷಾಕವಚ ಮಾತ್ರ. ಮೆದುಳಿನಲ್ಲಿ ಮೂಡಿದ Scar ಕೂಡ, ರಕ್ಷೆಯೇ ಹೊರತು, ಆ ಭಾಗದ ಮೆದುಳೂ ಮೊದಲು ಮಾಡುತ್ತಿದ್ದಂತೆ, ಕಾರ್ಯ ಮಾಡಲಾರದು. ಇಂತಹ ಪರಿಸ್ಥಿತಿಗಳಲ್ಲಿ ಮೆದುಳಿನ ಒಂದು ಭಾಗವು ಬೇನೆಯಾಗಿದೆ ಎಂದು ಹೇಳಲಾಗದು ; ಆದರೆ ಅದು ತನ್ನ ಸಾಮಾನ್ಯ ಕಾರ್ಯಗಳನ್ನು ಮಾಡಲು ಯೋಗ್ಯವಾಗಿರುವುದಿಲ್ಲ.

ಹೀಗಾದವರಲ್ಲಿ ಆನಂತರ ಹಿಸ್ಟಿರಿಕಲ್ ನಡವಳಿಕೆಯನ್ನು ಕಾಣುತ್ತೇವೆ. ಅಂತಹವರು ಹಿಸ್ಟಿರಿಕಲ್ ಪ್ರದರ್ಶನವನ್ನು ಪುಸ್ತಕದಲ್ಲಿ ವಿವರಿಸಿದಂತೆ ನಡಸುತ್ತಾರೆ.

ಗಾಯಗಳೊಂದೇ ಅಲ್ಲ ; ಮೆದುಳಿಗೆ ಇತರ ರೋಗಗಳೂ ತಗಲಬಹುದು. ರಕ್ತದ ಒತ್ತಡವು ಅಧಿಕವಾಗಿ, (High Blood Pressure) ಮೆದುಳಿನ ರಕ್ತನಾಳಗಳು ಕಠಿಣವಾಗಿ; ಸಾಕಷ್ಟು ಮತ್ತು ಅಗತ್ಯವಾದಷ್ಟು ರಕ್ತವು ಮೆದುಳಿಗೆ ಸರಬರಾಜಾಗುವುದಿಲ್ಲ. ಆಗ ಕೂಡ ಮೆದುಳಿನ ಕಾರ್ಯಕ್ಕೆ ಅಡಚಣೆಯುಂಟಾಗಿ, ವಯಸ್ಕರು ಮಕ್ಕಳಂತಾಗಲು ಸಾಧ್ಯ.

ಇದರಂತೆಯೇ ಮೆದುಳಿನಲ್ಲಿ ಬೆಳೆಯುವ ಕೆಲವು ಗಡ್ಡೆಗಳೂ ಮೆದುಳಿನ ಸಾಮಾನ್ಯ ಕಾರ್ಯಕ್ಕೆ ಅಡಚಣೆಯನ್ನುಂಟುಮಾಡುತ್ತವೆ. ಮೊದಮೊದಲ ಹಂತದಲ್ಲಿ ಹಿಸ್ಟಿರಿಯಾ ಪ್ರದರ್ಶನದಂತೆ ಇರಲು ಸಾಧ್ಯ.

ಅಂದರೆ ಮುದುಕರಲ್ಲಿ ಕೂಡ ಹಿಸ್ಟಿರಿಯಾದ ಪ್ರದರ್ಶನವನ್ನು ಕಾಣಬಹುದು ಎಂದಂತಾಯಿತು. ಮುದುಕರಾಗುವ ವೇಳೆಗೆ, ಮೆದುಳು ಮತ್ತು ಮನಸ್ಸೂ ಸಂಪೂರ್ಣವಾಗಿ ಅಭಿವೃದ್ಧಿಯಾಗಿರುತ್ತದೆ. ಅಂದಮೇಲೆ ಮಕ್ಕಳಲ್ಲಿ ಕಾಣಬರುವ ಚಿಹ್ನೆಗಳು ಮುದುಕರಲ್ಲಿ ಹೇಗೆ ಸಾಧ್ಯ ಎಂದು ಕೇಳಬಹುದು. ತಲೆಗೆ ತಗುಲಿದ ಆಘಾತದಿಂದ ಮೆದುಳು ಅಸ್ತವ್ಯಸ್ತವಾಗುತ್ತದೆ. ತತ್ಕಾರಣ ಮನಸ್ಸೂ

ಅವ್ಯವಸ್ಥಿತವಾಗುತ್ತದೆ. ತಲೆಗೆ ತಗುಲಿದ ಆಘಾತವು ಹೊರಗಿನ ವಸ್ತುಗಳಿಂದ ಆಗುತ್ತದೆ. ದೇಹದ ಒಳಗಿರುವ ಅಂಗಗಳಲ್ಲಿ ದೋಷವು ಕಂಡುಬಂದರೂ, ಅವುಗಳಲ್ಲಿ ಕೆಲವು ಮೆದುಳಿಗೆ ಆಘಾತವನ್ನುಂಟುಮಾಡುತ್ತವೆ. ರೋಗಾಣುಗಳಿಂದ ಉಂಟಾಗುವ ಮೆನಿಂಜೈಟಿಸ್, ಎನ್‌ಕೆಫಲೈಟಿಸ್, ಇಂತಹ ಬೇನೆಗಳು ಮೆದುಳಿನ ವ್ಯವಸ್ಥೆಯನ್ನು ಕೆಡಿಸುತ್ತವೆ. ಮೆದುಳಿಗೆ ಸರಬರಾಜಾಗುವ ರಕ್ತದ ಪ್ರಮಾಣವು ಕಡಿಮೆಯಾದರೂ ಮನಸ್ಸು ಅವ್ಯವಸ್ಥಿತವಾಗುತ್ತದೆ. ಈಗಾಗಲೇ ತಿಳಿಸಿದಂತೆ ಮೆದುಳಿನಲ್ಲಿ ಬೆಳೆಯುವ ಗಡ್ಡೆಗಳೂ ಇದೇ ಫಲಿತಾಂಶವನ್ನು ನೀಡುತ್ತವೆ. ಈ ಎಲ್ಲ ಕಾರಣಗಳಿಂದ ಮುದುಕರ ಮೆದುಳು ಮಕ್ಕಳ ಅಪೂರ್ಣ ಮೆದುಳಿನಂತೆ ಆಗಿಬಿಡುತ್ತದೆ.

ಸುಮಾರು ಐವತ್ತರ ಪ್ರಾಯದವನೊಬ್ಬ 'ಅಸಾಧ್ಯವಾದ ತಲೆನೋವು ಬಡಿಯುತ್ತದೆ, ನನಗೆ. ಇಂತಹ ತಲೆಯನೋವು ಬಂದಿದ್ದರೆ ಯಾವ ಬ್ರಹ್ಮಾದಿ ಮಗನೂ ಬದುಕುತ್ತಿರಲಿಲ್ಲ, ಮನೋಧೈರ್ಯವಿರುವುದರಿಂದ ನಾನು ತಡೆದುಕೊಂಡಿದ್ದೇನೆ. ಎಂತಹ ಡಾಕ್ಟರುಗಳೋ ನೀವು.' ಎಂದು ರೇಗಿ ಅಲವತ್ತುಕೊಳ್ಳುತ್ತಿದ್ದ. ಎರಡು ಮೂರು ದೊಡ್ಡ ಆಸ್ಪತ್ರೆಗಳಲ್ಲಿ ಅತಿಸೂಕ್ಷ್ಮವಾದ ಪರೀಕ್ಷೆಯನ್ನು ಮಾಡಿದ್ದರು. ತಲೆನೋವನ್ನು ತರುವ ಯಾವ ಕಾರಣವೂ ಸ್ಪಷ್ಟವಾಗಲಿಲ್ಲ. ನಾಟಕೀಯವಾಗಿ ಅವ ತನ್ನ ನೋವನ್ನು ವರ್ಣಿಸುತ್ತಿದ್ದುದರಿಂದ; ತಾನು ಅನುಭವಿಸುತ್ತಿರುವ ತಲೆ ನೋವು ಇನ್ನಾರಿಗೂ ಬಂದಿರಲಿಕ್ಕಿಲ್ಲ ಎಂದು ಅವ ಬೊಗಳೆ ಕೊಚ್ಚುತ್ತಿದ್ದುದರಿಂದ ; ಹಾಗೂ ನಡಸಿದ ಪರೀಕ್ಷೆಗಳಿಂದ ಯಾವ ಬೇನೆಯ ಸುಳಿವೂ ಸಿಗದುದರಿಂದ ; ಇವನ ಅಟಾಟೋಪವೆಲ್ಲವೂ ಪ್ರಾಯಶಃ ಹಿಸ್ಟಿರಿಕಲ್ ಇರಬಹುದು ಎಂದು ಪರೀಕ್ಷಿಸಿದ ತಜ್ಞರೆಲ್ಲರೂ ಸಂಶಯಪಟ್ಟರು.

ತಿಂಗಳಿಗೊಮ್ಮೆ ಹೊಸ ತಜ್ಞರ ಬಳಿ ಪರೀಕ್ಷೆಯನ್ನು ಮಾಡಿಸಿಕೊಳ್ಳುತ್ತಲೇ ಇದ್ದ. ಯಾವ ಪ್ರಯೋಜನವೂ ದೊರಕಲಿಲ್ಲ. ಮಿಕ್ಕಂತೆ, ಈ ಕಾಲಾವಧಿಯಲ್ಲಿ ಉಣ್ಣುಕೊಂಡು, ತಿಂದುಕೊಂಡು, ಅವ ಆರೋಗ್ಯವಾಗಿಯೇ ಇದ್ದ. ಅವನ ದೇಹದ ತೂಕವು ಕಡಿಮೆಯಾಗಲಿಲ್ಲ. ಕೆಲಸವನ್ನು ಗೊಣಗುತ್ತಾದರೂ ಮಾಡುತ್ತಿದ್ದ.

ಆರೇಳು ತಿಂಗಳುಗಳಾದ ಮೇಲೆ ಯಥಾ ಪ್ರಕಾರ ಮಾಡಿದ ಪರೀಕ್ಷೆಯಿಂದ ಮೆದುಳಿನ ಮುಂಭಾಗದಲ್ಲಿ ಸಣ್ಣ ಗಡ್ಡೆ ಬೆಳೆಯುತ್ತಿರಬಹುದು ಎಂದು ಅನುಮಾನವು ಮೂಡಿತು. ಅದನ್ನು ಖಚಿತಪಡಿಸುವುದಕ್ಕಾಗಿ ಇತರ ವಿಶೇಷ ಪರೀಕ್ಷೆಗಳನ್ನು ಮಾಡಲಾಯಿತು. ಅನುಮಾನವು ಖಚಿತವಾಯಿತು. ಶಸ್ತ್ರ ಚಿಕಿತ್ಸೆಯನ್ನು ಮಾಡಿದಾಗ ಸಣ್ಣಗಡ್ಡೆಯೊಂದು ಇತ್ತು. ಅದನ್ನು ಸಂಪೂರ್ಣವಾಗಿ ತೆಗೆದುಹಾಕಲು ಸಾಧ್ಯವೂ

ಆಗಿತ್ತು. ಆದಕಾರಣ ಶಸ್ತ್ರಚಿಕಿತ್ಸೆಯು ಸಂಪೂರ್ಣ ಯಶಸ್ವಿಯಾಯಿತು. ಅದಾದಮೇಲೆ 'ತಲೆನೋವು' ಅಂತ ಅವ ನರಳಲೇ ಇಲ್ಲ.

ಗಡ್ಡೆಯು ಬೆಳೆಯತೊಡಗಿದ್ದಾಗ, ಅತಿ ಪುಟ್ಟದಾಗಿದ್ದುದರಿಂದ, ಸುತ್ತಲೂ ಆರೋಗ್ಯದಿಂದಿದ್ದ ಮೆದುಳಿನ ಭಾಗವು ಮುಚ್ಚಿಕೊಂಡಿದ್ದುದರಿಂದ ತಜ್ಞರ ಪರೀಕ್ಷೆಯಲ್ಲೂ ಪತ್ತೆಯಾಗಲಿಲ್ಲ. ಆ ಕಾಲದಲ್ಲಿ ಅನುಭವಿಸುತ್ತಿದ್ದ ರೋಗಿಯು ಹಿಸ್ಟಿರಿಯಾ ಪ್ರದರ್ಶನವನ್ನು ಮಾಡುತ್ತಿದ್ದ. ಗಡ್ಡೆಯು ಮೆದುಳನ್ನು ತುಸು ಒತ್ತುತ್ತಲೇ ಇದ್ದಿರಬೇಕು.

ಒಂದು ಪ್ರಮಾಣಕ್ಕೆ ಗಡ್ಡೆಯು ಬೆಳೆದಾಗ ಪತ್ತೆಯಾಯಿತು. ಅದನ್ನು ತೆಗೆದುಹಾಕಿದ ಮೇಲೆ, ತಲೆನೋವು ತಿರುಗಿ ಬರದೇ ಇದ್ದುದರಿಂದ, ಆ ಗಡ್ಡೆಯೇ ತಲೆನೋವಿಗೂ, ಹಿಸ್ಟಿರಿಯಾದಂತಹ ಪ್ರದರ್ಶನಕ್ಕೂ ಕಾರಣ ಎಂದು ಖಂಡಿತವಾಯಿತು.

ಹಿಸ್ಟಿರಿಯಾ ಪ್ರದರ್ಶನವನ್ನು ಎಳೆಯರಲ್ಲಿಯೂ ಕಾಣಬಹುದು : ಪೌಗಂಡ ವಯಸ್ಸಿನ ಯುವಕ-ಯುವತಿಯರಲ್ಲೂ ಕಾಣಬಹುದು. ಮದುಕರಲ್ಲಿಯೂ ನೋಡಬಹುದು. ಹೆಂಗಸರಲ್ಲಿ ಈ ಪ್ರದರ್ಶನವು ಸ್ವಲ್ಪಮಟ್ಟಿಗೆ ಅಧಿಕವಾಗಿರುತ್ತದೆ. ಆದರೆ ಗಂಡಸರಲ್ಲಿಯೂ ಕಂಡುಬರುತ್ತದೆ.

ಬಡವರು ಬಲ್ಲಿದರು ಎನ್ನುವ ವ್ಯತ್ಯಾಸವನ್ನು ಹಿಸ್ಟಿರಿಯಾವು ಗಮನಿಸುವುದಿಲ್ಲ. ಮಂಕರು, ಹಿಂದುಳಿದವರು, ಗುಡ್ಡಗಾಡಿನವರು, ಜಾಣರು, ಮುಂದುವರಿದವರು, ನಾಗರಿಕರು, ಇವರೆಲ್ಲರಲ್ಲಿಯೂ ಹಿಸ್ಟಿರಿಯಾ ಪ್ರದರ್ಶನವನ್ನು ಕಾಣಬಹುದು. ಆದರೆ ಚುರುಕು ಬುದ್ಧಿಯವರಲ್ಲಿ, ಸುಸಂಸ್ಕೃತರಲ್ಲಿ, ಈ ಬೇನೆಯು ತುಂಬಾ ಕಡಿಮೆಯಾಗಿರುತ್ತದೆ.

ಇತರ ಮಾನಸಿಕ ಅವ್ಯವಸ್ಥೆಗಳೊಂದಿಗೂ, ಹಿಸ್ಟಿರಿಯಾವು ಜತೆಯಾಗಬಹುದು. ಅದರಲ್ಲೂ ಆತಂಕದಿಂದ 'Anxiety Syndrome' ನರಳುವವರಿಗೆ ಹಿಸ್ಟಿರಿಯಾವೂ ಮೇಲು ಹೊದಿಕೆಯಾಗಬಹುದು. ಸಾಮಾನ್ಯವಾಗಿ ಆಗಿಯೂ ಆಗುತ್ತದೆ. ಒಂದೇ ರೋಗಿಯಲ್ಲಿ, ಆತಂಕ ಮತ್ತು ಹಿಸ್ಟಿರಿಯಾಗಳು ಈಗ ಇದು, ಆಗ ಇನ್ನೊಂದು, ಹೀಗೆ ಕಣ್ಣುಮುಚ್ಚಾಲೆಯಾಡುತ್ತ ಕಾಡುವುದು ಸಾಮಾನ್ಯ.

**ಹಿಸ್ಟಿರಿಯಾದ ಚಿಕಿತ್ಸೆ**

'ಉಕ್ಕ್ರೊ, ಕ್ರೊ ಕ್ರೊ' ಎಂದು ಅವಲಕ್ಷಣವಾಗಿ ಕರ್ಕಶಿಸುತ್ತಿದ್ದ ಕನಕವಲ್ಲಿಯು

ಸೂಕ್ತ ಚಿಕಿತ್ಸೆಯಾದ ನಂತರ, 'ಉಕ್ರೊ, ಕ್ರೋ'ವನ್ನು ನಿಲ್ಲಿಸಿದಳು. ಆದರೆ, ಕತ್ತಿನಲ್ಲಿ ಈ ನರವು ಮಿಡಿಯುತ್ತದೆ, ಹಸ್ತದ ಮಣಿಕಟ್ಟಿನ ನರವು ಬಡಿಯುತ್ತದೆ, ಎಂದು ಒದ್ದಾಡುತ್ತಲೇ ಇದ್ದಳು. 'ಉಕ್ರೊ ಕ್ರೋ' ಸ್ಥಿತಿಯಲ್ಲಿ ಮನೆಗೆಲಸ ಯಾವುದನ್ನೂ ಮಾಡಲಾಗದೆ ಬಿದ್ದಲ್ಲೇ ಒದ್ದಾಡುತ್ತ ಮನೆಯವರನ್ನೆಲ್ಲಾ ಗೋಳುಹುಯ್ದುಕೊಳ್ಳುತ್ತಿದ್ದಳು. ಆದರೆ ಈಗ 'ಇಲ್ಲಿ ಮಿಡಿತ, ಅಲ್ಲಿ ಸೆಳೆತ' ಅಂತ ಗೊಣಗುತ್ತಿದ್ದರೂ, ಎಂತದೋ ಮುಜುಗರವಾಗುತ್ತಿದೆ ಎಂದು ಹೇಳುತ್ತಿದ್ದರೂ, ರೋಗಶೇಷಗಳು ಸ್ವಲ್ಪ ಉಳಿದಿದ್ದರೂ, ಮನೆಗೆಲಸವನ್ನು ಮಾಡುತ್ತಿದ್ದಾಳೆ. ಕಚೇರಿಯ ಕೆಲಸವನ್ನೂ ನಿಭಾಯಿಸುತ್ತಿದ್ದಾಳೆ. ಮಕ್ಕಳನ್ನೂ ಸರಿಯಾಗಿ ನೋಡಿಕೊಂಡು, ಒಳ್ಳೆಯ ತಾಯಿಯಾಗಿದ್ದಾಳೆ. ರೋಗಶೇಷವು ಉಳಿದಿದ್ದರೂ, ಸಾಮಾನ್ಯ ಜೀವನವು ಅಡಚಣೆಯಿಲ್ಲದೆ ಸಾಗುತ್ತಿದೆ.

ಗುಂಡಮ್ಮನ ನಿರ್ಧ್ವನಿಯು ಚಿಕಿತ್ಸೆಯಿಂದ ನಿವಾರಿಸಲ್ಪಟ್ಟಿತು. ಆಕೆಯು ಸರಾಗವಾಗಿ ಮಾತನಾಡುತ್ತಾಳೆ. ಧ್ವನಿಯೇನೋ ಸ್ವಲ್ಪ ಬದಲಾಯಿಸಿದೆ ; ತುಸು ಕರ್ಕಶವಾಗಿದೆ. ಮಾತನಾಡುವಾಗ ಈಗಲೂ ಒಮ್ಮೊಮ್ಮೆ ನರಸಿಂಹ ದೇವರ ಬಾಯಿನ ತರಹ, ತನ್ನ ಬಾಯನ್ನು ಕಷ್ಟಪಟ್ಟು ಹಿಗ್ಗಿಸುತ್ತಾಳೆ. ಆದರೆ ಧ್ವನಿಯು ಸುಲಭವಾಗಿ ಹೊರಡುತ್ತದೆ. ಹೆಣ್ಣನ್ನು ನೋಡಲು ಬಂದಿದ್ದವ, ಹೆಣ್ಣಿನ ಮನೆಯ ಅಚ್ಚುಕಟ್ಟು ಮತ್ತು ಅಂತಸ್ತನ್ನೂ ನೋಡಿ, ಮದುವೆಗೆ ಒಪ್ಪಿದ. ಈಗ ವಾರಣವಾಗಿ ಸಂಸಾರವನ್ನು ಮಾಡಿಕೊಂಡು, ಗುಂಡಮ್ಮ ಗಂಡನೊಂದಿಗೆ ತಂದೆಯ ಮನೆಯಲ್ಲಿಯೇ ಇದ್ದಾಳೆ ; ಸುಖವಾಗಿ.

ಇರುದಯ ಮೇರಿಗೆ ಈಗ ಭವಳಿ ಬಂದು ಜ್ಞಾನ ತಪ್ಪುವುದಿಲ್ಲ. ಮೆಚ್ಚಿದ ತರುಣಿಯನ್ನು ತಮ್ಮನು ಮದುವೆಯಾಗಲು, ನಿರ್ವಾಹವಿಲ್ಲದೆ, ವಾಸ್ತವಿಕ ಸ್ಥಿತಿಯನ್ನು ಮನಗಂಡು, ಒಪ್ಪಿದಳು. 'ನಾಲ್ಕೈದು ಬಾರಿ ಆ ಹುಡುಗಿಯೊಂದಿಗೆ ಮಾತನಾಡಿದೆ. ಕ್ರಿಶ್ಚಿಯನ್ನೋ, ಹಿಂದುವೋ, ತುರುಕರ ಹುಡುಗಿಯೋ, ಯಾರಾದರೇನು ? ತುಂಬಾ ಜಾಣೆ, ಶೀಲವಂತೆ, ಗುಣಸಂಪನ್ನೆ ; ದೊಡ್ಡವರು, ಹಿರಿಯರು, ಎಂದರೆ ಎಷ್ಟು ಮರ್ಯಾದೆಯಿಂದ ನಡೆದುಕೊಳ್ಳುತ್ತಾಳೆ. ಅಂತ' ಎಂದು ಹಲವಾರು ಬಾರಿ ತನ್ನವರೊಂದಿಗೆ ಹೆಮ್ಮೆಯಿಂದ ಹೇಳಲಾರಂಭಿಸಿದ್ದಳು.

'ಕ್ರಿಶ್ಚಿಯನ್ನಾಗಿ ಆ ತರುಣಿಯನ್ನು ಮಾತಾಂತರ ಮಾಡಿಸಿ, ನಂತರ ಮದುವೆ ಮಾಡಿಸಬೇಕು' ಎಂಬ ಆಸೆಯೇನೋ ಇರುದಯು ಮೇರಿಯುಲ್ಲಿ ಹೆಡೆಯಾಡಿಸುತ್ತಿತ್ತು. ಆದರೆ ಆ ಹುಡುಗಿಯು ಈ ಆಸೆಗೆ ತುಂಡುಹಾಕಿತ್ತು. 'ಸಿವಿಲ್ ಮ್ಯಾರೇಜ್ ಆಗುವುದಾದರೆ ನಾನು ಒಪ್ಪುತ್ತೇನೆ. ಮತಾಂತರವನ್ನು ನಾ

ಮಾಡಿಕೊಂಡು, ಅಥವಾ ಆರ್ಯ ಸಮಾಜಕ್ಕೆ ನಿಮ್ಮ ತಮ್ಮನನ್ನು ಸೇರಿಸಿ, ನಂತರ ಮದುವೆಯಾಗುವುದು ಕ್ರಿಮಿನಲ್ ಮ್ಯಾರೇಜ್ ಎಂದು ನನಗನಿಸುತ್ತೆ, ಆದ್ದರಿಂದ ಒಳ್ಳೆಯ ಮನಸ್ಸಿನಿಂದ ಆಶೀರ್ವಾದಮಾಡಿ, ನಮ್ಮ ಪಾಡಿಗೆ ನಾವು ಮದುವೆಯಾಗುತ್ತೇವೆ' ಎಂದು ಆ ತರುಣಿ ವಿನಯವಾಗಿಯಾದರೂ ದೃಢ ನುಡಿಯಿಂದ ಹೇಳಿದ್ದಳು. ಸಿವಿಲ್ ಮ್ಯಾರೇಜ್ ಆಯಿತು ; ಇರುದಯಮೇರಿ ಮತ್ತು ಅವಳ ಗಂಡ, ಇವರೇ ಸಾಕ್ಷೀ ಪುಸ್ತಕಕ್ಕೆ ರುಜು ಹಾಕಿದರು. ಹೆಂಡತಿಯೊಡನೆ ತಮ್ಮ, ಇರುದಯ ಮೇರಿಯ ಮನೆಗೆ ಬಂದಾಗಲೆಲ್ಲ, ಮೇರಿಯ ಮಕ್ಕಳು, ಸೋದರತ್ತೆಯ ಜತೆಗೆ ಜೋತುಬೀಳುತ್ತಿದ್ದುವು. ಇದನ್ನು ಕಂಡು ಇರುದಯಮೇರಿಗೆ ತುಂಬಾ ಸಂತಸವಾಗುತ್ತಿತ್ತು. ತಮ್ಮನಿಗನಕ ಅಪಾರ ಹಿಗ್ಗು.

ಸ್ವಲ್ಪ ಕಾಲಾವಕಾಶವು ದೊರಕಿದರೆ, ಪರಿಸ್ಥಿತಿಯೂ ಸಹಾಯಕವಾಗಿದ್ದರೆ; ಮನಸ್ಸು ತನಗೆ ತಾನೇ ಹೊಸಪರಿಸ್ಥಿತಿಗೆ ಸುಲಭವಾಗಿ ಒಗ್ಗಿ ಹೋಗುತ್ತದೆ.

ರಾಮಾಂಜನೀಯ ತೋಳು, ಹಿಂದಿನಂತೆ ಸ್ವಸ್ಥವಾಗುವ ಭರವಸೆಯೇನೂ ಇಲ್ಲ. ಮೊಕದ್ದಮೆಯ ಸಲುವಾಗಿ ಬಂದ ಪೋಲೀಸಿನವರು, ಪರಿಹಾರಧನದ ಮಾತನ್ನೆತ್ತದೆ ಇದ್ದಿದ್ದರೆ ; ಮೊಕದ್ದಮೆಯ ಭೀತಿಯಿಂದಲೇ ಹಲವಾರು ತಜ್ಞ ವೈದ್ಯರು ಮೇಲಿಂದ ಮೇಲೆ ವಿಧ ವಿಧ ಪರೀಕ್ಷೆಗಳನ್ನು ಮಾಡದೆ ಇದ್ದಿದ್ದರೆ ; ಅವನ ಹಿಸ್ಟಿರಿಕಲ್ ಪ್ರದರ್ಶನದ ಪ್ರವೃತ್ತಿಯು ಬೇರೂರಿ ಬೆಳೆಯುತ್ತಿರಲಿಲ್ಲ. ಆಗ ಅವನು ತೋಳು ಸರಿಯಾಗದೆ ಇದ್ದಿದ್ದರೂ ಯಾವುದಾದರೂ ಕೆಲಸವನ್ನು ಮಾಡಿಕೊಂಡು ಬಾಳುತ್ತಿದ್ದ. ಈಗ ಹಿಸ್ಟಿರಿಕಲ್ ಪ್ರವೃತ್ತಿಯು ಬಲವಾಗಿರುವಾಗ ಈ ಪ್ರದರ್ಶನವೇ ಅವನಿಗೆ ಅತಿಪ್ರಿಯ. ಈ ಪ್ರದರ್ಶನವನ್ನು ಮಾಡುತ್ತಾ, ತೋಳನ್ನು ಮೆರೆಸುತ್ತಾ ಭಿಕ್ಷೆ ಎತ್ತುವುದು ಅಪಮಾನಕರವಲ್ಲ ಎಂದವನಿಗೆ ಅನಿಸುತ್ತದೆ. ಮನಸ್ಸಿನಲ್ಲಿ ದೃಢವಾದ ಈ ಪ್ರವೃತ್ತಿಯು ಬೆಳೆಯದೆ, ಹೋಗಿದ್ದಿದ್ದರೆ, ಅವನ ತೋಳು ಸ್ವಸ್ಥವಾಗುತ್ತಿತ್ತು. ಅಂಚೆ ಪೇದೆಯ ಚಾಕರಿಯನ್ನು ಎಂದಿನಂತೆ ಮಾಡಲೂಬಹುದಿತ್ತು.

ಅಜ್ಜಯ್ಯನ ಅವಾಂತರವನ್ನು ಸರಿಪಡಸಲು ಸಾಧ್ಯವಿಲ್ಲ. ಏಕೆಂದರೆ, ಅವನ ಮೆದುಳಿಗೆ ನಿವಾರಿಸಲಾಗದಂತಹ ಸ್ಥಿತಿಯೊದಗಿದೆ. ಮೆದುಳಿನ ಬದಲು Scar ರೂಪುಗೊಂಡಿದೆ. ಆಪರೇಷನ್ ಮಾಡಿ ಈ Scar tissueವನ್ನು ತೆಗೆಯಬಹುದು. ಆದರೆ ಅವನ ಬ್ಲಡ್ ಪ್ರೆಷರ್ ಅಧಿಕವಾಗಿತ್ತು. ಅಲ್ಲದೆ ಬೀಡಿ ಸೇದಿ ಸೇದಿ, ಅವನ ಶ್ವಾಸಕೋಶಗಳು ಸಮರ್ಪಕವಾಗಿರಲಿಲ್ಲ. ಅಷ್ಟೇ ಅಲ್ಲದೆ ಅವನೂ ಮತ್ತು ಮನೆಯವರೂ ಶಸ್ತ್ರ ಚಿಕಿತ್ಸೆಗೆ ಒಪ್ಪಲಿಲ್ಲ. ಅಂದಮೇಲೆ ಆತನ ನಡವಳಿಕೆಯಲ್ಲಿ

ಯಾವ ಉತ್ತಮ ಪರಿವರ್ತನೆಯನ್ನೂ ನಿರೀಕ್ಷಿಸಲಾಗದು.

ಹಿಸ್ಟಿರಿಯಾ ಪ್ರದರ್ಶನವು ಬೇನೆಯಾಗಿ ಪರಿಣಮಿಸಿದ ಮೇಲೆ, ಉಪಶಮನವನ್ನು ಮಾಡಬಹುದೇ ಹೊರತು, ಸಂಪೂರ್ಣವಾಗಿ ಗುಣಪಡಿಸಲಾಗುವುದಿಲ್ಲ. 'ಹೀನ ಸುಳಿ ಬೋಳಿಸಿದರೆ ಹೋಗುತ್ತ್ಯೇ' ಎನ್ನುವ ಗಾದೆಯು ಹಿಸ್ಟಿರಿಕಲ್ ಪ್ರವೃತ್ತಿಗೆ ಮತ್ತು ಪ್ರದರ್ಶನಕ್ಕೆ ಶತಾಂಶ ಅನ್ವಯಿಸುತ್ತದೆ. ಉಪಶಮನವನ್ನು ಮಾಡಿದರೆ ಅದರ ಘೋರ ರೂಪವು ಹೋಗಿ, ಸೌಮ್ಯಸ್ಥಿತಿಗೆ ಇಳಿಯುತ್ತದೆ. ಸೌಮ್ಯ ಸ್ಥಿತಿಯ ಹಿಸ್ಟಿರಿಯಾ ಇದ್ದರೂ ಕೂಡ, ವೈನವಾಗಿ, ಬಾಳನ್ನು ನಡಸಬಹುದು. ಮನೆಯವರಿಗೆ ಮತ್ತಿತರರಿಗೆ ಗೋಳಾಗದಂತೆ ಸಂಸಾರವನ್ನು ಮಾಡಬಹುದು.

ಚಿಕಿತ್ಸೆಯ ವಿಧಾನಗಳಲ್ಲಿ 'Suggestion' ಸೂಚನೆಯನ್ನು ಕೊಡುವುದು ಎಂಬುದು ಮುಖ್ಯವಾದ ಮತ್ತು ಮೊದಲನೆಯದಾದುದು. ಎಲ್ಲ ತೆರನ ಮಾನಸಿಕ ಬೇನೆಗಳಿಗೂ ಇದು ಅನ್ವಯಿಸುತ್ತದೆ.

'ಖಂಡಿತವಾಗಿ ನಿನ್ನ ಬೇನೆಯು ವಾಸಿಯಾಗುತ್ತದೆ. ನಿನ್ನನ್ನು ಕಾಡುತ್ತಿರುವ ರೋಗದ ಗೋಳುಗಳು ಸ್ವಲ್ಪ ಕಾಲದಲ್ಲೇ ನಿವಾರಣೆಯಾಗುತ್ತವೆ.'

ಎಂದು ವೈದ್ಯನು ನಿರ್ಧಾರದ ಧ್ವನಿಯಲ್ಲಿ ಹೇಳಿದರೆ, ರೋಗಿಯಮನಸ್ಸಿಗೆ ಅದು ಹಿಡಿಸುತ್ತದೆ. ನಿರ್ಧಾರದ ಧ್ವನಿಯು ವೈದ್ಯನಿಂದ ಹೊರಡಬೇಕಾದರೆ, 'ಇದರಿಂದ ಪೂರ್ಣವಾಗಿ ಗುಣವಾಗುತ್ತದೆ' ಎಂಬ ನಂಬಿಕೆಯು ಅವನಲ್ಲಿ ಭದ್ರವಾಗಿರಬೇಕು. 'ಆತ್ಮವಿಶ್ವಾಸ' ಎಂದು ಈ ಮಾನಸಿಕ ಪ್ರೌಢಿಮೆಯನ್ನು ನಮ್ಮ ಹಿರಿಯರು ಹೆಸರಿಸಿದ್ದರು. ಆತ್ಮವಿಶ್ವಾಸವು ವೈದ್ಯರಲ್ಲಿ ಹೊರವಾಗಿದ್ದಾಗ, ರೋಗಿಯ ಮನಸ್ಸಿನ ಮೇಲೆ ಸತ್ಪರಿಣಾಮವನ್ನು ಅದು ಬೀರುತ್ತದೆ. ರೋಗಿಗೆ ಗುಣವೂ ಆಗುತ್ತದೆ.

ದೃಢ ನಂಬಿಕೆಯಿಂದ, ಪೂರ್ಣ ಆತ್ಮವಿಶ್ವಾಸದಿಂದ ನುಡಿದ ಮಾತು, ನುರಿತ, ಕಲಿತ, ವೈದ್ಯಶಾಸ್ತ್ರಜ್ಞದಿಂದಲೇ ನಡೆಯಬೇಕು ಎಂದೇನೂ ಇಲ್ಲ. Suggestion ಅಂತಹವರಿಂದಲೇ ಆಗಬೇಕಾಗಿಲ್ಲ.

ಯಾವುದಾದರೂ ದೇವರ, ಒಂದು ರೂಪವನ್ನು, ದೃಢವಾದ ನಂಬಿಕೆಯಿಂದ ಉಪಾಸನೆಯನ್ನು ನಿತ್ಯ ಮಾಡುವವರು, ಈ ತೆರನ Suggestion ಇನ ಸತ್ಪರಿಣಾಮವನ್ನು ಉಂಟುಮಾಡಬಲ್ಲರು. ನಮ್ಮ ಸಮಾಜದಲ್ಲಿ ಹಲವಾರು ಮಾನಸಿಕ ಪಲ್ಲಟಗಳನ್ನು ಮಂತ್ರಗಳಿಂದ ಗುಣಪಡಿಸುವುದನ್ನು ಕಂಡಿದ್ದೇವೆ. ಅತ್ಮವಿಶ್ವಾಸವಿರುವ ಉಪಾಸಕನು, ರೋಗಿಯ ಮನಸ್ಸಿನ ಮೇಲೆ ಪರಿಣಾಮವನ್ನು

ಹೂಡುತ್ತಾನೆ ; Suggestion ಮೂಲಕ ಎನ್ನಬಹುದು. ಇಂತಹ 'Telepathy' or 'Teletherapy' ಹೇಗೆ ಸಾಧ್ಯ? ಹೇಗಾಗುತ್ತದೆ? ಎನ್ನುವುದು ಇಂದಿನ ಹಂತದ ವಿಜ್ಞಾನಕ್ಕೆ ಇನ್ನೂ ತಿಳಿದುಬಂದಿಲ್ಲ.

ಪ್ರಸಿದ್ಧಿಯನ್ನು ಬಹುಕಾಲದಿಂದಲೂ ಪಡೆದ ದೇವಮಂದಿರಕ್ಕೆ ಯಾತ್ರೆ ಹೋಗಿ, ದೇವರ ಸೇವೆಯನ್ನು ಮಾಡಿದರೆ ಗುಣವಾಗುತ್ತದೆ ಎಂದು ರೋಗಿಯು ನಂಬಿದ್ದರೆ, ಯಾತ್ರೆಗಳೂ ಗುಣಪಡಿಸಬಲ್ಲವು, ಇದೂ ಒಂದು ತೆರನ ಅವ್ಯಕ್ತವಾದ Suggestion ಎಂದೆಂದೋ ಯಾರಾರಿಂದಲೋ ಕೇಳಿದ್ದ ಸುದ್ದಿಗಳು, ರೋಗಿಯ ಮನಸ್ಸಿನ ಹಂದರಗಳಲ್ಲಿ ಪ್ರತಿಷ್ಠಿತವಾಗಿರುತ್ತವೆ ; ಜೀವಂತವೂ ಆಗಿರುತ್ತವೆ.

ಇಂತಹ ಸ್ಮರಣೆಗಳೂ, ಯಾತ್ರೆಗೊಳ್ಳುವ ರೋಗಿಯ ಮನಸ್ಸಿನ ಮೇಲೆ ಪ್ರಭಾವವನ್ನು ಬೀರುತ್ತವೆ. ಆಗ 'Memory Suggestion' ಆಗುತ್ತದೆ. ವೈದ್ಯನ Suggestion ಅಂತೆಯೇ ಗುಣಪಡಿಸುತ್ತದೆ. ಇಂತಹ ಯಾತ್ರಾರ್ಥೀ ರೋಗಿಗಳಲ್ಲಿ ಹಲವರು 'ನಮಗೇನೂ ಇದರಲ್ಲಿ ನಂಬಿಕೆಯಿಲ್ಲ. ಆದರೆ ನೆಂಟರಿಷ್ಟರ ಪ್ರೀತ್ಯರ್ಥವಾಗಿ ಯಾತ್ರೆ ಮಾಡುತ್ತೇವೆ' ಎಂದನ್ನುತ್ತಾರೆ. ಅವರ ತೋರ ಮನಸ್ಸು, Conscious Mind ಹೀಗನಿಸುತ್ತದೆ. ತೋರ ಮನಸ್ಸು ಅಹಂಕಾರದಿಂದ ತುಂಬಿರುತ್ತದೆ. ವಿಚಾರಮಾಡಿ ನಿರ್ಧರಿಸುವ ಶಕ್ತಿ ನನಗಿದೆ ಎನ್ನುವ ಅಹಂಕಾರ! ವಿಚಾರಮಾಡುವ ಮನಸ್ಸು ಎತ್ತರದ ಕಂಬದ ಮೇಲಿರುವ ನಾವಿಕರ ದೀಪದಂತೆ. ಎತ್ತರದಿಂದ ಅದು ಬಲು ದೂರ ಸಮುದ್ರದ ಮೇಲೆ ತನ್ನ ದಾರಿದೀಪವನ್ನು ಹರಡುತ್ತದೆ. ಆದರೆ ಅದರ ಬುಡದಲ್ಲಿ, ಕತ್ತಲೋ ಕತ್ತಲು ! ವಿಚಾರವನ್ನು ಮಾಡುವ ಮನಸ್ಸಿನ ಅಂಶವು, ತನ್ನ ಬುಡದ ಸುತ್ತಲೂ ಗಾಢಾಂಧಕಾರದ ಮನಸ್ಸಿದೆ ಅದರ ಮೇಲೆ ಪ್ರತಿಷ್ಠಿತವಾಗಿದ್ದೇನೆ, ಎನ್ನುವುದನ್ನು ಅರಿಯುವುದಿಲ್ಲ. ಅದೇ ಅಹಂ-ಕಾರದ ಮಾಯಾ ಗೌಸು. 'ನನಗೇನೂ ಇಂತಹ ಯಾತ್ರೆಗಳಲ್ಲಿ ಯಾವ ತಿಲಾಂಶ ನಂಬಿಕೆಯೂ ಇಲ್ಲ' ಎಂದು ಘೋಷಿಸುತ್ತಾನೋ ಅವನ ಗಾಡಾಂಧಕಾರದ ಮನಸ್ಸು – "Personal and Total unconscious" ಯಾತ್ರೆಯಿಂದ ಪ್ರಯೋಜನವಾದರೂ ಆದೀತು ಎಂದು ಸೂಚಿಸುತ್ತದೆ, ಅವ್ಯಕ್ತವಾಗಿ. ಇದು ಕೂಡ ಒಂದು ತೆರನ "Auto-Suggestion" ಅಚ್ಚರಿಯನ್ನುಂಟು ಮಾಡುವಂತೆ, ಹಲವಾರು ಮಾನಸಿಕ ರೋಗಿಗಳು, ತೀರ್ಥಯಾತ್ರೆಯ ನಂತರ, ಗುಣಮುಖರಾಗುವುದಕ್ಕೆ, Auto-Suggestion ಮುಖ್ಯ ಪಾತ್ರವನ್ನು ವಹಿಸುತ್ತದೆ.

ನಮ್ಮ ದೇಶದಲ್ಲಿ ನಮ್ಮ ಸಮಾಜದಲ್ಲಿ ; ದೈವೀ ಉಪಾಸಕರ ಸಂಖ್ಯೆಗೆ ಮಿತಿ ಇದೆಯೇ? ತೀರ್ಥಯಾತ್ರಾ ಸ್ಥಳಗಳಿಗೆ ಕೊರತೆಯೇ? ಇಂತಹವುಗಳಲ್ಲಿ

ನಂಬಿಕೆ ಇದ್ದವರು ಕಡಿಮೆಯೇ? ಶಾಸ್ತ್ರೋಕ್ತವಾದ ವೈಜ್ಞಾನಿಕ Suggestion ಅನ್ನು, ನಮ್ಮಲ್ಲಿ ಪ್ರಚಲಿತವಾಗಿರುವ ವಿಧವಿಧ ವಿಧಾನಗಳನ್ನು ಬಳಸಿಕೊಳ್ಳುವುದರಲ್ಲಿ ತಪ್ಪೇನೂ ಇಲ್ಲ. ಹಾಗೂ ಬಳಸಿಕೊಳ್ಳದೇ ಇರುವುದು, ವೈಜ್ಞಾನಿಕ ದೃಷ್ಟಿಯಿಂದ ಮಹಾಪರಾಧ ಎಂದೂ ಅನ್ನಬಹುದು.

ಆದರೆ ಸಾಂಪ್ರದಾಯಿಕವಾದ ಈ ವಿಧಾನಗಳಿಂದ ದುಷ್ಪರಿಣಾಮವೊಂದು ಸಾಧ್ಯ. ಇದ್ದ ಮಾರಿ ಹೋಗಿ, ಇನ್ನೊಂದು ಹೆಮ್ಮಾರಿ ತಗುಲಿಕೊಳ್ಳಬಹುದು. ದೈವೀ ಉಪಾಸಕನಿಗೆ ಶರಣು ಬಿದ್ದವರು, ತಮ್ಮ ಮನಸ್ಸಿನಲ್ಲಿ ನೆಮ್ಮದಿಯನ್ನು ತುಸುಮಟ್ಟಿಗೆ ಪಡೆಯಬಹುದು ; ಪಡೆಯುತ್ತಾರೆ. ಆದರೆ ದೈವೀ ಉಪಾಸಕನು ಅವರ ಮನಸ್ಸನ್ನು ದೆವ್ವ ಹಿಡಿದಂತೆ ಹಿಡಿಯುತ್ತಾನೆ. ದೈವೀ ಉಪಾಸಕನಿಗೆ ಈ ರೀತಿ ಮಾನಸಿಕವಾಗಿ ಗಂಟು ಬೀಳುವುದು, ನಿತ್ಯ ಜೀವನದಲ್ಲಿ ಅಪಾರ ತೊಂದರೆಯನ್ನು ಉಂಟುಮಾಡುತ್ತದೆ. ಸಮಾಜದಲ್ಲಿ ರೂಢಿತವಾದ ಇಂತಹ ವಿಧಾನಗಳನ್ನು ಅನುಸರಿಸ ಹೋಗುವಾಗ ಈ ದುಷ್ಪರಿಣಾಮದ ಅರಿವೂ ಇರಬೇಕು. ಕೊಕ್ಕಾಟದಂತಾಗುವ ಈ ಪರಿಣಾಮವನ್ನು ಮರೆಯಬಾರದು.

ಮನೆಯಲ್ಲಿರುವ ನೆಂಟರಿಷ್ಟರು ಆದರ ಮತ್ತು ಅನುಕಂಪಗಳನ್ನು ತೋರಿಸುವುದರಿಂದ ರೋಗಿಗೆ ಹಾಯ್ ಎನಿಸುತ್ತದೆ. ಕೆಲವರಿಗಾದರೂ ನನ್ನನ್ನು ಕಂಡರೆ ಪ್ರೀತಿ, ಅವರಿಗೆ ನಾನು ಅಗತ್ಯ, ಎನ್ನುವ ಭಾವನೆಯು ಹಿತಕರವಾಗಿರುತ್ತದೆ. ಹಿಸ್ಟಿರಿಯಾ ಪ್ರದರ್ಶನದ ಮೂಲ ಪ್ರೇರಕಗಳಲ್ಲೊಂದು, ಮನೆಯವರ ಮತ್ತಿತರರ ಸಹಾನುಭೂತಿ ಮತ್ತು ಅನುಕಂಪವನ್ನು ಪಡೆಯುವುದೇ ಆಗಿರುತ್ತದೆ.

ನಮ್ಮ ಸಮಾಜದಲ್ಲಿ ಅನುಕಂಪವೂ ಸೌಹಾರ್ದವೂ ಮನಸ್ಸಿನಲ್ಲಿದ್ದರೂ ಸಾಕಷ್ಟು ಸ್ಪಷ್ಟಪಡಿಸುವುದಿಲ್ಲ. 'ನಾವು ಹಿರಿಯರು, ಮನೆಗೆ ದೊಡ್ಡವರು ; ನಾವು ಹೇಳಿದಂತೆ, ಚಾಚೂ ತಪ್ಪದೆ ಕಿರಿಯರು ಕೇಳಿಕೊಂಡು ಬಿದ್ದಿರಬೇಕು. ಅವರ ಯೋಗಕ್ಷೇಮದ ಹೊಣೆಯು ನಮ್ಮದೇ ಅಲ್ಲವೇ ?' ಎಂದು ಮನೆಯ ಹಿರಿಯರು ಕಿರಿಯರಿಗೆ ಅನ್ನುವುದು ಸಾಮಾನ್ಯ. ಕಿರಿಯರು ಎನ್ನಿಸಿಕೊಂಡವರಿಗೆ ಪ್ರೌಢ ವಯಸ್ಸಾಗಿರುತ್ತದೆ. ಪ್ರತ್ಯೇಕವಾದ ವ್ಯಕ್ತಿತ್ವವೂ ಇರುತ್ತದೆ. ಅವರುಗಳ ವ್ಯಕ್ತಿತ್ವಕ್ಕೆ ಧಕ್ಕೆ ತಗಲುತ್ತದೆ. ಹಿಸ್ಟಿರಿಯಾ ಅಥವಾ ಇತರ ಮಾನಸಿಕ ಪಲ್ಲಟಗಳು ಉಂಟಾಗುತ್ತವೆ. ರುಚಿಯಾದ ಊಟವನ್ನು ಸಾಕಷ್ಟು ಬಡಿಸಬಹುದು. ಆದರೆ ಮುಖವನ್ನು ಸಿಂಡರಿಸಿಕೊಂಡು, ನಾಯಿಯ ತಟ್ಟೆಗೆ ಅನ್ನವನ್ನೆರಚುವಂತೆ, ಬಡಿಸಿದರೆ, ತಿನ್ನುವವರಿಗೆ ಬೇಸರವೂ ಜುಗುಪ್ಸೆಯೂ ಬರುತ್ತದೆ. ಊಟವೇ ಬೇಡ, ಎದ್ದು ಬಿಟ್ಟರೆ ಸಾಕು ಎನಿಸುತ್ತದೆ.

'ಮೂರು ಮಿಳ್ಳೆ ತುಪ್ಪವನ್ನು ಹೆಚ್ಚಾಗಿ ಹಾಕಿ, ಅವರೇಕಾಯಿ ಹುಳಿಯನ್ನು ಅನ್ನದ ಜತೆಗೆ ಬಡಿಸಿದರೆ, ಸೊಸೆ ಮಹರಾಯ್ತಿ ಅರ್ಧ ತಿಂದು ಎದ್ದು ಬಿಡುತ್ತಾಳಲ್ರೀ' ಎಂದು ಪಕ್ಕದ ಮನೆಯಾಕೆಗೆ ಚಾಡಿ ಹೇಳುವ ಅತ್ತೆಯು, ತಾನು ಬಡಿಸಿದ ರೀತಿಯನ್ನು ವಿವರಿಸುವುದಿಲ್ಲ. ನೈಜವಾದ, ಹೃದಯದಿಂದ ಹರಿದು ಬಂದ ಪ್ರೇಮ ಆದರಗಳು ನಮ್ಮ ಸಮಾಜದ ಇಂದಿನ ಸಂಸಾರಗಳಲ್ಲಿ ಸ್ವಲ್ಪ ವಿರಳ. ಹೀಗನ್ನುವಾಗ ನನ್ನ ಅನುಭವವು, ರೋಗಿಗಳಿರುವ ಸಂಸಾರಗಳಿಗೆ ಮಿತಿಗೊಂಡಿದೆ, ಎಂಬುದನ್ನು ಮರೆತಿಲ್ಲ.

ಬೂಟಾಟಿಕೆಯ ಉಪಚಾರದಿಂದ ಎಳ್ಳಷ್ಟೂ ಪ್ರಯೋಜನವಿಲ್ಲ. ಎದೆಯಾಳದಿಂದ ಎರಡು ಒಳ್ಳೆಯ ಮಾತುಗಳನ್ನಾಡಿದರೆ ಎಷ್ಟೋ ಪ್ರಯೋಜನವಾಗುತ್ತದೆ ; ಎಂಬುದನ್ನು ಎಲ್ಲರೂ ಅರಿಯಬೇಕು.

ಮಾನಸಿಕವಾದ ಬೇನೆಯಿದು ಎಂದು ವೈದ್ಯರು ಮನೆಯ ಹಿರಿಯರಿಗೆ ಹೇಳಿದಾಗ, ಅವರುಗಳು ಬಹುಪಾಲು ಅಪಾರ್ಥ ಮಾಡಿಕೊಂಡು, ರೋಗಿಯ ದೇಹಾರೋಗ್ಯವು ಚೆನ್ನಾಗಿಯೇ ಇದೆ. ಆದರೆ ಮನಸ್ಸಿನಲ್ಲಿ ವೈರತ್ವವನ್ನಿರಿಸಿಕೊಂಡು, ಬೇಕು ಬೇಕೂ ಅಂತ ರೋಗದ ಸೋಗು ಹಾಕುತ್ತಿದ್ದಾಳೆ ಎಂದುಕೊಳ್ಳುತ್ತಾರೆ. ನಟನೆಯನ್ನು ಹೂಡಿದವರಿಗೆ ಶಿಕ್ಷೆಯನ್ನು ಕೊಡಬೇಕು ; ಆಗ ಅವರಿಗೆ ಗುಣವಾಗುತ್ತದೆ ಎಂದವರ ಮೂಢ ಅಭಿಪ್ರಾಯ.

ಹಿಸ್ಟಿರಿಯಾ ಪ್ರದರ್ಶನ ರೋಗಿಗಳು ಖಂಡಿತವಾಗಿಯೂ ಬೇಕು ಬೇಕೂಂತ ನಟಿಸುವುದಿಲ್ಲ. ಆಳ ಮನಸ್ಸಿನಲ್ಲಿ ನಡೆಯುವ ವಿಚಿತ್ರಗಳು, ಅವರ ಮನಸ್ಸಿಗೆ ಕಂಡುಬರುವುದೇ ಇಲ್ಲ. ಅವರ ನರಳುವಿಕೆಯಾಗಲೀ, ಸಂಕಟಪಡುವುದಾಗಲೀ ಎಳ್ಳಷ್ಟೂ ಸುಳ್ಳಲ್ಲ. ಅಂತಹವರನ್ನು, ದಿಟವಾಗಿ ನರಕಯಾತನೆಯನ್ನು ಅನುಭವಿಸುತ್ತಿರುವವರನ್ನು, ಶಿಕ್ಷೆಗೆ ಗುರಿಪಡಿಸಿದರೆ, ಅಂಕೆಗೆ ಒಳಪಡಿಸಿದರೆ, ತೋರಮನಸ್ಸೂ ಮೊಂಡು ಬೀಳುತ್ತದೆ. ನನ್ನಿಂದ ನನ್ನ ನಡವಳಿಕೆಯ ಮೇಲೆ ಹತೋಟಿ ತಪ್ಪಿಹೋಗಿದೆಯೋ ಎನ್ನುವ ಅಪಾರ ಭಯವೂ ಮುಚ್ಚಿಕೊಳ್ಳುತ್ತದೆ. ಅನಂತರ ಹಿಸ್ಟಿರಿಯಾ ಪ್ರದರ್ಶನವು ಬೇರೂರಿ ಬೆಳೆಯಲಾರಂಭಿಸುತ್ತದೆ.

ಆಕಸ್ಮಿಕವಾಗಿ 'ಈ ರೋಗಿಗೆ ಮಾನಸಿಕ ಬೇನೆ, ದೇಹದಲ್ಲಿ ಯಾವ ಕುಂದೂ ಇಲ್ಲ' ಎಂದು ಡಾಕ್ಟರು ಹೇಳುವುದು ಯಥಾರ್ಥವೇ, ಆದರೆ ಅದನ್ನು ಬಲು ಸುಲಭವಾಗಿ ಮನೆಯ ಹಿರಿಯ ಮಂದಿ ಅಪಾರ್ಥಮಾಡಿಕೊಳ್ಳುತ್ತಾರೆ. ಒಂದು ದೃಷ್ಟಿಯಿಂದ ಡಾಕ್ಟರು ಅಂದುದು, ದಿಟವಾಗಿ 'ಶಾಪ'ವಾಗುತ್ತದೆ.

'ನೀವು ಹೇಳಿದ್ದೆಲ್ಲಾ ತಿಳೀತು, ಡಾಕ್ಟರ್ ಸಾಹೇಬ್ರಾ ; ನಮ್ಮ ಸೊಸೀನ

ನಾವನಕ ಬಲು ಆದರ ಮಾಡ್ತೀವಿ. ಆದರೂ ನೋಡ್ರಲಾ, ನಮ್ಮ ಹುಡುಗನ ನಸೀಬ್ನ. ಹತ್ತು ಹದಿನೈದು ಸಾವಿರ ವರದಕ್ಷಿಣೆ ಕೊಡೋ ಮಂದಿ ಬಂದಿದ್ದರು. ಒಲ್ಲೆ ಎಂದ ನಮ್ಮ ಹುಡುಗ. ಈ ಬಿಳಿ ಜಿರಳೀನ ಒಪ್ಪಿದ. ಆಯ್ತುಪಾ, ನಿಂಗೇ ಛಲೋ ಅನ್ನಿಸಿದರೆ, ನಾವೇನೂ ಅಡ್ಡಿ ಬರೂದಿಲ್ಲ ಎಂದೆವು. ಮದ್ವಿ ಆತು, ಮಹಾರಾಯ್ತಿ ಮನೀಗೆ ಬಂದಳು. ಅಂದಿನಿಂದ ವಾರಕ್ಕೆ ಮೂರು ದಿನ ನೆಟ್ಟಗಿದ್ದರ, ನಾಲ್ಕು ದಿನ ಜಡ್ಡು ಬಿದ್ದಿರ್ತಾಳ. ಆದರೂ ನಾವೇನೂ ಆಕೀಗೆ ತ್ರಾಸ ಕೊಡುಲ್ಲ' ಎಂದು ಮಾವ ಹೇಳಿದರು, ಒಮ್ಮೆ.

'ಈ ಮಾತನ್ನ ದಿನಕ್ಕೆ ಎಷ್ಟು ಬಾರಿ, ನಿಮ್ಮಗಂಗೆ ಹೇಳ್ತಿರಪಾ' ಎಂದೆ.

'ದಿನಕ್ಕೆ ಎಂಟು ಹತ್ತು ಬಾರಿ ಆದರೂ ಹೇಳ್ತಿನ್ರಪಾ. ಆದರೂ ಅವನ ತಲೀಗೆ ಹತ್ತಬೇಕಲ್ಲ! ಇಲ್ಲವೇ ಇಲ್ಲ. ಮಹಾರಾಣೀನ ಕಟ್ಟಿಕೊಂಡವನ ಹಾಗೆ ಮೆರಿತಾನಲ್ರಪಾ' ಎಂದು ಆಪಾದಿಸಿದರು.

ದಿನ ಬೆಳಗಾ, ಈ ರೀತಿ, ಮನೆಗೆ ಬಂದ ಬಡ ಸೊಸೆಯನ್ನು ಹೀಯಾಳಿಸ ಹತ್ತಿದರೆ, ಆಕೆಯ ಮನಸ್ಸು ತಾನೇ ಸಮಾಧಾನದಿಂದಿರಲು ಹೇಗೆ ಸಾಧ್ಯ? ಮಗ ಸೊಸೆಯರ ಬಾಳನ್ನು ಹಾಳುಮಾಡುತ್ತಿದ್ದೀನಿ ಎನ್ನುವ ಕಲ್ಪನೆಯು ಮೊಂಡು ಮಾವನಿಗೆ ಬರಲೊಲ್ಲದು. ಅಹಂಕಾರವು ತುಂಬಿದ ಅವನ ಮನಸ್ಸಿನಲ್ಲಿ, ಮಗನ ಮೇಲೆ ತನಗಿರುವ ವಿಶ್ವಾಸದಿಂದಲೇ ಈ ರೀತಿಯ ಮೆಹನತ್ತು ನಡಸುತ್ತಿದ್ದೀನಿ ಎಂಬ ಭ್ರಮೆಯು ತುಂಬಿರುತ್ತದೆ. ಮನೆಯ ವಾತಾವರಣವು ಹೀಗಿದ್ದರೆ, ರೋಗಿಯ ಹಿಸ್ಟೀರಿಯಾವು ಗುಣಮುಖವಾಗುವುದಾದರೂ ಹೇಗೆ? ಅವಳಿಗೆ ಮಕ್ಕಳಾಗಿ, ಮಕ್ಕಳು ಬೆಳೆದು ತಾಯ ಪಕ್ಷವನ್ನು ವಹಿಸಿದಾಗ, ಆಕೆಗೆ ನೆಮ್ಮದಿಯಾಗುತ್ತದೆ. ಆದರೆ ಆ ವೇಳೆಗೆ ಅವಳು ಮುದುಕಿಯಾಗಿರುತ್ತಾಳೆ. ಸಂಸಾರದ ಪ್ರಾಯವೆಲ್ಲಾ ಕಲಗಚ್ಚಾಯಿತು ಎನ್ನುವುದು ತಿಳಿದಿರುತ್ತದೆ. ಅದರ ಸೇಡನ್ನು ಮನೆಗೆ ಬಂದ ಸೊಸೆಯರ ಮೇಲೆ ಆಕೆಯು ತೀರಿಸಹೋಗುತ್ತಾಳೆ. ಇದೊಂದು ವಿಷ ಚಕ್ರ.

ನಮ್ಮ ಸಮಾಜವೂ ಪ್ರಗತಿ ಹೊಂದುತ್ತಿದೆ. ಕಿರಿಯರ ಮೇಲೆ ಹಿರಿಯರಿಗಿದ್ದ ಕಟು ಹತೋಟಿಯು ಬಲು ಪಾಲು ಸಡಿಲಗೊಂಡಿದೆ. ಅಂದರೆ ಮಾನಸಿಕ ಅವ್ಯವಸ್ಥೆಗಳು ಕಡಿಮೆಯಾಗುತ್ತವೆ ಎಂದಲ್ಲ ; ಈಗ ಕಂಡುಬರುವ ಹಿಸ್ಟೀರಿಯಾದ ರೂಪಗಳು ಕಡಿಮೆಯಾಗಿ, ಇತರ ರೂಪಗಳೂ, ಸಮಾಜದ ಅನಿಶ್ಚಿತ ಪರಿಸ್ಥಿತಿಯಿಂದ ಹೊರ ಹೊಮ್ಮಬಹುದು.

ಹಿಸ್ಟೀರಿಯಾದ ಚಿಕಿತ್ಸೆಯಲ್ಲಿ, ಮನೆಯವರ ಹೊಣೆಯೂ, ವೈದ್ಯರ

ಹೊಣೆಯಷ್ಟೇ ಇರುತ್ತದಾಗಿ ಮನೆಯವರಿಗೆ ಈ ಬೇನೆಯ ಸ್ವರೂಪವು ತಿಳಿದಿರುವುದು ಕ್ಷೇಮ.

* * * *

# ೪. ಒಬ್ಸೆಷನಲ್ 'ಬೇನೆಗಳು'
## Obsessional Syndromes

### ವಿಜಯಲಕ್ಷ್ಮಿಯ ಗೋಳು

ಎಂಟು ತಿಂಗಳ ಮಗುವಿಗೆ ಬ್ರಾಂಕೋನ್ಯುಮೋನಿಯಾ ಆಗಿತ್ತು. ಚೊಚ್ಚಲ ಆ ಮಗುವನ್ನು ಚಿಕಿತ್ಸೆಗೆ ಕರೆದು ತಂದ ತಾಯಿಯು ಸ್ವಾಭಾವಿಕವಾಗಿ ಕಾತರಳಾಗಿದ್ದಳು. ತುಂಬಾ ಕಾತರರಾದವರ ಮುಖದಲ್ಲಿ ಹುಬ್ಬು ಗಂಟಿಕ್ಕಿಕೊಂಡಿರುತ್ತದೆ. ಹಣೆಯ ಮೇಲಿನ ಗೆರೆಗಳು ಎದ್ದು ಕಾಣುವಂತಾಗುತ್ತದೆ. ಹುಬ್ಬುಗಳು ಗಂಟಿಕ್ಕಿಕೊಂಡಿರುವುದರಿಂದ, ಅಲ್ಲಿ ಕಾಣುವ ಗೆರೆಗಳು ಗ್ರೀಕ್ ಲ್ಯಾಮ್ಡಾ ಅಕ್ಷರದಂತೆ ಕಾಣಿಸುತ್ತದೆ. ತಲೆಕೆಳಗಾದ ಕ್ಯಾಟೇಬಿಲ್ಲಿನಂತೆ ಇರುತ್ತದೆ. ಹುಬ್ಬುಗಳ ಮಧ್ಯದಲ್ಲಿ ಈ ಗೆರೆಗಳು ಕಂಡುಬಂದರೆ, 'ಲ್ಯಾಮ್ಡಾ ಸೈನ್' ಇದ್ದರೆ, ಅಂತಹವನ ಮನಸ್ಸಿನಲ್ಲಿ ಎಂತದೋ ಆಗುತ್ತಿದೆ, ಬಲು ಆತಂಕದಿಂದಿದ್ದಾನೆ ಎಂದು ಗುರುತಿಸಬಹುದು. ಈ ಗುರುತು, ತಾಯ ಹುಬ್ಬುಗಳ ಮಧ್ಯೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಚೊಚ್ಚಲ ಮಗುವಿಗೆ ಕೆಂಡಾಮಂಡಲ ಜ್ವರವು ಬಂದು, ಉಸಿರಾಡಲು ತೊಂದರೆಯಾಗುತ್ತಿದ್ದರೆ, ತಾಯಿಗೆ, ಪಾಪ, ಆತಂಕವಿಲ್ಲದೇ ಇರುತ್ತದೆಯೇ?

ಮೂರು ದಿನದಲ್ಲಿ ಮಗುವು ಗುಣ ಹೊಂದಿತು. ಎಂದಿನಂತೆ ಆಹಾರವನ್ನು ತೆಗೆದುಕೊಂಡು ಆಡಲಾರಂಭಿಸಿತು. ಆದರೆ ತಾಯಿಯ ಭ್ರೂಮಧ್ಯದಲ್ಲಿದ್ದ ಲ್ಯಾಮ್ಡಾ ಗೆರೆಯು ಸ್ಥಿರವಾಗಿಯೇ ಇತ್ತು. ಮಗುವಿಗೆ ವಾಸಿಯಾದ ಮೇಲೂ ಈಕೆ ಯಾಕೆ ಆತಂಕದಿಂದಿದ್ದಾಳೆ ಎಂದು ಅಚ್ಚರಿಯಾಯಿತು. ಆದುದರಿಂದ 'ಇದ್ಯಾಕೆ, ವಿಜಯಲಕ್ಷ್ಮೀ ! ಇನ್ನೂ ಆತಂಕದಿಂದಿದ್ದೀಯೇ ! ಮಗುವಿಗೆ ಪೂರ್ಣವಾಗಿ ಗುಣವಾಗಿದೆ. ಮತ್ತ್ಯಾತರ ಕಾಳಜಿ, ಈಗ ಎಂದು ಕೇಳಿದೆ.

ಇಪ್ಪತ್ತೆರಡು ಇಪ್ಪತ್ತುಮೂರರ ಆ ತಾಯಿ, ನಾ ಕೇಳಿದ ಪ್ರಶ್ನೆಯಿಂದಲೋ, ಅಥವಾ ನುಡಿದ ಧ್ವನಿಯಿಂದಲೋ ಯಾವ ಕಾರಣದಿಂದಲೋ ಏನೋ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ದವಾಖಾನೆಯಲ್ಲಿ ನೆರೆದಿದ್ದ ಎಲ್ಲರೆದುರಿಗೂ ಬೆಳೆದ ಹೆಂಗಸು, ಅಳಲಾರಂಭಿಸಿದರೆ, ವೈದ್ಯನಿಗೆ ತುಸು ಮುಜುಗುರವೇ. ಆದುದರಿಂದ, ಒಳಗೆ ಬಾ, ವಿಜಯಲಕ್ಷ್ಮೀ, ಅಲ್ಲಿ ಸಮಾಧಾನ ಮಾಡಿಕೊಳ್ಳುವಿಯಂತೆ' ಎಂದು

ಹೇಳಿ, ಒಳ ಕೊಠಡಿಗೆ ಕರೆದುಕೊಂಡು ಹೋದೆ.

ಕೆಲವು ವರ್ಷಗಳಿಂದಲೂ ಆಕೆಯ ಗಂಡ ನನ್ನಲ್ಲಿಗೆ ಸಣ್ಣಪುಟ್ಟ ಬೇನೆಗಳ ಚಿಕಿತ್ಸೆಗೆಂದು ಬರುತ್ತಿದ್ದ. ನಗುಸರಿಸಿ ಯುವಕ, ಬಲು ಆತ್ಮೀಯನಾಗಿದ್ದ. ಮದುವೆಯಾದ ನಂತರ, ಹೆಂಡತಿಯನ್ನು ಕರೆದುಕೊಂಡು ಬಂದು ನನಗೆ ಪರಿಚಯ ಮಾಡಿಸಿ ಆಶೀರ್ವಾದ ಬೇಡಿದ್ದ. ನನ್ನ ವೈದ್ಯಕೀಯ ಸೇವೆಯು ನಿಮಗೆ ಅಗತ್ಯವಾಗದೆ ಇರುವಂತೆ, ದೇವರು ನಿಮ್ಮನ್ನು ಕಾಪಾಡಲಿ ಎಂದು ತುಂಬಿದೆದೆಯಿಂದ ಹರಸಿದ್ದೆ. ಆಕೆಯೂ ತುಂಬ ಒಲವಿನಿಂದ ನಮಸ್ಕಾರ ಮಾಡಿದ್ದಳು. ಆದಕಾರಣ ಸಲಿಗೆಯಿಂದ ಮಾತನಾಡುತ್ತಿದ್ದೆ.

ಒಳಕೊಠಡಿಗೆ ಬಂದು ಕುಳಿತಳು, ಮಗುವಿನೊಂದಿಗೆ. ಅಳುವ ತಾಯಿಯನ್ನು ಕಂಡು ಮಗುವೂ ಅಳತೊಡಗಿತು. ಅದನ್ನು ಎತ್ತಿಕೊಂಡು ಒಂದೆರಡು ನಿಮಿಷ ಆಡಿಸುವ ಹೊತ್ತಿಗೆ, ಮಗುವೂ ಆಡತೊಡಗಿತು. ವಿಜಯಲಕ್ಷ್ಮಿಯ ಅಳುವೂ ನಿಂತಿತ್ತು. ಅವಳೇ ಅನಂತರ ಹೇಳಿದಳು:–

'ಮಗುವಿಗೆ ಗುಣವಾಗಿದೆ ಎನ್ನುವುದು ನನಗೂ ಗೊತ್ತು. ಅದಕ್ಕಲ್ಲಾ ಅಳುವು ಬಂದದ್ದು. ನಾನು ಪಡುತ್ತಿರುವ ನರಕ ಸಂಕಟವನ್ನು ಯಾರೊಂದಿಗೂ ಹೇಳಿಕೊಂಡಿರಲಿಲ್ಲ. ನೀವು ತುಂಬಾ ವಿಶ್ವಾಸದಿಂದ, ನಿನಗ್ಯಾತರ ಕಾತರವಮ್ಮಾ ಎಂದು ಕೇಳಿದಿರಿ. ಹಾಗೆ ಯಾರೂ ನನ್ನನ್ನು ನಿನಗೇನು ಕಷ್ಟ ಎಂದು ಕೇಳುತ್ತಿಲ್ಲ. ಆದ್ದರಿಂದ ನೀವು ಕೇಳಿದಾಗ ಅಳುವು ಬಂತು. ಅದನ್ನು ತಡೆಯಲಾಗಲಿಲ್ಲ. ಎಲ್ಲರೆದುರಿಗೂ ಅತ್ತೆ. ಯಾರೇನಂದುಕೊಂಡರೋ ಏನೋ?' ಎಂದು ಪೀಠಿಕೆಯನ್ನು ಹಾಕಿದಳು.

'ಅದು ಸರಿಯಮ್ಮ ! ಆದರೆ ಅಂತಹ ಆತಂಕವಿನ್ನಾವುದಿದೆ? ಸಂಸಾರದ ಗುಟ್ಟಾದರೂ ನನ್ನಲ್ಲಿ ಹೇಳಬಹುದಲ್ಲ.' ಎಂದು ಹೇಳಿದೆ.

'ನನ್ನ ಸಂಕಟ ಭಗವಂತನಿಗೇ ಗೊತ್ತು ಡಾಕ್ಟರೆ ! ಬೆಳಿಗ್ಗೆ ಏಳು ಗಂಟೆಗೆ, ಗಂಡ ಫ್ಯಾಕ್ಟರಿಗೆ ಹೋಗುತ್ತಾರೆ. ಅವರನ್ನು ಕಳುಹಿಸಿಕೊಟ್ಟು ಗೇಟನ್ನು ಹಾಕಿ, ಮನೆಯ ಬೀದಿಬಾಗಿಲನ್ನೂ ಮುಚ್ಚಿ ಅಗಳಿ ಎಳೆದು, ಅಡಿಗೆ ಮನೆಗೆ ಬರುತ್ತೇನೆ. ಬಾಗಿಲುಗಳನ್ನು ಸರಿಯಾಗಿ ಹಾಕಿದ್ದೇನೆಯೇ ಎಂಬ ಅನುಮಾನವು ಬರುತ್ತದೆ. ಹೋಗಿ ನೋಡಿಕೊಂಡು ಬರುತ್ತೇನೆ. ಅಡಿಗೆಯ ಮನೆಗೆ ಬಂದಕೂಡಲೇ ತಿರುಗಿ ಅನುಮಾನವು ಬರುತ್ತದೆ. ತಿರುಗಿ ಹೋಗಿ ನೋಡಿಕೊಂಡು ಬರಬೇಕು. ಈಗ ತಾನೇ ನೋಡಿಕೊಂಡು ಬಂದೆನಲ್ಲಾ ಎಂದು ಮನಸ್ಸು ಒಂದು ಕಡೆ ಹೇಳುತ್ತೆ. ತಿರುಗಿ ಹೋಗಿ ನೋಡುವುದು ಶುದ್ಧ ಪೆಚ್ಚುತನ ಎಂದು ತಿಳಿದಿರುತ್ತದೆ.

ಆದರೆ ಅದೇ ಮನಸ್ಸಿನಲ್ಲಿ ಮೂಡಿದ ಅನುಮಾನವು, ಒದ್ದು, ಜುಲುಮನ್ನು ಹೂಡಿ, ತಿರುಗಿ ನೋಡಿಕೊಂಡು ಬರುವಂತೆ ಬಲವಂತ ಮಾಡುತ್ತದೆ. ಏನಿಲ್ಲ. ಅಂದರೂ ಹತ್ತು ಹನ್ನೆರಡುಸಾರಿ ಹೀಗೆ ಮಾಡಬೇಕಾಗುತ್ತದೆ.

ಅಡಿಗೆಮಾಡಿ ಇಡುತ್ತೇನೆ. ತತ್‌ಕ್ಷಣ ಮುಚ್ಚಳವನ್ನು ಹಾಕದೇ ಇದ್ದರೆ, ಕುಷ್ಠರೋಗದವ ಬಂದು ಅಡಿಗೆಯನ್ನು ಮೂತ್ರಮಾಡಿ ಕೆಡಿಸಿ ಬಿಡುತ್ತಾನೇನೋ ಎಂಬ ಭಯ ಹುಟ್ಟುತ್ತದೆ.

ಬಾಗಿಲುಗಳನ್ನು ಹಾಕಿದ್ದೀನಿ ಎಂದು ಧೈರ್ಯಬಂದರೂ, ಕಿಟಿಕಿಗಳು ತೆರೆದಿರುತ್ತಲ್ಲಾ ; ಅದರ ಮೂಲಕ ಅವ ಬಂದು ಬಿಟ್ಟರೆ, ಅಡಿಗೆಯನ್ನು ಹಾಳುಮಾಡಿ ಬಿಟ್ಟರೆ ? ಎನ್ನುವ ಶಂಕೆಯು ಬರುತ್ತದೆ. ಇದು ಹೇಗೆ ಸಾಧ್ಯ ಎಂದು ಒಂದುಕ್ಷಣ ಅನ್ನಿಸುತ್ತೆ. ಆದರೆ ಅದೇ ಕ್ಷಣದಲ್ಲಿ ಕಿಟಿಕಿಬಾಗಿಲು ಹಾಕಿ ಬಂದೋಬಸ್ತು ಮಾಡು ಎಂದು ತೀಕ್ಷ್ಣವಾಗಿ ಬಲವಂತ ಮಾಡುತ್ತದೆ. ಕಿಟಿಕಿಯನ್ನು ಮುಚ್ಚುತ್ತೇನೆ. ಆದರೆ ಒಮ್ಮೊಮ್ಮೆ ಮುಚ್ಚಳವನ್ನು ಪಾತ್ರೆಗೆ ಹಾಕಲು ಸ್ವಲ್ಪ ವಿಳಂಬವಾಗುತ್ತದೆ. ಆಗ ಮಾಡಿದ್ದ ಅಡಿಗೆಯನ್ನೆಲ್ಲಾ ಬಚ್ಚಲಿಗೆ ಎಸೆದು, ತಿರುಗಿ ಎಚ್ಚರದಿಂದ ಅಡಿಗೆಯನ್ನು ಮಾಡುತ್ತೇನೆ. ಒಬ್ಬಳೇ ಊಟಕ್ಕೆ ಕೂಡುವುದಕ್ಕೂ ಭಯವಾಗುತ್ತೆ. ಆದ್ದರಿಂದ ಮಧ್ಯಾಹ್ನದ ಊಟವನ್ನು ಎಷ್ಟೋ ದಿನಗಳು ಮಾಡುವುದೇ ಇಲ್ಲ. ಅರಳು ಅವಲಕ್ಕಿಯನ್ನು ಆಗಾಗ್ಗೆ ತಿಂದು ಸುಮ್ಮಗಾಗುತ್ತೇನೆ. ದಿನವೆಲ್ಲಾ ಹೀಗೆ ಥರಪರಗುಟ್ಟುತ್ತಾ ನರಳುತ್ತೇನೆ.

ಸಂಜೆಯ ಹೊತ್ತಿಗೆ ಗಂಡ ಮನೆಗೆ ಬಂದಮೇಲೆ, ಧೈರ್ಯ ಬರುತ್ತದೆ. ಅವರಿರುವಾಗ ಕುಷ್ಠರೋಗದವನು ಬರುವುದಿಲ್ಲ ಎನ್ನುವ ಧೈರ್ಯ ಮೂಡುತ್ತದೆ. ಗೆಲುವು ಮನಸ್ಸನಲ್ಲಿ ಮೂಡುತ್ತದೆ. ಅವರೊಂದಿಗೆ ಹೊಟ್ಟೆ ತುಂಬಾ ಉಣ್ಣುತ್ತೇನೆ. ನಗು ನಗ್ತಾ ಇರ್ತೀನಿ. ಅವರನ್ನು ನೀವು ಕಂಡೀರಲ್ಲಾ. ಮಾತು ಮಾತಿಗೆ ನಗಿಸುತ್ತಲೇ ಇರುತ್ತಾರೆ.

ಹೀಗಾಗುತ್ತದೆ, ಹೀಗೆ ಅನುಮಾನದ ಪಿಶಾಚಿ ಹಿಡಿದಿದೆ. ಈ ರೀತಿ ನರಳುತ್ತಿದ್ದೇನೆ ಎಂದು ಯಾರ ಹತ್ತಿರವೂ ಹೇಳಿಕೊಳ್ಳಲು ನಾಚಿಕೆಯಾಗುತ್ತೆ. ಗಂಡನ ಬಳಿ ಹೇಳಿಕೊಳ್ಳಲೂ ನಾಚಿಕೆಯಾಗುತ್ತೆ. ಓದಿದ ಹುಡುಗಿ ನೀನು, ಕಿಟಿಕಿಯೊಳಗಿಂದ ಯಾವನು ಬರುಕ್ಕಾಗುತ್ತ್ಯೇ ಎಂದು ನಕ್ಕುಬಿಡ್ತಾರೆ. ನಂಟರಿಷ್ಟರೆದುರಿಗೆ ಹೇಳುವುದಕ್ಕೂ ಅವರು ಹೇಸುವುದಿಲ್ಲ. ಆದ್ದರಿಂದ ಯಾರಿಗೂ ಹೇಳಿಲ್ಲ.

‘ತುಂಬಾ ವಿಶ್ವಾಸದಿಂದ ನೀವು ಕೇಳಿದಿರಿ. ನನ್ನ ಕಷ್ಟವನ್ನು ನಾಚಿಕೆಯಿಲ್ಲದೇ ಹೇಳಿಬಿಟ್ಟೆ. ನಗಬೇಡಿ ಡಾಕ್ಟರೇ’ ಎಂದು ಆಕೆ ಕೊರಗುವ ದೀನ ದನಿಯಲ್ಲಿ ವರದಿ ಒಪ್ಪಿಸಿದಳು.

‘ನಾನ್ಯಾಕೆ ನಗಲಿ, ಮಗಳೇ ! ಇದು ಒಬ್ಸೆಷನಲ್ ಬೇನೆ, ಭಯಂಕರವಾಗಿ ಕಾಡುತ್ತದೆ. ನಿನ್ನ ಗಂಡನೊಡನೆ ನಾನು ಮಾತನಾಡುತ್ತೇನೆ. ಆತನನ್ನು ನನ್ನ ಬಳಿಗೆ ನಾ ಕರೆದೆ ಅಂತ ಹೇಳಿ ಕಳುಹಿಸಿಕೊಡು’ ಎಂದು ಹೇಳಿ, ಕಳಿಸಿಕೊಟ್ಟೆ.

ಈ ರೀತಿ ಇಂತಹ ಬೇನೆಯಿಂದ ನರಳುವವರಿಗೆ, ಇತರರಿಗೆ ತಮ್ಮ ಗೋಳನ್ನು ಹೇಳಿಕೊಳ್ಳಲು ವಾಮಾನಿಕೆ ಮತ್ತು ನಾಚಿಕೆ. ಗಂಡ ಮನೆಯಲ್ಲಿರುವಾಗ ಗೆಲುವಾಗಿ ನಗುನಗುತ ಹೆಂಡತಿಯು ಇರುವುದರಿಂದ, ಅವಳ ಗೋಳು ಗಂಡನಿಗೆ ತಿಳಿಯುವುದೇ ಇಲ್ಲ. ಅಂತಹ ಅನುಮಾನವೂ ಬರುವುದಿಲ್ಲ. ಗಂಡನ ಬಳಿ ಹೇಳಿಕೊಳ್ಳುವುದಕ್ಕೆ ನಾಚಿಕೊಂಡವರು, ವೈದ್ಯನ ಬಳಿಗೆ ಹೋಗಿ ಹೇಳಿಕೊಳ್ಳುತ್ತಾರೆಯೇ? ತಮ್ಮನ್ನು ಕಾಡುವ ಅನುಮಾನ ಮತ್ತು ಭ್ರಮೆಗಳು ಸುಳ್ಳು ಎಂದು ಅವರಿಗೂ ಚೆನ್ನಾಗಿ ತಿಳಿದಿರುತ್ತದೆ. ಆದರೆ ಅನುಮಾನಗಳಿಗೆ ಅನ್ವಯಿಸುವಂತೆ ನಡೆದುಕೊಳ್ಳಲೇಬೇಕು? ಇಲ್ಲದಿದ್ದರೆ ತುಂಬಾ ಕೋಪ, ಅಸಮಾಧಾನ, ಅಶಾಂತಿಗಳು ಉಂಟಾಗುತ್ತವೆ. ಆದ್ದರಿಂದ ಹಾಗೆ ನಡೆದುಕೊಳ್ಳುತ್ತಾರೆ. ಹೀಗಾಗುತ್ತೆ ಎಂದು ಹೇಳಿಕೊಂಡರೆ ನಗೆಪಾಟಲಿಗೆ ಗುರಿಯಾಗುತ್ತೇವೆ ಎಂಬ ಹೆದರಿಕೆಯೂ ಇರುತ್ತದೆ. ಆದಕಾರಣ ಸಾಮಾನ್ಯವಾಗಿ ಹೇಳಿಕೊಳ್ಳುವುದಿಲ್ಲ.

ಆಕೆಯ ಗಂಡ ಬಂದು ನನ್ನನ್ನು ಕಂಡ, ‘ಅಯ್ಯಾ ! ನಿನ್ನ ಹೆಂಡತಿಗೆ ಒಬ್ಸೆಷನಲ್ ಬೇನೆಯು ಬಡಿದಿದೆ. ಹೀಗೆ ಹೀಗೆ ಅವಳು ನರಳುತ್ತಿದ್ದಾಳೆ. ಅಕಸ್ಮಾತ್ತಾಗಿ ನನಗೆ ತಿಳಿದು ಬಂತು. ಅಗತ್ಯವಾಗಿ ಚಿಕಿತ್ಸೆಯನ್ನು ಮಾಡಿಸು, ಮನೋವೈದ್ಯರಿಂದ. ನೆಂಟರು ಯಾರಾದರೂ ಬಂದು ಮನೆಯಲ್ಲಿ ಜತೆಗಿದ್ದರೆ, ನರಳುವುದು ತುಸು ಕಡಿಮೆಯಾಗಬಹುದು’. ಎಂದು ಸಲಹೆ ಮಾಡಿದೆ.

‘ಅಯ್ಯೋ, ಇದೆಲ್ಲಾ ಭೂತಚೇಷ್ಟೆ. ಡಾಕ್ಟರೇ ! ನಮ್ಮೂರಿನ ಕಡೆ ಭೂತಗಳು ಹೀಗೆ ಕಾಡುವುದು ಸಾಮಾನ್ಯ. ಅವಳ ಸೋದರಮಾವನ ಚಿಕ್ಕಪ್ಪನಿಗೆ ಕುಷ್ಠ ರೋಗವಿತ್ತು. ಇವಳಿಗೆ ನಾಲ್ಕು ವರ್ಷ ವಯಸ್ಸಾಗಿದ್ದಾಗ, ಇವಳಿದ್ದ ಮನೆಯಲ್ಲಿ ಅವ ತೀರಿಕೊಂಡ. ಇಪ್ಪತ್ತು ವರ್ಷಗಳ ಮೇಲೆ ಅವನ ಪಿಶಾಚಿಯು ಬಂದು ಏಕೆ ಕಾಡುತ್ತದೆ? ನಮ್ಮೂರ ಕಡೆ ಜಾಣ ಮಂತ್ರವಾದಿಗಳು ಇದ್ದಾರೆ. ಪೂಜೆ ಹಾಕಿ ಇಂತಹ ಭೂತಗಳನ್ನು ಬಿಡಿಸುತ್ತಾರೆ. ಇದಕ್ಕೆ ವೈದ್ಯ ಚಿಕಿತ್ಸೆಯು ಅಗತ್ಯವೇ

ಇಲ್ಲ' ಎಂದವ ಹೇಳಿ ನನ್ನ ಆತಂಕವನ್ನು ಕಡಿಮೆ ಮಾಡಲೆತ್ನಿಸಿದ.

ವರ್ಗವಾಗಿ ಅವ ಹೋದುದರಿಂದ, ವಿಜಯಲಕ್ಷ್ಮಿಯ ಭೂತವನ್ನು ಮಂತ್ರವಾದಿಗಳು ಬಿಡಿಸಿದರೋ ಇಲ್ಲವೋ ನನಗೆ ತಿಳಿಯದು. ಆದರೆ ಒಬ್ಸೆಷನಲ್ ಬೇನೆಗಳು ಬಡಪೆಟ್ಟಿಗೆ ವಾಸಿಯಾಗುವುದಿಲ್ಲ. ಅದರ ಜತೆ ಕೂಡಿಕೊಂಡಿರುವ ಆತಂಕದ ಚಿಹ್ನೆಗಳು; ಮಂಕುಬಡಿದಂತೆ ಆಗುವುದು; ಇತ್ಯಾದಿಗಳನ್ನು ಚಿಕಿತ್ಸೆಯಿಂದ ಶಮನ ಮಾಡಿದರೆ, ಒಬ್ಸೆಷನ್ನಿನ ತೀವ್ರತೆಯು ಕಡಿಮೆಯಾಗುತ್ತದೆ.

**ಮುಸುರೆಯ ಪಿಶಾಚಿ**

'ಬೆಳಗಿನಿಂದ ಯಾಕೋ ಹೊಟ್ಟೆ ನುಲಿದ ಹಾಗಾಗುತ್ತೆ. ಕೈಕಾಲುಗಳಲ್ಲಿ ಛಳುಕಾಗುತ್ತೆ', ಎಂದು ಅನಸೂಯ ಒಂದು ಬೆಳಿಗ್ಗೆ ಹೇಳಿದಾಗ, ಮನೆಯಲ್ಲಿದ್ದ ಗಂಡ, ಅತ್ತೆ, ನಾದಿನಿ, ಎಲ್ಲರೂ ಸ್ವಲ್ಪ ಗಾಬರಿಗೊಂಡರು. ಚೊಚ್ಚಲ ಬಸಿರು, ಬಯಕೆಯೂ ಹೆಚ್ಚಾಗಿತ್ತು. ಕಂಡೂ ಕೇಳದ ಹೊಸ ಊರಿಗೆ ಚಾಕರಿಯ ಸಲುವಾಗಿ ಬಂದು ನೆಲೆಸಿದ್ದರು, ನೆರೆಹೊರೆಯ ಜನರ ಪರಿಚಯವಿಲ್ಲ. ಆ ಊರಿನ ಭಾಷೆಯೂ ತಿಳಿಯದು. ಅಂದಮೇಲೆ ಜನಸಹಾಯವೂ ಸಿಗುವಂತಿಲ್ಲ. ಈ ಎಲ್ಲ ಕಾರಣಗಳಿಂದ, ದೊಡ್ಡಾಸ್ಪತ್ರೆಗೆ ಸೇರಿಸುವುದು ಕ್ಷೇಮ ಎಂದು ತೀರ್ಮಾನಿಸಿದರು. ಆಸ್ಪತ್ರೆಗೆ ಹೋಗುವುದಕ್ಕೆ ಅನಸೂಯಳಿಗೆ ಅಷ್ಟೇನೂ ಇಷ್ಟವಿಲ್ಲ. ಆದರೆ ಅವಳಿಗೂ ಹೆದರಿಕೆ. ಮನೆಯಲ್ಲಿದ್ದರೆ, ಏನಾದರೂ ಹೆಚ್ಚು ಕಡಿಮೆಯಾದರೆ, ತತ್‌ಕ್ಷಣ ಯಾವ ವೈದ್ಯಕೀಯ ಸಹಾಯವೂ ದೊರಕುವುದು ಕಷ್ಟ. ಆದ್ದರಿಂದ ಆಸ್ಪತ್ರೆಗೆ ಹೋಗಲು ಸಮ್ಮತಿಸಿದಳು. ಆಸ್ಪತ್ರೆಯಲ್ಲಿ ಸೌಕರ್ಯಗಳಿದ್ದುವು. ನುರಿತ ವೈದ್ಯರ ಚಿಕಿತ್ಸೆಯೂ ದೊರಕಿತು. ಆದರೂ ಮೈ ಇಳಿಯಿತು. ಮಿಕ್ಕಂತೆ ದೇಹವು ಆರೋಗ್ಯದಿಂದಿದ್ದರೂ, ಆರನೆಯ ದಿನದ ವೇಳೆಗೆ 'ಯಾಕೋ ಎದೆ ಹೊಡೆದುಕೊಳ್ಳುತ್ತಾ ಇದೆ. ಮೈ ನಡುಗಿದ ಹಾಗೆ ಆಗುತ್ತಿದೆ. ಕೈಕಾಲು ಕುಸಿಯುತ್ತದೆ, ಡಾಕ್ಟರನ್ನು ಕರೆಸಿ' ಎಂದು ಗಾಬರಿಯಿಂದ ಹೇಳಿದಳು. ಬಂದು ಪರೀಕ್ಷಿಸಿದ ಡಾಕ್ಟರು, 'ಸುಮ್ಮ ಸುಮ್ಮನೆ ಗಾಬರಿಯಾಗುತ್ತಿದ್ದಿ. ನಿನ್ನ ಹಾರ್ಟ್ ಲಕ್ಷಣವಾಗಿದೆ. ಗಾಬರಿಯಿಂದಲೇ ಹೀಗಾಗುತ್ತದೆ. ಹೆದರಬೇಡ' ಎಂದು ಧೈರ್ಯ ಹೇಳಿ, ನಿದ್ರೆ ತರಿಸುವ ಔಷಧಿಯನ್ನು ಕೊಟ್ಟು ಹೋದರು.

ಅನುಸೂಯ ಮನೆಗೆ ಬಂದ ಮೇಲೆ ಕೂಡ ಒಮ್ಮೊಮ್ಮೆ ಇದೇ ರೀತಿ ಗಾಬರಿಯಾಗುತ್ತಿದ್ದಳು. ಆದರೆ ಮನೆಯವರು ಧೈರ್ಯ ಹೇಳಿದರೆ ಸಮಾಧಾನಗೊಳ್ಳುತ್ತಿದ್ದಳು. ಈಗಿನ ಕಾಲದ ಸಂಸಾರ. ಮಡಿ ಮೈಲಿಗೆಯ

ಆಚರಣೆಯು ಅತಿಯಾಗಿರಲಿಲ್ಲ. ಮೂರು ದಿನಗಳು ಮೂಲೆಯಲ್ಲಿ ಕೂಡುವುದೂ ಇರಲಿಲ್ಲ. ಹೊಲೆ ಮನೆ, ಮಡಿ ಎನ್ನುವ ಕಾಳಜಿಯೂ ಇರಲಿಲ್ಲ.

ಇಂತಹ ಪರಿಸ್ಥಿತಿಯಿದ್ದ ಮನೆಯಲ್ಲಿ ಒಂದು ದಿನ ಅಡಿಗೆ ಮನೆಯಿಂದ ಬಂದ ಅತ್ತೆಯು ಸೊಸೆಯ ಹತ್ತಿರವಿದ್ದ ಟವಲನ್ನು ತೆಗೆದುಕೊಂಡು ಕೈ ಒರೆಸಿಕೊಂಡರು. 'ಅಯ್ಯೋ, ಇದೇನು ಹೀಗೆ ಮಾಡಿಬಿಟ್ಟಿರಿ ! ಮುಸುರೆ ಕೈಯಲ್ಲಿ ಟವಲನ್ನು ಮುಟ್ಟಿ ಬಿಟ್ಟಿರಲ್ಲಾ' ಎಂದು ಅನಸೂಯ ಅತ್ಯಾತಂಕದಿಂದ ಚೀರಿದಳು. 'ಇದ್ಯಾತರ ಮುಸುರೆಯೇ ; ಎಂತಹ ಮುಸುರೆಯೇ, ಅನ್ನವನ್ನು ಮಾಡೇ ಇಲ್ಲವಲ್ಲೇ' ಎಂದು ಅತ್ತೆಯು ಎಷ್ಟೋ ಹೇಳಿದಳು. ಅನಸೂಯಳಿಗೆ ಸಮಾಧಾನವಾಗಲಿಲ್ಲ. ಬಾಣಂತಿಯಾಗಿದ್ದರೂ ಎದ್ದು, ಆ ಟವಲನ್ನು ಒಗೆದು ಹರವಿ ಹಾಕಿದಳು.

ಅವತ್ತಿನಿಂದ ಮುಸುರೆ ಪಿಶಾಚಿಯು ಕಾಡತೊಡಗಿತು. ಅನ್ನವನ್ನು ತಿಂದರೆ ಮುಸುರೆಯು ಕೈಗೆ ಅಂಟಿಕೊಂಡು ಬಿಡುತ್ತದೆ.ಎಷ್ಟು ತೊಳೆದರೂ ಹೋಗುವುದಿಲ್ಲ. ಎಂಬ ತೀವ್ರ ಕಳವಳವು ಶುರುವಾಯಿತು. ಆದುದರಿಂದ ಒಣಗಿದ ಚಪಾತಿಯನ್ನು ತಿನ್ನಲಾರಂಭಿಸಿದಳು. ಅಹೋರಾತ್ರಿ ಒಂದೇ ಭಯ ; ಯಾವುದು ಎಲ್ಲಿ ಮುಸುರೆಯಾಗಿ ಬಿಡುತ್ತದೋ ಎನ್ನುವ ಭಯ. ಭಯಂಕರವಾದ ಆತಂಕದಿಂದ ಅನಸೂಯಳ ಮುಖದಲ್ಲಿ ಹುಬ್ಬು ಗಂಟಿಕ್ಕಿಕೊಂಡಿರುವುದು ಸ್ಥಿರವಾಯಿತು. ಕೆನ್ನೆಗಳ ಮೇಲೆಲ್ಲಾ ಉದ್ದುದ್ದ ಗೆರೆಗಳು ಮೂಡಲಾರಂಭಿಸಿದುವು. ದುಂಡು ದುಂಡಾಗಿದ್ದ ಅನಸೂಯ ಕೇವಲ ಆರೇಳು ತಿಂಗಳುಗಳಲ್ಲಿ ಸಣಕಲ ಕಡ್ಡಿಯಾದಳು.

ಯಾರಾದರೂ ಸ್ನೇಹಿತರು ಮನೆಗೆ ಬಂದರೆ, ಅವರೆದುರಿಗೆ ಹೇಗೋ ಪ್ರಾಣವನ್ನು ಬಿಗಿಹಿಡಿದುಕೊಂಡು, ಸ್ವಸ್ಥವಾಗಿರುವವಳಂತೆಯೇ ನಡೆದುಕೊಳ್ಳುತ್ತಿದ್ದಳು. ಬಂದವರು ಹೊರಗೆ ಹೋದಕೂಡಲೇ, ಅವರು ಕುಳಿತಿದ್ದ ಕುರ್ಚಿ, ನಡೆದಿದ್ದ ಜಾಗ, ಮುಟ್ಟಿದ್ದ ಬಟ್ಟೆ, ತಾಕಿದ್ದ ಬಾಗಿಲ ಪರದೆಗಳು, ಇವೆಲ್ಲವನ್ನೂ ಒದ್ದೆ ಬಟ್ಟೆಯಲ್ಲಿ ಒರೆಸುತ್ತಿದ್ದಳು. ಬೀದಿಯಲ್ಲಿ ನಡೆದು ಬಂದಿದ್ದ ಅವರು ಎಂಜಲೆಲೆಯನ್ನು ತುಳಿದಿರಬಹುದಲ್ಲ. ಹಾಗಾಗಿ ಮುಸುರೆ ಅಂಟಿಕೊಂಡಿರುತ್ತಲ್ಲಾ. ಆ ಮುಸುರೆ ತನ್ನ ಮನೆಯಲ್ಲೂ ಸೋಂಕಿರುತ್ತಲ್ಲಾ ! ಇದೇ ಅನಸೂಯಳ ಮನಸ್ಸಿನ ವಿಚಾರ ಸರಣಿ. ದಿನಕ್ಕೆ ಇಪ್ಪತ್ತು ಮೂವತ್ತು ಬಾರಿ ಹೀಗೆ ಮಾಡಲಾರಂಭಿಸಿದರೆ ದೇಹದ ಆರೋಗ್ಯವು ಶಿಥಿಲವಾಗದೆ ಇರುತ್ತದೆಯೇ ? ಇಪ್ಪತ್ತು ಪೌಂಡು ತೂಕವು ಆರೇಳು ತಿಂಗಳಿನಲ್ಲಿ ಇಳಿಯಿತು.

ಅತ್ಯಗತ್ಯವಾಗಿ ಮನೆಯಿಂದ ಎಲ್ಲಿಗಾದರೂ ಹೋಗಲೇಬೇಕಾದರೆ, ರಸ್ತೆಯಲ್ಲಿ ನಡೆಯುವಾಗ ಎಲ್ಲಿ ಮುಸುರೆಯು ತಾಕಿಬಿಡುತ್ತದೋ ಎಂದು, ಸೀರೆಯ ಅಂಚು ಮೊಣಕಾಲ ತನಕ ಇರುವಂತೆ ಎತ್ತಿ ಹಿಡಿದುಕೊಂಡು, ರಸ್ತೆಯನ್ನು ದಿಟ್ಟಿಸಿ ನೋಡುತ್ತಾ, ನಡೆಯುತ್ತಿದ್ದಳು. ಎಂಜಲಿರಬಹುದು ಎಂದು ಅನುಮಾನ ಬಂದರೆ ಅದರ ಮೇಲೆ ಹಾರಿಕೊಂಡೇ ಹೆಜ್ಜೆ ಹಾಕತೊಡಗಿದಳು. 'ಮಡಿಮಡಿ ಮಡಿಯೆಂದ್ ಅಡಿಗಡಿಗ್ ಹಾರುವಿ' ಎಂದ ದಾಸರು ಇಂತಹ ರೋಗಿಗಳನ್ನು ನೋಡಿದ್ದಿರಬೇಕು. ಈ ಅವಲಕ್ಷಣವನ್ನು ನೋಡಲಾರದೆ, ಮನೆಯಾಚೆ ಅನಸೂಯಳನ್ನು ಕರೆದುಕೊಂಡು ಹೋಗಲು ಮನೆಯವರು ಹಿಂಜರಿಯತೊಡಗಿದರು. ಅನಸೂಯಳಿಗೆ ಇದರಿಂದ ಮನೆಯಲ್ಲೇ ಮಡಿ ಮಾಡುತ್ತಾ ಮುಸುರೆಯಾಗದಂತೆ ನೋಡಿಕೊಳ್ಳುತ್ತಾ ದಿನವೆಲ್ಲಾ ಕಳೆಯುವಂತಾಯಿತು.

'ಬಂದವರೆದುರಿಗೆ ಮಣಿಮಣಿಯಾಗಿ ಮಾತನಾಡುತ್ತಾಳೆ.ಆಮೇಲೆ ನಮ್ಮನ್ನೆಲ್ಲಾ ಗೋಳು ಹುಯ್ದುಕೊಳ್ಳುತ್ತಾಳೆ.' ಎಂದು ಸ್ವಭಾವಿಕವಾಗಿ ಅತ್ತೆಯು ರೇಗಿದಳು. 'ಎಲ್ಲಾ ಶುದ್ಧ ನಟನೆ. ಒದ್ದು ಬುದ್ಧಿ ಹೇಳಿದರೆ ನೆಟ್ಟಗಾಗುತ್ತಾಳೆ' ಎಂದು ಮಗನಿಗೆ ಹೇಳಿದಳು. ಪಾಪ ! ಇದೊಂದು ಬರಬಾರದ ಬೇನೆ ಎಂದು ತಿಳಿವಿಲ್ಲದ ಅತ್ತೆಗೆ ಹೇಗೆ ಗೊತ್ತಾಗಬೇಕು ! ಇಂತಹ ಅಜ್ಞಾನವಿರುವಾಗ, ಸೊಸೆಯ ಮೇಲೆ ಅನುಕಂಪವಾದರೂ ಹೇಗೆ ಬರಲು ಸಾಧ್ಯ ? ಶಿಕ್ಷಿಸುವ ಮನಸ್ಸುಂಟಾಗಿ, ಅಂದೂ ಬೈದೂ ತಿದ್ದಲು ಆಕೆ ಆರಂಭಿಸಿದಳು. ಅನಸೂಯಳ ಮನಸ್ಸು ಮತ್ತೂ ಮೊಂಡು ಹಾಕಿಕೊಂಡಿತು. ಅವಳ ಒಳಗುದಿಯೂ ಉದ್ರೇಕಗೊಳ್ಳುತ್ತಿತ್ತು.

*

ಅನಸೂಯಳು ಬಾಲ್ಯದಲ್ಲಿ ಚೊಚ್ಚಲಾಗಿದ್ದರೂ, ತುಂಬಿದ ಮನೆಯಲ್ಲಿ ಬೆಳೆದಿದ್ದವಳು. ಒಂಟಿಯಾಗಿ ಆಡಿಕೊಂಡು ಇರುವ ಸ್ವಭಾವವಿದ್ದಿರಲಿಲ್ಲ. ತಕ್ಕ ಮಟ್ಟಿಗೆ ಜಾಣ ಹುಡುಗಿ, ಪರೀಕ್ಷೆಗಳಲ್ಲೆಲ್ಲಾ ಉತ್ತೀರ್ಣಳಾಗುತ್ತಿದ್ದಳು. ಪದವೀಧರೆಯೂ ಆಗಿದ್ದಳು. ಸಂಕಟಪಡುವವರನ್ನು ಕಂಡರೆ ಅತಿಯಾಗಿ ಮರುಗುವ ಸ್ವಭಾವ. 'ಅಯ್ಯೋ ಅಂತ ಅಂದರೆ ಸಾಲದೆ? ಅಳುತ್ತಾ ಕೂರುತ್ತಾಳಲ್ಲೇ' ಎಂದು ಅವಳ ಅಜ್ಜಿಯು ಹೇಳುತ್ತಿದ್ದಳು. ಇತರರ ಕಷ್ಟಸಂಕಟವನ್ನು ನೋಡಿದರೆ ಅನಸೂಯಳು ಅಳುವುದೇ ಅಜ್ಜಿಯು ಹಾಗನ್ನುವುದಕ್ಕೆ ಕಾರಣ. ಅನಸೂಯಳ ಮನಸ್ಸು ಅತಿ ಮೃದು. ಆದಕಾರಣದಿಂದಲೇ ಹಟವೂ ಸ್ವಲ್ಪ ಹೆಚ್ಚು. ಪ್ರದರ್ಶಿಸುವ ಹಟವಲ್ಲ. ಒಳಗೊಳಗೇ ಕುದಿಯುವ ಹಟದ ಸ್ವಭಾವ.

ಪದವೀಧರೆಯಾದ ಮೇಲೆ ಮದುವೆಯಾಯಿತು. ಉತ್ತರ ಹಿಂದೂಸ್ಥಾನದಲ್ಲಿ ಗಂಡನಿಗೆ ನೌಕರಿ. ಅತ್ತೆ, ನಾದಿನಿ, ಗಂಡ, ಹೆಂಡತಿ, ಇಷ್ಟೇ ಜನರಿರುವ ಪುಟ್ಟ ಸಂಸಾರ. ಮಧ್ಯಮ ವರ್ಗದ ಸಂಸಾರಕ್ಕೆ ಸಾಕಾಗುವಷ್ಟು ಸಂಪಾದನೆ. ಆಧುನಿಕ ನಡವಳಿಕೆಯಿದ್ದ ಸಂಸಾರ. ಮುಖ್ಯ ಎಲ್ಲವೂ ವಿಹಿತವಾಗಿತ್ತು. ಮೈ ಇಳಿದಾಗ, ಆತಂಕ ತುಂಬಿತು ; ಯಾಕೆ ಹೀಗಾಯಿತು ಎಂದು. ನಂತರ ಮುಸುರೆಯ ಪಿಶಾಚಿಯು ಬಲವಾಗಿ ಹಿಡಿದುಕೊಂಡು ಜಗ್ಗಾಡಲಾರಂಭಿಸಿತು.

*

ನತದೃಷ್ಟರಿಗೆ ಬಡಿಯುವ ಈ ಮಾನಸಿಕ ಮುಸುರೆಯು ಒಬ್ಸೆಷನಲ್ ಬೇನೆಯೇ ! ಮುಸುರೆ ಎಂದು ಒದ್ದಾಡುವುದು ಶುದ್ಧ ಮೂರ್ಖತನ ಎಂದು ಅನಸೂಯಳಿಗೆ ಚೆನ್ನಾಗಿ ಗೊತ್ತಿರುತ್ತದೆ. ಆದರೆ ಮುಸುರೆ ಪಿಶಾಚಿಯು, ಅವಳನ್ನು ಬಿಗಿದುಕೊಂಡು, ಒದ್ದು, ನಡಸುತ್ತದೆ. ಮೂರ್ಖನಡವಳಿಕೆ ಎಂದು ತಿಳಿದಿದ್ದರೂ, ಬಲವಂತವಾಗಿ, ಅನಿವಾರ್ಯವಾದಂತೆ, ಆಕೆ, ನಡೆದ ಹೆಜ್ಜೆಯ ಗುರುತಿನ ಮೇಲೆ ನೀರನ್ನು ಚುಮಕಿಸುತ್ತಾಳೆ. ಅದರಿಂದ ಮುಸುರೆಯು ಹೋಯಿತು ಎಂದುಕೊಳ್ಳುತ್ತಾಳೆ. ಇದನ್ನು ಕಂಡು ಯಾರಾದರೂ ಹೀಯಾಳಿಸಿದರೆ, ಕೋಪವು ಬರುತ್ತದೆ. ಕೋಪವು ಉಕ್ಕಿ ಕೆರಳಿದಾಗ, ಆಡುವ ಮಾತುಗಳಿಗೆ ಸಭ್ಯತೆಯ ಚೌಕಟ್ಟಾಗಲೀ, ವಿಚಾರಪೂರಿತ ಸರಳತೆಯಾಗಲೀ ಇರುವುದಿಲ್ಲ. ಓದಿ ಬರೆದವರು, ಸುಸಂಸ್ಕೃತ ವಾತಾವರಣದಲ್ಲಿ ಬೆಳೆದವರು, ಇಂತಹ ಕೆಟ್ಟ ಕೆಟ್ಟ ಮಾತುಗಳನ್ನು ಆಡಬಹುದು ಎಂದು ನಂಬುವುದಕ್ಕೆ ಕಷ್ಟವಾಗುತ್ತದೆ ; ಅಂತಹ ಮಾತುಗಳನ್ನು ಕೇಳಿಸಿಕೊಳ್ಳುವ ತನಕ.

ಮುಸುರೆ ಪಿಶಾಚಿಯೊಂದಿಗೆ ತೀವ್ರ ಆತಂಕವೂ ಜತೆಗೂಡುತ್ತದೆ. ಎಂಥದೋ ಅವ್ಯಕ್ತವಾದ ತೀಕ್ಷ್ಣವಾದ ಭಯ. ತುಸು ಪೆಟ್ಟಾದರೆ ಸತ್ತೆ ಎಂದು ಬೊಬ್ಬೆ ಹೊಡೆಯುತ್ತಾರೆ. ಆದರೆ ಆಪರೇಷನ್ ಅಗತ್ಯ ಬಿದ್ದಾಗ, ವೈದ್ಯರು ಶಸ್ತ್ರಚಿಕಿತ್ಸೆಯನ್ನು ಕೈಗೊಳ್ಳುವಾಗ, ಆತಂಕವಿರದೆ ಧೈರ್ಯದಿಂದಿರುತ್ತಾರೆ. ನಿರುತ್ಸಾಹ ಮತ್ತು ಖಿನ್ನತೆಗಳು ಆಗಿಂದಾಗ್ಗೆ ಇಂತಹವರಲ್ಲಿ ಕಾಣಿಸಿಕೊಳ್ಳುತ್ತವೆ. ಇಂತಹ ಅವಧಿಯಲ್ಲಿ ಬೆಪ್ಪುಬಡಿದಂತಿರುತ್ತಾರೆ. ಮಿಕ್ಕಂತೆ ಯಾವುದಾದರೂ ಒಂದು ಗೀಳನ್ನು ಭದ್ರಮಾಡಿಕೊಳ್ಳುತ್ತಾರೆ. ರಂಗೋಲಿಯ ಚಿತ್ರಗಳನ್ನು ಬಿಡಿಸುವುದು; ಮೇಣದ ಬೊಂಬೆಗಳನ್ನು ಮಾಡುವುದು; ಮಣಿಪಠಗಳನ್ನು ಹಾಕುವುದು; ಕಾಗದದ ಹೂವುಗಳನ್ನು ರಚಿಸುವುದು; ಹೀಗೆ ಯಾವುದಾದರೂ ಒಂದು ಹವ್ಯಾಸವನ್ನು, ಅಹೋ ರಾತ್ರಿ ಮಾಡಲಾರಂಭಿಸುತ್ತಾರೆ, ಒಂದೆರಡು ತಿಂಗಳುಗಳ ಕಾಲ. ಅನಂತರ

ಅದನ್ನು ಮರೆತು, ಬೇರೊಂದು ಹವ್ಯಾಸ. ಒಂದೊಂದು ಹವ್ಯಾಸದಲ್ಲಿಯೂ ಎಷ್ಟು ಆಸಕ್ತರಾಗುತ್ತಾರೆ, ಅಂತ ; ಇಷ್ಟೆಲ್ಲಾ ಶ್ರಮವನ್ನು ಇವರುಗಳೂ ಹೇಗೆ ಪಡಲು ಸಾಧ್ಯ ! ಇಷ್ಟು ಶಕ್ತಿ ಇವರಿಗೆಲ್ಲಿಂದ ಬಂದಿತು ? ಎಂದು ಆಶ್ಚರ್ಯ ಪಡುವಂತಾಗುತ್ತದೆ.

ಒಬ್ಸೆಷನಲ್ ಬೇನೆಯ ಒಂದು ಅವತಾರ ; ಮುಸುರೆಯ ಪಿಶಾಚಿ.

**ಮಾಲಕ್ಷಮ್ಮನ ಮಡಿ**

ಮಧುರೆಗೆ ಹೋಗಿದ್ದಾಗ ಮೀನಾಕ್ಷಿಯ ದೇವಸ್ಥಾನದಿಂದ ಹಿಂತಿರುಗುತ್ತಿದ್ದೆ. ಯಾರೋ ನನ್ನ ಹೆಸರನ್ನು ಕೂಗಿದಂತಾಯಿತು. ಈ ಊರಿನಲ್ಲಿ ನನ್ನ ಹೆಸರು ಯಾರಿಗೆ ಗೊತ್ತಪ್ಪಾ ಎಂದು ಹಿಂತಿರುಗಿ ನೋಡಿದೆ. ಅರೆ ! ಮಾಧು ! ಕಳೆದ ೨೦ ವರ್ಷಗಳಿಂದ ಅವನೆಲ್ಲಿದ್ದಾನೆ ಎನ್ನುವುದೂ ಗೊತ್ತಿರಲಿಲ್ಲ. ಕಾಲೇಜಿನಲ್ಲಿ ಓದುತ್ತಿದ್ದಾಗ, ತುಂಬಾ ಗಳಸ್ಯಕಂಠಸ್ಯ. ಆದರೆ ಬಾಳಿನ ವಿಚಿತ್ರವು ತಿಳಿದೇ ಇದೆಯಲ್ಲ. ಅವ ಎಲ್ಲೋ ನೌಕರಿಗೆ ಹೋದ, ನಂತರ ಸಂಕಪರ್ಕವೇ ಇಲ್ಲ. ದೇವಸ್ಥಾನದ ಬಳಿಯಲ್ಲಿ ಹಳೆಯ ಗೆಳೆಯನು ಸಿಕ್ಕಿದ್ದು ಒಳ್ಳೆಯ ಶಕುನ ಎಂದುಕೊಂಡೆ.

‘ಇಲ್ಲಿಗೆ ಯಾವಾಗ ಬಂದೆಯೋ? ಇಲ್ಲೇ ನಾನು ವಿಮಾ ಏಜೆಂಟನಾಗಿದ್ದೀನಿ. ಪುಟ್ಟ ಮನೆಯನ್ನೂ ಮಾಡಿಕೊಂಡಿದ್ದೀನಿ. ಒಂದು ಹೊತ್ತು ಊಟ ಮಾಡಿಕೊಂಡು ಹೋಗಲೇಬೇಕು, ತುಂಬಾ ಹರಟೆ ಕೊಚ್ಚಬೇಕು’ ಎಂದು ಆದರದಿಂದ ಒತ್ತಾಯ ಪಡಿಸಿದ. ಒಂಟಿಯಾಗಿದ್ದೆ. ಮೇಲೆ ಬಿದ್ದುಕೊಂಡು ನಾನೇ ಊಟಕ್ಕೆ ಬರ್ತೀನಿ ಎಂದು ಹೇಳುವವನಿದ್ದೆ. ಅಂದಮೇಲೆ ಅವನೇ ಕರೆದರೆ ! ಸಂತೋಷದಿಂದ ಒಪ್ಪಿಕೊಂಡು, ಅವನೊಂದಿಗೆ ಹೊರಟೆ.

ಅವನ ಮನೆಯನ್ನು ಸೇರಿದಾಗ ಹತ್ತು ಗಂಟೆಯ ಸಮಯ. ಲಕ್ಷಣವಾದ ಮನೆ, ಬೀದಿಯ ಬಾಗಿಲ ಹೊಸಿಲು ದಾಟುತ್ತಲೇ ದೊಡ್ಡದೊಂದು ಹಜಾರ. ೧೬, ೧೪, ೧೨, ೮, ೬ ಈ ವಯಸ್ಸುಗಳ ಐದೂ ಮಕ್ಕಳು ಹಜಾರದಲ್ಲಿದ್ದರು. ಶಾಲೆಗೆ ಹೋಗಲು ಎಲ್ಲರೂ ಸಿದ್ಧರಾಗುತ್ತಿದ್ದರು. ಬ್ರೆಡ್ಡನ್ನು ತಿನ್ನುತ್ತಿದ್ದರು. ಮಕ್ಕಳ ಪರಿಚಯವನ್ನು ಮಾಡಿಕೊಟ್ಟ. ನಾಲ್ಕು ಮಾತುಗಳನ್ನು ಅವರುಗಳೊಂದಿಗೆ ಆಡಿದೆ. ಪುಸ್ತಕದ ಚೀಲಗಳನ್ನು ತೆಗೆದುಕೊಂಡು ಅವರು ಸ್ಕೂಲಿಗೆ ಹೊರಟರು. ಬೆಳಗಿನ ಊಟವಿಲ್ಲದೆ, ಮಕ್ಕಳು ಶಾಲೆಗೆ ? ಕೌತುಕ ಉಂಟಾಯಿತು ನನಗೆ. ಮಾಧುವಿನ ಕಡೆ ದಿಟ್ಟಿಸಿ ನೋಡಿ ಹುಬ್ಬೆತ್ತಿದೆ, ಅರ್ಥವಾಯಿತು ಅವನಿಗೆ.

'ನನ್ನ ಹೆಂಡತಿ ಮಾಲಕ್ಷ್ಮಿ ತುಂಬಾ ಮಡಿ ಕಣೋ, ಅಡಿಗೆಯ ಮನೆಯನ್ನು ದೇವರ ಮನೆಯಂತೆ ಶುಭ್ರವಾಗಿಡುತ್ತಾಳೆ. ಅಡಿಗೆಯ ಪಾತ್ರೆಗಳು ಕನ್ನಡಿಯಂತೆ ಹೊಳೆಯುತ್ತಿರುತ್ತೆ. ಪಾತ್ರೆಗಳನ್ನು ಚೆನ್ನಾಗಿ ತೊಳೆದು ನಂತರ ಅಡಿಗೆಯನ್ನು ಮಾಡುತ್ತಾಳೆ. ಕಾರಣ, ಅಡಿಗೆ ಮುಗಿಯುವುದಕ್ಕೆ ಹೊತ್ತಾಗುತ್ತದೆ ನಮ್ಮನೆಯಲ್ಲಿ. ಬ್ರೆಡ್ಡನ್ನು ತಿಂದು ಶಾಲೆಗೆ ಹೋಗುವುದು ಮಕ್ಕಳಿಗೆ ಅಭ್ಯಾಸವಾಗಿಬಿಟ್ಟಿದೆ, ನಾನೂ ಹಾಗೇ ಅನ್ನು' ಎಂದ ಮಧೂ.

ಹಜಾರದಿಂದ ಎಡಕ್ಕೆ ಚಿಕ್ಕ ಓಣಿ. ಅದಕ್ಕೆ ಲಗತ್ತಿಸಿದಂತೆ ಅಡಿಗೆಯ ಮನೆ, ಊಟದ ಮನೆ. ಅಡಿಗೆಯ ಮನೆಯ ಬಾಗಿಲ ತನಕ ನನ್ನ ಕರೆದುಕೊಂಡು ಹೋದ. ಬಾಗಿಲ ಹೊರಗೆ ನಿಂತು 'ಮಾಲಕ್ಷ್ಮೀ ನನ್ನ ಹಳೆ ಗೆಳೆಯ ಅಕಸ್ಮಾತ್ ಸಿಕ್ಕ ನೋಡು, ಕರಕೊಂಡು ಬಂದೆ, ಇಲ್ಲೇ ಊಟ ಮಾಡ್ತಾನೆ.' ಎಂದು ನುಡಿದ. ಒಲೆಯ ಮುಂದೆ ಕುಳಿತಿದ್ದ ಮಾಲಕ್ಷಮ್ಮ, ಬಲು ಆದರದಿಂದ ನನ್ನನ್ನು ಮಾತನಾಡಿಸಿದಳು. ಅಡಿಗೆಯ ಮನೆಯೊಳಕ್ಕೆ ಒಂದು ಹೆಜ್ಜೆಯನ್ನು ಇಡತೊಡಗಿದೆ. ತೋಳನ್ನು ಜಟ್ಟಂತ ಹಿಡಿದು, ನನ್ನನ್ನು ಹಿಂದಕ್ಕೆ ಮಾಧೂ ಎಳೆದುಕೊಂಡ. 'ಅಡಿಗೆಯ ಮನೆಯು ಮಡಿ ಕಣೋ, ಬೀದಿಯಿಂದ ಬಂದು ನೇರ ಒಳಕ್ಕೆ ಹೋಗಬಾರದು' ಎಂದು ಎಚ್ಚರಿಸಿದ. ಮಾಲಕ್ಷಮ್ಮನು ಎದ್ದು ಬಂದು, ನಾ ಹೆಜ್ಜೆಯಿಟ್ಟಿದ್ದ ಜಾಗವನ್ನು ಸಾರಿಸಿದಳು. 'ಅವರಿಗೆ ತಿಳಿಯದು, ಈಗೇನಾಯಿತು. ಸಾರಿಸಿದರೆ ಮಡಿಯಾಗುತ್ತೆ' ಎಂದಳು. ಸಾರಿಸಿದ ಮೇಲೆ ಬಚ್ಚಲ ಕೋಣೆಗೆ ಹೋದಳು. ಅಡಿಗೆಯ ಮನೆಯ ಪಾತ್ರೆಗಳು ನಿಜವಾಗಿ ಹೊಳೆಯುತ್ತಿದ್ದವು, ಗೋಡೆಗಳು ಶುಭ್ರವಾಗಿದ್ದುವು.

ಹಜಾರಕ್ಕೆ ಹಿಂತಿರುಗಿದೆವು. 'ಹೆಜ್ಜೆ ಇಟ್ಟ ಜಾಗವನ್ನು ಸಾರಿಸಿದಳು. ಈಗ ಸ್ನಾನ ಮಾಡುಕ್ಕೆ ಹೋಗಿದ್ದಾಳೆ. ಅಂತಹ ಕಟ್ಟುನಿಟ್ಟು ಮಡಿಯಪ್ಪಾ' ಎಂದ. ಆ ಮಾತು ಈ ಮಾತು ಆಡುತ್ತಾ, ನನಗೆ ತೋರಿಬಂದಿದ್ದ ಸಂಶಯ ನಿವಾರಣೆಯನ್ನು ಮಾಡಿಕೊಳ್ಳಲೆತ್ನಿಸಿದೆ. ಅವನು ಹೇಳಿದುದರ ಸಾರಾಂಶ ಹೀಗೆ :

ಹದಿನೇಳು ವರ್ಷಗಳ ಹಿಂದೆ ಮದುವೆಯಾಗಿ ಗಂಡನ ಮನೆಗೆ ಬಂದಾಗ, ಮಾಲಕ್ಷಮ್ಮನಿಗೆ ಅಂತದೇನೂ ಮಡಿಯಿರಲಿಲ್ಲ. ಆದರೆ ಮನೆಯಲ್ಲಿ ಅಚ್ಚುಕಟ್ಟು, ಶುಭ್ರತೆ, ಇತ್ಯಾದಿಗಳಲ್ಲಿ ಸ್ವಲ್ಪ ಅತಿರೇಕವನ್ನು ಮಾಡುತ್ತಿದ್ದಳು. ಮೊದಲ ಮಗು ವಾದಮೇಲೆ 'ಮಡಿ' ಮಾಡುವುದಕ್ಕೆ ಪ್ರಾರಂಭವಾಯಿತು. ಬೆಳಗಿನ ಝಾವ ಐದಕ್ಕೆದ್ದು ಅಡಿಗೆಯ ಮನೆಯನ್ನು ಗುಡಿಸಿ ಸಾರಿಸಿ ನಂತರ ಸ್ನಾನ ಮಾಡುವಳು. ಆರರ ವೇಳೆಗೆ ಅಡಿಗೆಮನೆಯನ್ನು ಸೇರುತ್ತಾಳೆ. ಮೊದಮೊದಲು ಹತ್ತರ ವೇಳೆಗೆ

ಅಡಿಗೆಯು ಮುಗಿಯುತ್ತಿತ್ತು. ತಾನೇ ತಂದು ನನಗೆ ಬಡಿಸುತ್ತಿದ್ದಳು. ಆಮೇಲೆ ಊಟದ ಮನೆಯನ್ನೂ ನಾಲ್ಕಾರು ಬಾರಿ ಸಾರಿಸುವುದಕ್ಕೆ ಪ್ರಾರಂಭಿಸಿದಳು. 'ಹೀಗೆಲ್ಲಾ ಕೆಲಸ ಮಾಡಿದರೆ ದಣಿಯುತ್ತಿ. ಕ್ಷಯ ಬಂದು ಬಿಡಬಹುದು' ಎಂದು ಬೈದೆ. 'ಮನೆಯಲ್ಲಿ ಮಡಿ ಮಾಡಿದರೆ, ಮಕ್ಕಳು ಮತ್ತು ನಿಮ್ಮನ್ನು ದೇವರು ಕಾಯುತ್ತಾನೆ' ಎಂದಳು. ಆದರೂ ಜುಲುಂ ಮಾಡಿ ಅಡಿಗೆಯ ಮನೆಯಲ್ಲಿಯೇ ಊಟಕ್ಕೆ ಎರಡು ದಿನ ಕುಳಿತೆ. 'ತಟ್ಟೆ ಇಟ್ಟಿದ್ದ ಜಾಗವನ್ನು ಸಾರಿಸಿದರಾಯಿತು' ಎಂದೆ. ಎದುರು ಮಾತನಾಡಲಿಲ್ಲ. ಆದರೆ ಕೋಪವು ಮುಖದಲ್ಲಿ ಸ್ಪಷ್ಟವಾಗಿ ಕೆರಳಿತ್ತು. ಧುಮುಗುಡುತ್ತಿತ್ತು. ಮೂರನೆಯ ದಿನ ಅವಳಿಗೆ ಹೊಟ್ಟೆಶೂಲೆಯು ಬಂತು. ಡಾಕ್ಟರು ಬಂದು ನೋಡಿದರು. ಅಪೆಂಡಿಸೈಟಿಸ್ ಆಗಿದೆ. ಆಸ್ಪತ್ರೆಗೆ ಕರೆದುಕೊಂಡು ಹೋಗಿ ತತ್‌ಕ್ಷಣ ಆಪರೇಷನ್ ಮಾಡಿಸುವುದು ಅತ್ಯಗತ್ಯ ಎಂದರು.

'ಮನೆಯಲ್ಲಿ ಮಡಿ ಕೆಟ್ಟು ಹೋಯಿತು. ಆದ್ದರಿಂದ ಪರಿಣಾಮ ಶೂಲೆಯೂ ಬಂತು. ಆಸ್ಪತ್ರೆಯೂ ಬೇಡ, ಆಪರೇಷನ್ನೂ ಬೇಡ. ಸಾಯುವುದಾದರೆ ಮನೆಯಲ್ಲೇ ಸಾಯುತ್ತೇನೆ' ಎಂದು ಹಠ ಹಿಡಿದಳು. ಭಯಂಕರ ಶೂಲೆಯಿಂದ ನರಳುತ್ತಿದ್ದಳು, ಮುಡುಪು ಕಟ್ಟಿಟ್ಟು, ಮಲಗಿದಳು. ಗಂಗಾಜಲವೊಂದನ್ನು ಬಿಟ್ಟು ಇನ್ನಾವುದನ್ನೂ ಕುಡಿಯಲಿಲ್ಲ. ಎರಡು ದಿನಗಳ ನಂತರ ಗುಣ ಹೊಂದಿ ಎದ್ದು ಕುಳಿತಳು. ಇನ್ನೆರಡು ದಿನಗಳಲ್ಲಿ ಮನೆಗೆಲಸವನ್ನು ಮಾಡತೊಡಗಿದಳು.

ಅವತ್ತಿನಿಂದ ನೋಡಪ್ಪಾ ! ಮಡಿಯು ಅತಿಯಾಯಿತು. ನಾನು ವಿರೋಧಿಸುವುದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಆದ್ದರಿಂದ ವಿರೋಧಿಸುವುದನ್ನೇ ಬಿಟ್ಟೆ. ಎಷ್ಟೋ ಬಾರಿ ಬೇಜಾರಾಗುತ್ತೆ. ಕಳೆದ ಏಳೆಂಟು ವರ್ಷಗಳಿಂದ ಬೆಳಗಿನ ಝಾಮ ಅಡಿಗೆಮನೆಯನ್ನು ಸೇರಿದರೆ ರಾತ್ರಿ ಹನ್ನೊಂದು ಹನ್ನೆರಡಕ್ಕೇ ಹೊರಕ್ಕೆ ಬರುವುದು. ದಿನಕ್ಕೆ ನಾಲ್ಕೈದು ಸರ್ತಿ ಸ್ನಾನ ಮಾಡುತ್ತಾಳೆ. ಮೈಲಿಗೆ ಆಯಿತು ಅಂತ ಅನುಮಾನ ಬಂದರೆ ಅಡಿಗೆಯ ಮನೆಯನ್ನು ಸಾರಿಸುತ್ತಾಳೆ. ಮಕ್ಕಳಿಗೆ ಊಟ ಹಾಕಿ ಶಾಲೆಗೆ ಕಳಿಸಬಾರದೇನೇ ? ಎಂದರೆ, 'ಅಷ್ಟು ಹೊತ್ತಿಗೆ ಮಡಿಯಲ್ಲಿ ಅಡಿಗೆ ಮಾಡುಕ್ಕಾಗಲ್ಲ. ಮಧ್ಯಾಹ್ನ ಒಂದು ಗಂಟೆಗೆ ಬಂದಾಗ ಉಂಡು ಹೋಗುತ್ತಾರೆ' ಎಂದನ್ನುತ್ತಾಳೆ. ಮಧ್ಯಾಹ್ನದ ಊಟ ನಮ್ಮನೆಯಲ್ಲಿ ಒಂದು ಗಂಟೆಯ ಹೊತ್ತಿಗಾದರೆ, ರಾತ್ರಿಯ ಊಟ ಹತ್ತು ಗಂಟೆಗೆ. ಈ ಅಂತರದಲ್ಲಿ ಹಾಲು ಬ್ರೆಡ್ಡು ಬಿಟ್ಟು ಇನ್ನೇನೂ ಮಕ್ಕಳಿಗೆ ದೊರಕುವುದಿಲ್ಲ.

ಇದೊಂದು ವಿಪರೀತವನ್ನು ಬಿಟ್ಟರೆ ಮಿಕ್ಕೆಲ್ಲಾ ವಿಷಯಗಳಲ್ಲಿಯೂ ಸರಿಯಾಗಿದ್ದಾಳೆ. ಒಂದು ದುಂದು ಖರ್ಚು ಮಾಡುಲ್ಲ. ಒಡವೆ ಸೀರೆ ಬೇಕು ಅಂತ ಸತಾಯಿಸುವುದಿಲ್ಲ. ನೀ ಕಂಡ ಹಾಗೇ ಐದು ಮಕ್ಕಳಾಗಿವೆ. ಅಮ್ಮನ ಮೇಲೆ ಮಕ್ಕಳಿಗೆ ಅಪಾರ ಮಮತೆ. ಶಾಲೆಯಿಂದ ಅವು ಬಂದ ಕೂಡಲೇ, ಬಚ್ಚಲ ಮನೆಗೆ ಹೋಗಿ ಬಟ್ಟೆಗಳನ್ನು ಕಳಚಿ, ಸ್ನಾನ ಮಾಡಬೇಕು. ನಂತರ ಬೇರೆ ಬಟ್ಟೆಗಳನ್ನು ಹಾಕಿಕೊಳ್ಳಬೇಕು. ಮಳೆಯಿರಲಿ, ಗಾಳಿಯಿರಲಿ ; ತಣ್ಣೀರಿನಲ್ಲಿ ಅವಕ್ಕೆ ಸ್ನಾನ ತಪ್ಪಿದ್ದಲ್ಲ. ಆದರೂ ಅವು ಅಮ್ಮನ ಮೇಲೆ ಸಿಡುಕುವುದಿಲ್ಲ. 'ಅಮ್ಮ "ಮಡಿ" ಮಾಡುವುದರಿಂದಲೇ ನಾವೆಲ್ಲಾ ಬಾಳಿ ಬದುಕುವುದು' ಎಂದು ನಂಬಿದ್ದಾರೆ.

ಮಾಲಕ್ಷಮ್ಮನ ಮಡಿಯು, ಆಕೆಯ ಮನಸ್ಸಿನಲ್ಲಿ ಮನೆ ಮಾಡಿಕೊಂಡಿರುವ ಒಂದು ಪಿಶಾಚಿಯೇ. ಇದೂ ಒಂದು ವಿಧದ 'ಒಬ್ಸೆಷನ್.' ಈ ರೀತಿ ನಾಲ್ಕಾರು ಸಲ ಸ್ನಾನ ಮಾಡುವುದು ವಿಪರೀತ ವರ್ತನೆ ಎಂದು ಮಾಲಕ್ಷಮ್ಮನಿಗೂ ಗೊತ್ತು. ಆದರೆ ಇಂತಹ 'ಮಡಿ' ಯಿಂದ ದೇವರು ಸುಪ್ರೀತನಾಗುತ್ತಾನೆ ಎಂದೂ ನಂಬಿದ್ದಾಳೆ. ಅವಳು ಹಾಗಿರಲಿ ; ಮನೆಯ ಮಕ್ಕಳೂ ಹೀಗೆಯೇ ನಂಬಿದ್ದಾರೆ. ಈ ಕಾರಣದಿಂದಲೇ ಅಮ್ಮನ ಮೇಲೆ ತುಂಬಾ ಗೌರವವೂ ಇದೆ. ಹೊತ್ತಿಗೆ ಸರಿಯಾಗಿ ಊಟ ಹಾಕಲಿಲ್ಲ ; ಶಾಲೆಯಿಂದ ಬಂದ ಮೇಲೆ ಬಟ್ಟೆ ಕಳಚಿಸಿ, ಸ್ನಾನ ಮಾಡಿಸುತ್ತಾಳೆ. ಎಂದು ಬೇಜಾರು ಪಡುವುದಿಲ್ಲ. ಎಲ್ಲ ಮಡಿವಂತರ ಮನೆಯಲ್ಲೂ ಇದೇ ಸಾಮಾನ್ಯವಾದ ನಡವಳಿಕೆ ಎಂದು ಅವರೆಲ್ಲರೂ ನಂಬಿದ್ದಾರೆ, ಒಂದು ರೀತಿಯಲ್ಲಿ ನೆಮ್ಮದಿಯಿಂದಿದ್ದಾರೆ.

ಹೀಗೆ ಮಾಧೂ ಹೇಳಿದ ಮೇಲೆ 'ಬಸಿರು ಹೆರಿಗೆ ಬಾಣಂತನ ಇವೆಲ್ಲಾ ಹೇಗೆ ಎಂದೆ'. ಬಿಡಪ್ಪಾ ಆ ಕಾಷ್ಟವ್ಯಸನಾನ ! ಎಷ್ಟೋ ರಾತ್ರಿ ಸ್ನಾನ ಮಾಡಬೇಕಾಗುತ್ತದೆ. ಹೆತ್ತ ಹತ್ತುದಿನ ಹೇಗೋ ಕಳೆಯುತ್ತಾಳೆ. ಹನ್ನೊಂದನೇ ದಿನದಿಂದಲೇ ತಿರುಗಿ 'ಮಡಿ' ಆಚರಣೆಗೆ ಪ್ರಾರಂಭ. ಬ್ರಾಹ್ಮಣ ಕೆಲಸದವಳನ್ನು ಆ ಕಾಲದಲ್ಲಿ ಗೊತ್ತು ಮಾಡಿಕೊಳ್ಳುತ್ತಾಳೆ. ಅವಳಿಗೂ ನಾಲ್ಕೈದು ಬಾರಿ ದಿನಾಗಲು ಸ್ನಾನ. ಒಂದಕ್ಕೆರಡು ಸಂಬಳವನ್ನು ಕೊಟ್ಟು 'ಒಂದೆರಡು ತಿಂಗಳು ಎಂತಹ ಕಷ್ಟವಾದರೂ ಇರಮ್ಮ, ಬಿಟ್ಟು ಹೋಗಬೇಡ ಎಂದು ಕೇಳಿಕೊಂಡೆ. ಆಕೆಯೂ ಒಪ್ಪಿಕೊಂಡು, ಎಲ್ಲವನ್ನು ಅನುಭವಿಸುತ್ತಾಳೆ' ಎಂದ ಮಾಧೂ.

ಮಾಲಕ್ಷಮ್ಮನ ಅಡಿಗೆಯು ಬಲು ರುಚಿಯಾಗಿತ್ತು. ಹಜಾರದಲ್ಲೇ ನಾವಿಬ್ಬರೂ ಊಟ ಮಾಡಿದೆವು. ತುಂಬಾ ಆದರದಿಂದ ಬಲವಂತ ಮಾಡಿ ಹಬ್ಬದ ಅಡಿಗೆಯನ್ನು ಬಡಿಸಿದಳು. 'ಹೋಗಿ ಬರ್ತೀನಮ್ಮಾ, ನಮ್ಮ ಊರಿಗೆ

ಬಂದಾಗ ಖಂಡಿತ ನಮ್ಮನೆಗೆ ಬರಬೇಕು' ಎಂದೆ. 'ಹೂ' ಅಂದಳು. 'ಇವನನ್ನು ಬಿಟ್ಟು ಬರ್ತೀನಿ, ಕಣೆ' ಎಂದು ಮಾಧೂ ಹೇಳಿ ನನ್ನೊಡನೆ ಹೊರಟ. 'ಈ ಬಿಸಿಲಿನಲ್ಲಿ ನೀನ್ಯಾಕೆ ಬರಬೇಕೋ' ಎಂದೆ. 'ಹಜಾರವನ್ನು ಸಾರಿಸಿ ಗುಡಿಸಿ ಸ್ವಚ್ಛ ಮಾಡೋದನ್ನು ನೋಡಲಾರೆ ಕಣೋ, ಅದಕ್ಕೆ ಹೊರಹೋಗುತ್ತೇನೆ' ಎಂದ.

ಮಾಲಕ್ಷಮ್ಮನ ಮಡಿಯು ಮಾಧುವನ್ನು ಮಡಿಕೋಲಿನಿಂದ ಹೊಡೆಯುತ್ತಿದೆ ಎಂಬುದು ಸ್ಪಷ್ಟವಾಯಿತು.

**ಒಂದು ತರಹ ತಿಕ್ಕಲು**

ಲಾಲ್‌ಬಾಗಿನಲ್ಲಿ ಪುಷ್ಪ ಕುಂಡಗಳನ್ನಿರಿಸಿರುವ ಅಂಗಳದಲ್ಲಿ ಹದಿನಾರರ ತರುಣಿಯೊಬ್ಬಳು ನಡೆದಾಡುತ್ತಿದ್ದಳು. ಪುಷ್ಪಗಳನ್ನು ನೋಡುತ್ತಾ ನಡೆಯುವಾಗ, ಪ್ರತಿ ಮೂರನೆಯ ಕುಂಡವನ್ನೂ ಕೈಯಲ್ಲಿದ್ದ ಛತ್ರಿಯ ತುದಿಯಿಂದ ತಪ್ಪದೆ ತಟ್ಟುತ್ತಿದ್ದಳು. ಸುಮಾರು ಹದಿನೈದು ನಿಮಿಷಗಳ ಕಾಲ ನೋಡಿದೆ. ತಪ್ಪದೆ ಈ ನಡವಳಿಕೆಯು, ನಡೆಯಿತು. ಏಕೆ? ಇದೆಂತಹ ತಿಕ್ಕಲು.

ರೈಲ್ವೆ ಸ್ಟೇಷನ್ ಪ್ಲಾಟ್‌ಫಾರಂನಲ್ಲಿ ಕಂಡೆ. ಹನ್ನೆರಡು ಹದಿಮೂರು ವಯಸ್ಸಿನ ಹುಡುಗನೊಬ್ಬ ಅಲ್ಲಿ ನಡೆಯುವಾಗ, ಚಪ್ಪಡಿ ಕಲ್ಲುಗಳು ಕೂಡಿರುವಲ್ಲಿ ಸಿಮೆಂಟ್ ತುಂಬಿರುತ್ತಾರಲ್ಲ ; ಆ ಗೆರೆಗಳ ಮೇಲೆ ಎಚ್ಚರದಿಂದ ನಡೆಯುತ್ತಿದ್ದ, ಸರ್ಕಸ್‌ನವರು ತಂತಿಯ ಮೇಲೆ ನಡೆಯುವಂತೆ. ಇದೆಂತಹ ಆಟ, ಅಥವಾ ಇದೂ ತಿಕ್ಕಲೋ ಏನೋ?

ನಮ್ಮ ಶಾಮಣ್ಣನನಕ ಬೆಂಕಿಪೊಟ್ಟಣದ ಮೇಲೆ ಮೂರು ಸರ್ತಿ ಕುಟ್ಟಿದ ಮೇಲೆ, ಸಿಗರೇಟನ್ನು ಬಾಯಿಗಿಡುತ್ತಾನೆ, ಬೆಂಕಿ ಹಚ್ಚುತ್ತಾನೆ. ಎಳೆಎಳೆಯಾಗಿರುವ ಹೊಗೇಸೊಪ್ಪಿನ ನೂಲುಗಳು ಒಟ್ಟುಗೂಡಲಿ ಎಂದಿರಬೇಕು. ಆದರೆ ಮೂರೇ ಮೂರು ಸರ್ತಿ ತಟ್ಟುತ್ತಾನಲ್ಲ ; ತಪ್ಪದೆ, ಇದೇನು? ಒಂದು ಅಭ್ಯಾಸವೋ ಅಥವಾ ಇದೂ ಒಂದು ತಿಕ್ಕಲೋ.

ಈ ತೆರನ ವಿಚಿತ್ರ ನಡವಳಿಕೆಯು ದೇಹದಿಂದ ನಡೆಯುವ ಕಾರ್ಯಗಳಿಗೆ ಮಾತ್ರ ಮೀಸಲಾಗಿಲ್ಲ. ಮನಸ್ಸಿನ ಕಾರ್ಯಗಳಲ್ಲಿಯೂ ಕಂಡುಬರುತ್ತದೆ.

'ಹತ್ತಿ, ಬೆಣ್ಣೆ, ಬೆಕ್ಕಿನ ಬಾಲ'ದ ಕತೆಯನ್ನು ಅಡುಗೂಲಜ್ಜಿ ಮನೆಯಲ್ಲಿ ಹೇಳಿದಳು. ಮನೆಮಂದಿ ಮಕ್ಕಳೆಲ್ಲರೂ ಕೇಳಿ ನಕ್ಕರು. ಆದರೆ ಮನೆಗೆ ಬಂದಿದ್ದ ಅಳಿಯ ಸಂಜೆ ಕೊಠಡಿಯಲ್ಲಿ ಪೇಪರು ಹಿಡಿದು ಕೂತಿರುವಾಗ 'ಏನನ್ನೋ

ಗುನುಗುತ್ತಿದ್ದ. ಅಜ್ಜಿಯ ಕತೆಯನ್ನು ಕೇಳಿ ಆಗಲೇ ತಾಸಾಗಿತ್ತು. ಗಂಡ ಏನು ಮಾಡ್ತಾ ಇದ್ದಾನೆ ಎಂದು ನೋಡಲು ಸದ್ದು ಮಾಡದೆ ಹೆಂಡತಿಯು ಕೊಠಡಿಗೆ ಬಂದಳು. ಪೇಪರ್ ಹಿಡಿದುಕೊಂಡು ಏನನ್ನೋ ಗುನುಗುತ್ತಿರುವುದು ಕೇಳಿಸಿತು. 'ಏನನ್ನುತ್ತಿದ್ದಾರೆ. ಪೇಪರ್ ಓದುತ್ತಿದ್ದಾರೆಯೇ, ತುಸು ಗಟ್ಟಿಯಾಗಿ' ಎಂದು ಹಿಂದಿನಿಂದ ಹತ್ತಿರ ಹೋದಳು. 'ಹತ್ತಿ ಬೆಣ್ಣೆ ಬೆಕ್ಕಿನ ಬಾಲ' 'ಹತ್ತಿ ಬೆಣ್ಣೆ ಬೆಕ್ಕಿನ ಬಾಲ' ಅಂತ ಅಳಿಯಂದಿರು ಗುನುಗುತ್ತಿದ್ದರು. 'ಇದೇನು ಅಂದರೆ ! ಈ ಜಪವನ್ನು ಮಾಡ್ತಾ ಇದ್ದೀರಿ. ಇದು ಯಾವ ತಿಕ್ಕಲು ನಿಮಗೆ ಹಿಡಿದಿರುವುದು?' ಎಂದು ಕೇಳಿದಳು. 'ದಿಟ ಕಣೆ, ತಿಕ್ಕಲು ಹಿಡಿದ ಹಾಗೇ ಅಜ್ಜಿ ಹೇಳಿದ್ದು ನನಗೆ ಹಿಡಿದಿದೆ. ಮರೆತುಬಿಡೋನ ಅಂದರೆ ಸಾಧ್ಯವಾಗುತ್ತಿಲ್ಲ' ಎಂದು ಅಳಿಯಮ್ಮೆಯ ಒಪ್ಪಿಕೊಂಡ.

'ಐಲೂರಿನಲ್ಲಿ ಒಬ್ಬ ಲಾಯರಿದ್ದನು' ಎಂಬ ಪಂಚ ಪಂಕ್ತಿಯನ್ನು ಮಾಸ ಪತ್ರಿಕೆಯೊಂದರಲ್ಲಿ ರಾಮು ಓದಿದ. ತೊಗೊಳ್ಳಿ. ಅದಾದ ದಿನಗಳು ಯಾರನ್ನು ಭೇಟಿಯಾದರೂ 'ಐಲೂರಿನಲ್ಲಿ' ಎಂದು ನಾಂದಿ ನುಡಿಯುತ್ತಿದ್ದ. 'ಇದೆಂತಹ ತಿಕ್ಕಲು ಅಂತೀನಿ ; ಮೇಲಿಂದ ಮೇಲೆ ಇದೇ ನೆನಪಿಗೆ ಬರುತ್ತೆ. ಯಾರನ್ನು ಕಂಡರೂ ಅವರಿಗೆ ಹೇಳೋಣ ಅಂತ ಯಾವುದೋ ಬಲವಂತ ಮಾಡುತ್ತದೆ' ಎಂದು ಅವನೇ ಗೋಳಾಡಿದ.

ಊಟ ಉಪಚಾರಗಳಲ್ಲಿಯೂ ಈ ತೆರನ ತಿಕ್ಕಲನ್ನು ಕಾಣಬಹುದು. ಗಣೇಶನ ಮಂಗಳಾರತಿಯನ್ನು ಹಾಸ್ಟೆಲಿನಲ್ಲಿ ಆಚರಿಸಿದಾಗ, ಮೂವತ್ತೆರಡನೆಯ ನಂಬರ್ ಕೊಠಡಿಯಲ್ಲಿದ್ದ ಗಣೇಶನಾಯ್ಕ ಊಟ ಮಾಡಿದ ಮೇಲೆ ಮೂವತ್ತೆರಡು ಚಿರೋಟಿಗಳನ್ನು ಕಮಕ್‌ಕಿಮಕ್ ಅನ್ನದೆ ತಿಂದ. ಹೆಸರು ಗಣೇಶ ಆದರೂ ಕಡ್ಡಿ ಪೈಲ್ವಾನ್ ಅವ. ಅಷ್ಟೆಲ್ಲಾ ಹಿಡಿಸಲು ಅವನ ಹೊಟ್ಟೆಯಲ್ಲಿ ಸ್ಥಳವೆಲ್ಲಿದೆ ಎಂದು ಕಂಡವರಿಗೆ ಆಶ್ಚರ್ಯ. ಹಸಿವಾಯಿತು ಅಂತ ತಿನ್ನಲಿಲ್ಲ ಅವ. ಸಿಕ್ಕಿದಾಗ ತಿನ್ನಲೇಬೇಕು ಎಂದು ಯಾವುದೋ ಬ್ರಹ್ಮರಾಕ್ಷಸ ಅವನ ಮನಸ್ಸಿನಲ್ಲಿ ಕುಕ್ಕುತ್ತಿತ್ತು. Compulsive eating ಎನ್ನುತ್ತಾರೆ ಈ ನಡವಳಿಕೆಯನ್ನು. ಇದೂ ಒಂದು ತರಹಾ ತಿಕ್ಕಲೇನೇ !

ಮನಸ್ಸು ಸ್ವಸ್ಥವಾಗಿದೆ, ಎಂದು ಖಂಡಿತವಾಗಿ ಹೇಳಬಹುದಾದವರಲ್ಲೂ ಇಂತಹ ಚಿತ್ರವಿಚಿತ್ರ ತಿಕ್ಕಲನ್ನು ಕಾಣುತ್ತೇನೆ. ನೀವೂ ನಾವೂ ಕೂಡ ಇಂತಹ ತಿಕ್ಕಲನ್ನು ಅಲ್ಪಸ್ವಲ್ಪವಾಗಿ ಹೊಂದಿರುತ್ತೇವೆ. ಯೋಚನೆ ಮಾಡಿ ವಿಚಾರವನ್ನು ಹೂಡಿ ಹೀಗೆ ಮಾಡುವುದಿಲ್ಲ. ಯಾವುದೋ ಒಂದು ಭೂತವು, ಮನಸ್ಸಿನ

ಒಂದು ಗುಹೆಯಲ್ಲಿ ಸೇರಿಕೊಂಡು, ಹಠಹಿಡಿದು ಹೀಗೆ ಮಾಡು ಎಂದು ಬಲವಂತಪಡಿಸುತ್ತದೆ. ನಾವು ಮಾಡುತ್ತೇವೆ. ಆದರೆ ಸ್ವಲ್ಪ ಯೋಚನೆ ಮಾಡಿ ಇದೆಂತಹ ತಿಕ್ಕಲು ಎನಿಸಿದಾಗ, ಭೂತದ ಆಟವೇನೂ ನಡೆಯುವುದಿಲ್ಲ. ತಿಕ್ಕಲು ಬಿಟ್ಟುಹೋಗುತ್ತದೆ. ಮನಸ್ಸಿನಲ್ಲಿ ನೆಮ್ಮದಿಯೂ ಎಂದಿನಂತೆಯೇ ಇರುತ್ತದೆ; ಅಸ್ವಸ್ಥವಾಗುವುದಿಲ್ಲ.

ಇವೆಲ್ಲಾ ತಿಕ್ಕಲು ನಡವಳಿಕೆಯಾದರೂ ರೋಗ ಎನಿಸುವುದಿಲ್ಲ. ಏಕೆಂದರೆ ದೈನಂದಿನ ಕಾರ್ಯಗಳಿಗೆ ಅಡ್ಡಿಯಾಗುವುದಿಲ್ಲ. ಮನಸ್ಸಿನ ಸ್ವಾಸ್ಥ್ಯವೂ ಕೆಟ್ಟಿರುವುದಿಲ್ಲ. ಆದರೆ ಇದೇ ತಿಕ್ಕಲು ಅತಿಯಾದರೆ, ಆಗ ಒಬ್ಸೆಷನಲ್ ಬೇನೆಗಳಿಗೆ ಮಾರ್ಗ ಮಾಡಿಕೊಡುತ್ತದೆ. ದಿನದಿನದ ಬಾಳಿನ ವ್ಯವಸ್ಥೆಯನ್ನು ಕುಂಟಿಸುತ್ತದೆ. ಮನಸ್ಸಿನ ನೆಮ್ಮದಿಯೂ ಕದಡಿಹೋಗುತ್ತದೆ.

ದುಶ್ಚಟಗಳೂ ದುರಭ್ಯಾಸಗಳೂ ಒಬ್ಸೆಷನಲ್ ಬೇನೆಯ ಮತ್ತು ತಿಕ್ಕಲಿನ ಮಧ್ಯೆ ಇರುವಂತಹವು. ಇದೇನೂ ಮುಂದೆ ಮಾನಸಿಕ ಬೇನೆಗಳಾಗುವುದಿಲ್ಲ. ಆದರೆ Compulsive Traits ಬಲವಂತದಿಂದಾಗುವ, ಮನಸ್ಸಿನ ಹತೋಟಿಯನ್ನು ಮೀರಿದ ನಡವಳಿಕೆಗಳು, ಇವೆಲ್ಲಾ.

ಊಟವಾದ ಮೇಲೆ ಎಲ್ಲರೂ ಕೈ ತೊಳೆದುಕೊಳ್ಳುತ್ತಾರೆ. ಕೆಲವರು ತಿಕ್ಕಿತಿಕ್ಕಿ ಐದಾರು ನಿಮಿಷ ಕೈ ತೊಳೆದುಕೊಳ್ಳಬಹುದು. ಆದರೆ ತಿರುಗಿ ತಿರುಗಿ ಬಚ್ಚಲ ಮನೆಗೆ ಹತ್ತಾರು ಬಾರಿ ಹೋಗಿ ಕೈ ತಿಕ್ಕಿ ತೊಳೆಯಲಾರಂಭಿಸಿದರೆ, ತಿಕ್ಕಲಿನ ಗಡಿಯನ್ನು ದಾಟಿದೆ, ಬೇನೆಯ ಗಡಿಯನ್ನು ಮುಟ್ಟಿದೆ ಎಂದು ಎಚ್ಚರವಹಿಸಬೇಕು.

ವಿಜಯಲಕ್ಷ್ಮಿಯ ಅನುಮಾನ, ಅನಸೂಯಳ ಮುಸುರೆ, ಮಾಲಕ್ಷಮ್ಮನ ಮಡಿ ಇವೆಲ್ಲವೂ ಒಬ್ಸೆಷನಲ್ ಗುಂಪಿನವತಾರಗಳು. ಸ್ವಲ್ಪವೂ ಇಷ್ಟವಿರದಿದ್ದಾಗಲೂ ಕಷ್ಟಪಟ್ಟುಕೊಂಡು ಮಾಡಲೇಬೇಕಾಗುವಂತಹ ಮಾನಸಿಕ ಬೇನೆಗಳು. ಇಂತಹ ಬೇನೆಗಳಿಗೂ ತಿಕ್ಕಲು ನಡವಳಿಕೆಗೂ ಮೂಲಭೂತವಾಗಿ ತಳಹದಿಯು ಒಂದೇ. ಆದರೆ ಒಂದರಿಂದ ಇನ್ನೊಂದು ಉತ್ಪನ್ನವಾಗುವುದಿಲ್ಲ. ತಳಹದಿಯು ಒಂದೇ ಆದರೂ ಕೆಲವರಲ್ಲಿ ತಿಕ್ಕಲು, ತಿಕ್ಕಲಾಗಿಯೇ ಉಳಿಯುತ್ತದೆ. ಇನ್ನು ಕೆಲವು ನತದೃಷ್ಟರಲ್ಲಿ ಒಬ್ಸೆಷನ್ ಬೇನೆಗಳು ಉಂಟಾಗುತ್ತವೆ. ಒಂದು ವಿಚಿತ್ರ ಚಟ ತಿಕ್ಕಲು, ಇನ್ನೊಂದು ಕಾಡುವ, ನರಳಿಸುವ ರೋಗ.

ಈ ಬೇನೆಯಿಂದ ನರಳುವವರು, ಸಾಮಾನ್ಯವಾಗಿ ವೈದ್ಯರ ಬಳಿಗೆ ಹೋಗುವುದೇ ಇಲ್ಲ. ಮನೋವೈದ್ಯರ ಬಳಿಗೆ ಹೋಗುವುದನಕ ಬಹಳ ಅಪರೂಪ.

'ಹುಚ್ಚಾಸ್ಪತ್ರೆಗೆ ಹೋಗುವಂತಹುದು, ನನಗೇನಾಗಿದೆ?' ಎಂದೇ ಇವರುಗಳ ಹಠ. ಬೇನೆಯು ಬೇರೂರಿದ ಮೇಲೆ ಸರಿಪಡಿಸಲಾಗದ ಹಂತಕ್ಕೆ ಏರಿದ ಮೇಲೆ ನಿರ್ವಾಹವಿಲ್ಲದೆ ಮನೋವೈದ್ಯರ ಬಳಿಗೆ ಹೋಗುತ್ತಾರೆ. ಆಗ ಚಿಕಿತ್ಸೆಯು ಬಹಳ ಕಷ್ಟ. ಬಹುಕಾಲ ಹಿಡಿಯುತ್ತದೆ. ಆದುದರಿಂದ ಮೊದಲ ಹಂತದಲ್ಲೇ ಮನೆಯವರು ಗುರುತಿಸಿದರೆ ತಿಕ್ಕಲು ಬೇನೆಯಾಗುತ್ತಿರುವ ಹಂತದಲ್ಲಿ ಗಮನಿಸಲ್ಪಟ್ಟರೆ, ಮನೋವೈದ್ಯರ ಚಿಕಿತ್ಸೆಯು ಸುಲಭವಾಗಿ ಸಫಲವಾಗಬಹುದು. ಆದಕಾರಣ ಈ ಬೇನೆಗಳ ಪ್ರಚಾರವು ಆದಷ್ಟು ಮಟ್ಟಿಗೆ ಸಮಾಜದಲ್ಲಿ ಹೆಚ್ಚಬೇಕು.

**ಒಬ್ಸೆಷನಲ್ ಬೇನೆಗಳು**

ವಿಜಯಲಕ್ಷ್ಮಿಯು ಹತ್ತಿಪ್ಪತ್ತು ಬಾರಿ ಬಾಗಿಲನ್ನು ಹಾಕುವುದು ; ಮುಸುರೆ ಆಯಿತು ಎಂದು ಅನಸೂಯ ಸಾರಿಸಿದ್ದನ್ನೇ ಸಾರಿಸುವುದು ; ಮಾಲಕ್ಷಮ್ಮನ ಅತಿ ಮಡಿ ; ಇವೆಲ್ಲವೂ ಮಾನಸಿಕ ಅಸ್ವಾಸ್ಥ್ಯದಿಂದ ಉಂಟಾದ ಪರಿಣಾಮಗಳು.

ಮಾನಸಿಕ ಅಸ್ವಾಸ್ಥ್ಯ ಎಂದರೇನು ? ಸಾಮಾನ್ಯವಾಗಿ ಯೋಚನೆಯನ್ನು ಮಾಡುವಾಗ, ಮನಸ್ಸು ಸರಾಗವಾಗಿ ನಡೆಯುತ್ತದೆ. ಯೋಚನೆಯು ಮೂಡಿ ಮಿಡಿಯುವಾಗ ಹಾಗಾಗುತ್ತಿದೆ ಎನ್ನುವುದು ತಿಳಿಯುವುದೇ ಇಲ್ಲ. ಆದರೆ ಆತಂಕವು ಉಂಟಾದರೆ, ಆಗ ಮನಸ್ಸು ಇದೆ, ಯೋಚನೆ ಮಾಡಲು ಒದ್ದಾಡುತ್ತಿದೆ ಎನ್ನುವುದು ವ್ಯಕ್ತಿಗೆ ಗೊತ್ತಾಗುತ್ತದೆ. ಒಬ್ಸೆಷನಲ್ ಬೇನೆಗಳು ಇರುವವರಿಗೆ, ಸಾಮಾನ್ಯವಾಗಿ ಆತಂಕವೂ ಜತೆಯಾಗಿರುತ್ತದೆ. ಆದುದರಿಂದ ಯೋಚಿಸುವಾಗ ಅವರುಗಳ ಮನಸ್ಸು ತಳಮಳಗೊಳ್ಳುತ್ತಿರುವುದು ಅವರಿಗೆ ಚೆನ್ನಾಗಿ ತಿಳಿದಿರುತ್ತದೆ. ಇದು ಮನಸ್ಸಿನ ಅಸ್ವಾಸ್ಥ್ಯದ ಮೊದಲ ಚಿಹ್ನೆ.

ಈ ಬೇನೆಯು ಬಡಿದವರಿಗೆ, ವಾಸ್ತವಿಕ ಪರಿಸ್ಥಿತಿಯ ಅರಿವು ಚೆನ್ನಾಗಿರುತ್ತದೆ. 'ನಮಗೆ ಎಂತದೋ ದರಿದ್ರ ಬೇನೆಯು ಬಂದಿದೆ, ನಮ್ಮ ವರ್ತನೆಯು ವಿಚಿತ್ರವಾದ ತಿಕ್ಕಲು;' ಎಂದು ಚೆನ್ನಾಗಿ ಗೊತ್ತಿರುತ್ತದೆ. ಈ ದೃಷ್ಟಿಯಿಂದ ಇವರನ್ನು ಹುಚ್ಚರು ಬೆಪ್ಪರು ಅನ್ನುವಂತಿಲ್ಲ. ಒಂದು ರೀತಿಯಲ್ಲಿ ಇವರೆಲ್ಲಾ ಶಿವಲೀಲೆ ಹಿಡಿದವರು ಅನ್ನಬಹುದು.

ಈ ಬೇನೆಗೆ ಬಲಿಯಾದವರು, ಇತರ ಮಾನಸಿಕ ಚಟುವಟಿಕೆಗಳಲ್ಲಿ, ಚೂಟಿಯಾಗಿಯೇ ಇರುತ್ತಾರೆ. ಮಾನಸಿಕ ಅವ್ಯವಸ್ಥೆಯು ಇವರಿಗಿದೆ, ಎನ್ನುವ ಅನುಮಾನವು ಕೂಡ ಇತರರಿಗೆ ಬರುವುದಿಲ್ಲ. ಹೇಳಿದಂತೆ ಚಾಚೂ ತಪ್ಪದೆ ಮಾಡುವುದರಲ್ಲಿ, ಕಟ್ಟುನಿಟ್ಟಾಗಿ ಕಾನೂನು ಮತ್ತು ಸಂಪ್ರದಾಯಗಳನ್ನು

ಆಚರಿಸುವುದರಲ್ಲಿ, ಇವರುಗಳೂ ಯಶಸ್ವಿಯಾಗುತ್ತಾರೆ. ಆದರೆ ಸ್ವಂತ ವಿವೇಚನೆಯನ್ನು ಮಾಡಿ, ನಿರ್ಧಾರಗಳನ್ನು ಕೈಗೊಳ್ಳಲು ಅಸಮರ್ಥರಾಗಿರುತ್ತಾರೆ. Efficient followers ; but never leaders. ಈ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು, ಇವರುಗಳ ಕಾರ್ಯಕ್ಷೇತ್ರವನ್ನೂ ಕೆಲಸದ ಮಿತಿಯನ್ನೂ ನಿಷ್ಕರ್ಷಿಸಬೇಕು.

ಹೀಗೇಕೆ ಆಗುತ್ತದೆ ?

ಯೋಚನೆಗಳನ್ನು ಮಾಡಬೇಕಾದಾಗ, ಮನಸ್ಸು ಮಥಿಸುತ್ತದೆ, ಬೆಣ್ಣೆಯನ್ನು ತೆಗೆಯುವಾಗ ಮೊಸರನ್ನು ಕಡೆಯುವಂತೆ. ಮೇಲಕ್ಕೆ ತೇಲಿಬಂದ ಬೆಣ್ಣೆಯಂತೆ ಮನ ಮಥಿಸುವಾಗ ಯೋಚನೆಗಳು ಎದ್ದು ಬರುತ್ತವೆ. ಮೊಸರಿರುವ ಮಡಕೆಯು ಸರಿಯಾಗಿರುವುದರಿಂದ, ಕಡೆಯುವುದು ಸುಲಭ. ಹಾಗೆಯೇ ವಾಸ್ತವಿಕ ಅರಿವು ಎಂಬ ಮಡಕೆಯು, ಮನಸ್ಸಿನಲ್ಲಿ ಸ್ಥಿರವಾಗಿರುವುದರಿಂದ, ಇವರುಗಳ ಯೋಚನೆಗಳು ಮತ್ತು ನಿರ್ಣಯಗಳು ಬೆಣ್ಣೆಯಂತೆ ಸುಲಭವಾಗಿ ಮೇಲೇಳಬೇಕು.

ಆದರೆ ಕಡೆಯುವ ಹಗ್ಗದ ಒಂದು ಕಡೆಯಲ್ಲಿ, ಕೆಲವು ಎಳೆಗಳು ಕಿತ್ತು ಹೋಗಿವೆ ಅನ್ನಿ. ಆಗ ಆ ಕಡೆಯಿಂದ ಸೂಕ್ತವಾದಷ್ಟು ಶಕ್ತಿಯನ್ನು ಬಳಸಿ ಕಡೆಯುವಂತಿಲ್ಲ. ಜುಲುಮು ಮಾಡಿ ಎಳೆದರೆ ಉಳಿದ ಎಳೆಗಳೂ ಹಾಗೂ ಹಗ್ಗವೇ ಹರಿಯಬಹುದು. ಆದಕಾರಣ ಆ ಪಾರ್ಶ್ವದಿಂದ ಬಳಸುವ ಶಕ್ತಿಯನ್ನು ಮನಸ್ಸು ಕಡಿಮೆಮಾಡುತ್ತದೆ. ಅಂತಹ ಪರಿಸ್ಥಿತಿಯಲ್ಲಿ ಎದುರು ಕಡೆಯಿಂದ ಎಳೆತವು ಬಲವಾಗುತ್ತದೆ. ಇದನ್ನು ಹತೋಟಿಯಲ್ಲಿಡಲು ಮನಸ್ಸಿಗೆ ಸಾಧ್ಯವಾಗುವುದಿಲ್ಲ. ಆದುದರಿಂದಲೇ ಅಸ್ವಾಭಾವಿಕವಾದ ಈ ಎಳೆತ, Compulsive ಪ್ರಭಾವ. ತಿಕ್ಕಲು ಎಂದು ತಿಳಿದಿದ್ದರೂ ಮನಸ್ಸು ವಿಚಿತ್ರ ವರ್ತನೆಯನ್ನು ಮಾಡಲೇಬೇಕಾಗುತ್ತದೆ. ಹಾಗೆ ಮಾಡಲಾಗದಿದ್ದರೆ, ಕೋಪ, ಸಿಡುಕು, ಇತ್ಯಾದಿಗಳು ಅಧಿಕವಾಗುತ್ತವೆ.

'An irresistible force trying to move an immovable object' ಎಂದು ಈ ಬೇನೆಯ ಬಲವಂತ ಸ್ವಭಾವವನ್ನು ವರ್ಣಿಸುತ್ತಾರೆ.

ನಿರರ್ಥಕವಾದ, ಭೂತಾಕಾರದ, ಇಂತಹ ಕಾಳಗವಾಗುತ್ತಿರುವಾಗ, ಮನಸ್ಸಿಗೆ ನೆಮ್ಮದಿಯು ದೊರಕಲಸಾಧ್ಯ. ವಿಚಿತ್ರವಾದ, ತಿಕ್ಕಲುತಿಕ್ಕಲಾದ ವರ್ತನೆಯು ಇಂತಹ ಕಾಳಗವಾಗುತ್ತಿರುವಾಗ, ಕೆಟ್ಟದ್ದರಲ್ಲಿ ಮಧ್ಯಸ್ಥ ಎಂಬಂತೆ, ಮನಸ್ಸಿಗೆ ತುಸು ನೆಮ್ಮದಿಯನ್ನು ನೀಡುತ್ತದೆ. ಮಡಿ, ಮುಸುರೆ ; ಚಟ, ಶಂಕೆ ; ಇತ್ಯಾದಿ ವಿಧಾನಗಳಿಂದ ತನ್ನನ್ನು ತಾನೇ ಮನಸ್ಸು ದಂಡಿಸಿಕೊಳ್ಳುತ್ತದೆ. ಸ್ವಯಂಪ್ರೇರಿತ

ಶಿಕ್ಷೆಯನ್ನು ವಿಧಿಸಿಕೊಳ್ಳುತ್ತದೆ. ಪ್ರಾಯಶ್ಚಿತ್ತ ಮಾಡಿಕೊಂಡ ಮೇಲೆ ಮನಸ್ಸು ಹಗುರಾಗುವುದಿಲ್ಲವೇ ? 'confession' ಅನ್ನು ಕ್ರಿಶ್ಚಿಯನ್ನರು ಮಾಡಿಕೊಂಡ ಮೇಲೆ ಮನಸ್ಸಿನ ದುಗುಡವು ಕಡಿಮೆಯಾಗುತ್ತದೆ. ಒಬ್ಸೆಷನ್ನಿನ ವಿಪರೀತ ಹಾಗೂ ವಿಚಿತ್ರ ವರ್ತನೆಗಳು ಆತ್ಮಶಿಕ್ಷೆಯ ವಿಧಾನಗಳು.

ಬಹಳ ಕಾಲ ಕಾಡುವಂತಹ ಈ ಬೇನೆಯು ಆತಂಕ, ಜುಗುಪ್ಸೆ, ನಿರುತ್ಸಾಹ ಇತ್ಯಾದಿ ಮಾನಸಿಕ ವಿಪರೀತಗಳೊಡನೆ ಜತೆಯಾಗುತ್ತದೆ. ಜತೆಯಾಗಿರುವ ಪರಿಸ್ಥಿತಿಗಳಿಗೆ ಉಪಶಮನವನ್ನು ಯಶಸ್ವಿಯಾಗಿ ಮಾಡಿದರೆ, ಒಬ್ಸೆಷನ್ನಿನ ಅವಾಂತರವು ಗಮನೀಯ ಪ್ರಮಾಣದಲ್ಲಿ ಕಡಿಮೆಯಾಗಲು ಸಾಧ್ಯ.

ತಿಕ್ಕಲು ಎನ್ನುವ ಹಂತದಿಂದ ನಡವಳಿಕೆಯು ಮೇಲೇರಿದಾಗ, ತತ್‌ಕ್ಷಣ, ನುರಿತ ಮನೋವೈದ್ಯರಲ್ಲಿ ಸೂಕ್ತ ಚಿಕಿತ್ಸೆಯನ್ನು ಪಡೆದರೆ, ಸಾಕಷ್ಟು ಗುಣ ಮಾಡಿಕೊಳ್ಳಬಹುದು. ವಿಚಿತ್ರ ವರ್ತನೆಯನ್ನು, ವೈದ್ಯರ ಬಳಿ ಹೇಳಿಕೊಂಡರೆ, ಸ್ವಪ್ರತಿಷ್ಠೆಗೆ ಕುಂದು ಎಂದು ಜಂಬ ಮಾಡಿಕೊಂಡರೆ ; ತಿಕ್ಕಲು ವಿಪರೀತಕ್ಕೇರಿ, ಬೇನೆಯಾಗುತ್ತದೆ. ಆದಕಾರಣ ಮೊದಮೊದಲ ಹಂತದಲ್ಲಿ ಮನೋವೈದ್ಯರ ಸಲಹೆಯನ್ನು ಅಗತ್ಯವಾಗಿ ಪಡೆಯಬೇಕು.

# ೫. ವಾಸ್ತವಿಕತೆಯ ಅರಿವು ಮಾಯವಾದ ಬೇನೆಗಳು
# Manic Depressive Psychosis

**ವಾಸ್ತವಿಕತೆಯ ಅರಿವು**

ವಾಸ್ತವಿಕತೆ ಎಂದರೇನು ? ಮೇಜಿನ ಬಳಿ ಕುಳಿತು, ಪೆನ್ನು ಹಿಡಿದು, ಈ ಲೇಖನವನ್ನು ಬರೆಯುತ್ತಿದ್ದೇನೆ. ಇದರ ಅರಿವು ಸ್ಪಷ್ಟವಾಗಿದೆ. ವಸ್ತುಗಳ ಪರಿಸ್ಥಿತಿಯ ಅರಿವು ವಾಸ್ತವಿಕವಾದ, ಅಂದರೆ ನಿಜವಾದ ಅರಿವು. Reality ಎಂಬ ಪದದ ಅರ್ಥ ವಾಸ್ತವಿಕತೆ ಎಂದಾಗ ಬರುತ್ತದೆ. ಸುತ್ತುಮುತ್ತಲೂ ಇರುವ ವಸ್ತುಗಳ ನಿಜವಾದ ಅರಿವು ಸಾಮಾನ್ಯವಾಗಿ ಎಲ್ಲರಿಗೂ ಇದ್ದೇ ಇರುತ್ತದೆ. ವಸ್ತುಸ್ಥಿತಿಯಂತೆ ನಡೆದ ಘಟನೆಗಳ ಸ್ಮರಣೆಯೂ ವಾಸ್ತವಿಕವಾಗಿ, ದಿಟವಾಗಿ ಇರುತ್ತದೆ. ಕೆಲವು ಬೇನೆಗಳಲ್ಲಿ ವಾಸ್ತವಿಕ ಅರಿವು ಮಾಯವಾಗುತ್ತದೆ. ಅಂತಹ ರೋಗಿಗಳ ಮನಸ್ಸು ಯಾವುದೋ ಊಹಾಲೋಕದಲ್ಲಿ ಮಗ್ನವಾಗಿರುತ್ತದೆ. ಅಂತಹ ಬೇನೆಗಳೂ ನಮ್ಮ ಸಮಾಜದಲ್ಲಿ ವಿಪುಲವಾಗಿವೆ. ಅವುಗಳ ಸ್ಥೂಲಪರಿಚಯವನ್ನು ಎಲ್ಲರೂ ಮಾಡಿಕೊಂಡರೆ, ಅಂತಹ ಕ್ರೂರ ಬೇನೆಗಳನ್ನು ಮೊದಮೊದಲ ಹಂತದಲ್ಲಿ ಗುರುತಿಸಿ, ಜರೂರು ಚಿಕಿತ್ಸೆಯನ್ನು ಮಾಡಿಸಬಹುದು. ಆಗ, ಬೇನೆಗಳನ್ನು ಪೂರ್ಣವಾಗಿ ಗುಣಪಡಿಸಲು ಸುಲಭ.

ಈ ತನಕ ನಾವು ಕಂಡ ಮಾನಸಿಕ ಬೇನೆಗಳಲ್ಲಿ ವಾಸ್ತವಿಕ ಅರಿವು ಮಾಯವಾಗಿರಲಿಲ್ಲ. Insight into reality ಲಕ್ಷಣವಾಗಿತ್ತು. ಆತಂಕದ ಬೇನೆಗಳಲ್ಲಾಗಲೀ, ಪ್ಯಾರನಾಯ್ಡ್ ಪರಿಸ್ಥಿತಿಯಲ್ಲಾಗಲೀ, ಹಿಸ್ಟಿರಿಯಾ ಪ್ರದರ್ಶನಗಳಲ್ಲಾಗಲೀ, ಒಬ್ಸೆಷನಲ್ ಬೇನೆಗಳಲ್ಲಾಗಲೀ, ವಾಸ್ತವಿಕತೆಯ ಅರಿವು ಇದ್ದೇ ಇತ್ತು. ಒಂದರಲ್ಲಿ ಅಲ್ಲಸಲ್ಲದ, ಅನಗತ್ಯವಾದ ಭಯ ; ಇನ್ನೊಂದರಲ್ಲಿ ಮಹಾಭ್ರಮೆ, ಹಿಸ್ಟಿರಿಯಾದಲ್ಲಿ ; ಮಾನಸಿಕ ತಳಮಳವು ದೇಹದ ಅಂಗಕ್ಕೆ ವಕ್ರಿಸುವುದು ; ಒಬ್ಸೆಷನ್ನಿನಲ್ಲಿ, ಹಿಡಿದ ಗೀಳು ತಪ್ಪು ಎಂದು ತಿಳಿದಿದ್ದರೂ, ಅದರಂತೆ ಬಲವಂತವಾಗಿ ನಡೆದುಕೊಳ್ಳಲೇಬೇಕಾದ ಆಂತರಿಕ ಒತ್ತಡ ; ಈ ರೀತಿ ಇದ್ದುವು. ಆದರೂ ಪರಿಸರದ ವಸ್ತುಸ್ಥಿತಿಯ ಜ್ಞಾನವು ಮಿಕ್ಕಂತೆ ಲಕ್ಷಣವಾಗಿ ಉಳಿದಿತ್ತು.

ಇನ್ನು ಮುಂದೆ ವಾಸ್ತವಿಕತೆಯ ಅರಿವು ಮಾಯವಾದ ವಿಧವಿಧ ಬೇನೆಗಳನ್ನು ಪರಿಚಯ ಮಾಡಿಕೊಳ್ಳೋಣ. ಹೀಗೆ ಅಭ್ಯಾಸ ಮಾಡುವ ಮೊದಲು, ಮನಃಸ್ವಾಸ್ಥ್ಯವು ಲಕ್ಷಣವಾಗಿರುವ, ಸಾಮಾನ್ಯ ಮನುಷ್ಯರಲ್ಲಿ ಯಾವಾಗಲಾದರೂ ವಾಸ್ತವಿಕತೆಯ ಅರಿವು ಮಾಯವಾಗುತ್ತದೆಯೇ ? ಹಾಗಾಗುವುದಾದರೆ ಎಷ್ಟು ಕಾಲ ಆ ಅವಸ್ಥೆಯು ಇರಲು ಸಾಧ್ಯ. ಇದನ್ನು ತಿಳಿದುಕೊಳ್ಳುವುದು ಅಗತ್ಯ. ಕ್ಷಣಕಾಲ ವಾಸ್ತವಿಕತೆಯ ಅರಿವು ಮರೆತು ಹೋದರೆ, 'ಓಹೋ ! ನನಗೂ ಹಿಡಿಯುತ್ತೆ ಇನ್ನು ಮುಂದೆ ಹುಚ್ಚು' ಎನ್ನುವ ಭಯವು ಮೂಡಬಹುದು. ಕೆಲವರಲ್ಲಿ ಮೂಡಿಯೂ ಮೂಡುತ್ತೆ. ಅಂತಹ ಅನಗತ್ಯವಾದ ಭಯವು ನಿವಾರಣೆಯಾಗುತ್ತದೆ, ಅಂತಹವರು ಈ ವಿಷಯವನ್ನು ಸರಿಯಾಗಿ ಅರ್ಥಮಾಡಿಕೊಂಡರೆ.

**ಮಕ್ಕಳಲ್ಲಿ**

ಎಳೆಯ ಮಕ್ಕಳಲ್ಲಿ ವಾಸ್ತವಿಕತೆಯ ಅರಿವು ಸ್ಫುಟವಾಗಿರುವುದಿಲ್ಲ. ಪರಿಸರದ ಜ್ಞಾನವೂ ಲೋಕಾನುಭವವೂ ಸಾಕಷ್ಟು ಇರಲು ಸಾಧ್ಯವಿಲ್ಲ. ಹಾಗೂ ಅವುಗಳ ಮೆದುಳು ಪ್ರೌಢರಂತೆ ಬೆಳೆದೂ ಇರುವುದಿಲ್ಲ. ಮುಗ್ಧತೆ, ಸರಳತೆ, ಮೋಹಕತೆ ಮಕ್ಕಳಲ್ಲಿ ಹೆಚ್ಚಾಗಿರುವುದು ಈ ಕಾರಣದಿಂದಲೇ. ತುಂಬು ಕುತೂಹಲದ ಆತುರದಿಂದ ತಾನು ಕಂಡು ಕೇಳಿದುದರ ವಿವರಗಳನ್ನು ತಿಳಿದುಕೊಳ್ಳಲು ಕಾತರವಾಗಿರುವ ವಯಸ್ಸು ಮಕ್ಕಳದು.

ಅವುಗಳಾಡುವ ಆಟವನ್ನು ನೋಡಿ. ಗಳುವೊಂದರ ಮೇಲೆ, ಕುದುರೆಯನ್ನೋ ಅಥವಾ ಬೈಸಿಕಲ್ಲನ್ನೋ ದೊಡ್ಡವರು ಹತ್ತುವಂತೆ, ಅದು ಏರುತ್ತದೆ. ಕುದುರೆಯ ಸವಾರಿಯನ್ನು ಅಥವಾ ಬೈಸಿಕಲ್ ಹತ್ತಿದವರನ್ನು ಅದು ಕಂಡಿರುತ್ತದೆ. ದೊಡ್ಡವರನ್ನು ಅನುಕರಣೆ ಮಾಡಿ ತಾನೇ ಚಿಕ್ಕವರು ಕಲಿಯುವುದು! ಮಕ್ಕಳಲ್ಲಿ ಅನುಕರಣೆಯನ್ನು ವಿಶೇಷವಾಗಿ ಕಾಣುತ್ತೇವೆ. ಆಟದಲ್ಲೂ ಅನುಕರಣೆಯೇ ಮುಖ್ಯ ಅಂಶ.ಆಟದಿಂದಲೇ ಪಾಠ ಕಲಿಯುವುದು ಹೆಚ್ಚು ಸುಲಭ, ಹಾಗೂ ಪ್ರಕೃತಿಯ ನಿಯಮ.

ಗಳುವಿನ ಮೇಲೆ ಏರಿಕೊಂಡು, ಹೇಯ್ ಹೇಯ್ ಎಂದು ಕೂಗುತ್ತ ಮಗುವು ಓಡತೊಡಗುತ್ತದೆ. ಚಾಟಿಯನ್ನು ಬಾರಿಸುವಂತೆ, ಕೈಯನ್ನು ಬೀಸುತ್ತದೆ. ಅಥವಾ ಸೈಕಲ್ ಬೆಲ್ಲಿನಂತೆ, ಟ್ರಿನ್ ಟ್ರಿನ್ ಎಂದು ಕೂಗುತ್ತಾ ಓಡುತ್ತದೆ. ಐದು ಹತ್ತು ನಿಮಿಷ ಹೀಗೆ ಆಡುವಾಗ ಆ ಮಗುವಿನ ಮನಸ್ಸಿನಲ್ಲಿ, ನಾನೊಂದು

ಭರ್ಜರಿ ಕುದುರೆಯನ್ನು ಸವಾರಿ ಮಾಡುತ್ತಿದ್ದೇನೆ, ಸೈಕಲ್ ನಡೆಸುತ್ತಿದ್ದೇನೆ ಎಂಬ ಭಾವನೆಯು ಪೂರ್ಣವಾಗಿರುತ್ತದೆ. ಆ ಅಂತರದಲ್ಲಿ ವಾಸ್ತವಿಕತೆಯ ಅರಿವನ್ನು ಮಗುವು ಉಳಿಸಿ ಕೊಂಡಿರುವುದಿಲ್ಲ.

ಬಾಲ್ಯದ ಸ್ವಸ್ಥವಾಗಿರುವ ಮನಸ್ಸಿನಲ್ಲಿ, ವಾಸ್ತವಿಕತೆಯ ಅರಿವು, ಅಲ್ಪಕಾಲ, ಕಳೆದುಹೋಗುವುದು, ಸ್ವಾಸ್ಥ್ಯದ ಸೂಚನೆ.

**ಪ್ರೌಢರಲ್ಲಿ**

ಬೆಳೆದು ಪ್ರೌಢರಾದವರಲ್ಲಿಯೂ ಈ ವರ್ತನೆಯನ್ನು ಕಾಣುತ್ತೇವೆ.

ಸ್ನೇಹಿತನೊಬ್ಬ ಕಾಲೇಜಿನಲ್ಲಿ ಸಹಪಾಠಿಯಾಗಿದ್ದ. ಮಾತನಾಡುವಾಗ ನೇರನೆ ನೋಡದೆ ಆಕಾಶದತ್ತ ಮುಖವನ್ನು ಚಾಚುವ ಅಭ್ಯಾಸ ಅವನಿಗೆ. ಆದ ಕಾರಣ 'ಆಕಾಶರಾಯ' ಎಂದವನನ್ನು ಕರೆಯುತ್ತಿದ್ದೆವು. ಅವನ ಈ ನಡವಳಿಕೆಯು ವಿಚಿತ್ರವಾಗಿದ್ದರೂ, ಯಾರಿಗೂ ಅದರಿಂದ ನೋವಾಗುತ್ತಿರಲಿಲ್ಲ. ಅವನ ಸ್ವಭಾವವೇ ಹಾಗೆ. ಯಾವುದೋ ಆಲೋಚನೆಯಲ್ಲಿ ಪೂರ್ಣವಾಗಿ ಮಗ್ನವಾಗಿರುತ್ತಿದ್ದ. ದಾರಿಯಲ್ಲಿ ಅಕಸ್ಮಾತ್ ಸಂಜೆ ಸಿಕ್ಕಾಗ 'ಸಿನಿಮಾಗೆ ಹೋಗೋಣವೇನೋ' ಎಂದು ಕೇಳಿದರೆ, 'ಸೋಪು ಇತ್ತಿಲ್ಲ' ಎಂದು ತಟ್ಟಂತ ಉತ್ತರಿಸಿದ, ಒಮ್ಮೆ. 'ಅರೆ! ಇವನಿಗೇನಾಯಿತು' ಎಂದು ನಾನಂದುಕೊಳ್ಳುವಷ್ಟರಲ್ಲಿ ; ಅವನೇ 'ನೀವೇನು ಕೇಳಿದ್ದು ! ಇವತ್ತು ಪಂಚೆಯನ್ನು ಒಗೆಯಬೇಕಾಗಿತ್ತು. ಸೋಪು ಇರಲಿಲ್ಲ ; ನಾಳೆ ಸೋಪು ಕೊಂಡುಕೊಂಡು ಪಂಚೆ ಒಗೆಯಬೇಕು ಎಂದು ಯೋಚಿಸುತ್ತಿದ್ದೆ. ಅದಕ್ಕೇ ಸೋಪು ಇತ್ತಿಲ್ಲ ಎಂದೆ' ಎಂದು ಉತ್ತರಿಸುತ್ತಿದ್ದ, ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರವನ್ನು ನೀಡಲಿಲ್ಲ. ವಾಸ್ತವಿಕತೆಯ ಅರಿವು ಇದ್ದಿಲ್ಲ. ಆದುದರಿಂದ ಇವ ಮಾನಸಿಕ ರೋಗಿ ಎಂದೆನ್ನಲಾಗದು. ವಾಸ್ತವಿಕತೆಯ ಅರಿವು ಅರೆಕ್ಷಣ ಅವನಿಂದ ಮಾಯವಾಗಿತ್ತು, ದಿಟ. ಆದರೆ ಅದು ಅವ ಇನ್ನಾವುದೋ ಯೋಚನೆಯಲ್ಲಿ ಮಗ್ನನಾಗಿದ್ದುದರ ಪರಿಣಾಮ. ಆದರೆ ಇನ್ನೊಂದರೆಕ್ಷಣದಲ್ಲಿ ಪರಿಸ್ಥಿತಿಯನ್ನು ಲಕ್ಷಣವಾಗಿ ಅರಿತು, ಸಮಂಜಸವಾದ ಉತ್ತರವನ್ನು ನೀಡಿದ. ಅವನ ಮನಸ್ಸು ಸುಸೂತ್ರವಾಗಿ ಕೆಲಸವನ್ನು ಮಾಡುತ್ತಲಿತ್ತು. ಕೇವಲ Absent-minded ಆಗಿದ್ದ.

ಈ ಸ್ವಭಾವವು ಎಷ್ಟೋ ಜನರಲ್ಲಿದೆ. ಇಂತಹ ನಡವಳಿಕೆಗಳು, ಹಾಸ್ಯಗಾರರಿಗೆ, ಹೊನ್ನಿನ ಗಣಿ. ಹಣೆಯ ಮೇಲೆ ಕನ್ನಡಕವನ್ನೇರಿಸಿ, ಕನ್ನಡಕವನ್ನು ಹುಡುಕುವ ಅಧ್ಯಾಪಕರು ; ಸಕ್ಕರೆಗೆ ಬದಲು, ಉಪ್ಪನ್ನು ಕಣ್ಣುಗಳನ್ನು ತೇಲಿಸುತ್ತ

ಹಾಕುವ ನವವಧು ; ಬೆಂಕಿಕಡ್ಡಿಯನ್ನು ಬಾಯಿನಲ್ಲಿಟ್ಟುಕೊಂಡು, ಸಿಗರೇಟನ್ನು ಬೆಂಕಿ ಪೊಟ್ಟಣಕ್ಕೆ, ಮಾತನಾಡುತ್ತ, ತಿಕ್ಕುವ ಕಲೆಗಾರ ; ಒಂದಲ್ಲ ಇಂತಹವು, ಲಕ್ಷಾಂತರ.

ಗೀಳು ಹಿಡಿದವರೂ ಈ ನಡವಳಿಕೆಯನ್ನು ತೋರುತ್ತಾರೆ. ಹೆಣ್ಣ ಹಿಂದೋಡುವ ಗೀಳು ಹಿಡಿದವರು ವಿಚಿತ್ರ ವರ್ತನೆಯನ್ನು ನಡೆಸುತ್ತಾರೆ. ಭಯವಾಗಲೀ, ಲಜ್ಜೆಯಾಗಲಿ, ಅವರ ಅರಿವಿಗೆ ಬರುವುದೇ ಇಲ್ಲ, ಆ ಅವಧಿಯಲ್ಲಿ. ಹಣವನ್ನು ಕೂಡಿಟ್ಟು ಕುಬೇರನನ್ನು ಒತ್ತೆ ಇಟ್ಟುಕೊಳ್ಳುವಂತಾಗಬೇಕೆಂಬ ಗೀಳು ಹಿಡಿದವರು ಸುಖವನ್ನು ಪಡಲಾರರು, ನಿದ್ರೆಯನ್ನೂ ಮಾಡಲಾರರು. ಏನಕೇನ ಪ್ರಕಾರೇಣ ಪ್ರಸಿದ್ಧ ಪುರುಷನಾಗುವ ಗೀಳು ಹಿಡಿದವರು, ಮಾನ ಅವಮಾನಗಳನ್ನು ಗಮನಿಸುವುದೇ ಇಲ್ಲ.

ಭಯ, ಲಜ್ಜೆ ; ಮಾನ, ಅವಮಾನ ; ಸುಖ, ನಿದ್ರೆ ; ಇವೇ ಸಮಾಜದ ಭದ್ರತೆಯನ್ನು ಕಾಪಾಡುವ ಮುಖ್ಯ ಅಂಶಗಳು. ಸಮಾಜದಿಂದ ರಕ್ಷಣೆಯನ್ನು ಪಡೆಯ ಬಯಸುವ ಇವರೆಲ್ಲರೂ, ಆಯಾ ಗೀಳು ಹಿಡಿದಾಗ ವಿಚಿತ್ರ ವರ್ತನೆಯನ್ನು, ವಿಧ್ವಂಸಕ ನಡವಳಿಕೆಯನ್ನು ಕಾಣಿಸುತ್ತಾರೆ.

ಆದರೆ ಇಂತಹ ಗೀಳು ಹಿಡಿದವರ ಮನಸ್ಸಿನಲ್ಲಿ ವಾಸ್ತವಿಕತೆಯ ಆಧಾರವು ದೃಢವಾಗಿಯೇ ಇರುತ್ತದೆ. ವಿಚಿತ್ರ ನಡೆವಳಿಕೆಯೂ, ಗೀಳಿನ ಉದ್ದೇಶದ ಸಾಧನೆಯನ್ನು ಸಮಂಜಸವಾಗಿ ಮಾಡಲೋಸುಗವೇ.

ಕೋಪ ಬಂದವರ ಹಣೆಯ ಬರಹವೂ ಇಷ್ಟೇ.

ರಂಗರಾಜನಿಗೆ ನಾಲ್ವತ್ತರ ಪ್ರಾಯ. ಮೂರು ಮಕ್ಕಳು. ಆರುನೂರು ರೂಪಾಯಿನ ಪಗಾರ ದೊರಕುತ್ತಿತ್ತು. ತಕ್ಕಮಟ್ಟಿಗೆ ಸುಖವಾಗಿಯೇ ಇದ್ದ. ಅಂತಹ ಹಿರಿಯಾಶೆಯಾಗಲಿ, ಹೆಬ್ಬಯಕೆಯಾಗಲೀ ಇರಲಿಲ್ಲ. ಹೊಸದಾಗಿ ವರ್ಗವಾಗಿ ಬಂದ ಆಫೀಸರು, 'ಏನ್ರೀ ! ರಂಗರಾಜ್ ! ಇಪ್ಪತ್ತು ವರ್ಷ ಕತ್ತೆಯ ಹಾಗೆ ಸರ್ವಿಸ್ ಹಾಕಿದ್ದೀರಿ. ಹೀಗೇನೇನ್ರಿ, ನೋಟ್ ಹಾಕೋದು ? ಹೊಟ್ಟೆಗೇನು ತಿಂತೀರ್ರೀ' ಎಂದು ಸಿಕ್ಕಾಪಟ್ಟೆ ರೇಗಿದ. ಎಂದೂ ರಂಗರಾಜ ಇಂತಹ ಮಾತುಗಳನ್ನು ಕೇಳಿತ್ತಿಲ್ಲ. ಅವನ ಮೈಯಲ್ಲಾ ಉರಿಯತೊಡಗಿತ್ತು. ತುಟಿ ಅದುರ ತೊಡಗಿತು. ಮರು ಮಾತಾಡಲಾಗಲಿಲ್ಲ. ತನ್ನ ಕೊಠಡಿಗೆ ಬಂದ. ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟ. ಮನೆಗೆ ಹೊರಟುಹೋದ.

ಮುಂದಿನ ತಿಂಗಳಿಂದ, ಹೆಂಡತಿ ಮಕ್ಕಳ ಪಾಡೇನು ? ಎನ್ನುವ ವಾಸ್ತವಿಕ ಪರಿಸ್ಥಿತಿಯ ಯೋಚನೆಯೇ ಬರಲಿಲ್ಲ. ಆದರೆ ರಾಜೀನಾಮೆಯನ್ನು ಇತ್ತಾಗ

ತನ್ನ ಸೇಡನ್ನೆಲ್ಲಾ ಅದರಲ್ಲಿ ಕಾರಿದ್ದ ; ನಂತರ ಸಮಾಧಾನ ಸ್ಥಿತಿಗೆ ಬಂದ. ಸ್ವಂತ ಉದ್ಯಮವೊಂದನ್ನು ಪ್ರಾರಂಭಿಸಿದ ; ಆರಂಭದ ಕಷ್ಟನಷ್ಟಗಳನ್ನು ಧೈರ್ಯಗುಂದದೆ ಎದುರಿಸಿದ. ಎರಡು ಮೂರು ವರ್ಷಗಳು ಹಲ್ಲು ಕಚ್ಚಿಕೊಂಡು ದುಡಿದ ನಂತರ ಶ್ರೀಮಂತನಾಗತೊಡಗಿದ. Adventurous Spirit :Gambling Instinct :-Dare-Devil–ಎಂದೆಲ್ಲಾ ಇಂತಹ ಕೆರಳುವ ಪ್ರವೃತ್ತಿಯನ್ನು ಕರೆಯುತ್ತಾರೆ. ತಾತ್ಕಾಲಿಕವಾಗಿ ವಾಸ್ತವಿಕತೆಯ ಅರಿವು ಇರದಿದ್ದರೂ, ಇವರುಗಳ ಮನಃಸ್ವಾಸ್ಥ್ಯವು ಅಣಿಯಾಗಿಯೇ ಇರುತ್ತದೆ.

ಉಗ್ರವಾದ ಕಾಯಿಲೆಗಳಿಂದ, ಅಥವಾ ಬಹಳವಾಗಿ ಶ್ರಮಪಟ್ಟುದುದರ ಸಲುವಾಗಿ, ಕೆಲವು ವೇಳೆ ವಾಸ್ತವಿಕತೆಯ ಅರಿವು ಮರೆಯಾದಂತೆ ಕಾಣಿಸುತ್ತದೆ.

ಸನ್ನಿಪಾತ ಜ್ವರವಾಗಲೀ, ಪ್ಲೇಗು, ನ್ಯೂಮೋನಿಯ ಇತ್ಯಾದಿ ಉಗ್ರಕಾಯಿಲೆಗಳಾಗಲಿ ತಾಕಿದಾಗ, ಸನ್ನಿ ಬಡಿಯುತ್ತದೆ. ಅಂದರೆ ಎರ್‍ರಿಬರ್‍ರಿಯಾಗಿ ಹುಚ್ಚರಂತೆ ಆಡಬಹುದು. ವಾಸ್ತವಿಕತೆಯ ಅರಿವು ಇರುವುದಿಲ್ಲ. ಆದರೆ ಹೀಗಾಗುವುದು ಉಲ್ಬಣವಾದ ಜ್ವರದ ಪರಿಣಾಮ. ಜ್ವರವು ನಿಂತಮೇಲೆ, ದೇಹವು ಆರೋಗ್ಯ ಸ್ಥಿತಿಗೆ ಬಂದಮೇಲೆ ಮನಸ್ಸು ಮೊದಲಿದ್ದಂತೆ ಸ್ವಸ್ಥವಾಗುತ್ತದೆ.

ತುಂಬಾ ನೋವನ್ನು ಒಂದೆರಡು ದಿನಗಳು ಅನುಭವಿಸಿ, ನಂತರ ಹೆರಿಗೆ ಯಾದರೆ, ಅಂತಹವರಲ್ಲಿ ಹೆರಿಗೆಯಾದ ನಂತರ ತುಂಬಾ ದಣಿವು, ಸುಸ್ತು ಇರುತ್ತದೆ. ಇಂತಹವರಲ್ಲಿ ಕೆಲವರು ಅರ್ಧ ಅಥವಾ ಒಂದು ತಾಸು ಸನ್ನಿ ಬಡಿದವರಂತೆ ಬಡ ಬಡಿಸುವುದುಂಟು. ನಂತರ ಸರಿಹೋಗುತ್ತಾರೆ.

ಎರಡು ಮೂರು ದಿನಗಳು ತುಂಬಾ ದೇಹಶ್ರಮವನ್ನು ಪಡಲೇಬೇಕಾದರೆ, ತದನಂತರ ಅಂತಹವರೂ ವಾಸ್ತವಿಕತೆಯ ಅರಿವನ್ನು ಕಳೆದುಕೊಳ್ಳುತ್ತಾರೆ. ವಿಶ್ರಾಂತಿಯು ಸಾಕಷ್ಟು ದೊರಕಿದ ನಂತರ, ಅವರ ಮನಸ್ಸೂ ತಿಳಿಯಾಗುತ್ತದೆ, ಸ್ವಸ್ಥವಾಗುತ್ತದೆ. ಮರುಭೂಮಿಯಲ್ಲಿ ಅಥವಾ ಕಾಡುಗಳಲ್ಲಿ ದಾರಿತಪ್ಪಿದವರು ಎರಡು ಮೂರು ದಿನಗಳಾದ ಮೇಲೆ ಹುಡುಕಲು ಹೋದ ತಂಡಕ್ಕೆ ಸಿಕ್ಕಾಗ ಯಾರನ್ನೂ ಗುರುತಿಸದೆ ವಾಸ್ತವಿಕತೆಯ ಅರಿವೇ ಇಲ್ಲದವರಂತೆ ನಡೆದುಕೊಳ್ಳುತ್ತಾರೆ. ಆದರೆ ವಿಶ್ರಾಂತಿಯೂ ಮತ್ತು ಉಪಚಾರವೂ ನಡೆದ ಮೇಲೆ ಸ್ವಾಸ್ಥ್ಯವನ್ನು ಬೇಗ ಪಡೆಯುತ್ತಾರೆ.

ಮದ್ಯ ಮತ್ತು ಗಾಂಜಾ ಇತ್ಯಾದಿ ದುಶ್ಚಟಗಳಿಂದಲೂ ವಾಸ್ತವಿಕತೆಯ ಅರಿವು ಮಾಯವಾಗುವುದು ಎಲ್ಲರೂ ಕಂಡು ಕೇಳಿರುವ ವಿಷಯ.

ಮೂವತ್ತು ಮೂವತ್ತೊಂದರ ಪ್ರಾಯದವ ಹೋಟೆಲೊಂದರಲ್ಲಿ ಬಂದಿಳಿದು ಕೊಂಡಿದ್ದ, ಇಬ್ಬರು ಸ್ನೇಹಿತರೊಂದಿಗೆ. 'ಅಯ್ಯಯ್ಯೋ ಹಾವುಗಳು ನನ್ನ ಮೇಲೆ ಹರಿದಾಡುತ್ತಿವೆ. ಕಚ್ಚಿ ಕಟಕಾರಿಸಿ ಬಿಡುತ್ತಿವೆ. ಸತ್ತೆ' ಎಂದು ಮಧ್ಯಾಹ್ನ ಒಂದರ ವೇಳೆಗೆ ಕೆಟ್ಟ ಕೆಟ್ಟದಾಗಿ ಬೊಬ್ಬೆ ಹೊಡೆಯಲು ಶುರುಮಾಡಿದ. ಸ್ನೇಹಿತರಿಬ್ಬರೂ ಆ ಸಮಯದಲ್ಲಿ ಪೇಟೆಗೆ ಹೋಗಿದ್ದರು. ಇವನೊಬ್ಬನೇ ಇದ್ದ. ಇವನ ಬೊಬ್ಬೆಯನ್ನು ಕೇಳಿ, ಹೋಟಲ ಸಿಬ್ಬಂದಿಯವರು ಕೊಠಡಿಗೆ ಓಡಿ ನೋಡಿದರು. ತುಂಬಾ ಆತಂಕವಿದ್ದ ಅವನ ಅವಸ್ಥೆಯನ್ನು ಕಂಡು, ಅವನಾಡುತ್ತಿದ್ದ ಹುಚ್ಚು ಹುಚ್ಚು ಮಾತುಗಳನ್ನು ಕೇಳಿ, 'ಇವನೆಲ್ಲೋ ಇಷ್ಟರಲ್ಲೇ ಘಟ ಒಪ್ಪಿಸಿಬಿಡುತ್ತಾನೆ. ನಮ್ಮ ಹೋಟಲಿಗೆ ಅಪಖ್ಯಾತಿ ಮತ್ತು ಅಪಕೀರ್ತಿ ಬರುತ್ತದೆ, ಆದಕಾರಣ ಡಾಕ್ಟರನ್ನು ಕರೆಸಿ ಅವರ ಮೂಲಕ ಆಸ್ಪತ್ರೆಗೆ ಸೇರಿಸಿಬಿಡೋಣ. ಅಲ್ಲಿ ನೆಗೆದು ಬಿದ್ದರೆ ಪೀಡೆ ಕಳೆಯಿತು. ಅವನು ಕೊಟ್ಟಿರುವ ಮುಂಗಡ ಹಣದಲ್ಲಿ, ಈ ಖರ್ಚೆಲ್ಲವನ್ನೂ ನಿಭಾಯಿಸಿ, ಲಾಭವನ್ನೂ ಉಳಿಸಿಕೊಳ್ಳಬಹುದು' ಎಂದು ಯೋಚಿಸಿದರು.

ಡಾಕ್ಟರು ಹೋಗಿ ವಿಚಾರಿಸಿದಾಗ ತಿಳಿಯಿತು ; ರೋಗಿಯು ಭಾರಿ ಶ್ರೀಮಂತ ಜಮೀನ್ದಾರನ ದತ್ತು ಮಗ. ತಂದೆಯು ತೀರಿಕೊಂಡ ಕೂಡಲೇ, ಹದಿನಾರರ ಪ್ರಾಯದ ದತ್ತುಪುತ್ರ, ವ್ಹಿಸ್ಕಿಗೆ ಬಾಯೊಡ್ಡಿದ. ಪುಕಟ್ಟು ವ್ಹಿಸ್ಕಿ ಎಂದರೆ ಸ್ನೇಹಿತರಿಗೆ ಕಡಿಮೆಯೇ ! ಸ್ನೇಹಿತರ ಸಲಹೆಯ ಮೇಲೆ ಈ ಊರಿಗೆ ವರ್ಷಕ್ಕೆರಡು ಬಾರಿ ವಿಹಾರಕ್ಕೆಂದು ಬರುತ್ತಿದ್ದ. ಈ ಹೋಟಲಿನಲ್ಲಿ ಉಳಿದುಕೊಳ್ಳುತ್ತಿದ್ದ. ಕೇಳಿದಷ್ಟನ್ನು ಮುಂಗಡ ಕೊಡುತ್ತಿದ್ದ. ಹೋಟಲಿಗೆ ಬಂದಿಳಿದುಕೊಂಡ ಮೇಲೆ ಹಗಲು ರಾತ್ರಿ ಎನ್ನದೆ ಕಂಠಪೂರ್ತಿ ಕುಡಿಯುತ್ತಿದ್ದ. ಅಮಲಿನಿಂದಾಗಿ ಬಿದ್ದು ಕೊಳ್ಳುತ್ತಿದ್ದ. ಆದರೆ ಈ ಮಧ್ಯಾಹ್ನ ಸ್ನೇಹಿತರು ಜತೆಗೆ ಇದ್ದಿಲ್ಲ. ಅಮಲು ಪೂರ್ತಿ ಏರುವಷ್ಟು ವ್ಹಿಸ್ಕಿ ಇರಲಿಲ್ಲ. ಹತ್ತು ಗಂಟೆಗೇ ಬಾಟಲು ಖಾಲಿಯಾಗಿತ್ತು. ಅದನ್ನು ತರಲೆಂದೇ ಸ್ನೇಹಿತರು ಪೇಟೆಯತ್ತ ಹೋಗಿದ್ದರು. ಒಬ್ಬನೇ ಇದ್ದ. ಇವನಿಗೆ, ವಾಸ್ತವಿಕತೆಯ ಅರಿವು ಮಾಯವಾಯಿತು. ಭ್ರಮೆಯು ಆವರಿಸಿತು. ಅದೇ ದಿಟ ಎಂದನ್ನಿಸಿತು. ಮೈಮೇಲೆಲ್ಲಾ ಭ್ರಮಾ ಹಾವುಗಳು ಹರಿದಾಡಿದಂತೆ ಭಾಸವಾಯಿತು. ಸಾವಿನ ಭಯವು ಭಯಂಕರವಾಗಿ ಕಾಣಿಸಿಕೊಂಡಿತು. ಬಾಯಿ ಬಡಿದುಕೊಳ್ಳಲು ಆರಂಭಿಸಿದ. Delirium Tremens ಎನ್ನುವ ಈ ಸ್ಥಿತಿಯಲ್ಲಿ ವಾಸ್ತವಿಕತೆಯ ಅರಿವು ಉಳಿದಿರುವುದಿಲ್ಲ. ಆದರೆ ಕಟ್ಟುನಿಟ್ಟಾದ ಚಿಕಿತ್ಸೆಯನ್ನು ಸ್ವಲ್ಪ ಕಾಲ ನಡಸಿ, ದುಶ್ಚಟವನ್ನು ತಪ್ಪಿಸಿದರೆ, ಅವ ಮನಃಸ್ವಾಸ್ಥ್ಯವನ್ನು ಮರಳಿ

ಪಡೆಯುತ್ತಾನೆ.

ಇದೇ ರೀತಿಯಲ್ಲಿ ಕೊಕೇನ್, ಗಾಂಜಾ, ಅಫೀಮು, ಇತ್ಯಾದಿ ಮಾದಕ ವಸ್ತುಗಳೂ ಕೂಡ, ಅಮಲನ್ನು ಬರಿಸಿ, ವಾಸ್ತವಿಕತೆಯ ಅರಿವನ್ನು ಮಾಯಗೊಳಿಸುತ್ತವೆ. ಆದರೆ ಅಮಲು ಇರುವತನಕ, ಮಾದಕವಸ್ತುಗಳ ಪ್ರಭಾವವು ಇರುವ ತನಕ. ನಂತರ ವಾಸ್ತವಿಕತೆಯ ಅರಿವು ಮೂಡುತ್ತದೆ. ನಾಳಿನಿಂದ ಇವನ್ನು ಮುಟ್ಟುವುದಿಲ್ಲ ಎಂದು ತಲೆಯನ್ನು ಹೊಡೆದುಕೊಳ್ಳುತ್ತಾರೆ. ಆದರೆ ಗೀಳು ಹತ್ತಿರುತ್ತದಲ್ಲಾ ! ನರಿ ಕೆಕ್ಕೆಕಾಯಿ ತಿಂದಹಾಗೇ ಇವರುಗಳೂ ಸಂಜೆ ಹೊತ್ತಿಗೆ ದುಶ್ಚಟಕ್ಕೆ ಬಲಿಯಾಗುತ್ತಾರೆ.

**ರಾಮಣ್ಣನ ಹೈಪೊಮೇನಿಯ**

ಪ್ರೊಬೇಷನರ್ ಪರೀಕ್ಷೆಯಲ್ಲಿ ಯಶಸ್ವಿಯಾಗಿ ರಾಮಣ್ಣ ಉತ್ತೀರ್ಣನಾಗಿದ್ದ. ಇಂಟರ್‌ವ್ಯೂನಲ್ಲಿ ಅನಕ ಅತ್ಯಂತ ಚೂಟಿಯ ಉತ್ತರಗಳನ್ನು ಕೊಟ್ಟಿದ್ದ. ಪ್ರೊಬೇಷನರಾದುದು ಸ್ವಾಭಾವಿಕವಾಗಿತ್ತು. ಆರೆಂಟು ತಿಂಗಳುಗಳಲ್ಲಿ ಬಲು ಚೂಟಿಯಿಂದ ಕೆಲಸವೆಲ್ಲವನ್ನೂ ಕಲಿತುಕೊಂಡ. ಮೇಲಧಿಕಾರಿಗಳ ಅಚ್ಚು ಮೆಚ್ಚಿನವನಾದ.

ಕಚೇರಿಯ ನೌಕರರೆಲ್ಲರೂ ಕೂಡಿ ವಿಲಾಸೀ ನಾಟಕ ಸಂಸ್ಥೆಯೊಂದನ್ನು ಸ್ಥಾಪಿಸಿದರು. ರಾಮಣ್ಣನ ಉತ್ಸಾಹವನ್ನು ಕೇಳಬೇಕೇ? ಸಂಸ್ಥೆಯ ಕಾರ್ಯದರ್ಶಿಯಾಗಿ ಆಯ್ಕೆಯಾದ. ಆಡುವ ನಾಟಕಗಳಲ್ಲಿ ಪಾತ್ರವೊಂದು ಅವನಿಗೆ ಮೀಸಲಾಗಿತ್ತು. ಉತ್ಸಾಹೀ ಕೆಲವು ನೌಕರರು ಸಾಹಿತ್ಯ ಸಂಘವೊಂದನ್ನು ಸ್ಥಾಪಿಸಬಯಸಿದರು. ಪುಸ್ತಕಭಂಡಾರವನ್ನು ನಿರ್ಮಿಸತೊಡಗಿದರು. ಅವಿರೋಧವಾಗಿ ರಾಮಣ್ಣ ಉಪಾಧ್ಯಕ್ಷನಾದ. ಕೆಲವಾರು ಕತೆಗಳನ್ನೂ ಪದ್ಯಗಳನ್ನೂ ಅವನಾಗಲೆ ಪತ್ರಿಕೆಗಳಲ್ಲಿ ಪ್ರಕಟಿಸಿ ಪ್ರಸಿದ್ಧನಾಗಿದ್ದ. ಸಹಕಾರೀ ವಸ್ತುಮಳಿಗೆಯನ್ನು ಕಚೇರಿಯವರು ಸ್ಥಾಪಿಸಲಿಚ್ಛಿಸಿದರು. ಸರಿ ! ರಾಮಣ್ಣ ಜಂಟಿಕಾರ್ಯದರ್ಶಿಯಾದ.

ಇಷ್ಟೆಲ್ಲಾ ಹವ್ಯಾಸಗಳನ್ನು ಇಟ್ಟುಕೊಂಡಿದ್ದರೂ, ಕಚೇರಿಯ ಕೆಲಸದಲ್ಲಿ ರಾಮಣ್ಣ ಹಿಂದೆ ಬೀಳಲಿಲ್ಲ. 'ಇಷ್ಟೆಲ್ಲಾ ಕೆಲಸವನ್ನು ಹತ್ತು ಹನ್ನೆರಡು ತಾಸು ದಣಿಯದೆ ಮಾಡುತ್ತೀರಲ್ಲಾ? ಯೋಗಾಭ್ಯಾಸ ಗೀಗಾಭ್ಯಾಸ ಏನಾದರೂ ಮಾಡುತ್ತೀರಾ, ಅಷ್ಟು ಶಕ್ತಿಯನ್ನು ಪಡೆಯುವುದಕ್ಕೆ' ಎಂದು ಸಹೋದ್ಯೋಗಿಗಳು ಅಚ್ಚರಿಯಿಂದ ಕೇಳಿದ್ದುಂಟು. 'ಅವರ ಜಾತಕದ ಲಗ್ನದಲ್ಲಿ ಬುಧ ಉಚ್ಛನಾಗಿರಬೇಕು. ಆದುದರಿಂದ ಪಾದರಸದಂತೆ ಹರಿದಾಡುತ್ತಾರೆ.' ಎಂದು ಟೈಪಿಸ್ಟ್ ತರುಣಿಯು

ಮೆಚ್ಚುಗೆಯಿಂದ ಹುಬ್ಬು ಕೊಂಕಿಸಿದ್ದಳು.

ಎರಡು ವರ್ಷದ ಪ್ರೊಬೇಷನ್ ಅವಧಿಯು ಮುಗಿಯುತ್ತಾ ಬಂದಿತು. ಇನ್ನೊಂದೆರಡು ತಿಂಗಳುಗಳಲ್ಲಿ ಖಾಯಂ ಆಗಬೇಕು ; ಆಫೀಸರಾಗಿ.

ಆ ಸಮಯಕ್ಕೆ ಸರಿಯಾಗಿ ಅವನ ನಡತೆಯಲ್ಲಿ ತುಸು ವಿಚಿತ್ರವು ಕಾಣ ಬಂದಿತು. ಮೊದಲೇ ಮಾತುಗಾರ, ಈಗೀಗ ಮಾತು ಅತಿಯಾಯಿತು. ಕೆಲವೊಮ್ಮೆ ಅಸಂಬದ್ಧವೂ ಆಗುತ್ತಿತ್ತು. ನಗುಸರಸಿಯಾಗಿದ್ದವ ಇತ್ತಿಂದೀಚೆಗೆ ಯಾರಾದರೂ ತಮಾಷೆ ಮಾಡಿದರೆ, ರೇಗಲಾರಂಭಿಸುತ್ತಿದ್ದ. ಕೆಲವು ವೇಳೆ ಅತಿ ಜಾಣತನದ ಮಾತನ್ನಾಡಿ, ಎಲ್ಲರೂ ಅಚ್ಚರಿಪಡುವಂತೆ ಮಾಡುತ್ತಿದ್ದ. ಮತ್ತೆ ಕೆಲವು ಸರ್ತಿ ಶುದ್ಧ ಗಾಂಪನಂತೆ ನುಡಿಯುತ್ತಿದ್ದ. ಸಿನಿಮಾಕ್ಕೆ ಬಾರೋ ಎಂದು ಸ್ನೇಹಿತನನ್ನು ಒತ್ತಾಯಪಡಿಸಿ ಕರೆದುಕೊಂಡು ಹೋಗುವುದು ; ಅರ್ಧ ತಾಸಿನೊಳಗೇ, ಸಾಕು ಕಣೋ ಇನ್ನೆಲ್ಲಿಗಾದರೂ ಹೋಗೋಣ, ಎಂದು ಎದ್ದು ಬಿಡುವುದು ; ಹೀಗೆ ಮಾಡಲು ಪ್ರಾರಂಭಿಸಿದ. ಎಲ್ಲದಕ್ಕೂ ಅವಸರ ; ಯಾವುದರಲ್ಲೂ ಆತುರ ; ಕುಳಿತಲ್ಲಿ ಅರ್ಧ ಗಂಟೆ ಕುಳಿತುಕೊಳ್ಳಲಾರ ; ತೊಣಚಿ ಹೊಕ್ಕ ನಾಯಿಯ ಹಾಗೆ ಆಡತೊಡಗಿದ. ಮುಖಚರ್ಯೆಯೂ ಬದಲಾಯಿತು. ಅಡ್ಡಡ್ಡ ಗೆರೆಗಳಿರುತ್ತಿದ್ದ ನಗುಮುಖವು ಹೋಗಿ ಉದ್ದುದ್ದ ಗೆರೆಗಳ ಕಾತರದ ಮುಖವು ಸದಾ ಕಾಣಿಸುವಂತಾಯಿತು.

ರಾಮಣ್ಣನ ನಡವಳಿಕೆಯಲ್ಲಿ ಕಾಣಬಂದ ಬದಲಾವಣೆಗಳು, ಅವನ ನೂರಾರು ಸ್ನೇಹಿತರಿಗೆ ಸ್ಪಷ್ಟವಾಗಿ ಕಾಣಿಸಿತು. ಆದರೂ ರಾಮಣ್ಣನಲ್ಲಿ ತುಂಬಾ ವಿಶ್ವಾಸವಿದ್ದವರಾದುದರಿಂದ 'ತುಂಬಾ ದುಡಿಯುತ್ತಿದ್ದಾನೆ. ಆ ಕಾರಣದಿಂದ ಬಹಳ ದಣಿದಿದ್ದಾನೆ. ಕೆಲವು ವಾರಗಳಾದರೆ, ಖಾಯಂ ಆಫೀಸರಾದ ಮೇಲೆ, ರಜ ತೆಗೆದುಕೊಂಡು ಪೂರ್ಣ ವಿಶ್ರಾಂತಿಯನ್ನು ಪಡೆದರೆ, ಎಂದಿನಂತೆ ಗೆಲುವಾಗುತ್ತಾನೆ' ಎಂದಂದುಕೊಂಡರು. ಇಷ್ಟರಾದವರಿಗೆ ಬೇನೆಯು ತಗುಲಿದೆ ಎಂದು ಒಪ್ಪಿಕೊಳ್ಳಲು ಮನಸ್ಸು ಸಾಮಾನ್ಯವಾಗಿ ಸಿದ್ಧವಿರುವುದಿಲ್ಲ. ಹಾಗಾಗಿ ಅವರಾರೂ ರಾಮಣ್ಣನ ಆರೋಗ್ಯದ ವಿಷಯದಲ್ಲಿ ಕೈಹಾಕಲಿಲ್ಲ.

ಮನೆಯಲ್ಲಿ ಮುದಿತಾಯಿಯೊಂದಿಗೆ ರಾಮಣ್ಣ ವಾಸವಾಗಿದ್ದ. ಕೊನೆಯ ಒಬ್ಬನೇ ಮಗ ; ಹಿರಿಯ ನಾಲ್ವರು ಅಕ್ಕಂದಿರೂ ಮದುವೆಯಾಗಿ ಗಂಡನ ಮನೆಗೆ ಹೋಗಿದ್ದರು. ಶಾಲೆ ಕಾಲೇಜುಗಳಲ್ಲಿ ಉತ್ತಮ ತರಗತಿಯಲ್ಲಿ ಪ್ಯಾಸುಮಾಡುವ ಹುಡುಗ ಮನೆಯವರ ಮುದ್ದಿಗೆ ಪಾತ್ರನಾಗುವುದು ಸ್ವಾಭಾವಿಕ. ಹಾಗಾಗಿ ಮೊದಲಿನಿಂದಲೂ ತಾಯಿಯ ಕಣ್ಮಣಿಯಾಗಿದ್ದ. ಬಾಲ್ಯದಲ್ಲಿ ತಂದೆಯು

ತೀರಿಕೊಂಡನಂತರ, ಮಗನನ್ನು ತಾಯಿಯು ಮುದ್ದಿಸುವುದು ವಿಪರೀತವಾಯಿತು. ತನ್ನ ಮಗ ಮಾಡಿದುದೇ ಸರಿ, ಅವನಷ್ಟು ಜಾಣ ಇನ್ನು ಯಾರಿದ್ದಾರೆ ಎನ್ನುವ ಮನೋಭಾವ ತಾಯಿಯದು. ವಿಚಿತ್ರವಾಗಿ ನಡೆದುಕೊಂಡರೂ, ವಿನಾಕಾರಣ ಸಿಡುಕಿದರೂ ತಾಯಿಯು ಯಾಕಪ್ಪ ಹೀಗಾಡುತ್ತಿ ಎಂದು ಕೇಳದೆ ಕೇವಲ ಮುದ್ದುಗರೆಯುವುದರಲ್ಲಿ ಮಗ್ನಳಾಗಿದ್ದಳು. ಊಟಕ್ಕೆ ಕುಳಿತಿದ್ದಾಗ ಒಮ್ಮೆ ಸಂಡಿಗೆಯನ್ನು ತಾಯಿ ಬಡಿಸಿದಳು. ಸಂಡಿಗೆ ಅಂದರೆ ರಾಮಣ್ಣನಿಗೆ ಮೊದಲಿನಿಂದಲೂ ಪ್ರಾಣ. ಆದರೆ ಅವತ್ತು ಒಂದು ಸಂಡಿಗೆಯನ್ನು ತೆಗೆದುಕೊಂಡು 'ನೋಡಮ್ಮಾ, ಇದನ್ನು ಸ್ಯಾಟಲೈಟ್ ತರಹ ಹೋಗುವಂತೆ ಬೀಸುತ್ತೀನಿ' ಎಂದು ಸೂರಿನತ್ತ ರೊಯ್ಯಂತ ಬೀಸಿದ. ಮುದುಕಿಗೆ ಸ್ಯಾಟಲೈಟ್ ಅಂದರೇನು ಎನ್ನುವುದು ತಿಳಿಯದು. ಸಂಡಿಗೆಯು ಕರಕಲಾಯಿತೇನೋ, ಅದಕ್ಕೇ ಹಾಗೆ ರೇಗಿರಬೇಕು ಎಂದು ಸಮಾಧಾನ ಮಾಡಿಕೊಂಡಳು. ಮಗನಿಗೆ ಏನಾದರೂ ಆಗಿರಬಹುದೋ ಎನ್ನುವ ಯೋಚನೆಯೇ ಆಕೆಗೆ ಬರಲಿಲ್ಲ. ನೌಕರರ ವಿಲಾಸೀ ನಾಟಕ ಸಂಸ್ಥೆಯು, ಮಾನ್ಯ ಮಂತ್ರಿಗಳ ಸಮ್ಮುಖದಲ್ಲಿ ನಾಟಕವೊಂದನ್ನು ಆಡಿದರು. ರಾಮಣ್ಣನು ಯಾವ ಪಾತ್ರವನ್ನೂ ವಹಿಸಿರಲಿಲ್ಲ. ವಂದನಾರ್ಪಣೆಯನ್ನು ಮಾಡುವ ಕೆಲಸ ಅವನದು. ವಂದನಾರ್ಪಣೆಯನ್ನು ಮಾಡತೊಡಗಿದಾಗ ಲಕ್ಷಣವಾಗಿಯೇ ಆರಂಭಿಸಿದ. ಆದರೆ ಮೂರು ನಾಲ್ಕು ನಿಮಿಷಗಳಲ್ಲಿ ಏನನ್ನೋ ಆಡಲಾರಂಭಿಸಿದ. ಐದು ನಿಮಿಷವಾಯಿತು, ಹತ್ತು ನಿಮಿಷವಾಯಿತು, ನಿಲ್ಲಿಸಲೇ ಒಲ್ಲ. ದೊಡ್ಡ ಪರದೆಯನ್ನು ಇಳಿಬಿಟ್ಟು ರಾಮಣ್ಣನನ್ನು ಪಕ್ಕಕ್ಕೆ ಎಳೆದುಕೊಂಡು ಹೋಗಬೇಕಾಯಿತು. ಸಹೋದ್ಯೋಗಿ ಪ್ರೊಬೇಷನರು 'ರಾಮಣ್ಣ, ಒಂದು ವಾರ ರಜ ತೆಗೆದುಕೊಂಡು ವೈದ್ಯರ ಸಲಹೆಯನ್ನು ಪಡೆಯುವುದು ಒಳ್ಳೆಯದು' ಎಂದು ಮನೆಗೆ ಕರೆದುಕೊಂಡುಹೋಗಿ ಬಿಡುವಾಗ ಸಲಹೆ ಮಾಡಿದ, ಮನೆಯೊಳಕ್ಕೆ ರಾಮಣ್ಣನೊಡನೆ ಹೋಗಿ ಅವನ ತಾಯಿಗೂ ಇದೇ ಮಾತನ್ನು ಒತ್ತಾಯಪೂರ್ವಕವಾಗಿ ಹೇಳಿದ.

ತಾಯಿಗೆ ಗಾಬರಿಯಾಯಿತು. ತಾರು ಕೊಟ್ಟು ಹಿರಿಯ ಮಗಳು, ಅಳಿಯನನ್ನು ಕರೆಸಿದಳು. ಮಾರನೆಯ ಸಂಜೆಯ ವೇಳೆಗೆ ಅವರು 'ಏನಾಯಿತೋ' ಎಂದು ಗಾಬರಿಯಾಗಿ ಬಂದಿಳಿದರು. ಅಳುತ್ತಾ ತಾಯಿಯು ಮಗಳಿಗೆ ರಾಮಣ್ಣನ ವಿಚಿತ್ರ ನಡವಳಿಕೆಯನ್ನೂ ಅವನ ಸ್ನೇಹಿತ ಹಿಂದಿನ ರಾತ್ರಿ ಹೇಳಿದುದನ್ನೂ ಅಡಿಗೆಯ ಮನೆಯ ಬಾಗಿಲು ಮುಚ್ಚಿಕೊಂಡು ಗುಟ್ಟಿನಲ್ಲಿ ಹೇಳಿದಳು. ಹಿರಿಯಕ್ಕನು ಹೊರಕ್ಕೆ ಬಂದಮೇಲೆ ರಾಮಣ್ಣನನ್ನು ಮಾತನಾಡಿಸಿದಳು, ಯೋಗಕ್ಷೇಮದ

ಮಾತುಗಳನ್ನೂ ರಾಮಣ್ಣ ಸರಿಯಾಗಿ ಆಡಿದ. 'ಮಕ್ಕಳನ್ನು ಯಾಕೆ ಕರೆದುಕೊಂಡು ಬರಲಿಲ್ಲ' ಎಂದು ಮೂರು ಮಕ್ಕಳ ಹೆಸರುಗಳನ್ನೂ, ಹೇಳಿ ವಿಚಾರಿಸಿದ. ಭಾವನ ಜತೆಗೆ ನೀನ್ಯಾಕೆ ಬಂದೆ, ಇಲ್ಲೇನು ಕೆಲಸವಿತ್ತು ಈಗ ಎಂದು ಕೇಳಲಿಲ್ಲ. 'ನೀನು ಹೇಗಿದೀಪ್ಪಾ, ಹೊಸ ಕಾರುಬಾರು ಏನಾದರೂ ಮಾಡ್ತಿದ್ದೀಯಾ' ಎಂದು ಹಿರಿಯಕ್ಕ ಕೇಳಿದಳು. ' ಈಗ ಪೆಯಿಂಟಿಂಗ್ ಹಾಬಿಯನ್ನು ಹಿಡಿದಿದ್ದೀನಿ' ಎಂದ ರಾಮಣ್ಣ. 'ಹೌದೇನೋ, ಹಾಗಾದರೆ ಏನು ಮಾಡಿದ್ದೀಯೋ ಅದನ್ನು ತಂದು ತೋರಿಸು.' ಎಂದಳು. ಕೊಠಡಿಯೊಳಕ್ಕೆ ಹೋಗಿ ದೊಡ್ಡ ಸುರಳಿಯನ್ನು ರಾಮಣ್ಣ ತಂದು ಅಕ್ಕನ ಕೈಲಿಟ್ಟ. 'ಚಾಮುಂಡಿಬೆಟ್ಟದ ಚಿತ್ರ ಬಿಡಿಸಿದೀನಿ ನೋಡು' ಎಂದ. ಅಕ್ಕ ಹಾಳೆಯನ್ನು ಬಿಡಿಸಿ ನೋಡಿದಳು ದೊಡ್ಡ ಹಾಳೆಯ ಮಧ್ಯದಲ್ಲಿ ಕೆಂಪು ಶಾಯಿಯಲ್ಲಿ ಮೂರು ಚಿತ್ರಗಳನ್ನು ಸಣ್ಣದಾಗಿ ಮಾಡಿದ್ದ. ಅಷ್ಟೇ ! ಆ ವೇಳೆಗೆ ಸರಿಯಾಗಿ ಭಾವ ಅಲ್ಲಿಗೆ ಬಂದ. ಬುಳುಬುಳು ಅಳಲು ಶುರುಮಾಡಿದ್ದ ಹೆಂಡತಿಯನ್ನು ಸನ್ನೆಮಾಡಿ, ಅಡಿಗೆಮನೆಗೆ ಕಳಿಸಿದ. ಚಿತ್ರದ ವಿಷಯವನ್ನು ಚರ್ಚಿಸಲು ಅವ ರಾಮಣ್ಣನೊಡನೆ ಕುಳಿತ.

'ಚಾಮುಂಡಿಬೆಟ್ಟದ ಚಿತ್ರವನ್ನೇನೋ ಬರೆದಿದ್ದಿ. ಆದರೆ ದೇವಸ್ಥಾನವೇ ಇಲ್ಲವಲ್ಲೋ' ಎಂದ ಭಾವ. 'ಇಲ್ಲೇ ಅದರ ಗೋಪುರವನ್ನ ಬರೆದಿದ್ದೇನೆ. ಮಂಜು ಬೀಳುತ್ತಿರಬಹುದು, ನಿಮಗೆ ಕಾಣಿಸಲಿಲ್ಲ' ಎಂದ ರಾಮಣ್ಣ. ಇದೇ ತೆರನ ಮಾತು ಮುಂದುವರೆಯಿತು ರಾತ್ರಿ ಊಟ ಮಾಡುವ ತನಕ.

ಬೆಳಗಾಗುತ್ತಲೂ ಭಾವ ಮನೋವೈದ್ಯರಲ್ಲಿಗೆ ಹೋದರು. ರಾಮಣ್ಣನ ಬೇನೆಯನ್ನು ವಿವರಿಸಿದರು. ವೈದ್ಯರೂ ಭಾವನ ಜತೆಗೆ ರಾಮಣ್ಣನ ಮನೆಗೆ ಬಂದು, ಮಾತನಾಡಿದರು. ಹಿಂತಿರುಗುವಾಗ ಭಾವನನ್ನೂ ಕರೆದುಕೊಂಡು ಹೋದರು. ವಿಷಯವನ್ನು ವಿವರಿಸಿದರು.

'ರಾಮಣ್ಣನ ವ್ಯಕ್ತಿತ್ವವು ಇನ್ನೂ ದೃಢಗೊಂಡಿಲ್ಲ. ಇನ್ನೂ ಹುಡುಗು ಹುಡುಗು ಪ್ರವೃತ್ತಿಯಿದೆ. ತುಂಬಾ ಜಾಣ. ಪ್ರೊಬೇಷನರ್ ಪರೀಕ್ಷೆಗೆ ಕೂತಾಗ ಹೈಪೋಮೇನಿಯಾ ಶುರುವಾಗಿತ್ತು. ಆದುದರಿಂದಲೇ ಅವ ಏನೇನೆಲ್ಲಾ ಚಟುವಟಿಕೆಗಳಲ್ಲಿ ಮಗ್ನನಾಗುತ್ತಿದ್ದ. ಇತರರು ಹಾಗೆ ದುಡಿದಿದ್ದರೆ, ಸುಸ್ತುಬಡಿದು ಹೋಗುತ್ತಿದ್ದರು. ಆದರೆ ಇವ ದಣಿಯುತ್ತಿರಲಿಲ್ಲ ಈ ಬೇನೆಯ ಕಾರಣದಿಂದ. ತುಂಬಾ ಚೂಟಿಯಿಂದ, ಬಹಳ ಶ್ರಮವಹಿಸಿ, ಅವಿಶ್ರಾಂತವಾಗಿ ಕೆಲಸ ಮಾಡುವವರಲ್ಲಿ, ಬಹು ಮಂದಿ ಹೈಪೋಮೇನಿಯಾ ಪ್ರವೃತ್ತಿಯವರೇ. ಆದರೆ ಅದೇ ಹಂತದಲ್ಲಿ ಅದು ಉಳಿಯುತ್ತದೆ. ಹಾಗಾಗಿ ಅವರುಗಳು ಬಾಳಿನ ಉದ್ದಕ್ಕೂ

ಅತಿಯಾಗಿ ದುಡಿಯುತ್ತಾರೆ. ಸ್ಪಷ್ಟವಾಗಿಯೂ ಇರುತ್ತಾರೆ. ಸಮಾಜದಲ್ಲಿ ಹಿರಿಮೆಯನ್ನೂ ಮನ್ನಣೆಯನ್ನೂ ಗಳಿಸುತ್ತಾರೆ. ಆದರೆ ಇವರಲ್ಲಿ ವ್ಯಕ್ತಿತ್ವವು Personality ದೃಢವಾಗಿ ಬೆಳೆದಿರುತ್ತದೆ. ಆದಕಾರಣ ಹೈಪೋಮೇನಿಯಾ ಪ್ರವೃತ್ತಿಯು, ಬೇನೆಯ ಹಂತಕ್ಕೆ ಏರುವುದಿಲ್ಲ.

ರಾಮಣ್ಣನು ಬಾಲ್ಯದಿಂದಲೂ ಮುದ್ದುಮುದ್ದಾಡಿಸಿಕೊಂಡು ಬೆಳೆದವನು, ತುಂಬಾ ಚೂಟಿಯ ಹುಡುಗನಾದುದರಿಂದ ಪರೀಕ್ಷೆಗಳಲ್ಲಿ ಉತ್ತಮ ವರ್ಗದಲ್ಲಿ ಉತ್ತೀರ್ಣನಾಗುತ್ತಿದ್ದ. ಇದರಿಂದ ಮನೆಯವರ ಮುದ್ದು ಹೆಚ್ಚಾಯಿತು. ನನ್ನ ಬಿಟ್ಟರೆ ಇನ್ನು ಯಾರೂ ಇಲ್ಲ ಎನ್ನುವ ಬಾಲ್ಯತನದ ಮಮಕಾರವು ಬೆಳೆಯಿತು. ಇತರರು ಅಸೂಯೆ ಪಡುವಂತಹ ಪ್ರೊಬೇಷನರ್‌ಗಿರಿಯು ಲಭಿಸಿದಾಗ, ಬಾಲ್ಯತನದ ಮಮಕಾರಕ್ಕೆ ಇಂಬು ಕೊಟ್ಟಂತಾಯಿತು. ಹೈಪೋಮೇನಿಯಾ ಪ್ರವೃತ್ತಿ ಇದ್ದ ರಾಮಣ್ಣ, ಎಲ್ಲ ಚಟುವಟಿಕೆಗಳಲ್ಲೂ ಕೈಹಾಕತೊಡಗಿದ.

ಆದರೆ ಅವನ ವ್ಯಕ್ತಿತ್ವವು ಬಾಳ ಘರ್ಷಣೆಗಳಿಂದ ದೃಢವಾಗಿರಲಿಲ್ಲ. ಕಷ್ಟ, ಸಂಕಟ, ಜವಾಬ್ದಾರಿ ಹೊಣೆ, ಅವಮಾನ, ಅನ್ಯಾಯ ಇವುಗಳು ತರುಣರಿಗೆ ಸಾಕಷ್ಟು ಬರೆ ಹಾಕದೆ ಇದ್ದರೆ, ಅವರುಗಳ ವ್ಯಕ್ತಿತ್ವವು ದೃಢವಾಗುವುದಿಲ್ಲ. ಮೃದುವಾಗಿಯೇ ಇರುತ್ತದೆ. ರಾಮಣ್ಣನ ಪರಿಸ್ಥಿತಿಯೂ ಇಂತಹುದೇನೇ.

ಆದಕಾರಣವೇ, ಅವ ಹೈಪೋಮೇನಿಯಾದ ಹಂತದಿಂದ ಮೇನಿಯಾ ಹಂತಕ್ಕೆ ಏರಿದ್ದಾನೆ. ಆರೇಳು ತಿಂಗಳುಗಳ ಹಿಂದೆಯೇ, ಅವನ ನಡವಳಿಕೆಯು ವಿಚಿತ್ರವಾದಾಗ, ಅವನ ಸ್ನೇಹಿತರು ಹಾಗೂ ಮನೆಯವರು ಗಮನಿಸಿದರು. ಆದರೆ ಸೂಕ್ತವಾದ ಪರಿಹಾರ ಕ್ರಮವನ್ನು ಕೈಗೊಳ್ಳಲಿಲ್ಲ.

ಆ ಸ್ಥಿತಿಯಲ್ಲಿ ಸೂಕ್ತ ಚಿಕಿತ್ಸೆಯನ್ನು ಕೈಗೊಂಡಿದ್ದರೆ, ಮೇನಿಯಾ ಹಂತ ಕ್ಕೇರುವುದನ್ನು ಬಹಳ ಸುಲಭವಾಗಿ ತಪ್ಪಿಸಬಹುದಾಗಿತ್ತು. ರಾಮಣ್ಣನನ್ನು ಕಂಡರೆ ಸ್ನೇಹಿತರಿಗೆ ತುಂಬಾ ವಿಶ್ವಾಸ. ಅವನಿಗೆಂದು ಏನನ್ನಾದರೂ ಮಾಡಲು ಅವರು ಸಿದ್ಧ. ಆದರೆ ಈ ಬೇನೆಯ ವಿವರಗಳು ಅವರಿಗೆ ತಿಳಿಯದು. ತಿಳಿದಿದ್ದರೆ ಅವರೇ ಚಿಕಿತ್ಸೆಯನ್ನು ಮಾಡುತ್ತಿದ್ದರು.

'ನಿಮ್ಮ ಅತ್ತೆಯು ಹಳೆಯ ಕಾಲದ, ಏನನ್ನೂ ಅರಿಯದ ಹೆಂಗಸು. ಇದ್ದೊಬ್ಬ ಚೂಟಿ ಮಗ ಮಾಡಿದ್ದೇ ಸರಿ ಎಂದು ನಂಬಿ ಬಾಳನ್ನು ನಡಸುತ್ತಿರುವವಳು. ಈ ವಿಷಯಗಳು ಆಕೆಗಾದರೂ ತಿಳಿದಿದ್ದರೆ, ರಾಮಣ್ಣ ಈ ಸ್ಥಿತಿಗೆ ಬರುತ್ತಿರಲಿಲ್ಲ. ಈಗಲೂ ರಾಮಣ್ಣನ ಬೇನೆಯು ಕೆಟ್ಟಮಟ್ಟಕ್ಕೆ ಇಳಿದಿಲ್ಲ. ಕೆಲವು ತಿಂಗಳು ಚಿಕಿತ್ಸೆ ಮಾಡಿದರೆ, ಒಂದಾರು ತಿಂಗಳು ಅನ್ನಿ, ಅಷ್ಟರಲ್ಲಿ

ಪೂರ್ಣವಾಗಿ ಗುಣಹೊಂದುತ್ತಾನೆ. ಇದನ್ನು ಧೈರ್ಯವಾಗಿ ಖಂಡಿತವಾಗಿ ಹೇಳುತ್ತೇನೆ. ಓದಿದವರು, ಲೋಕಾನುಭವವುಳ್ಳವರು ನೀವು. ಏನಾದರೂ ಮಾಡಿ, ರಾಮಣ್ಣನನ್ನು ನಮ್ಮ ಆಸ್ಪತ್ರೆಯಲ್ಲಿ ಕೆಲವು ವಾರಗಳಿರುವಂತೆ ಏರ್ಪಾಡು ಮಾಡಬೇಕು. ನಿಮ್ಮ ಅತ್ತೆಯನ್ನು ಒಪ್ಪಿಸಬೇಕು. ಆಕೆ ಏನಾದರೂ ಮೊಂಡು ಹಿಡಿದುಕೊಂಡು, ಮಾನಸಿಕ ಆರೋಗ್ಯದ ಆಸ್ಪತ್ರೆಗೆ ಸೇರಿಸುವುದಿಲ್ಲ ಎಂದು ಹಳೆಯ ಕಂದಾಚಾರದ ಮೂಢ ಭಾವನೆಯಿಂದ, ಹಠವನ್ನು ಹಿಡಿದರೆ, ರಾಮಣ್ಣನ ಭವಿಷ್ಯವು ಅನಿಶ್ಚಿತವಾಗುತ್ತದೆ.

ಈಗ ಕೆಲವು ಔಷಧಿಗಳನ್ನು ವಿಧಾಯಿಸುತ್ತೇನೆ. ಒಂದೆರಡು ದಿನಗಳು ಮನೆಯಲ್ಲಿ ರಾಮಣ್ಣ ಅವನ್ನು ಸೇವಿಸಲಿ, ಉದ್ವೇಗವು ಸ್ವಲ್ಪ ಕಡಿಮೆಯಾಗುತ್ತದೆ. ಆ ವೇಳೆಗೆ ಅವರ ತಾಯಿಯೂ ಒಪ್ಪುವಂತೆ ಮಾಡಿ, ಆಸ್ಪತ್ರೆಗೆ ಬಂದು ಸೇರಿಕೊಳ್ಳಲು ಎಲ್ಲ ವ್ಯವಸ್ಥೆಯನ್ನೂ ಮಾಡುತ್ತೇನೆ. ಕೆಲವೇ ವಾರಗಳಲ್ಲಿ ಭಗವಂತನ ಕೃಪೆಯಿಂದ ಸ್ವಾಸ್ಥ್ಯವನ್ನು ಪಡೆದ ರಾಮಣ್ಣನನ್ನು ಮನೆಗೆ ಕಳುಹಿಸಿಕೊಡುತ್ತೇನೆ.

ಇನ್ನೊಂದು ಮುಖ್ಯ ವಿಷಯ, ಮರೆತಿದ್ದೆ. ಅದನ್ನೂ ಹೇಳುತ್ತೇನೆ. ಇನ್ಷೂರೆನ್ಸ್ ಕಚೇರಿಯ ಮುಖ್ಯಾಧಿಕಾರಿಗಳು ನನಗೆ ನಿಕಟ ಸ್ನೇಹಿತರು. ತುಂಬಾ ವಿಶಾಲ ಮನಸ್ಸಿನವರು, ಆತ. ನನ್ನ ಮಾತಿನಲ್ಲಿ ಅವರಿಗೆ ಗೌರವವಿದೆ. ಕೃತಜ್ಞತಾ ಭಾವನೆಯನ್ನೂ ನನ್ನ ವಿಷಯದಲ್ಲಿ ಹೊಂದಿದ್ದಾರೆ. ಅವರಿಗೆ ಹೇಳುತ್ತೇನೆ, 'ರಾಮಣ್ಣನಿಗೆ ಆರು ತಿಂಗಳು ರಜೆ ಕೊಡಿ ಎಂದು. ಆ ಅವಧಿಯಲ್ಲಿ ರಾಮಣ್ಣನನ್ನ ಸ್ವಸ್ಥಪಡಿಸುವ ಹೊಣೆ ನನ್ನದು. ಅನಂತರ ಅವ ಆ ಕಚೇರಿಯಲ್ಲಿ, ಆಫೀಸರಾಗಿ ಕೆಲಸವನ್ನು ಮಾಡಿಯೇ ಮಾಡುತ್ತಾನೆ. ಅರಿಯದ ಅವರೂ ಇವರೂ ಹೇಳಿದುದನ್ನು ಕೇಳಿಕೊಂಡು, ಮಂತ್ರ ಮಾಟ ಮಾಡಿಸಹೋಗದೆ, ಸೂಕ್ತ ಚಿಕಿತ್ಸೆಯನ್ನು ಮಾಡಿಸಿ; ದೇವರು ಒಳ್ಳೆಯದನ್ನು ಕರುಣಿಸುತ್ತಾನೆ.'

ಎದೆಯಾಳದಿಂದ ಈ ರೀತಿ ಮನೋವೈದ್ಯರು ನುಡಿದುದು, ಭಾವನ ಮೇಲೆ ತುಂಬಾ ಪರಿಣಾಮವನ್ನುಂಟುಮಾಡಿತು. ಹೆಂಡತಿಯ ಸಹಾಯವನ್ನು ಗಳಿಸಿ ಅತ್ತೆಯ ಒಪ್ಪಿಗೆಯನ್ನು ಪಡೆದು, ರಾಮಣ್ಣನನ್ನು ಆರೆಂಟು ವಾರ ಆಸ್ಪತ್ರೆಯಲ್ಲಿ ಇರಿಸಲಾಯಿತು. ಶ್ರದ್ಧೆಯಿಂದ ಮನೋವೈದ್ಯರು ನಡೆಸಿದ ಚಿಕಿತ್ಸೆಯು ಘೋರವಾಗಿ ಕಂಡರೂ ರಾಮಣ್ಣನ್ನು ಗುಣಪಡಿಸಿತು.

ಈಗವ, ಇನ್ಷೂರೆನ್ಸ್ ಕಚೇರಿಯ ಮುಖ್ಯಸ್ಥನಾಗಿದ್ದಾನೆ. ಇಪ್ಪತ್ತು ವರ್ಷಗಳ ಸಫಲ ಸೇವೆಯನ್ನು ಸಲ್ಲಿಸಿ, ಆ ಪದವಿಯನ್ನು ಪಡೆದಿದ್ದಾನೆ.

ಆದುದರಿಂದ, ಹೈಪೊಮೇನಿಯಾದ ವಿವರಗಳು ಸಮಾಜದಲ್ಲಿರುವವರಿಗೆ ತಿಳಿದಿರಬೇಕು. ಅವರ ನೆಂಟರಿಷ್ಟರಿಗೆ ಈ ತೆರನ ಮಾನಸಿಕ ಉದ್ರೇಕವಾದಾಗ, ಮೊದಮೊದಲ ಹಂತದಲ್ಲಿ ಗುರುತಿಸಲು ಆಗ ಸಾಧ್ಯವಾಗುತ್ತದೆ. ಹೈಪೋಮೇನಿಯಾವು, ಮೇನಿಯಾ ಆಗದಂತೆ ಚಿಕಿತ್ಸೆಯನ್ನು ಮಾಡಲು ಸಾಧ್ಯ.

**ನಿಂಗನ ಮೇನಿಯಾ**

ಸ್ನೇಹಿತರೊಂದಿಗೆ ಸಾಹುಕಾರ್ ಲಕ್ಕಣ್ಣನವರು ಹಜಾರದಲ್ಲಿ ಮಾತನಾಡುತ್ತ ಕುಳಿತಿದ್ದರು. ಹದಿನೈದು ವರ್ಷದ ಅವರ ಮಗ ನಿಂಗ, ಹೊರಗೆ ಹೋಗಿದ್ದವನು ಮನೆಗೆ ಬಂದ. ಹಜಾರದಲ್ಲಿ ಎಲ್ಲರೂ ಕುಳಿತಿರುವುದನ್ನು ಕಂಡು ತಾನೂ ಅಲ್ಲಿ ಕುಳಿತ. ಜಮೀನಿನ ವಿಚಾರದಲ್ಲಿ ಹೀಗೆ ಮಾಡಿದರೆ ಚೆನ್ನ ಎಂದು ಲಕ್ಕಣ್ಣನವರು ಸ್ನೇಹಿತರಿಗೆ ಹೇಳಿದರು. ಆ ಸ್ನೇಹಿತರು ಉತ್ತರ ಕೊಡುವುದಕ್ಕೆ ಮುಂಚೆಯೇ ನಿಂಗ ಏನನ್ನೋ ಹೇಳಲು ಶುರು ಮಾಡಿದ. ಲಕ್ಕಣ್ಣನವರಿಗೆ ರೇಗಿತು. 'ನಿಂಗೇನು ಬುದ್ಧಿಗಿದ್ದಿ ಇಲ್ವೇನೋ, ಮಗಾ ! ದೊಡ್ಡವರು ಮಾತಾಡ್ತಿರುವಾಗ, ಚಿಕ್ಕವರು ಬಾಯಿ ಹಾಕಬಾರದು ಅಂತ ಎಷ್ಟು ಸಲ ಹೇಳಿಲ್ಲ. ಎದ್ದು ಹೋಗು' ಎಂದು ಸಿಟ್ಟಿನಿಂದ ಗದರಿಸಿದರು. ಮುಖವನ್ನು ಚಿಕ್ಕದು ಮಾಡಿಕೊಂಡು ನಿಂಗ ಮನೆಯೊಳಕ್ಕೆ ಬಿರಬಿರನೆ ಹೊರಟುಹೋದ.

ಮಧ್ಯಾಹ್ನದ ಊಟಕ್ಕೆ ಮನೆಯವರೆಲ್ಲರೂ ಕುಳಿತಿದ್ದರು. ಅನ್ನವನ್ನು ಬಡಿಸಾಗಿತ್ತು. ಎಸರನ್ನು ಬಡಿಸಲು ಸ್ವಲ್ಪ ತಡವಾಗಿತ್ತು. ಲಕ್ಕಣ್ಣನವರೂ ಊಟಕ್ಕೆ ಕುಳಿತಿದ್ದರು. ಅವರಿದ್ದಾಗ ಮಕ್ಕಳು ಹೆಂಗಸರು ಮಾತಾಡುವುದು ಅಪರೂಪ. ಸಾಹುಕಾರರು ಮಾತನಾಡಿಸಿದರೆ, ಉತ್ತರಿಸುವರೇ ವಿನಾ ಮಿಕ್ಕಂತೆ, ಸಾಮಾನ್ಯವಾಗಿ ಮಾತೆತ್ತುತ್ತಿರಲಿಲ್ಲ. ಆದರೆ ಆ ಮಧ್ಯಾಹ್ನ ನಿಂಗ 'ಎಸರು ತಾಮ್ಮ' 'ಎಸರು ತಾ' ಎಂದು ಎರಡು ಮೂರು ಸಲ ಗಟ್ಟಿಯಾಗಿ ಕೂಗಿದ. 'ಇದೇನು ಇವತ್ತು, ನಿಂಗ ಹೀಗಾಡ್ತಾನೆ ; ಅಪ್ಪ ಇರುವುದನ್ನೂ ಗಮನಿಸಿದಂತಿಲ್ಲ' ಎಂದು ಮನೆಯವರೆಲ್ಲರೂ ನಿಂಗನನ್ನೇ ದಿಟ್ಟಿಸಿ ನೋಡತೊಡಗಿದರು. ದೊಡ್ಡವರೆದುರಿಗೆ ಯಾವಾಗಲೂ ತೋರಿಸುತ್ತಿದ್ದ ಗೌರವ, ಮರ್ಯಾದೆ, ಮತ್ತು ತುಸು ಭಯ, ಇವೆಲ್ಲವೂ ನಿಂಗನಿಂದ ಈಗ ಮರೆಯಲ್ಪಟ್ಟಂತಿತ್ತು.

ಸಂಜೆ ಮುಂದೆ ಅಕ್ಕನ ಜತೆಯಲ್ಲಿ ಪಗಡೆಯಾಡುತ್ತ ನಿಂಗ ಕುಳಿತಿದ್ದ. ಅಕ್ಕ ಆಡಿದ ಒಂದು ಮಾತಿಗೆ ಹತ್ತು ಮಾತುಗಳನ್ನು ಬಡ ಬಡ ಅಂತ ಆಡತೊಡಗಿದ. 'ನಿಂಗೇನು ಬಂತೋ, ನಿಂಗ ; ಆಡಿದ ಮಾತಿಗೆ ಯೋಚಿಸಿ

ಉತ್ತರವನ್ನು ಕೊಡುತ್ತಿದ್ದಿ. ಈಗೀಗ ಸರಸರಾಂತ ಎಷ್ಟು ಮಾತಾಡ್ತೀಯಪ್ಪಾ !' ಎಂದು ಅಕ್ಕ ಅಚ್ಚರಿಯಿಂದ ನುಡಿದಳು. ಕಿರಿಯ ತಮ್ಮನ ಮುಖವನ್ನು ದಿಟ್ಟಿಸಿ ನೋಡಿದಳು. ತಮ್ಮನ ಮುಖದಲ್ಲಿ ಎಂತದೋ ಉದ್ವೇಗವಿದ್ದುದನ್ನು ಕಂಡಳು. ಎಷ್ಟು ಕಳೆಯಾಗಿದ್ದಾನೆ ಎಂದುಕೊಂಡಳು.

ಕಾಲೇಜಿನಲ್ಲಿ ಆಟದ ಮೈದಾನದಲ್ಲಿ ಸ್ನೇಹಿತರೊಂದಿಗೆ ಹರಟೆ ಕೊಚ್ಚುತ್ತಿದ್ದ. ಕ್ರಿಕೆಟ್ ಟೆಸ್ಟಿನ ಮಾತು ಬಂತು. ಇನ್ನೊಬ್ಬರಿಗೆ ಮಾತನಾಡಲು ಅವಕಾಶವನ್ನು ಕೊಡದೆ, ಯಾವುಯಾವುದೋ ಟೆಸ್ಟುಗಳ ವಿವರಗಳನ್ನು ನಿಂಗ ವರದಿ ಮಾಡಗೊಡಗಿದ. ಅಡೆತಡೆಯಿಲ್ಲದೆ ಬಡಬಡಿಸಿದ. 'ಚೂಟಿಯಾಗೇನೋ ಮಾತಾಡ್ತೀಪ್ಪ, ಮಾತಿಗೆ ಮಾತು ಪೋಣಿಸುತ್ತೀ. ಆದರೆ ಏನು ಹೇಳಬೇಕು ಅಂತಿದಿ, ಅದು ತಿಳಿಯವಲ್ಲದಲ್ಲಾ. ಕ್ರಿಕೆಟ್ ಆಟದಲ್ಲಿ ಧ್ಯಾನ್‌ಸಿಂಗ್ ಎಲ್ಲಿ ನುಸುಳಿಕೊಂಡು ಬಂದ ?' ಎಂದು ಜತೆಯಲ್ಲಿದ್ದವ ಹೇಳಿದ.

* * *

ಹಿಂದೆಂದೂ ನಿಂಗ ಹೀಗಾಡುತ್ತಿರಲಿಲ್ಲ. ಕಳೆದ ೪-೬ ವಾರಗಳಿಂದ ಅವನ ನಡವಳಿಕೆಯಲ್ಲಿ ವ್ಯತ್ಯಾಸವು ಎದ್ದು ಕಾಣುತ್ತಿತ್ತು. ಮುಖವು ಸದಾ ಹಿಂಡಿ ಕೊಂಡಂತೆಯೇ ಇರುತ್ತಿತ್ತು. ಹುಬ್ಬುಗಂಟಿಕ್ಕಿಕೊಂಡಿರುತ್ತಿತ್ತು. ಇತ್ತಿಂದೀಚೆಗೆ, ಕಾರಣವಿರಲಿ ಇಲ್ಲದಿರಲಿ, ಸಿಡುಕಲಾರಂಭಿಸಿದ್ದ. ಮಾತುಗಳ ಅವಸರವನ್ನು ನೋಡಿದರೆ, ಅವನ ತಲೆಯಲ್ಲಿ ಯೋಚನೆಗಳು ಅತಿ ರಭಸದಿಂದ ಮೂಡುತ್ತಿವೆ. ಅವಕ್ಕೆ ಶಬ್ದಗಳ ರೂಪು ಕೊಡಲು ಅವ ತುಂಬಾ ಆತುರ ಪಡುತ್ತಿದ್ದಾನೆ, ಎನಿಸುತ್ತಿತ್ತು. ಮಾತು ಮಾತಿಗೆ ಸಂಬಂಧವಿದ್ದಂತೆ ಕಂಡರೂ, ಒಟ್ಟು ಮಾತಿನ ಅರ್ಥವೇನು ಎಂಬುದು ಸ್ಪಷ್ಟವಾಗುತ್ತಿರಲಿಲ್ಲ. ತಾನಾಡುತ್ತಿರುವುದು ಇತರರಿಗೆ ಅರ್ಥವಾಗುತ್ತಿಲ್ಲ ಎನ್ನುವುದು ಅವನಿಗೆ ತಿಳಿದೇ ಇರಲಿಲ್ಲ. ಅಂದರೆ ವಾಸ್ತವಿಕ ಪರಿಸ್ಥಿತಿಯ ಅರಿವೇ ಅವನಿಗಿದ್ದಂತೆ ಕಾಣಿಸುತ್ತಿರಲಿಲ್ಲ. ಊಹಾಲೋಕದಲ್ಲೇ ವಿಹರಿಸುತ್ತಿದ್ದಂತೆ ಅನಿಸುತ್ತಿತ್ತು.

ವಾಸ್ತವಿಕ ಪರಿಸ್ಥಿತಿಯ ಅರಿವು ಮಾಯವಾಗಿ, ಮಾನಸಿಕ ವಿಕಲ್ಪವಾಗುವಾಗ, ಕಾಣಬರುವ ಚಿಹ್ನೆಗಳನ್ನು ನಿಂಗನ ನಡವಳಿಕೆಯು ಸ್ಪಷ್ಟವಾಗಿ ತೋರಿಸುತ್ತಿತ್ತು. ೧. ದೈನಂದಿನ ನಡವಳಿಕೆಯಲ್ಲಿ ತೀವ್ರ ಬದಲಾವಣೆಯಾಗುವುದು. ೨. ಮುಂಗೋಪ ಮತ್ತು ಸಿಡುಕು ಹೆಚ್ಚಾಗುವುದು. (Irritable.) ೩. ಬಾಲ್ಯದಿಂದಲೂ ರೂಢಿಸಿಕೊಂಡು ಬಂದ, ಮನಸ್ಸಿನ ಮೇಲಿನ ಹತೋಟಿಯು ಸಡಿಲಗೊಳ್ಳುವುದು: (Lack of Inhibition). ೪. ಅಲೆಅಲೆಯಾಗಿ ಚಿಮ್ಮುವ ಯೋಚನೆಗಳು. (Flight

of Ideas). ೫. ಉದ್ದೇಶವೇ ಇಲ್ಲದೆ, ಮಾತನಾಡುವುದು ; ಆಡಿದ್ದನ್ನೇ ಪುನಃ ಪುನಃ ಆಡುವುದು (Unproductive and Repetitive Talk).

ಈ ಚಿಹ್ನೆಗಳೆಲ್ಲವೂ 'ಮ್ಯಾನಿಕ್ ಡಿಪ್ರೆಸಿವ್' ಸೈಕೋಸಿಸ್ ಎನ್ನುವ ಬೇನೆಯ ಮೊದಮೊದಲ ಸೂಚನೆಗಳು. ಸೂಕ್ತ ಚಿಕಿತ್ಸೆಯನ್ನು ಈ ಹಂತದಲ್ಲಿ ನೀಡದಿದ್ದರೆ, ಬೇನೆಯು ಉಗ್ರವಾಗುತ್ತದೆ. Acute Mania ಉಂಟಾಗುತ್ತದೆ.

ಇಂತಹ ಸ್ಥಿತಿಯಲ್ಲಿರುವ ರೋಗಿಯನ್ನು ಹೆದರಿಸಿ ಬೆದರಿಸಿ ಬುದ್ಧಿ ಕಲಿಸುತ್ತೇವೆ ; ಶಿಕ್ಷೆಯನ್ನು ವಿಧಿಸಿ ಸರಿಪಡಿಸುತ್ತೇವೆ ; ದಂಡಂ ದಶಗುಣಂ ಭವೇತ್ ಅಲ್ಲವೇ ? ಎಂದು ಅಜ್ಞಾನದಿಂದ ಮನೆಯವರು ನಡೆದುಕೊಂಡರೆ, ರೋಗಿಯ ಮನಸ್ಸು ಮುದುರಿಕೊಂಡಂತಾಗಿ, ಮೊಂಡು ಹಾಕಿಕೊಳ್ಳುತ್ತದೆ.

ಹರಿದಾಡುತ್ತಿರುವ ಸಾವಿರಕಾಲನ್ನು ಒಂದು ಹಂಚಿಕಡ್ಡಿಯಿಂದ ತಟ್ಟಂತ ಚುಚ್ಚಿದರೆ, ಸುರುಳಿ ಸುತ್ತಿಕೊಂಡು ಬಿಡುತ್ತೆ, ಅದು. ಮುಂದಕ್ಕೂ ಹೋಗುವುದಿಲ್ಲ, ಹಿಂದಕ್ಕೂ ಬರುವುದಿಲ್ಲ. ಅಪಾಯವು ಒದಗಬಹುದು ಎನಿಸಿದಾಗ ಸ್ವಸಂರಕ್ಷಣೆಗೆ ಹಾಗದು ಸುರುಳಿ ಸುತ್ತಿಕೊಂಡು ಸತ್ತಂತೆ ಇದ್ದು ಬಿಡುತ್ತೆ.

ಮನಸ್ಸೂ ಹಾಗೆಯೇ, ಒಂದು ದೃಷ್ಟಿಯಲ್ಲಿ, ರೋಗಿಯ ಆಳಮನಸ್ಸಿನಲ್ಲಿ ಭಯಂಕರವಾದ ವಿಪ್ಲವವು ಆಗುತ್ತಿರುತ್ತದೆ. ಬುದ್ಧಿಯ ಬುಡವನ್ನು ಅದು ಅಲ್ಲಾಡಿಸಿ ಸಡಿಲಿಸುತ್ತಿರುತ್ತದೆ. ಯಾಕೆ ಹೀಗಾಗುತ್ತಿದೆ ಎನ್ನುವುದು ರೋಗಿಗೆ ತಿಳಿಯುವುದಿಲ್ಲ. ಆದಕಾರಣ ಇದಕ್ಕೇನು ಮಾಡಬೇಕು ಎನ್ನುವುದು ತಿಳಿದಿರುವುದಿಲ್ಲ. ಆಳಮನಸ್ಸಿನ ಭಾರೀ ವಿಪ್ಲವದಿಂದ ರೋಗಿಯು ತುಂಬಾ ಧೃತಿಗೆಟ್ಟಿರುತ್ತಾನೆ. ಅವನಿಗೆ ಆಗ ನೆರೆಹೊರೆಯವರ, ಮನೆಯವರ, ಸಹಾನುಭೂತಿಯೂ, ಆದರದ ಅನುಕಂಪವೂ ಅತ್ಯಗತ್ಯ. ಬದಲು ಬೈದು ಶಿಕ್ಷಿಸತೊಡಗಿದರೆ, ಚುಚ್ಚಲ್ಪಟ್ಟ ಸಾವಿರಕಾಲಿನಂತೆ, ತೋರುಮನಸ್ಸು ಮುದುಡಿಕೊಳ್ಳುತ್ತದೆ. ಮುಂದೂ ಹೋಗಲಾರದು, ಹಿಂದಕ್ಕೂ ಸರಿಯಲಾರದು. ಇದ್ದಲ್ಲೇ ಇದ್ದು, ತನ್ನಲ್ಲೇ ತಾನು ಎಂಬಂತಾಗಿ, ಹೊರಗಿರುವ ಪರಿಸರವನ್ನು ಮರೆಯತೊಡಗುತ್ತದೆ. ವಾಸ್ತವಿಕತೆಯ ಅರಿವು ಆಗ ನಾಶವಾದಂತೆಯೇ. ತನ್ನ ಊಹಾಲೋಕದಲ್ಲಿ, ಭ್ರಮಾ ಪ್ರಪಂಚದಲ್ಲಿ ತಾನೇ ತಾನಾಗಿ ವಿಹರಿಸತೊಡಗುತ್ತಾನೆ. ಹೆಚ್ಚು ಬೆಪ್ಪು ಶಿವಲೀಲೆಗಳು ಹೀಗೆಯೇ ಅವತರಿಸುವುದು.

* * *

ಮನ ಮಥನವಾಗುವಾಗ, ಮೊಸರು ಕಡೆದು ಬೆಣ್ಣೆಯನ್ನು ತೆಗೆಯುವ ಸಾಮತಿಯನ್ನು ಬಳಸಿದ್ದೆವು. ಒಬ್ಸೆಷನಲ್ ಬೇನೆಗಳಲ್ಲಿ, ಕಡೆಯುವ ಹಗ್ಗದ,

ಒಂದು ಕಡೆಯಲ್ಲಿ ಕೆಲವು ಎಳೆಗಳು ಕಿತ್ತುಹೋಗಿರುತ್ತವೆ ಎಂದೆವು. ಅದೇ ಸಾಮತಿಯನ್ನು ಬಳಸಿಕೊಂಡು, ಮ್ಯಾನಿಕ್ ಡಿಪ್ರೆಸಿವ್ ಸೈಕೋಸಿಸ್‌ನಲ್ಲಿ, ಮೊಸರಿರುವ ಮಡಕೆಯೇ ಬಿರುಕು ಬಿಟ್ಟಿರುತ್ತದೆ ಎನ್ನಬಹುದು. ವಾಸ್ತವಿಕ ಪರಿಸ್ಥಿತಿಯ ಅರಿವು, ಮನಸ್ಸಿನ ಮಡಕೆಯಿದ್ದಂತೆ. ಅದರಲ್ಲಿರುವ ಮೊಸರು ಎಂದರೆ ಆಜನ್ಮ ಬಳುವಳಿಯಾಗಿ ಬಂದ ಅನುಭವ ಮತ್ತು ಒತ್ತಡಗಳು ಈ ಜನ್ಮದಲ್ಲಿ ಕಲಿತುಕೊಂಡದು, ಮತ್ತು ಸ್ಮರಣೆಗಳು ; ಇದನ್ನು ಮಥಿಸಿ ನಿರ್ಣಯಗಳು ಎಂಬ ಬೆಣ್ಣೆಯನ್ನು ತೆಗೆಯಬೇಕು.

ಮಡಕೆಯು ಬಿರುಕು ಬಿಟ್ಟಿರುವಂತಹ ಭಯಂಕರ ಸ್ಥಿತಿಯಲ್ಲಿ, ಇಷ್ಟರು, ನೆಂಟರು, ಬೇಕಾದವರು ಎನಿಸಿಕೊಂಡವರು ಬೆದರಿಸಿದರೆ, ಶಿಕ್ಷೆಯನ್ನು ಹೂಡಿದರೆ ಅಂಜಿದವರ ಮೇಲೆ ಕಪ್ಪೆಯನ್ನು ಎಸೆದಂತಾಗುತ್ತದೆ.

ಮಡಕೆಯ ಬಿರುಕನ್ನು ಸುಫರ್ದು ಮಾಡಬೇಕಾದರೆ, ಸಹಾನುಭೂತಿ ಮತ್ತು ಆದರಗಳು ಅತ್ಯಗತ್ಯ. ಆದರವನ್ನು ಮನೆಯವರು ತೋರಿಸಬೇಕು ; ಪ್ರದರ್ಶಿಸಬೇಕು. ರೋಗಿಗೆ ಇದು ತಿಳಿಯಿತು, ತಕ್ಕ ಪ್ರತಿಕ್ರಿಯೆಯನ್ನು ಅವ ತತ್‌ಕ್ಷಣ ಹೂಡಲೇಬೇಕು ಎಂದು ಆಸೆ ಪಡಬಾರದು. ತನ್ನವರ ಆದರದ ಪ್ರದರ್ಶನವು ರೋಗಿಯ ಮೇಲೆ ಪರಿಣಾಮವನ್ನು ಕಿಂಚಿತ್ತಾದರೂ ಬೀರಿಯೇ ಬೀರುತ್ತದೆ. ಆದರೆ ಬಿರುಕು ಸರಿಹೋಗಲು ಕಾಲಾವಧಿಯು ಬೇಕು. ತಾಳ್ಮೆಯು ಅತ್ಯಗತ್ಯ. ಹೀಗನ್ನುವುದು ವೈದ್ಯರಿಗೆ ಸುಲಭ. ರೋಗಿಯ ಮನೆಯವರು ತುಂಬಾ ಕಾತರರಾಗಿರುತ್ತಾರೆ. ರೋಗಿಯ ನಡವಳಿಕೆಯಿಂದಾಗಿ, ಬೇಸರವೂ ಬಂದಿರುತ್ತದೆ. ಬಹು ಪಾಲು ಅವರುಗಳ ನಿದ್ರೆ ಮತ್ತು ಆಹಾರಗಳಲ್ಲಿ ಖೋತಾ ಆಗಿರುತ್ತದೆ. ಅಂತಹವರಿಗೆ ತಾಳ್ಮೆಯನ್ನು ವಹಿಸುವುದು ಸುಲಭವಲ್ಲ. ಎಷ್ಟೇ ಒಲವಿನ ಮಗನಾದರೂ, ಹೀಗಿರುವ ಬದಲು ಸತ್ತರೆ ಚೆನ್ನ ಎಂದು ಉದ್ವೇಗದಿಂದ ಅನ್ನುವಂತಾಗುತ್ತದೆ. ಆದರೆ ಕೆಲವು ತಿಂಗಳುಗಳಲ್ಲಿ ಖಂಡಿತವಾಗಿಯೂ ಗುಣವಾಗುತ್ತದೆ ಎಂಬುವುದು ತಿಳಿದಿದ್ದರೆ, ಆಗ ತಾಳ್ಮೆಯನ್ನು ವಹಿಸಿ, ಸಹಾನುಭೂತಿಯನ್ನು ಮತ್ತು ಆದರವನ್ನೂ ಪ್ರದರ್ಶಿಸಲು ಸುಲಭವಾಗುತ್ತದೆ.

ಆದಕಾರಣ, ಸಮಾಜದಲ್ಲಿ ಈ ತೆರನ ಜ್ಞಾನ ಪ್ರಚಾರವು ಅತ್ಯಂತ ಆವಶ್ಯಕ.

**ಕುಮುದಳ ಡಿಪ್ರೆಷನ್**

ಇಪ್ಪತ್ತಾರು ವರ್ಷಗಳಾಗಿತ್ತು ಕುಮುದಳಿಗೆ. ಆರೇಳು ವರ್ಷಗಳ ಹಿಂದೆಯೇ ಅವಳ ವಿದ್ಯಾಭ್ಯಾಸವನ್ನು ನಿಲ್ಲಿಸಿದ್ದರು. 'ಬಿ. ಎ. ಅಂತ ಅನ್ನಿಸಿಕೊಂಡರೆ ಎಂ.ಎ.

ಆದ ಗಂಡನೇ ಸಿಗಬೇಕು. ಕೇವಲ ಪಿ. ಯು. ಸಿ. ಆಗಿದ್ದರೆ ಯಾರಾದರೂ ಮದುವೆಯನ್ನು ಮಾಡಿಕೊಳ್ಳಬಹುದು' ಎಂದು ತಾಯ್ತಂದೆಯರ ನಂಬಿಕೆ. ಆದಕಾರಣ ಆಕೆ ಮನೆಯಲ್ಲಿ ಕೂತಿದ್ದಾಳೆ. ಬೆಳೆದ ಹೆಣ್ಣು, ಹೊರಗಡೆ ತುಂಬಾ ಅಡ್ಡಾಡಬಾರದು.

ಎರಡು ವರ್ಷಗಳ ಹಿಂದೆ ಇರಬೇಕು ; ನಿದ್ರೆಯು ಸರಿಯಾಗಿ ಬರುವುದಿಲ್ಲ, ಎಂದು ಅವಳು ಹೇಳತೊಡಗಿದ್ದು. 'ಕೆಟ್ಟ ಕೆಟ್ಟ ಕತೆ ಪುಸ್ತಕಗಳನ್ನು ಸದಾ ಓದುವ ಚಾಳಿಯನ್ನು ಬಿಟ್ಟು, ಮೈಬಗ್ಗಿಸಿ ಮನೆ ಕೆಲಸವನ್ನು ಮಾಡಿದರೆ, ನಿದ್ರೆಯೂ ಬರುತ್ತೆ, ಮುಂದೆ ಗಂಡನ ಮನೆಯಲ್ಲಿ ಒಳ್ಳೆಯ ಹೆಸರನ್ನೂ ಪಡೆಯಬಹುದು ಎಂದು ಅಮ್ಮ ಅಲವತ್ತುಕೊಂಡಳು. ನಿದ್ರೆ ಬರುಲ್ಲ ಅಂತ ಆನಂತರ ಕುಮುದ ಹೇಳಲಿಲ್ಲ. ರಾತ್ರಿಯೆಲ್ಲಾ ಕಂಬಳಿಯ ಮುಸುಕು ಹಾಕಿಕೊಂಡು ಜಾಗರಣೆ ಮಾಡುತ್ತಿದ್ದಳು. ಮಧ್ಯಾಹ್ನದ ಹೊತ್ತಿನಲ್ಲಿ ಪುಸ್ತಕವನ್ನು ಹಿಡಿದು ಮೂಲೆಯಲ್ಲಿ ಕೂರಲಾರಂಭಿಸಿದಳು. ಅರ್ಧ ಗಂಟೆಯಾದರೂ ಪುಸ್ತಕದ ಹಾಳೆಯನ್ನು ಮುಂದಕ್ಕೆ ಮಗುಚುತ್ತಿರಲಿಲ್ಲ. 'ಬಟ್ಟೆಯನ್ನಾದರೂ ಒಗೆಯಬಾರದೇನೇ' ಎಂದು ಅಮ್ಮ ರೇಗಿದಾಗ, ಹುಬ್ಬು ಗಂಟಿಕ್ಕಿಕೊಂಡು ಬಟ್ಟೆ ಒಗೆಯುವುದಕ್ಕೆ ಹೋಗುತ್ತಿದ್ದಳು. ಬಟ್ಟೆಗಳಿಗೆ ಸೋಪು ಹಚ್ಚಲು ಅರ್ಧ ಗಂಟೆ ತೆಗೆದುಕೊಳ್ಳುತ್ತಿದ್ದಳು. ಇದನ್ನು ಕಂಡ ಅಮ್ಮ 'ನಿನಗೆ ಕೆಲಸ ಹೇಳುವುದೂ ಒಂದೇ, ಸೂಳೆ ಕೈಲಿ ಜೋಳ ಕುಟ್ಟಿಸುವುದೂ ಒಂದೇ ; ಬಾ ಈ ಕಡೆಗೆ ನಾನೇ ಬೇಗ ಮುಗಿಸ್ತೀನಿ, ಮುಂದೆ ಹ್ಯಾಗೆ ಬಾಳ್ತೀಯೆ ನೀನು' ಎಂದು ಸಿಡುಕುತ್ತಿದ್ದಳು. ಹಲವಾರು ಬಾರಿ ಹೀಗಾದ ಮೇಲೆ, ಒಮ್ಮೆ ಪಾತ್ರೆಗಳನ್ನು ನಿಧಾನವಾಗಿ ಕುಮುದ ಗಲಬರಿಸುತ್ತಿದ್ದಾಗ, ಅಮ್ಮ ಯಥಾ ಪ್ರಕಾರ ಟೀಕಿಸಿದಳು. ಕುಮುದ ರೇಗಿದಳು. ಕೈಲಿದ್ದ ಪಾತ್ರೆಯನ್ನು ಅಮ್ಮನ ಮುಖಕ್ಕೆ ಎಸೆದು, ತನ್ನ ಕೊಠಡಿಗೆ ಹೋಗಿ ಬಾಗಿಲು ಮುಚ್ಚಿಕೊಂಡಳು. ಅವತ್ತಿನಿಂದ ಹುಬ್ಬುಗಂಟು ಅವಳ ಮೇಲೆ ಶಾಶ್ವತವಾಯಿತು. ಸಂಜೆಯ ಹೊತ್ತಿಗೆ ಅಪ್ಪ ಮನೆಗೆ ಹಿಂದಿರುಗಿದರು. ವಿಷಯವನ್ನೆಲ್ಲಾ ಹೆಂಡತಿಯಿಂದ ತಿಳಿದುಕೊಂಡರು. ಕುಮುದನ ಕೊಠಡಿಯ ಬಳಿಗೆ ಹೋಗಿ ತುಂಬಾ ಆದರದ ಮಾತುಗಳಿಂದ ; 'ಬಾಗಿಲು ತೆಗಿ ಕುಮುದ ; ನಿಮ್ಮಮ್ಮನ ಜಾಯಮಾನ ಗೊತ್ತಿಲ್ಲವೇ ಲೊಟಕದೇ ಇದ್ದರೆ ಉಂಡನ್ನ ಅವಳಿಗೆ ಮೈ ಹತ್ತುಲ್ಲ. ಎಲ್ಲಿ ಬಾಗಿಲು ತೆಗಿ' ಎಂದರು. ಕೊಠಡಿಯ ಬಾಗಿಲನ್ನು ಕುಮುದ ತೆಗೆದಳು. ಹೋಗಿ ಮಂಚದ ಮೇಲೆ ಬಿಮ್ಮಂತ ಕೂತಳು. ಧುಮುಗುಡುತ್ತಿತ್ತು ಅವಳ ಮುಖ. ಹತ್ತು ಹದಿನೈದು ನಿಮಿಷಗಳು ಅಪ್ಪ ತುಂಬಾ ಪ್ರಯತ್ನಪಟ್ಟರು. 'ಏಳಮ್ಮಾ ! ನನ್ನ ಜತೇಲಿ ಕೂತು

ಏನಾದರೂ ತಿನ್ನುವೆಯಂತೆ, ಬೆಳೆಯುವ ಹುಡುಗಿಯರು ಹೀಗೆ ಉಪವಾಸ ಇರಬಾರದು' ಅಂತ ಇನ್ನಿಲ್ಲದ ಹಾಗೆ ಹೇಳಿದರು. ಕಲ್ಲಿನ ಪ್ರತಿಮೆಯಾದರೂ ಉತ್ತರವನ್ನು ಕೊಡುತ್ತಿತ್ತೇನೋ, ಆದರೆ ಕುಮುದ ಜಪ್ಪಯ್ಯ ಅನ್ನಲಿಲ್ಲ ; ಬೆಳಗಿನಿಂದ ದುಡಿದು ಬಂದಿದ್ದರು ತಂದೆ. ಅವರಿಗೂ ಅತಿ ಬೇಜಾರಾಯಿತು. ಮಗಳ ಕೆನ್ನೆಗೆ ಒಂದೇಟನ್ನು ಬಲವಾಗಿ ಬಿಗಿದು 'ಎಲ್ಲಾದರೂ ಹಾಳಾಗಿ ಹೋಗು' ಎಂದು ಬೈದು ತಮ್ಮ ಕೊಠಡಿಗೆ ಹೋದರು ; ಸಿಡಿಮಿಡಿ ಗುಟ್ಟುತ್ತಾ.

ದೆವ್ವ ಹಿಡಿದವಳಂತೆ ಕುಮುದ ಕೂತಲ್ಲೇ ಕೂತಿದ್ದಳು. ಅಳಲಿಲ್ಲ, ಮಾತಾಡಲಿಲ್ಲ. ಎರಡು ದಿನಗಳಾದುವು ಒಂದು ತುತ್ತು ಅನ್ನ ತಿನ್ನಿಸುವುದಕ್ಕೆ, ಅಮ್ಮನ ಸಲಹೆಯ ಮೇರೆ ಅಪ್ಪ ಹೋಗಿ ಮಂತ್ರವಾದಿಯನ್ನು ಕರೆದುಕೊಂಡು ಬಂದರು. ಘೋರವಾದ ಪೂಜೆಯನ್ನು ಉಗ್ರವಾಗಿ ಮಂತ್ರವಾದಿಯು ಹಾಕಿದ. 'ದೆವ್ವವನ್ನು ಬಿಡಿಸಿದ್ದೇನೆ. ಇದೇ ಕೇರಿಯಲ್ಲಿ ಸತ್ತಿದ್ದ ಬಾಣಂತಿಯ ದೆವ್ವ ಬಂದು ಮೆಟ್ಟಿಕೊಂಡಿತ್ತು. ಬಡಿದು ಬಿಡಿಸಿ, ತಿರುಗಿ ಬರದ ಹಾಗೆ ದಿಗ್ಬಂಧನವನ್ನು ಹಾಕಿದ್ದೀನಿ.' ಎಂದು ಹೇಳಿ ಜೋಳಿಗೆಯನ್ನು ಭರ್ತಿ ಮಾಡಿಕೊಂಡು ಅವ ಹೊರಟುಹೋದ.

ಆಮೇಲೆ ನಾಲ್ಕೈದು ದಿನ ಎಲ್ಲರ ಜತೆ ಕುಮುದ ಊಟ ಮಾಡಿದಳು. ತಿಂಡಿ ತಿಂದಳು, ಕಾಫಿ ಕುಡಿದಳು. ಆದರೆ ಒಂದು ಮಾತಿಲ್ಲ. ಒಂದು ನಗುವಿಲ್ಲ. ಬೆಪ್ಪು ಬಡಿದವಳಂತಿದ್ದಳು. ಮಾತನಾಡಿಸಲು ತಾಯ್ತಂದೆಯರಿಗೆ ಭಯ. ಏನು ಮಾತಾಡಿದರೆ ತಿರುಗಿ ಕೆರಳುತ್ತಾಳೋ ಎನ್ನುವ ಭಯ. ಎರಡು ಮೂರು ವರ್ಷಗಳಾದರೂ ಕುಮುದಳ ನಡವಳಿಕೆಯಲ್ಲಿ ಯಾವ ರೀತಿಯ ಬದಲಾವಣೆಯೂ ಆಗಲಿಲ್ಲ.

ಈ ಅವಧಿಯಲ್ಲಿ ಬೇಗ ಮದುವೆಯನ್ನು ಮಾಡಿದರೆ ಅವಳಿಗೆ ಗುಣವಾಗುತ್ತದೆ ಎಂದು ಯೋಚಿಸಿ ವರಾನ್ವೇಷಣೆಯನ್ನು ಜರೂರಾಗಿ ಮಾಡತೊಡಗಿದರು. ಆರೆಂಟು ವರಗಳೂ ಬಂದು ಹೆಣ್ಣನ್ನು ನೋಡಿಕೊಂಡು ಹೋಗಿದ್ದರು. ಬಂದವರೆದುರಿಗೆ ಕುಮುದ ಮನೆಯವರ ಮಾನವನ್ನು ತೆಗೆಯಲಿಲ್ಲ. ಆದರೆ ವಯಸ್ಸಿಗೆ ಬಂದ ಹೆಣ್ಣಿನ ಚಾಲೂಕನ್ನು ಬೀರಲಿಲ್ಲ. ವರದಕ್ಷಿಣೆಯ ಮೊತ್ತ, ಹುಡುಗಿಯ ವಯಸ್ಸು, ರೂಪು, ವಿದ್ಯೆ, ಇತ್ಯಾದಿ ಹಲವಾರು ಕಾರಣಗಳಿಂದ ಯಾವ ಗಂಡೂ ಒಪ್ಪಿಕೊಳ್ಳಲಿಲ್ಲ.

ವಿನಾಕಾರಣ ಸಿಡುಕುವುದು ಹೆಚ್ಚಾಯಿತು. ಗಂಟೆಗಳ ಕಾಲ ಕೂತಲ್ಲೇ ಕೂತು ಏನನ್ನೋ ಗಾಢವಾಗಿ ಯೋಚಿಸುತ್ತಿರುವಂತಿರುವುದು, ಹತ್ತು ಬಾರಿ

ಮಾತನಾಡಿಸಿದರೆ ಒಮ್ಮೆ ಉತ್ತರಿಸುವುದು ; ಮುಖವನ್ನೆತ್ತಿ ನೋಡುವುದನಕ ಮರೆತೇಹೋಗಿತ್ತು. ಬಗ್ಗಿಸಿದ ತಲೆಯನ್ನು ಎತ್ತುತ್ತಲಿರಲಿಲ್ಲ.

ಕೆಲವು ವಾರಗಳೂ ಎದ್ದರೆ ನಿಂತರೆ ವಿನಾಕರಣ ಬುಳುಬುಳು ಅಳುವುದಕ್ಕೆ ತೊಡಗಿದಳು. 'ಯಾಕಮ್ಮಾ ಅಳ್ತಿ' ಎಂದು ಕೇಳುವುದಕ್ಕೆ ಅಮ್ಮನಿಗೆ ಭಯ. ಇನ್ನು ಯಾವ ತರಹ ಕೆರಳುತ್ತಾಳೋ ಎಂದು. ಊಟವನ್ನು ಮಾಡುತ್ತಿದ್ದಳು ; ಆದರೆ ಇದು ಇನ್ನಷ್ಟು ಬೇಕು, ಎಂದು ಕೇಳುತ್ತಿರಲಿಲ್ಲ.

ಕಡೆಗೊಮ್ಮೆ ಕಂಕಣಬಲ ಕೂಡಿಬಂತು. ಕುಮುದಳನ್ನು ನೋಡಲು ಬಂದ ಗಂಡಿಗೆ ಮೂವತ್ತಾರು ಮುಗಿದಿತ್ತು. ಅವನೂ ಒಪ್ಪಿಕೊಂಡ. ಮದುವೆಯೂ ಆಯಿತು. ಯಥಾಪ್ರಕಾರದ ಅತ್ತೆ. ಸೌಭಾಗ್ಯವನ್ನು ಬೇಗ ಕಳೆದುಕೊಂಡು ತೌರಿಗೆ ವಾಪಸಾದ ಅತ್ತಿಗೆಯೊಬ್ಬಳು. ಇವರಿಬ್ಬರೇ ಮನೆಯ ಮಿಕ್ಕ ಮಂದಿ. ಅತ್ತೆಯ ಮನೆಯಲ್ಲಿ ಕುಮುದ ಮೂಗಿಯಂತೆಯೇ ಇದ್ದಳು. ಗಾದೆ ಹೇಳಿದಂತೆ ಮೂಗಿ ಬಸಿರಾದಳು. ಒಂಭತ್ತು ತಿಂಗಳು ಮುಗಿದ ಮೇಲೆ, ಹೆಚ್ಚು ತ್ರಾಸಿಲ್ಲದೆ ಹೆತ್ತಳು. ಹೆರಿಗೆಗಾಗಲೀ ಬಾಣಂತನಕ್ಕಾಗಲೀ ತೌರಿಗೆ ಹೋಗಲು ಅವಳು ಒಪ್ಪಲಿಲ್ಲ. ಗಂಡನಿಗೂ ಕಳಿಸಿಕೊಡಲು ಇಷ್ಟವಿರಲಿಲ್ಲ. ಹತ್ತು ದಿನಗಳನ್ನು ಆಸ್ಪತ್ರೆಯಲ್ಲಿ ಕಳೆದುಕೊಂಡು ಮನೆಗೆ ಗಂಡುಮಗುವಿನೊಡನೆ ಹಿಂತಿರುಗಿದಳು. ಮನೆಗೆ ಬಂದನಂತರ ಬಾಣಂತಿಯ ವರ್ತನೆಯು ವಿಚಿತ್ರವಾಯಿತು. ಇದ್ದಕ್ಕಿದ್ದ ಹಾಗೆ ನಗುವುದು ; ಒಮ್ಮೊಮ್ಮೆ ಅಳುವುದು ; ಕೆಲವೊಮ್ಮೆ ಅಳುತ್ತಿದ್ದ ಮಗುವನ್ನು ದಿಟ್ಟಿಸಿ ನೋಡುತ್ತಿದ್ದಳೇ ವಿನಾ, ತೊಟ್ಟಿಲಿನಿಂದ ಎತ್ತಿಕೊಂಡು ಆಡಿಸುತ್ತಿರಲಿಲ್ಲ, ಅಥವಾ ನಂಬಿಸುತ್ತಲೂ ಇರಲಿಲ್ಲ.

'ಇವಳೀಗೆಲ್ಲೋ ಬಾಣಂತಿ ಸನ್ನಿ ಬಡಿದಿದೆ ಕಣೋ, ಇವಳ ಹತ್ತಿರ ಮಗುವನ್ನು ಬಿಡುವುದು ಒಳ್ಳೆಯದಲ್ಲ. ಇದಕ್ಕೆ ಔಷಧಿಯನ್ನು ಪಟ್ಟಾಗಿ ಕೊಡಿಸೋ' ಎಂದು ಮಗನಿಗೆ ತಾಯಿ ಹೇಳಲಾರಂಭಿಸಿದಳು. ವೈದ್ಯರ ಬಳಿಗೆ ಹೋಗಿ ಮಗ ವಿಚಾರಿಸಿಕೊಂಡು ಬಂದ. ಮಾನಸಿಕ ಆಸ್ಪತ್ರೆಯಲ್ಲಿ ಕೆಲವು ದಿನ ಇರುವುದು ಒಳ್ಳೆಯದು ಎಂದು ಹೇಳಿದರು. ಆದರೆ ಆಸ್ಪತ್ರೆಗೆ ಹೋಗುವುದಕ್ಕೆ ಕುಮುದ ಒಪ್ಪಲಿಲ್ಲ.

ಒಂದು ಬೆಳಿಗ್ಗೆ ಹಾಲನ್ನು ಕೊಡಲು ಬಾಣಂತಿಯ ಬಳಿಗೆ ಅತ್ತಿಗೆ ಹೋದಳು. 'ಕುಡಿಯಮ್ಮಾ ಕುಮುದ ಬಿಸಿಯಾಗಿದೆ' ಎಂದು ಹೇಳಿ ಬಟ್ಟಲನ್ನು ನೀಡಿದಳು. ಬಟ್ಟಲನ್ನು ಕುಮುದ ಇಸುಕೊಂಡಳು. ಅತ್ತಿಗೆಯನ್ನು ದುರುದುರ ನೋಡತೊಡಗಿದಳು. ಏನು ಬಂತೋ ಆವೇಶ ! ಅತ್ತಿಗೆಯ ಎದೆಯತ್ತ, ಹಾಲಿನ

ಬಟ್ಟಲನ್ನು ಗುರಿ ಹಿಡಿದು, ಇದ್ದ ಹಾಲನ್ನೆಲ್ಲಾ ಸರ‍್ರಂತ ಎಸೆದಳು. ಅತ್ತಿಗೆಯ ಎದೆಯೆಲ್ಲಾ ಹಾಲುಮಯವಾಯಿತು. ಕುಮುದ ಗಹಗಹಿಸಿ ನಗಲಾರಂಭಿಸಿದಳು. 'ಈಗ ಅತ್ತಿಗೆ ಹಾಲು ಸುರಿಸುತ್ತಾ ಇದಾಳೆ' ಎಂದು ನಗಲಾರಂಭಿಸಿದಳು.

ಮಾರನೆಯ ದಿನ ಜುಲುಮು ಮಾಡಿ ಆಸ್ಪತ್ರೆಗೆ ಸೇರಿಸಿದರು. ಮೂರುನಾಲ್ಕು ವಾರಗಳಲ್ಲಿ ಗುಣವಾಗಿ, ಮನೆಗೆ ಹಿಂತಿರುಗಿದಳು, ಅನ್ನಿ.

ತಂದೆಯ ಮನೆಯಲ್ಲಿ ಯಾವ ಕೆಲಸವೂ ಇಲ್ಲದೆ ಬೆಳೆದ ಹೆಣ್ಣು ಕೂರುವಾಗ ಡಿಪ್ರೆಷನ್ ಆರಂಭವಾಗಿತ್ತು. ಜತೆ ವಾರಿಗೆಯವರೆಲ್ಲ ಗಂಡನ ಮನೆಗೆ ಹೋಗಿ ಮಕ್ಕಳ ತಾಯಾದುದನ್ನು ಕಂಡಿದ್ದಳು. ತನಗೆ ಆ ಭಾಗ್ಯವಿಲ್ಲವಲ್ಲ, ಎಂದು ಖಿನ್ನಳಾಗಿದ್ದಳು. ಅಂಕೆ ಶಿಕ್ಷೆಯನ್ನು ಅಮ್ಮ ಇಡ ಹೋದಾಗ, ತಳಮಳಗೊಂಡಿದ್ದ ಮನಸ್ಸು ಮುದುಡಿಕೊಂಡಿತು. ಎಂದೂ ಬರಿ ಮಾತನ್ನು ಆಡದಿದ್ದ ಅಪ್ಪ ರೇಗಿ ಕೆನ್ನೆಗೆ ಹೊಡೆದಾಗ, ಅವಳ ಮನಸ್ಸು ಇನ್ನೂ ಬಿಗಿಯಾಗಿ ಮುದುಡಿತು. ಮಂತ್ರ ವಾದಿಯ ಅಟಾಟೋಪದ ಪೂಜೆಯು ಒಂದು ತೆರನ 'Shock' ಕೊಟ್ಟಿತು. ಆ ಭಯದಿಂದ ಇದ್ದ ಭಯವು ತುಸುಕಾಲ ಕಡಿಮೆಯಾಯಿತು.

ಮದುವೆಯಾಗಿ ಗಂಡನ ಮನೆಗೆ ಹೋದಮೇಲೆ, ಡಿಪ್ರೆಷನ್ ಇದ್ದೇ ಇತ್ತು. ಹೆರಿಗೆಯಾದ ಕಾಲದಲ್ಲಿ ಸುಸ್ತಾಗಿದ್ದುದರಿಂದ, ಬಾಣಂತಿ ಸನ್ನಿ ಎನಿಸಿಕೊಳ್ಳಬಹುದಾದ ಪ್ಯೂರ್ಪರಲ್ ಮೇನಿಯಾ, ಆರಂಭವಾಯಿತು.

ಆಸ್ಪತ್ರೆಯಲ್ಲಿ, ಮೇನಿಯಾವನ್ನು ಐದಾರು ದಿನಗಳಲ್ಲಿ ವಾಸಿಪಡಿಸಿದರು. ನಂತರ ಹಿನ್ನೆಲೆಯಲ್ಲಿ ಕೆಲವು ವರ್ಷಗಳಿಂದ ಕಾಡುತ್ತಿದ್ದ ಡಿಪ್ರೆಷನ್ ಅವಸ್ಥೆಯನ್ನೂ ಪತ್ತೆ ಹಚ್ಚಿದರು. ಮೂರು ನಾಲ್ಕು ವಾರ, ಆ ಬೇನೆಗೆ ಸೂಕ್ತ ಚಿಕಿತ್ಸೆಯನ್ನು ಮಾಡಿದರು. ಮನೆಗೆ ಹಿಂದಿರುಗಿದಳು. ಈಗ ಅವಳ ನಡವಳಿಕೆಯಲ್ಲಿ ತುಂಬಾ ಬದಲಾವಣೆಯಾಗಿತ್ತು. ನಗುನಗುತ ಎಲ್ಲರಂತೆ ತಾನೇ ಮಾತಿಗೆ ಆರಂಭಿಸುವಳು. ಮಗುವಿನ ಹೊಣೆಯೆಲ್ಲಾ ಅವಳದೇನೆ ಈಗ. 'ಮಾನಸಿಕ ಆಸ್ಪತ್ರೆಗೆ ಹೋಗಿಬಂದರೆ ಇಷ್ಟು ಚೆನ್ನಾಗಿ ಗುಣವಾಗುತ್ತೇನೋ, ಮಗು, ನಿನ್ನ ಅಕ್ಕ ಕೂಡ ಕೆಲವು ದಿನಗಳಿಂದ ಸಿಡುಕುತ್ತಿದ್ದಾಳೆ, ಅವಳನ್ನೂ ಆಸ್ಪತ್ರೆಗೆ ಸೇರಿಸೋಣವೇ' ಎಂದು ಮಗನನ್ನು ತಾಯಿ ಕೇಳಿಯೇಬಿಟ್ಟಳು. 'ಕುಮುದನಿಗನಕ ಬಾಣಂತಿ ಸನ್ನಿ ಬಡಿದಿತ್ತು, ಅವಳು ಹೋಗಿ ಬಂದುದು ಸರಿ. ನನಗೇನು ಬಸಿರೇ ಬಾಣಂತನವೇ ? ನಾನ್ಯಾಕೆ ಆಸ್ಪತ್ರೆಗೆ ಹೋಗಬೇಕು' ಎಂದು ಮನೆಯ ಮಗಳು, ಅಮ್ಮ ಮತ್ತು ತಮ್ಮನ ಮೇಲೆ ಹೌಹಾರಿದಳು. ತನ್ನ ಅರಿವು ಇಲ್ಲದೆಯೇ ಆಕೆ, ಸಿಡುಕಿನ ಕಾರಣವನ್ನು ಹೊರಗೆಡವಿದ್ದಳು.

**ಬೇಜಾರು ತುಂಬಿದ ಭಾಮಾ**

'ಬೇಜಾರು ; ಏನು ಮಾಡಲಿ, ಕೆಲಸ ಬಿಡಲೇ? ಬಿಟ್ಟರೆ ಹೇಗೆ? ಆಗ ಮಾತ್ರ ಆತಂಕವೆಲ್ಲ ಮಾಯವಾಗುತ್ತದೆಯೆ? ತಲೆ ಚಿಟ್ಟು, ಬೇಜಾರು ! ನಾನು ಸದ್ಗೃಹಿಣಿ ಆಗಬಲ್ಲೆನೆ? ಅವರ ಸಂಬಳದಲ್ಲೇ ನೆಮ್ಮದಿಯಾಗಿರಬಲ್ಲೆನೆ? ಹೇಗೆ ಮಾಡುವುದು? ಮಾನಸಿಕ ತಳಮಳಕ್ಕೆ ಕಾರಣವೇನು? ಎಲ್ಲಿಗೆ ಹೋಗುವುದು? ಕುಳಿತಿದ್ದರೆ ಕುಳಿತೇ ಇರುವ ಅನ್ನಿಸುತ್ತದೆಯಲ್ಲ ! ನಿದ್ದೆ ಬಂದಹಾಗಾಗುತ್ತದೆ. ಆದರೆ ಈಗ ಮಲಗಲು ಸಾಧ್ಯವೇ? ಹಾಗೂ ಸಾಧ್ಯವಿದ್ದಾಗ ಮಲಗಿದರೆ ನಿದ್ದೆ ಬರುವುದಿಲ್ಲ. ಈ ಮಾನಸಿಕ ತಳಮಳ ನನ್ನನ್ನು ಚಿತ್ರವಧೆ ಮಾಡುತ್ತಿದೆ. ಇದಕ್ಕೆಲ್ಲಾ ನನ್ನ Weak-mind ಕಾರಣವೇ? ನಾನಷ್ಟು ಹೇಡಿಯೇ? ಎಲ್ಲಿಗೆ ಓಡಿಹೋಗಲಿ? ಮಗುವಿನ ಗತಿಯೇನು? ದೇವರೇ ಕಾಪಾಡಬೇಕು. ಗೆಲುವು ಎನ್ನುವುದು ನನ್ನ ಜೀವನದಲ್ಲಿ ಮೂಡುವುದೇ ಇಲ್ಲವೇ? ನನ್ನ ಡಾಕ್ಟರ್, ಸಲಹೆ ಕೊಡಲಾರರೇ? ನೋಡೋಣ. ತಾಳಿದವನು ಬಾಳಿಯಾನು. ಶ್ರೀನಿವಾಸ ಹಯಗ್ರೀವ ಕಾಪಾಡು. ಹೇಗೋ April ಓಡಿ ಬಂದು ಬಿಡಲಿ. ಏನಾದರೂ ಸರಿಯೇ ಕೆಲಸ ಬಿಡುವೆನು. ಅಲ್ಲಿಯ ತನಕ ಹೇಗಾದರೂ ಉತ್ಸಾಹ ಹುಟ್ಟಿಸಿಕೊಳ್ಳಬೇಕಲ್ಲ. ಡಾಕ್ಟರ್ ಏನಾದರೂ ಮಾಡಿ ನನ್ನ ಈ ಮಾನಸಿಕ ಸಾವನ್ನು ಹೋಗಲಾಡಿಸಿ. ಇಲ್ಲದಿದ್ದರೆ ಚಿರಂತನ ಸಾವಾದರೂ ಬರಲಿ. ಈ ತುಂಡು ಸಾವು ಸಾಧ್ಯವಿಲ್ಲ. ಎಲ್ಲರಿಗೂ ಬೇಜಾರು ; ನನಗೂ ಇಷ್ಟವಿಲ್ಲ. ಇದು ಬಹಳವಾಗಿ ಸೋಮಾರಿತನವೇ ಆಗಿದ್ದಲ್ಲಿ ನನ್ನನ್ನು ಇಷ್ಟು ಕಾಡುತ್ತಿರಲಿಲ್ಲ. ಈ ಒತ್ತಡ ಸಂಜೆಯ ಹೊತ್ತಿಗೆ ಕಡಿಮೆಯಾಗುತ್ತದೆ. ಆದರೆ ಬೆಳಿಗ್ಗೆ ನನ್ನ ಕೈಲಿ ತಡೆಯಲು ಸಾಧ್ಯವಿಲ್ಲ. ಈ ನಿರುತ್ಸಾಹ ನನ್ನನ್ನು ಸಂಪೂರ್ಣ ನಿತ್ರಾಣಳನ್ನಾಗಿ ಮಾಡಿಬಿಡುತ್ತಿದೆ.

ಸ್ವಲ್ಪಾನೂ ಬುದ್ಧಿ ಇಲ್ಲವೇ, ಅಷ್ಟು ಪೆದ್ದೇ? ಇಷ್ಟೆಲ್ಲಾ ಹೇಗೆ ಓದಿದೆ. ಹೇಗಾದರಾಗಲಿ ಹೇಳಿಬಿಡೋದು. ಹೋದರೆ ಹೋಯಿತು. ಚೆನ್ನಾಗಿರುವುದಿಲ್ಲ. ತಪ್ಪೇನಿಲ್ಲ. ಅದು ಇಷ್ಟಕ್ಕೆಲ್ಲಾ ಕಾರಣವೇ? ಮರೆತುಬಿಡು. ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿ ತಂದೆ ತಾಯಿಗಳ ಪ್ರೀತಿ ಅವಶ್ಯಕ. ಅವರು ತಾನೇ ಏನು ಮಾಡಲು ಸಾಧ್ಯ. ಪಾಪ ನನ್ನಂತಹ ಹೇಡಿ ಜತೆಗೆ ಹೇಗೆ ಹೆಣಗಬೇಕು?'

* * *

ಭಾಮಾ ಬರೆದು ತಂದ ಕಾಗದಗಳಿಂದ ಮೇಲೆ ಕಾಣಿಸಿರುವುದನ್ನು ಉದಹರಿಸಿದ್ದೇನೆ. ಎಂ.ಎ., ಬಿ.ಇಡಿ., ಮಾಡಿ ಕಾಲೇಜಿನಲ್ಲಿ ಅಧ್ಯಾಪಕಿಯಾಗಿದ್ದಾಳೆ.

ಮುತ್ತಿನ ಮಣಿಯಂತಹ ಇಬ್ಬರು ಮಕ್ಕಳು, ಸಭ್ಯಸ್ಥ ಗಂಡ. ದಂಪತಿಗಳಿಬ್ಬರೂ ದುಡಿದರೆ ಸಂಸಾರವನ್ನು ಸುಖವಾಗಿ ನಿಭಾಯಿಸಬಹುದು. ಆದಕಾರಣ ಇಬ್ಬರೂ ದುಡಿಯುತ್ತಿದ್ದರು.

ಕಳೆದ ಒಂದೆರಡು ವರ್ಷಗಳಿಂದ ಎಂತದ್ದೋ ಬೇಜಾರು, ಯಾವುದೋ ಭಯಂಕರ ನಿರುತ್ಸಾಹ ಅವಳನ್ನು ಮುತ್ತಿಕೊಂಡಿತ್ತು. ವಾರವಾರಕ್ಕೆ ಹೆಚ್ಚುತ್ತ ಹೋಯಿತು. ಕಲ್ಲುಗುಂಡಿನ ಹಾಗಿದ್ದೀನಿ, ನನಗೆ ಏನು ಆಗುತ್ತೆ ಎಂದರೆ ನಾಚಿಕೆಗೇಡು ಅಂತ ತನ್ನ ತಳಮಳವನ್ನು ಇತರರಿಗೆ ಅಂದರೆ ಗಂಡನಿಗೂ ಕೂಡ ತಿಳಿಸಲಿಲ್ಲ. ಆದರೆ ಈಗ ಕೆಲವು ವಾರಗಳಿಂದ ಕೆಲಸಕ್ಕೆ ರಾಜೀನಾಮೆ ಕೊಡಬೇಕು, ಪಾಠ ಕಲಿಸಲು ಸಾಧ್ಯವೇ ಇಲ್ಲ, ಎನ್ನುವ ತೀವ್ರ ಸ್ಥಿತಿಗೆ ಇಳಿದಿದ್ದಳು. ತಿಂಗಳಿಗೆ ಬರುತ್ತಿದ್ದ ನಾಲ್ಕುನೂರು ಚಿಲ್ಲರೆ ವರಮಾನವನ್ನು ಕಳೆದುಕೊಂಡರೆ ಸಂಸಾರವನ್ನು ನಡೆಸುವುದು ಹೇಗೆ ಎನ್ನುವ ವ್ಯವಹಾರಿಕ ಅರಿವು ಸ್ಪಷ್ಟವಾಗಿಯೇ ಇತ್ತು. ಚಾಕರಿಗೆ ರಾಜೀನಾಮೆ ಕೊಡುತ್ತೇನೆ ಎಂದು ಗಂಡನಿಗೆ ಒಮ್ಮೆ ಹೇಳಿದಳು. 'ಸುಸ್ತಾಗಿದ್ದರೆ ಎರಡು ದಿನ ರಜ ತೆಗೆದುಕೋ, ಅಥವಾ ಡಾಕ್ಟರ ಬಳಿಗೆ ಹೋಗಿ ಮದ್ದು ತೆಗೆದುಕೋ, ರಾಜೀನಾಮೆಯನ್ನು ಕೊಡುವಂತಹುದು ಏನಾಗಿದೆ' ಎಂದು ಅವ ಅಭಿಪ್ರಾಯ ಕೊಟ್ಟಿದ್ದ. ನ್ಯಾಯವೇ ಅನ್ನಿಸಿತು, ಭಾಮಾಳಿಗೆ. ಪರೀಕ್ಷೆಗಳ ಸಮಯ, ರಜ ತೆಗೆದುಕೊಳ್ಳುವಂತಿಲ್ಲ. ಆದಕಾರಣ ಡಾಕ್ಟರ ಸಲಹೆಯನ್ನು ಪಡೆಯಹೋಗಿದ್ದಳು.

ತುಂಬಾ ಕಾತರ ತುಂಬಿದ ಮುಖ. ಕೆಟ್ಟ ಕನಸನ್ನು ಕಂಡು ಎದ್ದವರ ಹಾಗೆ ಬೆದರಿದ್ದಳು. ಹೇಳಿದ್ದನ್ನೇ ಹೇಳುತ್ತಿದ್ದಳು. ಒಂದು ಪಂಕ್ತಿಯನ್ನೂ ಪೂರ್ಣ ಮಾಡಿ ಮುಗಿಸುತ್ತಿರಲಿಲ್ಲ. ಅರ್ಧ ಹೇಳಿದ ಕೂಡಲೇ ಬೇರೆ ಇನ್ನಾವುದನ್ನೋ ಹೇಳಲಾರಂಭಿಸುತ್ತಿದ್ದಳು. 'ನಿನಗಾಗುವುದನ್ನೆಲ್ಲಾ ವಿವರವಾಗಿ ಬರೆದುಕೊಂಡು ಬಾಮ್ಮಾ ಅದನ್ನು ಓದಿದ ಮೇಲೆ ಅಗತ್ಯವಾದ ಪರೀಕ್ಷೆಗಳನ್ನು ಮಾಡಿದರಾಯಿತು' ಎಂದರು, ಡಾಕ್ಟರು. ಮೂರು ನಾಲ್ಕು ಹಾಳೆಗಳನ್ನು ಬರೆದು ತುಂಬಿ ಭಾಮಾ ತಂದಳು. ಅವುಗಳಿಂದಲೇ ಮೊದಲ ಪ್ಯಾರಾವನ್ನು ಸಂಗ್ರಹಿಸಲಾಗಿದೆ.

ಭಾಮಾಗೆ ಡಿಪ್ರೆಷನ್ ಪ್ರಾರಂಭವಾಗಿತ್ತು. ನಿಖರವಾಗಿ ಈ ಕಾರಣಗಳಿಂದ ಅಥವಾ ಸಂಭವಿಸಿದ ಘಟನೆಗಳಿಂದ, ಅವಳಿಗೆ ಈ ಸ್ಥಿತಿಯು ಒದಗಿತು ಎಂದು ಹೇಳಬರುವಂತಿರಲಿಲ್ಲ. ಮಧ್ಯಮ ವರ್ಗದ ಸಾಮಾನ್ಯ ಸಂಸಾರ. ಮೂವತ್ತೈದು ಮೂವತ್ತಾರರ ಹೆಂಗಸು. ಲೋಕಾನುಭವವಿದ್ದ ಜಾಣಹೆಂಗಸು.

ಯಾವುದೋ ಒಂದು ತಪ್ಪು ಮಾಡಿದ್ದೇನೆ ಎನ್ನುವ ಅಪರಾಧ ಮನೋ

ಭಾವವು ಇದೆ ಎಂಬುದು ಕಾಗದದ ಒಕ್ಕಣೆಯಿಂದ ತಿಳಿದು ಬಂದಿತು. ಅದರಿಂದಲೇ ಈ ಡಿಪ್ರೆಷನ್ ಶುರುವಾಯಿತು ಎಂದು ಹೇಳಲು ಬರುವಂತಿಲ್ಲ. ಡಿಪ್ರೆಷನ್ ಪ್ರಾರಂಭವಾದ ಮೇಲೆ, ತಳಮಳದ ಮನಸ್ಸು ಯಾವುದಾದರೂ ಒಂದು ಕುಂಟು ನೆಪವನ್ನು ಹಿಡಿದುಕೊಂಡು, ಅದರಿಂದ ನನಗೆ ಹೀಗಾಯಿತು ಎಂದು ಆತಂಕಪಡಲು ಶುರು ಮಾಡುತ್ತದೆ. ಆದಕಾರಣ ಅಪರಾಧ ಮನೋಭಾವದ ಕಾರಣಗಳನ್ನು ಪತ್ತೆ ಹಚ್ಚಲು ವೈದ್ಯರು ತೊಡಗುವುದಿಲ್ಲ.

ಭಾಮಾಳ ಮನಸ್ಸು ಮೂಲತಃ ಭದ್ರವಾಗಿದೆ, ದೃಢವೂ ಆಗಿದೆ, ಎನ್ನುವುದು ಕಾಗದಗಳ ಸಮಂಜಸೆಯಿಂದಲೇ ವ್ಯಕ್ತವಾಗಿತ್ತು. ಮನೆಯ ದೇವರಲ್ಲಿ ತುಂಬಾ ನಂಬಿಕೆಯನ್ನು ಹೊಂದಿರುವವಳು ಎನ್ನುವುದೂ ಸ್ಪಷ್ಟವಾಗಿತ್ತು. ಆಕೆಯ ಡಿಪ್ರೆಷನ್ ಎಲ್ಲಾ ತುಂಬಾ ಲಘುವಾದುದು ; ಬೇರೂರಿ ಬೆಳೆದಿಲ್ಲ ಎನ್ನುವುದೂ ಖಚಿತವಾಗಿತ್ತು.

ಆದಕಾರಣ ಡಿಪ್ರೆಷನನ್ನು ನಿವಾರಿಸಿ, ಉತ್ಸಾಹವನ್ನು ಬರಿಸುವ ಔಷಧಿಗಳನ್ನು ಸಾಕಷ್ಟು ಪ್ರಮಾಣದಲ್ಲಿ ಬಳಸಲಾಯಿತು. ಹಲವಾರು ವಾರಗಳಿಂದ ಸರಿಯಾಗಿ ನಿದ್ರೆ ಮಾಡದೆ, ಸಾಕಷ್ಟು ಉಣ್ಣದೆ ದೇಹವು ಬಳಲಿರುತ್ತದೆ. ಆದಕಾರಣ ಜೀರ್ಣಕಾರಿಯಾದ ಔಷಧಿಗಳನ್ನು ಮತ್ತು ರಕ್ತವೃದ್ಧಿಯಾಗುವ ಮದ್ದುಗಳನ್ನು ಕೊಡಲಾಯಿತು.

ಹಾಗೂ ಮೂರು ನಾಲ್ಕು ದಿನಗಳು, ಮನಸ್ಸು ಎಂದರೇನು? ಅದರ ತಳಮಳಕ್ಕೆ ಕಾರಣಗಳ್ಯಾವುವು? ಅತಿ ಉತ್ಸಾಹವಾಗಲೀ ನಿರುತ್ಸಾಹವಾಗಲೀ ಹೇಗೆ ಉಂಟಾಗುತ್ತದೆ? ಇವನ್ನು ಯಾವ ರೀತಿಯಲ್ಲಿ ರೋಗಿಯು ನಿವಾರಿಸಿಕೊಳ್ಳಬಹುದು ; ಔಷಧಿಗಳು ಯಾವ ರೀತಿಯಲ್ಲಿ ರೋಗಿಗೆ ಸಹಾಯ ಮಾಡುತ್ತವೆ; ಇವನ್ನೆಲ್ಲಾ ಕೂಲಂಕಷವಾಗಿ ವಿವರಿಸಲಾಯಿತು. ಪ್ರೌಢ ಓದುವಿಕೆಯನ್ನು ಸಾಧಿಸಿದ್ದಾಕೆ ಹೇಳಿದುದನ್ನು ಕೇಳಿ ತಿಳಿದುಕೊಂಡಳು. ಅರ್ಥವಾಗದೆ ಇದ್ದುದನ್ನು ನಾಚಿಕೆ ಪಡದೆ ಕೇಳಿ ತಿಳಿದುಕೊಂಡಳು.

ಜತೆಗೆ, ಮನೆ ದೇವರು ಹಯಗ್ರೀವನಿಗೆ ಕಾಣಿಕೆಯನ್ನು ಕಟ್ಟಿಟ್ಟಳು ; ನಂಬಿಕೆಯಿಂದ.

ಒಂದು ವಾರದ ನಂತರ, ನಗುನಗುತ, ಮಗುವನ್ನು ಕರೆದುಕೊಂಡು ಬಂದಳು. ಶನಿಕಾಟವೆಲ್ಲಾ ಪರಿಹಾರವಾಯಿತು, ಈಗ ಎಂದಿನಂತೆ ನಿಜ ಮನುಷ್ಯಳಾಗಿದ್ದೀನಿ. ಎರಡು ಮೂರು ವರ್ಷಗಳ ಹಿಂದೆಯೇ ಚಿಕಿತ್ಸೆಗೆಂದು ಬರಬೇಕಾಗಿತ್ತು. ಔಷಧಿಗಳ ನೆರವಿಲ್ಲದೆ ಗುಣವಾಗುತ್ತಿತ್ತೇನೋ, ಆಗಲೇ ಇದನ್ನೆಲ್ಲಾ

ತಿಳಿದುಕೊಂಡಿದ್ದರೆ ? ಎಂದು ಉದ್ಗಾರ ತೆಗೆದಳು.

ಎಲ್ಲದಕ್ಕೂ ಕಾಲ ಬರಬೇಕಲ್ಲ ಎಂದು ವೇದಾಂತವನ್ನೂ ಡಾಕ್ಟರಿಗೆ ಬೋಧಿಸಿದಳು, ವಂದಿಸಿ ಹೋಗುವ ಮುನ್ನ.

ಮಧ್ಯ ವಯಸ್ಸಿನಲ್ಲಿ ಬರುವ ಲಘು ಡಿಪ್ರೆಷನ್ನಿಗೆ ಚಿಕಿತ್ಸೆಯು ಅತ್ಯಂತ ಫಲದಾಯಕವಾಗುತ್ತದೆ, ಎನ್ನುವುದು ಭಾಮಾಳ ಉದಾಹರಣೆಯಿಂದ ಎಲ್ಲರಿಗೂ ಸ್ಪಷ್ಟವಾಗಬೇಕು.

**ಮಂದ ಬುದ್ಧಿಯ ಮಾಚಯ್ಯ**

ಮೂವತ್ತರ ಪ್ರಾಯದ ಮಾಚಯ್ಯ. ಇನ್ನೂ ಒಂಟಿಯಾಗಿಯೇ ಇದ್ದ. ತಂಗಿಯ ಮದುವೆಯಾದ ಮೇಲೆ ತಾನು ಮದುವೆಯಾಗಬೇಕೆಂಬ ಇಚ್ಛೆ. ತಂದೆಗೆ ಲಕ್ವಾ ಬಡಿದು ಮೂಲೆ ಹಿಡಿಯುವಂತಾದರೆ, ತಂಗಿಯ ಮದುವೆಯ ಜವಾಬ್ದಾರಿಯು ದೊಡ್ಡ ಮಗನದೇ. ಕಂಪನಿಯೊಂದರಲ್ಲಿ ಐದು ಆರು ನೂರು ಸಂಬಳ ಬರುವ ಚಾಕರಿಯಲ್ಲಿದ್ದ. ಆರ್ಥಿಕವಾಗಿ ಶ್ರೀಮಂತನಲ್ಲದಿದ್ದರೂ ಸುಖವಾಗಿ ಉಂಡು ತಿಂದು ಇರಲು ಬೇಕಾದಷ್ಟಿತ್ತು. ಮದುವೆ, ಇತ್ಯಾದಿ ವಿಶೇಷ ಖರ್ಚಿಗೆ ಅಪ್ಪನ ಆಸ್ತಿಯು ನೆರವಾಗುತ್ತಿತ್ತು.

ಕಂಪನಿಯ ಕೆಲಸದ ಮೇಲೆ ಒಂದೆರಡು ವರ್ಷಗಳು ಅವ ಮಲೆನಾಡಿನ ಗ್ರಾಮ ಒಂದರಲ್ಲಿ ಇರಬೇಕಾಯಿತು. ಸಹೃದಯ ಸ್ನೇಹಿತರು ಅಲ್ಲಿ ಸಿಗಲಿಲ್ಲ. ಅಲ್ಲಿ ವಾಸಿಸುತ್ತಿದ್ದವರೊಂದಿಗೆ ಇವ ಜತೆಯಾಗಲು ಮನಸ್ಸಾಗಲಿಲ್ಲ. ಕಾರಣ, ಏಕಾಂಗಿಯಾಗಿಯೇ ಇರಬೇಕಾಯಿತು. ಸಂಜೆಯ ವೇಳೆಗೆ ತುಂಬಾ ಬೇಜಾರು ಬರುತ್ತಿತ್ತು. ಬೆಳಿಗ್ಗೆ ಹಗಲು, ಗ್ರಾಮಗಳಲ್ಲಿ ಸುತ್ತಬೇಕಾಗಿದ್ದುದರಿಂದ, ಕೆಲಸದ ಒತ್ತಡವೂ ಇರುತ್ತಿದ್ದುದರಿಂದ, ಹೇಗೋ ಕಾಲ ಸರಿದುಹೋಗುತ್ತಿತ್ತು. ಆದರೆ ಮುಸಾಫರಖಾನೆಗೆ ಸಂಜೆ ವೇಳೆಗೆ ಬಂದಾಗ ತುಂಬಾ ಬೇಜಾರಾಗುತ್ತಿತ್ತು ಎಂದು ಹೇಳಿದ.

ಷಹರಿನ ಕೇಂದ್ರ ಕಚೇರಿಯಲ್ಲಿ ಈಗ ಎರಡು ವರ್ಷಗಳಿಂದಲೂ ಕೆಲಸವನ್ನು ಮಾಡುತ್ತಿದ್ದಾನೆ. ಮಲೆನಾಡಿನಲ್ಲಿ ಅನುಭವಿಸುತ್ತಿದ್ದ ಬೇಸರವು ಷಹರಿನಲ್ಲಿ ನ್ಯಾಯವಾಗಿ ಮಾಯವಾಗಬೇಕು. ಆದರೆ ಹಾಗಾಗಲಿಲ್ಲ, ತಿಂಗಳಿಗೊಂದೆರಡು ಸಿನಿಮಾ ನೋಡಿದರೆ ಸಾಕಪ್ಪಾ ಎನಿಸುತ್ತಿತ್ತು. ಸ್ವಭಾವತಃ ಏಕಾಂತಪ್ರಿಯ, ಹಾಗಾಗಿ ಗಾಢಮೈತ್ರಿ ಇದ್ದ ಸ್ನೇಹಿತರು ಇಬ್ಬರೊ ಮೂವರೊ; ಅವರೂ ಅವರವರ ವ್ಯಾಪಾರ ವ್ಯವಹಾರಗಳಲ್ಲಿ ನಿರತರಾಗಿದ್ದುದರಿಂದ ಮಾಚಯ್ಯನ ವಿರಾಮದ

ವೇಳೆಗೆ ಅವರು ಸಿಗುತ್ತಿರಲಿಲ್ಲ.

ಕಳೆದ ಒಂದು ವರ್ಷದಿಂದ ಮಾಚಯ್ಯನಿಗೆ ಸ್ವಸಾಮರ್ಥ್ಯದಲ್ಲಿ ತುಂಬಾ ಅಪನಂಬಿಕೆಯುಂಟಾಗುತ್ತ ಬಂದಿತು. ಮನಸ್ಸಿನ ಮೇಲೆ ಹತೋಟಿಯು ತಪ್ಪುತ್ತಿದೆಯೇನೋ ಎಂದು ಭಯುವಾಗತೊಡಗಿತು. ಬುದ್ಧಿಯು ಮಂದವಾಗುತ್ತಿದೆಯೋ ಎನ್ನುವ ಶಂಕೆಯು ಬಲವಾಗತೊಡಗಿತು.

ಕಚೇರಿಯಲ್ಲಿದ್ದ ನಾಲ್ಕು ಜನ ವಾರಿಗೆ ಅಧಿಕಾರಿಗಳನ್ನು, ಸಾಹೇಬರು ಕರೆಸಿ 'ನಿಮ್ಮ ನಿಮ್ಮ ಶಾಖೆಯಲ್ಲಿ ಈ ರೀತಿ ಕೆಲಸ ಮಾಡಿಸಬೇಕು. ಇಷ್ಟು ಪ್ರಗತಿಯನ್ನು ತೋರಿಸಬೇಕು' ಎಂದು ಹೇಳುವರು. ನಂತರ ಕೆಲವು ಪ್ರಶ್ನೆಗಳನ್ನು ಕೇಳುವರು. ವಾರಿಗೆ ಅಧಿಕಾರಿಗಳು ಚೂಟಿಯ ಮತ್ತು ಸಮಂಜಸವಾದ ಉತ್ತರವನ್ನು ಕೊಡುತ್ತಿದ್ದರು. ಆದರೆ ಈಚೀಚೆಗೆ ಮಾಚಯ್ಯನಿಗೆ ಸಾಹೇಬರು ಹೇಳಿದುದು ಅರ್ಥವಾಗುತ್ತಿರಲಿಲ್ಲ. ಮೊದಲಿನಿಂದಲೂ ಅವನಿಗೆ ತಿಳಿದಿದ್ದ ವಿಷಯವನ್ನೇ ಸಾಹೇಬರು ಹೇಳುತ್ತಿದ್ದುದು. ಮೊದಮೊದಲು ಮಾಚಯ್ಯನೂ ಬಲು ಸುಲಭವಾಗಿ ಅರ್ಥ ಮಾಡಿಕೊಳ್ಳುತ್ತಿದ್ದ. ಆದರೆ ಈಗ ಅರ್ಥವಾಗುತ್ತಿರಲಿಲ್ಲ. ಕಿವಿಗೊಟ್ಟು, ಕಷ್ಟಪಟ್ಟುಕೊಂಡು, ಹೇಳಿದುದನ್ನು ಕೇಳಿಸಿಕೊಂಡರೂ, ತಲೆಯೇ ಓಡುತ್ತಿರಲಿಲ್ಲ, ಅರ್ಥವಾಗುತ್ತಿರಲಿಲ್ಲ. 'ಇಷ್ಟೂ ತಿಳಿಯುವುದಿಲ್ಲವೇ, ಮಾಚಯ್ಯ' ಎಂದು ಸಾಹೇಬರು ಕೆಲವು ಬಾರಿ ರೇಗಿ ಬೈದದ್ದೂ ಉಂಟು. ಹೀಗಾದಾಗಲೆಲ್ಲ ಮಾಚಯ್ಯನ ಖಿನ್ನತೆಯು ಹೆಚ್ಚಾಗುತ್ತಿತ್ತು. ಆತ್ಮವಿಶ್ವಾಸವು ಕರಗಿ ಹೋಗುತ್ತಿತ್ತು.

ಕಚೇರಿಯದೇ ಆಗಲಿ, ಸ್ನೇಹಿತರಿಗೇ ಆಗಲಿ, ಕಾಗದವನ್ನು ಬರೆಯಕೂತರೆ, ಯೋಚನೆಗಳೇನೋ ಸರಸರ ಅಂತ ಬರುತ್ತಿದ್ದುವು. ಆದರೆ ಅವನ್ನು ಕಾಗದದ ಮೇಲೆ ಇಳಿಸುವ ಮೊದಲೇ, ಒಂದು ಯೋಚನೆಯು ಮಾಯವಾಗಿ ಇನ್ನೊಂದು ಮೂಡುತ್ತಿತ್ತು. ಅದನ್ನು ಬರೆಯ ಹೋದರೆ ಅದರ ಪಾಡೂ ಹಾಗೆಯೇ. ನಾಲ್ಕೈದು ನಿಮಿಷಗಳಲ್ಲಿ ಬರೆದು ಮುಗಿಸುತ್ತಿದ್ದ ಕಾಗದಕ್ಕೆ ಈಗ ಅವ ೧೫–೨೦ ನಿಮಿಷಗಳನ್ನುತೆಗೆದುಕೊಳ್ಳುತ್ತಿದ್ದ. ಕಾಗದವನ್ನು ಮುಗಿಸಿ, ಲಕ್ಕೋಟೆಯಲ್ಲಿಟ್ಟು ಅಂಟಿಸಿ, ಸ್ಟಾಂಪು ಹಚ್ಚಿ, ಅಂಚೆಗೆ ಹಾಕಿ ಬಂದಮೇಲೆ, ಅಗತ್ಯವಾಗಿದ್ದ ಮೂರು ನಾಲ್ಕು ವಿಷಯಗಳನ್ನು ಬರೆಯಲೇ ಇಲ್ಲವಲ್ಲಾ ಎಂದು ಜ್ಞಾಪಿಸಿಕೊಂಡು, ಮರುಗುತ್ತಿದ್ದ.

ದಿಳ್ಳಿಗೆ ಜರೂರಾಗಿ ಕಳುಹಿಸಬೇಕಾದ ಕೆಲವು ಕಾಗದ ಪತ್ರಗಳನ್ನು, ಮಾಚಯ್ಯನ ವಶಕ್ಕೆ ಸಾಹೇಬರು ಕೊಟ್ಟರು. ಇವುಗಳ ಪ್ರತಿಯನ್ನು ತೆಗೆದಿಟ್ಟುಕೊಂಡು, ಮಧ್ಯಾಹ್ನ ಒಂದು ಗಂಟೆಯ ವೇಳೆಗೆ ರಿಜಿಸ್ಟರ್ಡ್ ಪೋಸ್ಟ್

ಮೂಲಕ ಕಳಿಸಬೇಕು ಎಂದು ಹೇಳಿದ್ದರು. ಜವಾಬ್ದಾರಿಯ ಇಂತಹ ಕೆಲಸವನ್ನು ಮಾಚಯ್ಯ ಹಿಂದೆ ಎಷ್ಟೋ ಬಾರಿ ಅಣಿಯಾಗಿ ಮಾಡಿದ್ದ. ಆದರೆ ಈ ಸರ್ತಿ ಏನಾಯಿತೋ? ಸಂಜೆ ನಾಲ್ಕರ ವೇಳೆಗೆ ಸಾಹೇಬರು ಬಂದು, ಅಂಚೆಗೆ ಅವನ್ನು ಕಳಿಸಿದೆಯಾ ಎಂದು ಕೇಳಿದಾಗ, ಅವು ಮಾಚಯ್ಯನ ಮೇಜು ಮೇಲೇ ಇದ್ದವು. ಎಲ್ಲರೆದುರಿಗೂ ಸಾಹೇಬರು ಮಾಚಯ್ಯನನ್ನು ಸಿಕ್ಕಾಪಟ್ಟೆ ಬೈದರು. ಮಾಚಯ್ಯನಿಗೆ ತುಂಬಾ ಅವಮಾನವಾಗಿತ್ತು ; ಮುಖ ಇಳಿದುಹೋಯಿತು ; ಯಾಕೆ ಹೀಗೆ ಮಾಡಿದೆ, ಏಕೆ ಮರತೆ ಎನ್ನುವುದು ಅವನಿಗೆ ತಿಳಿದಿದ್ದರೆ, ಸಮಂಜಸವಾದ ನೆಪವನ್ನಾದರೂ ಹೂಡುತ್ತಿದ್ದ. ಈಗ ಮಂಕು ಹಿಡಿದವನಂತೆ ಸಾಹೇಬರೆದುರು ನಿಂತಿದ್ದ. ಬಾಯಿ ತೆರೆಯಲೇ ಇಲ್ಲ.

ಅಂದು ಮನೆಗೆ ಹಿಂತಿರುಗಿದಾಗ, ಕೆಲಸದಿಂದ ನನ್ನನ್ನು ತೆಗೆದುಹಾಕಬಹುದು ಎಂದು ಖಿನ್ನನಾಗಿದ್ದ.

ಮನೆಗೆ ಬಂದು ಕೊಠಡಿಯಲ್ಲಿ ಒಬ್ಬನೇ ಕುಳಿತಾಗ, ಬಿಕ್ಕಿಬಿಕ್ಕಿ ಅಳತೊಡಗಿದ. ಅಳುವನ್ನು ತಡೆದುಕೊಳ್ಳಲು ಎಷ್ಟೆಷ್ಟೋ ಪ್ರಯತ್ನಪಟ್ಟಿದ್ದ. ಆದರೆ ಅಳುವು ಉಕ್ಕುತ್ತಲೇ ಇತ್ತು. ಎಂಟು ಹತ್ತು ನಿಮಿಷಗಳಾದ ಮೇಲೆ, ಸ್ನೇಹಿತನು ಬಂದು ಬಾಗಿಲು ತಟ್ಟಿದಾಗ, ಅಳುವು ನಿಂತಿತು. ಎದ್ದುಹೋಗಿ ಬಾಗಿಲನ್ನು ತೆಗೆದ. ಕೆಂಪೇರಿದ್ದ ಹಾಗೂ ದುಗುಡದಿಂದ ಮುದುಡಿದ್ದ ಇವನ ಮುಖವನ್ನು ಕಂಡು, 'ಏನಾಯ್ತೊ, ಮಾಚಯ್ಯ, ನಿನಗೆ' ಎಂದು ಸ್ನೇಹಿತನು ಕೇಳಿದ. ಒಳಗೆ ಬಂದು ಸ್ನೇಹಿತನೊಂದಿಗೆ ಕೂರುವ ವೇಳೆಗೆ ತಿರುಗಿ ಬುಳುಬುಳು ಅಳಲಾರಂಭಿಸಿದ. ಸುಮಾರು ಅರ್ಧ ಗಂಟೆಯಾದನಂತರ, ಸ್ನೇಹಿತನಿಗೆ ಮಾಚಯ್ಯನ ತಾಪತ್ರಯದ ವಿವರಗಳು ತಿಳಿದುವು. 'ಹೆಗಲ ಮೇಲೆ ಕೋವಿ ಹಾಕಿಕೊಂಡು ಕಾಡಿನಲ್ಲಿ ಒಬ್ಬನೇ ಹುಲಿ ಷಿಕಾರಿಗೆ ಹೋಗುವ ಗಂಡು ನೀನು; ಇದಕ್ಕೆಲ್ಲಾ ಅಳಬೇಕೇನೋ? ಅಲ್ಪ ಸ್ವಲ್ಪ Nervous Breakdown ಆಗಿರಬೇಕು. ನಾಳೆ ಬೆಳಿಗ್ಗೆ ನನ್ನ ಜತೆಯಲ್ಲಿ ಬಾ. ಡಾಕ್ಟರ ಸಲಹೆ ಪಡೆಯೋಣ' ಎಂದು ಸ್ನೇಹಿತ ಹೇಳಿದ. ಅವನನ್ನು ಬೀಳ್ಕೊಡುವ ವೇಳೆಗೆ ಮಾಚಯ್ಯ ಸ್ವಲ್ಪ ಸಮಾಧಾನದಿಂದಿದ್ದ.

ಮಾರನೆಯ ದಿನ ಮನೋವೈದ್ಯರ ಬಳಿಗೆ ಮಾಚಯ್ಯನನ್ನು ಸ್ನೇಹಿತ ಕರೆದುಕೊಂಡು ಹೋದ. ಅಳುವನ್ನೂ ದುಗುಡವನ್ನೂ ಮಾಚಯ್ಯನಲ್ಲಿ ಕಂಡಮೇಲೆ, ಈ ವಿಷಯಗಳನ್ನು ತಕ್ಕಮಟ್ಟಿಗೆ ತಿಳಿದುಕೊಂಡಿದ್ದ ಸ್ನೇಹಿತ, ಮನೋವೈದ್ಯರಲ್ಲಿಗೆ ಹೋಗುವುದು ಸೂಕ್ತ ಎಂದು ನಿರ್ಧರಿಸಿದ್ದ.

ಮನೋವೈದ್ಯರು ಪರೀಕ್ಷಿಸಿದ ನಂತರ ಹೇಳಿದರು :

'ಒಂಟಿಯಾಗಿ ಕೆಲವು ತಿಂಗಳುಗಳು ಇದ್ದಾಗಲೇ ನಿಮಗೆ ಲಘು ಡಿಪ್ರೆಷನ್ ಪ್ರಾರಂಭವಾಗಿತ್ತು. ನಿಮ್ಮ ತಾಯಿಯವರಿಗೆ ಆಗಿಂದಾಗ್ಗೆ ಭೂತದ ಕಾಟ ಬಡಿಯುತ್ತಿತ್ತು ಎಂದಿರಿ. ಪ್ರಾಯಶಃ ಮನಃಸ್ವಾಸ್ಥವು ಆಗಾಗ್ಗೆ ಕೆಡುತ್ತಿದ್ದಿರಬೇಕು. ಅಂತಹುವನ್ನು ಭೂತಚೇಷ್ಟೆ ಎಂದು ಹಿಂದಿನ ಕಾಲದವರು ಹೇಳುತ್ತಿದ್ದರು. ಡಿಪ್ರೆಷನ್ ಶುರುವಾದಾಗ, ಮನಸ್ಸು ವಿಹ್ವಲವಾಗುತ್ತದೆ. ಸ್ಮರಣಶಕ್ತಿಯು ಅಸ್ತವ್ಯಸ್ತವಾಗುತ್ತದೆ. ಒಂದೊಂದು ಬಾರಿ ತಪ್ಪು ಮಾಡಿದಾಗಲೂ, ಮುಂದೇನಪ್ಪ ಗತಿ ಎನ್ನುವ ಭಯವು ಹೆಚ್ಚಾಗುತ್ತ ಹೋಗುತ್ತದೆ. ಭಯದಿಂದ ಆತಂಕ ; ಆತಂಕದಿಂದ ಭಯ ; ಎರಡೂ ಕೂಡಿಕೊಂಡು ನಿರುತ್ಸಾಹವು ಬೆಳೆಯುತ್ತದೆ. ಎಲ್ಲರೆದುರಿಗೂ ಅವಮಾನವಾದರೆ ನಿರುತ್ಸಾಹ, ಮತ್ತು ಆತಂಕಗಳು ಅತಿಯಾಗುತ್ತವೆ.

ಆದರೆ ನಿಮ್ಮಲ್ಲಿ ಡಿಪ್ರೆಷನ್ ಬಹಳ ಲಘುಸ್ವರೂಪದ್ದು. ಖಂಡಿತವಾಗಿ ಇದನ್ನು ಕೆಲವು ವಾರಗಳಲ್ಲಿ ಗುಣಪಡಿಸಬಹುದು. 'ಇವತ್ತಿನಿಂದಲೇ ಚಿಕಿತ್ಸೆಯನ್ನು ಆರಂಭಿಸೋಣ' ಎಂದು.

'ಕೆಲಸಕ್ಕೆ ರಜ ತೆಗೆದುಕೊಂಡು, ಚಿಕಿತ್ಸೆ ಮಾಡಿಸಿಕೊಂಡರೆ ಒಳ್ಳೆಯದಲ್ಲವೆ?' ಎಂದು ಸ್ನೇಹಿತ ಕೇಳಿದ.

'ಒಬ್ಬರೇ ಮನೆಯಲ್ಲಿರುವುದಕ್ಕಿಂತ, ಕೆಲಸದ ಮೇಲಿರುವುದು ವಾಸಿ, ಅಥವಾ ಊರಿಗೆ ಹೋಗಿ ಎಲ್ಲರ ಜತೆಯಲ್ಲೂ ಮನೆಯಲ್ಲಿದ್ದುಕೊಂಡು ಚಿಕಿತ್ಸೆಯನ್ನು ಮಾಡಿಸಿಕೊಳ್ಳುತ್ತೇನೆ ಎನ್ನುವುದಾದರೆ ಹಾಗೂ ಮಾಡಬಹುದು. ಮಾಡಬೇಕಾದುದನ್ನು ವಿಶದವಾಗಿ ಬರೆದುಕೊಡುತ್ತೇನೆ' ಎಂದರು ವೈದ್ಯರು.

'ನಮ್ಮನೆ ಇರುವುದು ಹಳ್ಳಿಯೊಂದರಲ್ಲಿ. ವೈದ್ಯರ ನೆರವಿಗೆ ಆರು ಮೈಲಿ ಹೋಗಬೇಕು. ಈ ಅವಸ್ಥೆಯಲ್ಲಿ ನಾನಿರುವುದನ್ನು, ನಮ್ಮನೆಯವರು ನೋಡುವುದು ಬೇಡ. ಇಲ್ಲೇ ಇದ್ದು ಕೆಲಸಕ್ಕೆ ಹೋಗುತ್ತಾ ಚಿಕಿತ್ಸೆಯನ್ನು ಪಡೆಯುತ್ತೇನೆ' ಎಂದು ಮಾಚಯ್ಯ ಹೇಳಿದ.

ಒಂದು ವಾರದೊಳಗೆ ಮಾಚಯ್ಯ ಗೆಲುಮುಖನಾದ. 'ಮುಕ್ಕಾಲುಪಾಲು ನನ್ನ ತಳಮಳವೆಲ್ಲಾ ಹೋಯಿತು, ಸಾರ್ ! ಈಗ ಅಷ್ಟಾಗಿ ಮರೆಯುವುದಿಲ್ಲ. ಆತಂಕವೂ ಮನಸ್ಸಿನಲ್ಲಿಲ್ಲ, ಕೆಲಸ ಮಾಡುವಾಗ ಇತ್ತೀಚೆಗೆ ಇದ್ದ, 'ಯಾವ ತಪ್ಪು ಮಾಡಿಬಿಡುತ್ತೇನೋ ಎನ್ನುವ ಭಯವೂ ಮುತ್ತುವುದಿಲ್ಲ. ಹಸಿವೂ ಸರಿಯಾಗಿ ಆಗುತ್ತಿದೆ. ನಿದ್ರೆಯೂ ಬರುತ್ತಿದೆ' ಎಂದು ವರದಿ ಒಪ್ಪಿಸಿದ.

ಡಿಪ್ರೆಷನ್ ಅವಸ್ಥೆಯಲ್ಲಿ ಚಿಹ್ನೆಗಳು ಘೋರವಾಗಿ ಕಂಡರೂ, ಬಲು ಬೇಗ ಸೂಕ್ತ ಚಿಕಿತ್ಸೆಯಿಂದ ಗುಣವಾಗುತ್ತದೆ ಎಂಬುದು ತಿಳಿದಿದ್ದರೆ, ಇವೆಲ್ಲಾ ಲಘು ಡಿಪ್ರೆಷನ್‌ನಲ್ಲಿ ಕಾಣಬರುತ್ತವೆ ಎಂದು ತಿಳಿದಿದ್ದರೆ, ಭವಿಷ್ಯದ ಭಯವೂ ಕಡಿಮೆಯಾಗುತ್ತದೆ. ಆತಂಕವು ಕರಗುತ್ತದೆ. ಡಿಪ್ರೆಷನ್ನಿನ ನಿರುತ್ಸಾಹವೂ ಹೋಗಿ, ಉತ್ಸಾಹವು ಬಲುಬೇಗ ಮೂಡುವಂತಾಗುತ್ತದೆ.

* * * *

# ೬. ಸ್ಕೀಜೋಫ್ರೇನಿಯಾಗಳು

**ಸೀತುವಿನ ಸ್ಕೀಜೋ**

ಸೀತಾರಾಮ ಜಾಣ ಹುಡುಗ. ಬಾಲ್ಯದಿಂದಲೂ ಹಿರಿಯರು ಹೇಳಿದ ಹಾಗೆ ನಡೆದುಕೊಳ್ಳುತ್ತಿದ್ದ. ತುಂಬಾ ತಂಟೆ ತಕರಾರು ಮಾಡಿ, ತಾಯ್ತಂದೆಯರನ್ನು, ತುಂಟ ಮಕ್ಕಳಂತೆ ಗೋಳು ಹುಯ್ದುಕೊಳ್ಳುತ್ತಿರಲಿಲ್ಲ. ಅಂದರೆ ಪೆದ್ದು ಅಂತಲ್ಲ. ಪ್ರತಿ ಪರೀಕ್ಷೆಯಲ್ಲೂ ನೂರಕ್ಕೆ ಎಪ್ಪತ್ತು ಎಂಭತ್ತು ಮಾರ್ಕುಗಳನ್ನು ಸುಲಭವಾಗಿ ಪಡೆಯುತ್ತಿದ್ದ. ಸ್ವಲ್ಪ ಸಂಕೋಚಪ್ರವೃತ್ತಿಯಾದುದರಿಂದ, ತಾನೇ ಮೇಲು ಬಿದ್ದುಕೊಂಡು ಯಾವುದಕ್ಕೂ ತಲೆಹಾಕುತ್ತಿರಲಿಲ್ಲ. ಅಷ್ಟಾಗಿ ಹೆಚ್ಚು ಸ್ನೇಹಿತರೂ ಅವನಿಗಿರಲಿಲ್ಲ. ಜತೆ ಹುಡುಗರೊಂದಿಗೆ ಆಟಗಳನ್ನು ಆಡುತ್ತಿದ್ದ. ಆದರೆ ಅವರೊಡನೆ ಗಾಢ ಸ್ನೇಹವನ್ನಾಗಲೀ ತುಂಬಾ ಸಲಿಗೆಯನ್ನಾಗಲೀ ಬೆಳೆಸಿಕೊಳ್ಳಲಿಲ್ಲ.

ಹೈಸ್ಕೂಲಿನಲ್ಲಿ ಓದುವುದಕ್ಕೆ ಸೇರಿದಾಗ ಅವನಿಗಿನ್ನೂ ಹನ್ನೆರಡೇ ವಯಸ್ಸು. ಲೈಬ್ರೆರಿಯಿಂದ ಪುಸ್ತಕಗಳನ್ನು ತಂದು ಓದುತ್ತಿದ್ದ ಹುಡುಗರಲ್ಲಿ ಸೀತುವು ಅಗ್ರಗಣ್ಯ. 'ಓದುವುದರಲ್ಲಿ ತುಂಬಾ ಆಸಕ್ತಿ ಇರುವ ಹುಡುಗ ಅಂದರೆ ನೀನಪ್ಪಾ ; ಚೆನ್ನಾಗಿ ಓದಿಕೊಂಡು ಯಶಸ್ವಿಯಾಗು' ಎಂದು ಲೈಬ್ರೇರಿಯನ್ ಅವನನ್ನು ಹೊಗಳಿದ್ದರು. ಆದರೆ ಒಂದು ವಿಚಿತ್ರ ಸ್ವಭಾವವು ಎದ್ದು ಕಾಣುತ್ತಿತ್ತು. ಕ್ಲಾಸಿನ ಹುಡುಗರೆಲ್ಲ ಬಿಳಿಯದು ಅಥವಾ ಕಪ್ಪು ಬಣ್ಣದ ಟೋಪಿಯನ್ನು ಹಾಕಿಕೊಳ್ಳುತ್ತಿದ್ದರು. ಇವ ಹಳದಿ ಟೋಪಿಯನ್ನು ಹೊಲಿಸಿ ಹಾಕಿಕೊಂಡಿದ್ದ. ಜತೆ ಹುಡುಗರು ಎಷ್ಟು ಗೇಲಿ ಎಬ್ಬಿಸಿದರೂ ಸೀತು ತೆಪ್ಪಗಿರುತ್ತಿದ್ದ. ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಓದುವ ವರ್ಷದ ಮೊದಲಲ್ಲಿ ಕೈಗಡಿಯಾರವನ್ನು ತಂದೆ ತಂದುಕೊಟ್ಟರು. 'ಇದು ಬೇಡ, ಅಪ್ಪಾ ! ಜೇಬು ಗಡಿಯಾರವನ್ನು ತಂದರೆ ತುಂಬಾ ಚೆನ್ನ' ಎಂದು ಹೇಳಿ, ಹಠ ಹಿಡಿದು ಜೇಬು ಗಡಿಯಾರವನ್ನು ತರಿಸಿಕೊಂಡ. ಹೈಸ್ಕೂಲಿನಲ್ಲೆಲ್ಲಾ ಜೇಬು ಗಡಿಯಾರವಿದ್ದವರು ಇಬ್ಬರು ; ಸಂಸ್ಕೃತದ ಮಾಸ್ತರೊಬ್ಬರು ; ನಮ್ಮ ಸೀತು ಇನ್ನೊಬ್ಬ. ಜತೆ ಹುಡುಗರ ಗೇಲಿಗೆ ಇದೂ ಒಂದು ವಸ್ತುವಾಗಿತ್ತು.

ಶಾಲೆಯಲ್ಲಿದ್ದ ಹುಡುಗರೆಲ್ಲರೂ ತಲೆಯ ಕ್ರಾಪ್ ಮಾಡಿಸಿಕೊಂಡಿದ್ದರು. ಇವ ಮಾತ್ರ ಪಿಳ್ಳುಜುಟ್ಟಿನ ಗಂಟನ್ನು ಕಟ್ಟಿಕೊಳ್ಳುತ್ತಿದ್ದ. ವೈದಿಕರ ಮನೆಯವನು

ಅಂತ ಹಾಗೆ ಮಾಡಿರಲಿಲ್ಲ. ಮನೆಯಲ್ಲಿ ಗಂಡಸರಾರೂ ಸಂಧ್ಯಾವಂದನೆಯನ್ನು ಮಾಡುತ್ತಿರಲಿಲ್ಲ. ಸ್ವಂತ ಖುಷಿಯಿಂದ ಸೀತು ಹಾಗೆ ಮಾಡಿಕೊಂಡಿದ್ದ. ಸಾಯಂಕಾಲದ ವೇಳೆಯಲ್ಲಿ ವಾಕಿಂಗ್ ಹೋದ ಅನ್ನಿ. ಒಬ್ಬನೇ ಹೋಗುತ್ತಿದ್ದ. ದೊಡ್ಡ ಮರದಡಿಯಲ್ಲಿ ಒಂಟಿಯಾಗಿ ಅರ್ಧಗಂಟೆ ಮುಕ್ಕಾಲು ಗಂಟೆ ಕೂರುತ್ತಿದ್ದ. ಹಾಗೆ ಕೂತು ಪದ್ಯ ಬರೆದ ಅಂತಲೇ ! ಉಹ್ಞೂ, ಸುಮ್ಮನೆ ಕುಳಿತಿರುತ್ತಿದ್ದ. ಯಾವ ಗಾಢವಾದ ಆಲೋಚನೆಯಿತ್ತೋ, ಭಗವಂತ ಒಬ್ಬ ಬಲ್ಲ. ಬೇಜಾರಿಲ್ಲದೆ ಸೀತು ಕೂತಿರುತ್ತಿದ್ದ.

ಇಂತಹ ವಿಚಿತ್ರ ವರ್ತನೆಗಳನ್ನು ಬಿಟ್ಟರೆ, ಮಿಕ್ಕಂತೆ, ಸೀತು ಚೂಟಿಯಾಗಿದ್ದ. ಮನೆಯವರ ಮೆಚ್ಚುಗೆಯನ್ನು ಗಳಿಸಿಕೊಂಡಿದ್ದ. ಮಾಸ್ತರಗಳಿಗೆ ಪ್ರಿಯಶಿಷ್ಯನಾಗಿದ್ದ. ಮಿತಭಾಷಿಯಾಗಿದ್ದರೂ ಸರಸಭಾಷಿ.

ಬೇರೆ ಊರಿನಲ್ಲಿ ಕಾಲೇಜು ಸೇರಬೇಕಾಯಿತು; ಎಸ್.ಎಸ್.ಎಲ್.ಸಿ. ಆದಮೇಲೆ. ಕಾಲೇಜು ಹಾಸ್ಟಲಿನಲ್ಲಿ ಸ್ಥಳವೂ ದೊರಕಿತು. ಕಾಲೇಜು ಹಾಸ್ಟಲಿನಲ್ಲಿದ್ದರೂ ಏಕಾಂಗಿಯಾಗಿರುವ ಪ್ರವೃತ್ತಿಯನ್ನು ಬದಲಾಯಿಸಲಿಲ್ಲ. ಅವನಿಗೆ ಸಿಕ್ಕ ರೂಂಮೇಟ್ ಆದರೋ ತುಂಬಾ ನಗು ಸರಸಿ. ಆದರೂ ಇವನನ್ನು ಒಲಿಸಿಕೊಳ್ಳುವುದಕ್ಕಾಗಲೀ, ಮಾತಿಗೆ ಎಳೆಯುವುದಕ್ಕಾಗಲೀ, ಅವನಿಗೆ ಸಾಧ್ಯವಾಗಲಿಲ್ಲ. ಹೀಗೆ ಅವ ಪ್ರಯತ್ನವನ್ನು ಮಾಡಿದಾಗ, ಸೀತು ಮುಖವನ್ನು ಸಿಂಡರಿಸಿ ಕೊಂಡಿದ್ದ. 'ಮುಟ್ಟಿದರೆ ಮುನೀ ಕಣೋ ನೀನು' ಎಂದು ಹೇಳೀ ರೂಂಮೇಟ್ ಅಲಕ್ಕಾದ.

ಎರಡನೆಯ ವರ್ಷದ ಬಿ.ಎ. ಅಲ್ಲಿ ಸೀತು ಓದುತ್ತಿದ್ದ. ಕ್ಲಾಸಿಗೆ ಹೋಗುವುದಕ್ಕೆ ಮುಂಚೆ, ತೆಗೆದುಕೊಂಡು ಹೋಗಬೇಕಾದ ಪುಸ್ತಕಗಳನ್ನು ಎತ್ತಿಟ್ಟುಕೊಳ್ಳುವಾಗ ತುಂಬಾ ನಿಧಾನಿಸಲು ಆರಂಭಿದ. ಇವತ್ತು ಕ್ಷೌರವನ್ನು ಮಾಡಿಕೊಳ್ಳಲೋ, ನಾಳಿನ ತನಕ ತಡೆಯುತ್ತದೆಯೋ ಎಂಬುದನ್ನು ನಿರ್ಧರಿಸಲು ಕಷ್ಟಪಡತೊಡಗಿದ. 'ಇಷ್ಟು ಸಣ್ಣ ವಿಷಯಕ್ಕೆಲ್ಲಾ ಯಾಕೆ ತೊಂಚಾವಂಚ ಪಡುತ್ತೀಯೋ' ಎಂದು ರೂಂಮೇಟ್ ಹೇಳಿದುದು ಯಾವ ಪ್ರಯೋಜನವನ್ನೂ ಮಾಡಲಿಲ್ಲ.

ಅಂತರ ವಿಶ್ವವಿದ್ಯಾಲಯಗಳ ಟೆನ್ನಿಸ್ ಚಾಂಪಿಯನ್‌ಷಿಪ್ಪನ್ನು ರೂಂಮೇಟ್ ಗಳಿಸಿದ. ಕಾಲೇಜಿನ ವಿದ್ಯಾರ್ಥಿಗಳು ಅದೆಷ್ಟೋ ಸಂಭ್ರಮಪಟ್ಟರು. ಹಾಸ್ಟಲಿನ ವಿದ್ಯಾರ್ಥಿಗಳನಕ ಕುಣಿದು ಕುಪ್ಪಳಿಸಿ ಹಬ್ಬ ಮಾಡಿದರು. ಆದರೆ ಸ್ವಂತ ರೂಂಮೇಟ್ ಆಗಿದ್ದ ಸೀತು ಯಾವ ಸಡಗರವನ್ನಾಗಲೀ, ಸಂತೋಷವನ್ನಾಗಲೀ ವ್ಯಕ್ತಪಡಿಸಲಿಲ್ಲ. ನಿರ್ಲಿಪ್ತನಂತೆ ನಡೆದುಕೊಂಡ.

ಮೇಜಿನ ಮೇಲೆ ಪುಸ್ತಕವನ್ನಿಟ್ಟುಕೊಂಡು ಓದುವುದಕ್ಕೆಂದು ಸೀತು ಕುಳಿತುಕೊಳ್ಳುತ್ತಿದ್ದ. ಆದರೆ ಅರ್ಧ ಗಂಟೆಯಾದರೂ ಹಾಳೆಯನ್ನು ಮಗುಚುತ್ತಿರಲಿಲ್ಲ. 'ಯಾಕೋ? ಓದಿದ್ದು ಅರ್ಥವಾಗಲಿಲ್ಲವೇನೋ? ಬೇಕಾದರೆ ಹೇಳಿಕೊಡ್ತೀನಿ' ಎಂದು ರೂಂಮೇಟ್ ಹೇಳಿದರೆ ; ಅವನನ್ನು ದುರುಗುಟ್ಟಿಕೊಂಡು ಸೀತು ನೋಡಿದ. ಉತ್ತರವೀಯಲಿಲ್ಲ.

'ದುರುಗುಟ್ಟಿಕೊಂಡು ಹುಚ್ಚನ ತರಹ ನೋಡ್ತಾನೆ; ಈ ಪೀಡೆಯ ಸಹವಾಸ ನನಗೇಕೆ' ಎಂದು ರೂಂಮೇಟ್ ಮಾತನಾಡಿಸುವುದನ್ನು ಬಿಟ್ಟುಬಿಟ್ಟ. ಹಾಸ್ಟಲಿನ ಇತರ ಹುಡುಗರ ಹತ್ತಿರ ಇದನ್ನೆಲ್ಲಾ ಅವ ಹೇಳಿದ. ರೂಂ ಬದಲಾಯಿಸಿಕೊಂಡು ಬಿಡೋ, ಅವಕಾಶ ದೊರೆತಾಗ ಎಂದು ಸ್ನೇಹಿತರು ಹೇಳಿದರೇ ಹೊರತು, ಸೀತುವನ್ನು ವಿಚಾರಿಸಲು ಯಾರೂ ಮುಂದಾಗಲಿಲ್ಲ.

ಪರೀಕ್ಷೆಯು ಆರಂಭವಾಯಿತು. ಪರೀಕ್ಷೆ ಎಂದರೆ ವಿದ್ಯಾರ್ಥಿಗಳಿಗೆಲ್ಲ ಆತಂಕವು ಇದ್ದೇ ಇರುತ್ತದೆ. ಆದರೆ ಸೀತುವಿಗೆ ಆತಂಕವಿದ್ದಂತೆ ಕಾಣಲೇ ಇಲ್ಲ. ಎಲ್ಲರಂತೆಯೇ ಪರೀಕ್ಷೆಗೆ ಹೋಗಿ ಕೂರುತ್ತಿದ್ದ. ಮೂರು ತಾಸುಗಳ ಕಾಲ ಕೂತಿರುತ್ತಿದ್ದ. ನಂತರ ಎಲ್ಲರಂತೆಯೇ ಎದ್ದುಬರುತ್ತಿದ್ದ. ಆದರೆ ಉತ್ತರವನ್ನು ಒಂದು ಹಾಳೆಯಷ್ಟಾದರೂ ಬರೆದಿರುತ್ತಿರಲಿಲ್ಲ. ಪರೀಕ್ಷೆಯಲ್ಲಿ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಮಾಸ್ತರು, 'ಯಾಕಪ್ಪಾ ! ಸೀತಾರಾಮ ! ಓದುತ್ತಿಲ್ಲವೇ ಖಾಲಿ ಉತ್ತರದ ಪುಸ್ತಕವನ್ನು ಕೊಡುತ್ತಿದ್ದೀಯಲ್ಲಾ' ಎಂದು ಕೇಳಿದಾಗ, ಅವರ ಮುಖವನ್ನು ನೋಡುತ್ತಾ, ಯಾವ ರಾಗಭಾವಗಳನ್ನೂ ಕಾಣಿಸದೆ, ಪ್ರತ್ಯುತ್ತರವನ್ನೂ ಕೊಡದೆ ಹೊರಟು ಹೋಗಿದ್ದ. 'ಇವನಿಗೇನೋ ಆಗಿದೆ ; ತಲೆ ಕೆಟ್ಟಿರಬಹುದು; ಅಥವಾ ದುರ್ವ್ಯಸನಗಳು ಅಧಿಕವಾಗಿರಬಹುದು' ಎಂದು ಮಾಸ್ತರು ಅಂದುಕೊಂಡರೇ ವಿನಹಾ ಮತ್ತೆ ಯಾವ ಗಮನವನ್ನೂ ಕೊಡಲಿಲ್ಲ.

ಬೇಸಿಗೆ ರಜಕ್ಕೆ ಮನೆಗೆ ಹಿಂದಿರುಗಿದಾಗ, ಸೀತುವಿನಲ್ಲಿ ಆಗಿದ್ದ ಬದಲಾವಣೆಯನ್ನು ತಾಯ್ತಂದೆಯರು ಗಮನಿಸಿದರು. ತಮ್ಮತಮ್ಮಲ್ಲೇ ಮಾತನಾಡಿಕೊಂಡರು. 'ತುಂಬಾ ಓದಿ ದಣಿದಿದ್ದಾನೆ. ಹಾಸ್ಟಲಿನಲ್ಲಿ ಸರಿಯಾದ ಊಟ ಸಿಗುತ್ತಿತ್ತೋ ಇಲ್ಲವೋ? ಆರೈಕೆಯನ್ನು ಮಾಡಿದರೆ ಸರಿಹೋಗಬಹುದು' ಎಂದಂದುಕೊಂಡರು. ಊಟಕ್ಕೆ ಏಳಪ್ಪಾ ಅಂತ ಅಮ್ಮ ಕರೆದರೆ, ಪುಸ್ತಕ ಓದಬೇಕು; ಆಮೇಲೆ ಊಟಕ್ಕೆ ಬರ್ತೀನಿ ಎನ್ನುತ್ತಿದ್ದ. ಪುಸ್ತಕವನ್ನು ಹಿಡಿಯುತ್ತಿರಲಿಲ್ಲ, ಊಟಕ್ಕೂ ಬರುತ್ತಿರಲಿಲ್ಲ. ಯಾಕಪ್ಪಾ ಹೀಗ್ಮಾಡ್ತೀ ಎಂದು ಒಂದೆರಡು ಸರ್ತಿ ಅಮ್ಮ ಒತ್ತಿ ಕೇಳಿದಾಗ ಸಿಡುಕುತ್ತಾ ಮನೆಯಿಂದಾಚೆಗೆ ಹೋಗುತ್ತಿದ್ದ. 'ಕೆಟ್ಟ ಕೆಟ್ಟ ಸಿನಿಮಾಗಳನ್ನು

ನೋಡುತ್ತವೆ ; ಈ ಕಾಲದ ಕಾಲೇಜು ಹುಡುಗರು; ಮೀಸೆ ಬಂದ ವಯಸ್ಸು; ಏನೇನು ಕೆಟ್ಟ ಅಭ್ಯಾಸ ಮಾಡಿಕೊಂಡಿದ್ದಾನೋ? ದೇಹಾರೋಗ್ಯವನ್ನು ಕೆಟ್ಟ ಕೆಟ್ಟದಾಗಿ ಕೆಡಿಸಿಕೊಂಡಿದ್ದಾನೋ ಏನೋ' ಎಂದು ತಂದೆಯು ರೇಗಿ ನುಡಿದರು.

ಇವನ ವಿಚಿತ್ರ ವರ್ತನೆ, ಸರಿಹೋದರೆ, ಇವನ ಮದುವೆಯನ್ನು ನಂಜನ ಗೂಡಿನಲ್ಲಿ ನಂಜುಂಡೇಶ್ವರನ ಸನ್ನಿಧಿಯಲ್ಲಿ ಮಾಡುತ್ತೇವೆ, ಎಂದು ತಾಯಿ ಮುಡುಪು ಕಟ್ಟಿಟ್ಟಳು. ಇದೊಂದೇ ಮುಂಜಾಗ್ರತಾ ಹಾಗೂ ಚಿಕಿತ್ಸಾ ಕ್ರಮ, ಅವರು ಕೈಗೊಂಡುದು.

ಊರಿನ ದೊಡ್ಡರಸ್ತೆಯ ತುದಿಯಲ್ಲಿ ಎಳನೀರನ್ನು ಮಾರಲು ಒಕ್ಕಲು ಮಗ ಕುಳಿತಿದ್ದ. ಅಲ್ಲಿ ಜನರ ಓಡಾಟವು ಹೆಚ್ಚು. ಮೂರು ದಿಕ್ಕುಗಳಲ್ಲಿರುವ ಮೂರು ಊರುಗಳಿಗೆ ಹೋಗುವ ದಾರಿಗಳು ಅಲ್ಲಿಂದಲೇ ಕವಲೊಡೆಯುತ್ತಿದ್ದುವು. ಮಧ್ಯಾಹ್ನ ಹನ್ನೊಂದರ ಸಮಯ, ಅದರ ಬಳಿ ಸೀತು ನಡೆದು ಹೋಗುತ್ತಿದ್ದ. ಒಂಟಿಯಾಗಿದ್ದ. 'ಎಳನೀರು ಬೇಕಾ ಸೋಮೀ' ಎಂದು ಒಕ್ಕಲು ಮಗ ಕೇಳಿದ. 'ನನ್ನ ಯಾಕೋ ಕೇಳ್ತಿ ; ನಿನಗೇನು ಕೊಬ್ಬೋ' ಎಂದು ಸೀತು ವಿನಾಕಾರಣ ರೇಗಿದ. ಅಷ್ಟೇ ಅಲ್ಲ. ಒಕ್ಕಲು ಮಗನನ್ನು ಹೊಡೆಯಹೋದ. ಹತ್ತಿರದಲ್ಲಿ ಎಳ ನೀರನ್ನು ಕೊಚ್ಚುವ ಮಚ್ಚಿತ್ತು. ಅದನ್ನು ತೆಗೆದುಕೊಂಡು ಹೊಡೆಯಹೋದ. ಒಕ್ಕಲು ಮಗ ಸರ್ರಂತ ಮರದ ಹಿಂದಕ್ಕೆ ನುಣುಚಿಕೊಂಡ. ಸೀತು ಹೊಡೆದ ಏಟು ಮರಕ್ಕೆ ಬಿತ್ತು. ಹಾದಿಯಲ್ಲಿ ಹೋಗುತ್ತಿದ್ದ ಗಾಡಿಯವರೂ ಇತರರೂ ಅಲ್ಲಿ ಗುಂಪು ನೆರೆದರು, ಒಕ್ಕಲು ಮಗನಿಗೆ ನೆರವಾಗಿ, ಸೀತುವನ್ನು ಹಿಡಿಯಹೋದರು. ಅವನಿನ್ನೂ ಹೊಡೆದಾಡುವುದಕ್ಕೆ ಹಾತೊರೆಯುತ್ತಿದ್ದ. ಎಲ್ಲರೂ ಒಟ್ಟುಗೂಡಿ ಸೀತುವನ್ನು ಹಿಡಿದು ಕೈಕಾಲು ಕಟ್ಟಿ ಹಾಕಿದರು. ನಾಲ್ಕು ಬಿಗಿದರು. 'ಇವನಿಗೆಲ್ಲೋ ಹುಚ್ಚು ಹಿಡಿದಿದೆ. ಯಾರ ಮನೆಯವನೋ. ಇಂತಹವರನ್ನೆಲ್ಲಾ ಆಸ್ಪತ್ರೆಗೆ ಸೇರಿಸದೆ, ಹೀಗೆ ಬೇಕಾಬಿಟ್ಟಿ ಬಿಟ್ಟರೆ, ಯಾರಿಗಾದರೂ ಅಪಾಯ ಆಗೇ ಆಗುತ್ತೆ' ಎಂದು ಮಂದಿ ಮಾತನಾಡಿಕೊಂಡರು. ಈ ಗಲಾಟೆಯಲ್ಲಿ ಸೀತುವಿಗೆ ಆಗಿದ್ದ ಪೆಟ್ಟು ಮತ್ತು ಗಾಯಗಳನ್ನು ಯಾರೂ ಗಮನಿಸಲೇ ಇಲ್ಲ.

ಅದೇ ರಸ್ತೆಯಲ್ಲಿ ಆ ವೇಳೆಗೆ ಸೀತುವಿನ ತಂದೆಯು ಕಚೇರಿಗೆ ಹೋಗುತ್ತಿದ್ದರು. ಜನ ಕೂಡಿದ್ದನ್ನು ಕಂಡು ಏನಾಗಿದೆಯೋ ಎಂದು ನೋಡಲು ಅಲ್ಲಿಗೆ ಹೋದರು, ಸೀತುವನ್ನು ಕಂಡರು. ಅವನ ಅವಸ್ಥೆಯನ್ನು ಕಂಡು ಅವರ ಕರುಳು ಹಿಂಡಿದಂತಾಯಿತು. ಪರಿಚಯಸ್ಥರ ನೆರವಿನಿಂದ ರೇಗಾಡುತ್ತಿದ್ದ

ಸೀತುವನ್ನು ಹೇಗೋ ಮಾಡಿ ಮನೆಗೆ ಕರೆದು ತಂದರು. ವೈದ್ಯರಿಗೆ ಹೇಳಿ ಕಳಿಸಿದರು.

ಉಲ್ಬಣಿಸಿದ್ದ ಸೀತುವಿನ ಉದ್ರೇಕ ಸ್ಥಿತಿಯನ್ನು, ಇಳಿಸಲು, ತಾತ್ಕಾಲಿಕವಾದ ಉಪಶಮನದ ಚಿಕಿತ್ಸೆಯನ್ನು ವೈದ್ಯರು ನಡೆಸಿದರು. ನಂತರ ಮಾರನೆಯ ದಿನ ರೋಗಿಯನ್ನು ಪರೀಕ್ಷಿಸಿ 'ಅವನಿಗೆ ಮನಸ್ಸು ಪಲ್ಲಟವಾಗಿದೆ. ಮಾನಸಿಕ ಆಸ್ಪತ್ರೆಯಲ್ಲಿ ಸಲಹೆಯನ್ನೂ ಚಿಕಿತ್ಸೆಯನ್ನೂ ಪಡೆಯುವುದು ಅಗತ್ಯ, ಇಲ್ಲದೆ ಇದ್ದರೆ ಏನಾದರೂ ಆಘಾತವಾಗಬಹುದು. ತತ್‌ಕ್ಷಣ ಕರೆದುಕೊಂಡು ಹೋಗಿ' ಎಂದು ಡಾಕ್ಟರು ಒತ್ತಾಯಪೂರ್ವಕವಾಗಿ ಹೇಳಿದರು.

'ಮನೆಯ ಹಿಂದಿನ ಹುಣಿಸೆಯ ಮರದಲ್ಲಿ ಬ್ರಹ್ಮ ರಾಕ್ಷಸ ಸೇರಿಕೊಂಡಿದೆ. ಅದು ನಮ್ಮ ಸೀತುವನ್ನು ಹಿಡಿದಿದೆ. ಮಂತ್ರವಾದಿಗಳು ಈ ಪಿಶಾಚಿಯನ್ನು ಬಿಡಿಸುತ್ತಾರೆ. ನಮ್ಮ ಸೀತು ಸರಿಹೋಗುತ್ತಾನೆ, ನಮ್ಮಪ್ಪನ ಕಾಲದಿಂದ ಆ ಮರದಲ್ಲಿ ಬ್ರಹ್ಮ ರಾಕ್ಷಸ ಸೇರಿಕೊಂಡಿದೆ ಎಂದು ಎಲ್ಲರೂ ಅನ್ನುತ್ತಿದ್ದರು. ಹುಚ್ಚಾಸ್ಪತ್ರೆಗೆ ಸೇರಿಸುವುದು ಬೇಡ ಅಂದ್ರೆ, ಮನೆತನದ ಹೆಸರೇ ಕೆಟ್ಟುಹೋಗುತ್ತದೆ ಅಂದ್ರೆ'

ಎಂದು ತಾಯಿ ಇನ್ನಿಲ್ಲದ ಹಾಗೆ ಹೇಳಿ ಅತ್ತೂ ಕರೆದೂ ರಂಪ ಮಾಡಿದರು.

'ನೀನೋ? ನಿಮ್ಮಪ್ಪನ ಕಾಲದ ನಂಬಿಕೆಗಳೋ? ಹಾಳಾಗಿ ಹೋಗಲಿ. ಮಗನೇ ಕೆಟ್ಟುಹೋದಮೇಲೆ ಮನೆತನದ ಹೆಸರು ಇದ್ದರೇನು? ಹೋದರೇನು? ಕೈಲಾದುದನ್ನೆಲ್ಲಾ ಮಾಡಿ ಅವನನ್ನು ಗುಣಪಡಿಸಲೇಬೇಕು.' ಎಂದು ಹಠ ಹಿಡಿದು, ಸೀತುವನ್ನು ಮಾನಸಿಕ ರೋಗಗಳ ಆಸ್ಪತ್ರೆಗೆ, ತಂದೆ ಕರೆದುಕೊಂಡು ಹೋಗಿ ಸೇರಿಸಿದರು.

ಮಾನಸಿಕ ಆಸ್ಪತ್ರೆಯಲ್ಲಿ ಸೀತುವಿಗೆ ಸಂಬಂಧಿಸಿದಂತೆ, ತಂದೆಯಿಂದ ದೊರಕಬಹುದಾದ ವಿವರಗಳನ್ನೆಲ್ಲವನ್ನೂ ಬರೆದುಕೊಂಡರು. ಹುಟ್ಟಿದಾಗಿನಿಂದ ಸೀತುವಿನ ಆರೋಗ್ಯದ ಬಗ್ಗೆ ಮಾಹಿತಿಗಳನ್ನು ಪಡೆದು ಗುರುತು ಹಾಕಿದರು. ಮನೆಯವರ ವಿಷಯಗಳನ್ನೂ ಎಳ್ಳಂಬಳಸೆ ಪ್ರಶ್ನೆಗಳಿಂದ ತಿಳಿದುಕೊಂಡರು. ಸೀತುವಿನ ರೂಂಮೇಟಿನ ವಿಳಾಸವನ್ನು ಕಾಲೇಜಿನ ಪ್ರಿನ್ಸಿಪಾಲರ ಮೂಲಕ ಪತ್ತೆ ಹಚ್ಚಿ, ಅವನಿಂದ ದೊರೆತ ವಿವರಗಳನ್ನೂ ಪಡೆದರು. ಒಂದೆರಡು ವಾರಗಳ ಕಾಲ ಸೀತುವಿನ ಮನಃಸ್ಥಿತಿಯನ್ನು ಅತಿ ಸೂಕ್ಷ್ಮವಾಗಿ ಪರಿಶೀಲಿಸಿದರು.

ಇದನ್ನೆಲ್ಲಾ ಮಾಡುವಾಗ ಉಪಶಮನದ ಚಿಕಿತ್ಸೆಯನ್ನೂ, ಶ್ರದ್ಧೆಯಿಂದ ನಡಸುತ್ತಿದ್ದರು.

ಮಗನನ್ನು ನೋಡಲು ತಿಂಗಳೊಪ್ಪತ್ತು ಆದ ನಂತರ, ತಂದೆಯು ಆಸ್ಪತ್ರೆಗೆ ಹೋದಾಗ, ವೈದ್ಯರು ಅವರೊಂದಿಗೆ ಕೂತು ಬೇನೆಯ ಸ್ವರೂಪವನ್ನು ವಿವರಿಸಿದರು.

'ನಿಮ್ಮ ಹುಡುಗನ ಪ್ರಕೃತಿಯು ಒಂಟಿತನವನ್ನು ಬಯಸುವಂತಹುದು. ಬಾಲ್ಯದಲ್ಲಿ ಸಮವಯಸ್ಕರೊಂದಿಗೆ ನಲಿದಾಡುವ ಸ್ವಾಭಾವಿಕ ಪ್ರವೃತ್ತಿಯೂ ಅವನಲ್ಲಿ ಕಡಿಮೆಯಾಗಿತ್ತು. ಮನೆಯ ಯಜಮಾನರು, ನೀವು, ಶಿಸ್ತು ಶಿಕ್ಷೆ ಇವುಗಳಿಂದಲೇ ಹುಡುಗರು ಬೆಳೆದು ಬಾಳಲು ಸಮರ್ಥರಾಗುವುದು ಎಂದು ನಂಬಿದ್ದೀರಿ. ಮನೆಯವರೆಲ್ಲರೂ ನಿಮ್ಮನ್ನು ಕಂಡರೆ ಭಯಪಡುತ್ತಾರೆ. ಸೀತುವು ಕೂಡ ಹೆದರಿಕೆಯಿಂದಲೇ ನಿಮ್ಮನ್ನು ನೋಡುತ್ತಿದ್ದ, ಬಾಲ್ಯದಿಂದಲೂ. ನಿಮ್ಮ ಮನೆಯಾಕೆಯು ಹಳೆಯ ಕಾಲದ ಸಾಂಪ್ರದಾಯಸ್ಥರು. ಓದುಬರಹಗಳಲ್ಲಿ ಆಕೆಗೆ ಅಭ್ಯಾಸವಿಲ್ಲ. ಆಕೆಯೂ ನೀವೂ ಮಾತಿಗೆ ಮಾತು ಆಡಿ ವಿರಸವಾದಾಗ, ಸೀತುವು ಹೆದರಿ ಹೆದರಿ ಮುದುಡಿಕೊಳ್ಳುತ್ತಿದ್ದ. ಹಾಗಾದಾಗಲೆ ಅವ, ಹೆದರಿಸುವ ಹೊರ ಪರಿಸ್ಥಿತಿಯನ್ನು ಮರೆಯಲು, ತನ್ನ ಮನಸ್ಸಿನೊಳಗೆ ತಾನೇ ಕಲ್ಪಿಸಿಕೊಳ್ಳಬಹುದಾದ, ಹೆದರಿಕೆಯು ಇರದ, ಊಹಾಲೋಕದಲ್ಲಿ ಮಗ್ನನಾಗತೊಡಗುತ್ತಿದ್ದ. ಒಂಟಿತನವನ್ನು ಬಯಸುವ ಪ್ರವೃತ್ತಿಯೂ ಇತ್ತು. ಹೀಗಾಗಿ ತನ್ನ ಸೃಷ್ಟಿಯಾದ ಮನಸ್ಸಿನ ಊಹಾಪ್ರಪಂಚದಲ್ಲಿ ಹೆಚ್ಚು ಹೆಚ್ಚು ಕಾಲ ಕಳೆಯುವುದನ್ನು ರೂಢಿಮಾಡಿಕೊಂಡಿದ್ದ. ಮನಸ್ಸಿನೊಳಗಿನ ಪ್ರಪಂಚ, ಹೊರಗಿನ ಪ್ರಪಂಚ, ಹೀಗೆ ಎರಡು ಪ್ರಪಂಚಗಳಲ್ಲಿ ಅವನು ಜೀವಿಸುತ್ತಿದ್ದ. ಹೈಸ್ಕೂಲಿನಲ್ಲಿ ಓದು ಮುಗಿಸುವ ತನಕ, ಮನೆಯಲ್ಲೇ ಇದ್ದುದರಿಂದ ಕೂಡ, ಈ ಎರಡೂ ಪ್ರಪಂಚಗಳಲ್ಲಿ ಅವ ನೆಮ್ಮದಿಯಿಂದ ಇರಲು ಸಾಧ್ಯವಾಗಿತ್ತು.

ಕಾಲೇಜಿಗೆ ಸೇರಿದಾಗ, ಮನೆಯನ್ನು ಬಿಟ್ಟು, ಹಾಸ್ಟೆಲಿನಲ್ಲಿ ವಾಸಿಸಬೇಕಾಯಿತು. ಮನೆಯಲ್ಲಿದ್ದ ರಕ್ಷಣೆಯು ತಪ್ಪಿತು ; ಇನ್ನೆಲ್ಲ ಜವಾಬ್ದಾರಿಯೂ ನನ್ನದು ಎನ್ನುವುದು ಅವನ ಅನುಭವಕ್ಕೆ ಕಠಿಣವಾಗಿತ್ತು. ಜತೆಗೆ ಪೌಗಂಡ ವಯಸ್ಸು, ದೇಹದ ಅಗತ್ಯಗಳ ಆಸೆ ಆಕಾಂಕ್ಷೆಗಳು, ಅವನ ಅರಿವಿಗೆ ಕಾಣಿಸಿಕೊಳ್ಳದೆಯೇ, ಅವ್ಯಕ್ತವಾಗಿ ಒತ್ತಡವೀಯಲಾರಂಭಿಸಿದ್ದುವು. ಅಂತಹ ಅಪೇಕ್ಷೆಗಳನ್ನು, ID Compulsions ಎನ್ನುತ್ತಾರೆ. ಇವೆಲ್ಲವನ್ನೂ ಹೊರಪ್ರಪಂಚದ ಬಾಳಿನಿಂದ ಈಡೇರಿಸಿಕೊಳ್ಳಬೇಕು. ನಾಚಿಕೆ ಮತ್ತು ಸಂಕೋಚದ ಪ್ರವೃತ್ತಿಯಿದ್ದ ಸೀತುವಿಗೆ ಹೊರಪ್ರಪಂಚದಲ್ಲಿ ಮೆರೆದಾಡಲು ಸಾಧ್ಯವಿರಲಿಲ್ಲ. ಒಳಮನಸ್ಸಿನ ಊಹಾಲೋಕದಲ್ಲಿ ಅವನ್ನೆಲ್ಲಾ ಸಾಂತ್ವನಗೊಳಿಸಬೇಕಾಯಿತು. ಈ ಜಂಝಾಟದಲ್ಲಿ,

ಎರಡೂ ಪ್ರಪಂಚಗಳ ಮಧ್ಯೆ ಸಾಮರಸ್ಯವನ್ನು ಮಾಡಿಕೊಳ್ಳುವ, ಮಾನವ ಪ್ರಯತ್ನವು ಮುರಿದುಬಿತ್ತು. ಎರಡೂ ಪ್ರಪಂಚಗಳ ಮಧ್ಯೆ ಬಿರುಕು ಒಡೆಯಿತು. ಬಿರುಕು ದೊಡ್ಡದಾಯಿತು. ಒಳಪ್ರಪಂಚದಲ್ಲೇ ಅವ ಸುಖಪಡುವಂತಾದ. ಹೊರಪ್ರಪಂಚ ಮಧ್ಯೆ ಬಿರುಕು ಬಿಡುವುದನ್ನು ; ಸ್ಕೀಜೋ ಅಂದರೆ ಛಿದ್ರವಾದ; ಫ್ರೆನಿಯಾ, ಅಂದರೆ ಮನಸ್ಸು ; ಎಂದು ಮನೋವಿಜ್ಞಾನಿಗಳು ಕರೆಯುತ್ತಾರೆ. ಸ್ಕೀಜೋಫ್ರೆನಿಯಾಗಳಲ್ಲಿ ಹಲವಾರು ಮಾದರಿಗಳಿವೆ. ಇವೆಲ್ಲಾ ವಿಭಿನ್ನವಾದುವೇನೋ ಎಂದನಿಸುತ್ತದೆ. ಆದರೆ ಮೂಲತಃ ಒಂದೇ ಆದುದರಿಂದ ಆ ಹೆಸರನ್ನು ಬಳಸುತ್ತಾರೆ. ಹಾಗೂ ವಿಭಿನ್ನವಾದ ಮಾದರಿಗಳಿರುವುದರಿಂದ, ಸ್ಕೀಜೋಫ್ರೆನಿಯಾಗಳು ಎಂದು ಬಹುವಚನಗಳನ್ನು ಬಳಸುತ್ತಾರೆ.

ಈ ಬೇನೆಯು ಉಲ್ಬಣವಾಗಿ, ಸ್ಕೀಜೋಫ್ರೆನಿಯಾ ಎಂದು ಸ್ಪಷ್ಟವಾಗುವ ಮೊದಲು, ಹಲವಾರು ಮುನ್ಸೂಚನೆಗಳು, ಕೆಲವು ವರ್ಷಗಳಿಂದಲೂ ಕಾಣಬರತ್ತವೆ. ಆಗ ಅವನ್ನು ಗಮನಿಸಿ, ತಕ್ಕ ಚಿಕಿತ್ಸೆಯನ್ನು ತಾಳ್ಮೆಯಿಂದ ನಡೆಸಿದರೆ, ಬೇನೆಯು ಮೂಡುವುದನ್ನು ಯಶಸ್ವಿಯಾಗಿ ತಡೆಹಿಡಿಯಬಹುದು. ಅಂತಹ ಮುನ್ಸೂಚನೆಗಳು ಹೀಗಿವೆ :

೧. ಮೊದಮೊದಲು ಆಲೋಚಿಸುವ ರೀತಿಯಲ್ಲಿ ಕುಂದುಗಳು ಕಾಣಬರುತ್ತವೆ. ಇದನ್ನು ನೀವು ಗಮನಿಸಲು ಆಗಲಿಲ್ಲ. ಏಕೆಂದರೆ ಅವ ಸ್ವಾಭಾವಿಕವಾಗಿ ಮಿತಭಾಷಿ. ಅದರಲ್ಲೂ ನಿಮ್ಮೊಂದಿಗೆ ಧೈರ್ಯದಿಂದ, ಮನಸ್ಸು ಬಿಚ್ಚಿ ಎಂದೂ ಮಾತನಾಡಿರಲಿಲ್ಲ. ಮಾತನಾಡುವ ಪ್ರಯತ್ನವನ್ನು ಅವನೂ ಮಾಡಿರಲಿಲ್ಲ ; ನೀವೂ ಮಾಡಿರಲಿಲ್ಲ. ಮಾತನಾಡಬೇಕಾದಾಗ ಇಬ್ಬರೂ ಮುಂದಾಗಬೇಕು ; ಒಬ್ಬರಿಂದಲೇ ಸಾಧ್ಯವಿಲ್ಲ. ಮಾತನಾಡಿದ್ದಿದ್ದರೆ, ಸೀತುವಿನ ಆಲೋಚನೆಗಳು ಸಮಂಜಸವಾಗಿಲ್ಲ. ಎಲ್ಲೋ ಕುಂದು ಇದೆ ಎಂದು ತಿಳಿಯುತ್ತಿತ್ತು; ನಿಮಗೆ.

೨. ಅವನ ಭಾವನೆಗಳಲ್ಲಿ ಕುಂದು ಕಾಣಿಸಿತು. ತನ್ನ ರೂಂಮೇಟ್ ಛಾಂಪಿಯನ್ ಆದಾಗ, ಎಲ್ಲರಿಗಿಂತಲೂ ಸೀತು ಸಡಗರಪಡಬೇಕಾಗಿತ್ತು. ಆದರೆ ನಿರ್ಲಿಪ್ತನಾಗಿದ್ದ. Callous ಆಗಿದ್ದ.

ಭಾವನೆಗಳು ಎಂದರೇನು ? ನಮ್ಮವನೊಬ್ಬ ಸುಖಪಡುವಾಗ–ನಮಗೇ ಆ ಸುಖದ ಅನುಭವವಾದಂತೆ, ನಮಗೂ ಸುಖ ತಟ್ಟುತ್ತದೆ. ಆಗ ನಮ್ಮವನು ಎಂಬುದರ ನಿಜವಾದ ಅರ್ಥವು ಸ್ಪಷ್ಟವಾಗುತ್ತದೆ. 'ನಾನು' ಎಂಬುವುದು, ನನ್ನಿಂದ ಹೊರಹೊರಟು, ನಮ್ಮವನು, ಎನ್ನಿಸಿಕೊಳ್ಳುವವನನ್ನೂ ತನ್ನಲ್ಲಿ ಅಳವಡಿಸಿ

ಕೊಳ್ಳುತ್ತದೆ. 'ನಾನು' ಎನ್ನುವ ಕಲ್ಪನೆಯು ಆಗ ತುಸು ವಿಶಾಲವಾಗುತ್ತದೆ. ಈ ಪ್ರವೃತ್ತಿಯು ಬೆಳೆಯುತ್ತ ಹೋದರೆ, 'ನಾನು' ಎನ್ನುವ ಕಲ್ಪನೆಯಲ್ಲಿ ವಿಶಾಲ ಬ್ರಹ್ಮಾಂಡವೂ ಅಡಗಲು ಸಾಧ್ಯ. ಭಾವನೆಗಳ ಸಾಮರ್ಥ್ಯ ಅಷ್ಟು ಪ್ರಬಲ ; ಆಧ್ಯಾತ್ಮಿಕ. ಹೆರರ ನೋವಿಗೆ ಕರಗುವಂತಾದರೆ, ಭಾವನೆಗಳು ಔನ್ನತ್ಯದತ್ತ ಏರುತ್ತಿದೆ ಎನ್ನಬಹುದು. ಮನಸ್ಸಿನ ಹೊರ ಮತ್ತು ಒಳಪ್ರಪಂಚಗಳ ಮಧ್ಯೆ ಸುರಕ್ಷಿತವಾದ ಸೇತುವೆಯನ್ನು ಕಟ್ಟಿದರೆ. ಸಾಮರಸ್ಯವನ್ನು ಮನಸ್ಸಿನಿಂದಲೇ ಮನಸ್ಸಿನಲ್ಲಿಯೇ ಏರ್ಪಡಿಸಿದರೆ, ಆಗ ಭಾವನೆಗಳು ಪ್ರಗಲ್ಭವಾಗುತ್ತವೆ. ವಿಶಾಲವಾಗುತ್ತವೆ.

ಸೀತುವಿನ ನತದೃಷ್ಟ ಬಾಳಿನಲ್ಲಿ ಮನಸ್ಸಿನ ಹೊರ ಮತ್ತು ಒಳಪ್ರಪಂಚಗಳ ಮಧ್ಯೆ ಸೇತುವೆಯ ಬದಲು ಬಿರುಕು ಉಂಟಾಯಿತು. ಹೀಗಾಗುವುದಕ್ಕೆ ಅವನ ನತದೃಷ್ಟತನವೂ, ನಿಮ್ಮ ನತದೃಷ್ಟತನದೊಂದಿಗೆ ಕೂಡಿಕೊಂಡಿತು. ಅವನ ಭಾವನೆಗಳು 'ಅವನ' ಸುತ್ತ ಮುತ್ತಿಕೊಂಡವು ಅವ Callous to the external world ಆದ.

೩. ಮಾನಸಿಕ ಚೂಟಿತನವು ತುಸು ಮೊಂಡಾಗುತ್ತ ಬಂತು. ಯಾವ ನಿರ್ಧಾರವನ್ನು ಮಾಡಬೇಕಾದರೂ ತುಂಬಾ ಅನುಮಾನಪಡುವಂತಾಗಿದ್ದ. ಇವತ್ತು ಕ್ಷೌರ ಮಾಡಿಕೊಳ್ಳಲೋ ಎಂದುಕೊಂಡು, ಸಾಮಾನುಗಳನ್ನು ಅಣಿ ಮಾಡತೊಡಗುತ್ತಿದ್ದ ಮರುಕ್ಷಣದಲ್ಲೇ ಕ್ಷೌರದ ಅಗತ್ಯವು ಇವತ್ತು ಇಲ್ಲ ಎಂದು ತಿರುಗಿ ಅವನ್ನು ಪೆಟ್ಟಿಗೆಗೆ ಸೇರಿಸುತ್ತಿದ್ದ.

೪. ಭ್ರಮೆಯೂ ಒಂದಲ್ಲ ಒಂದು ರೀತಿಯಲ್ಲಿ ಅವನನ್ನು ಕಾಡುತ್ತಿದ್ದಿರಬೇಕು. ವಿವರವಾಗಿ ನಿಶಾಪರೀಕ್ಷೆಯನ್ನು ಮಾಡಿದಾಗ 'ಯಾರೋ ಬಂದು ನನ್ನ ಕಿವಿಯಲ್ಲಿ ಗುನುಗುತ್ತಲೇ ಇರುತ್ತಾರೆ. ಏನು ಎಂದು ಸ್ಪಷ್ಟವಾಗಿ ಹೇಳುವುದೂ ಇಲ್ಲ. ಎದುರಿಗೆ ಬರುವುದೂ ಇಲ್ಲ' ಎಂದು ಹೇಳಿದ. ಮೂರು ವರ್ಷಗಳಿಂದಲೂ ಈ ಕಾಟವನ್ನು ಅನುಭವಿಸುತ್ತಿದ್ದೇನೆ ಎಂದು ಹೇಳಿದ.

ಮೊದಮೊದಲು ಈ ಚಿಹ್ನೆಗಳನ್ನು ಗಮನಿಸಿದ್ದರೆ, ಆಗಲೇ ಸೂಕ್ತ ಚಿಕಿತ್ಸೆಯನ್ನು ಪ್ರಾರಂಭಿಸಬಹುದಾಗಿತ್ತು. ಬೇನೆಯು ಬೇರೂರಿ ಈ ಉಲ್ಬಣ ಸ್ಥಿತಿಗೆ ಏರುತ್ತಿರಲಿಲ್ಲ. ಸುಲಭವಾಗಿ ಗುಣವೂ ಆಗುತ್ತಿತ್ತು.

ತೆರದೆದೆಯಿಂದ ಮನೋವೈದ್ಯರು ರೋಗಿಯ ತಂದೆಗೆ ಎಲ್ಲ ವಿಷಯಗಳನ್ನೂ ಸ್ಪಷ್ಟಪಡಿಸಿದರು. 'ಸಂಸಾರದಲ್ಲಿನ ನಿಮ್ಮ ಮತ್ತು ನಿಮ್ಮಾಕೆಯ ನಡವಳಿಕೆಯನ್ನು ಟೀಕಿಸಿದೆ, ಅಧಿಕಪ್ರಸಂಗಿತನ ಮಾಡಿದೆ' ಎಂದು ಬೈದುಕೊಳ್ಳಬೇಡಿ.

ಎಂದು ಕ್ಷಮಾಪಣೆಯನ್ನು ಕೇಳಿಕೊಂಡರು.

ತಂದೆಯು ತುಂಬಾ ಚೂಟಿವಂತ. ಬಡತನದ ಬೇಗೆಯಲ್ಲಿ ಬಾಲ್ಯವನ್ನು ಕಳೆದಿದ್ದವ. ಹಲ್ಲು ಕಚ್ಚಿಕೊಂಡು ಸ್ವಸಾಮರ್ಥ್ಯದಿಂದ, ಹಾಗೂ ಭಗವಂತನ ಕೃಪೆಯಿಂದ, ತಾನಿದ್ದ ಪರಿಸರದಲ್ಲಿ ಗೌರವ ಸ್ಥಾನವನ್ನು ಪಡೆದುಕೊಂಡಿದ್ದ. ತನ್ನ ಮಗನ ಬೇನೆಗೆ ತನ್ನ ಕರಾಚೂರಿನ ನವಳಿಕೆಯೇ ಕಾರಣ ಎಂದು ಡಾಕ್ಟರು ಅಂದಾಗ, ಅವನ ಸ್ವಾಭಿಮಾನಕ್ಕೆ ಧಕ್ಕೆ ತಗುಲಿತು. ಅದರ ಜತೆಗೂ ಮಗನಿಗೆ ಗುಣವಾಗಬೇಕು, ಡಾಕ್ಟರಿಗೂ ನನ್ನ ಮೇಲೆ ದ್ವೇಷವೇನೂ ಇಲ್ಲ. ಅಂದಮೇಲೆ ಯಾಕೆ ನಾನು ಸಂಸಾರದಲ್ಲಿ ಹಾಗೆ ನಡೆದುಕೊಂಡೆ. ಏಕೆ ಸೀತುವಿನ ವಿಚಿತ್ರ ವರ್ತನೆಯನ್ನು ಗಮನಿಸಲಿಲ್ಲ. ಎಂಬುದನ್ನು ಹೇಳಿದರೆ, ತನ್ನ ಪ್ರತಿಷ್ಠೆಯೂ ಉಳಿಯಿತು, ಮಗನಿಗೆ ನೆರವೂ ಆಯಿತು ; ಹಾಗೂ ಜ್ಞಾನಾರ್ಜನೆಯೂ ಆದಂತಾಯಿತು, ಎಂದುಕೊಂಡ. ಆದುದರಿಂದ ತಂದೆಯು ನುಡಿದ :

'ಈಗ ಇದನ್ನೆಲ್ಲಾ ಹೇಳುತ್ತಿದ್ದಿರಿ ಡಾಕ್ಟರೇ ! ಇವೆಲ್ಲಾ ಸರಿ ! ಆದರೆ ನಾವೇನೂ ವೈದ್ಯರುಗಳಲ್ಲ. ಇವೆಲ್ಲಾ ಹೇಗೆ ತಿಳಿಯಬೇಕು ?

ಪರೀಕ್ಷೆಗಳಲ್ಲಿ ಸೀತು ತುಂಬಾ ಯಶಸ್ವಿಯಾಗಿ ಪ್ಯಾಸಾಗುತ್ತಿದ್ದ. ಮನಸ್ಸು ಪಲ್ಲಟವಾದರೆ ಓದುವುದಕ್ಕೆ ಸಾಧ್ಯವೇ ? ಮನೆಯಲ್ಲಿ ಅವನ ನಡವಳಿಕೆಯು ಲಕ್ಷಣವಾಗಿಯೇ ಇತ್ತು. ನಾವು ಹೇಳಿದುದನ್ನು ಸುಲಭವಾಗಿ ಅರ್ಥಮಾಡಿ ಕೊಳ್ಳುತ್ತಿದ್ದ, ಸೂಕ್ತವಾದ ಪ್ರತಿಕ್ರಿಯೆಯನ್ನೂ ಮಾಡುತ್ತಿದ್ದ. ಸ್ಮರಣಶಕ್ತಿಯು ಅವನಲ್ಲಿ ಚೆನ್ನಾಗಿಯೇ ಇತ್ತು. ಯಾವತ್ತೋ ನಡೆದುದನ್ನು ಅಚ್ಚುಕಟ್ಟಾಗಿ ಜ್ಞಾಪಿಸಿಕೊಳ್ಳುತ್ತಿದ್ದ. ಮನಸ್ಸು ವಿಕಲ್ಪವಾದರೆ ಇದು ಸಾಧ್ಯವೇ ಡಾಕ್ಟರೇ ! ನನ್ನೊಡನೆ ಅಪರೂಪಕ್ಕೆ ಮಾತನಾಡುತ್ತಿದ್ದ. ಒಪ್ಪಿಕೊಳ್ಳುತ್ತೇನೆ. ಆದರೆ ಮಾತನಾಡಿದಾಗಲೆಲ್ಲ ಜಾಣತನದ ಉತ್ತರಗಳನ್ನು ಸಲೀಸಾಗಿ ಕೊಡುತ್ತಿದ್ದ. ಮನಸ್ಸು ಛಿದ್ರವಾಗಿದ್ದರೆ ಹಾಗೆ ಉತ್ತರಿಸಲು ಹೇಗೆ ಸಾಧ್ಯ ? ಕಳೆದ ಸರ್ತಿ ಬೇಸಿಗೆ ರಜಕ್ಕೆಂದು ಬಂದಿದ್ದಾಗ, ಕೆಟ್ಟುಹೋಗಿದ್ದ ಹೊಲಿಯುವ ಯಂತ್ರವನ್ನು ಅವನೇ ರಿಪೇರಿ ಮಾಡಿದ. ಆ ಮೊದಲು ಕಂಪೆನಿಯವರು ಎರಡು ಬಾರಿ ಬಂದು ರಿಪೇರಿ ಮಾಡಿದ್ದರು. ಆದರೂ ಅದು ಸರಿಯಾಗಿ ನಡೆಯುತ್ತಿರಲಿಲ್ಲ. ಇವ ಅದನ್ನು ಲಕ್ಷಣವಾಗಿ ರಿಪೇರಿ ಮಾಡಿದ. ಇಂಜನಿಯರ್ ಏನೂ ಇವ ಓದುತ್ತಿಲ್ಲ. ಅದನ್ನೆಲ್ಲಾ ಕಲಿಯಲು, ಬುದ್ಧಿ ಕೆಟ್ಟಿದ್ದರೆ ಇದನ್ನೆಲ್ಲಾ ಮಾಡುಕ್ಕೆ ಆಗುತ್ತಿತ್ತೇ ಅಂದಮೇಲೆ ನಾವು ಹೇಗೆ ಎಚ್ಚರವನ್ನು ವಹಿಸಲಾಗುತ್ತಿತ್ತು ?

ನಿಮ್ಮ ಪರೀಕ್ಷಾ ವಿಧಾನಗಳಲ್ಲಿ ಏನಾದರೂ ತಪ್ಪಿರಬಹುದೋ ? ಎಂದು

ನನಗೆ ಸಂಶಯವಿರುತ್ತಿದೆ. ಹೀಗಂದೆ ಎಂದು ಏನೂ ತಿಳಿದುಕೊಳ್ಳಬೇಡಿ. ನಿಮ್ಮಲ್ಲಿ ಪೂರ್ಣ ನಂಬಿಕೆಯು ನನಗಿದೆ' ಎಂದರು.

ಸ್ಪಷ್ಟವಾಗಿ ಹೀಗೆ ತಂದೆಯು ನುಡಿದುದರಿಂದ ವೈದ್ಯರಿಗೆ ಸಂತೋಷವೇ ಆಯಿತು. ತಾವು ಹೇಳಿದುದು ಅರ್ಥವಾಗಿದೆ. ನ್ಯಾಯವೆಂದು ಕಂಡುಬಂದ ಸಂದೇಹಗಳನ್ನು ಅವ ಹೇಳಿಕೊಳ್ಳುತ್ತಿದ್ದಾನೆ ಎನ್ನುವುದೂ ಗೊತ್ತಾಯಿತು. ಅವರಂದರು ; 'ನೀವು ಹೇಳಿದ್ದೆಲ್ಲಾ ದಿಟವೇ, ರಾಯರೇ ! ಸೀತುವಿನ ಮನಸ್ಸು ಜಾಣತನದ ಕಾರ್ಯಗಳನ್ನು ಮಾಡುವ ಸಾಮರ್ಥ್ಯವನ್ನು ಮೊದಲೂ ಪಡೆದಿತ್ತು. ಈಗಲೂ ಪಡೆದಿದೆ. ರೂಢಿಸಿ ಕಲಿತುಕೊಂಡ ಕೈ ಚಳಕವಾಗಲೀ, ಜ್ಞಾಪಕ ಶಕ್ತಿಯಾಗಲೀ ಅಚ್ಚಳಿಯದೇ ಉಳಿದುಕೊಂಡಿದೆ.

ಆದರೆ ಹೊರಪ್ರಪಂಚದ ನಡವಳಿಕೆಗಳಲ್ಲಿ, ಯಾವುದಾದರೂ ನಿರ್ಧಾರ ಮಾಡಿ ಕಾರ್ಯ ನಡೆಸಬೇಕು. ಇದನ್ನು ಸಾಧಿಸುವ ಮನಸ್ಸಿನ ಭಾಗವು, ಒಳ ಮತ್ತು ಹೊರಪ್ರಪಂಚಗಳ ಮಧ್ಯೆ ಸಾಮರಸ್ಯವಿದ್ದರೆ ಮಾತ್ರ, ಯಶಸ್ವಿಯಾಗಿ ಕೆಲಸವನ್ನು ಮಾಡಬಲ್ಲದು, ಅಲ್ಲೇ ಬಿರುಕುಂಟಾಗಿತ್ತು. ಹಾಗಾಗಿ ಯಾವ ನಿರ್ಧಾರವನ್ನು ಮಾಡಬೇಕಾದರೂ, ಅವನು ತೊಳಲಾಡುವಂತಾಯಿತು. ಹೀಗಾಗಿ ಅವ ಮಂದ ಬುದ್ಧಿಯವನಂತೆ ಕೆಲವೊಮ್ಮೆ ಕಾಣಿಸುತ್ತಿದ್ದ. ಆದರೆ ನಿಜವಾಗಲೂ ಚೂಟಿತನವು ಕಳೆದುಹೋಗಿರಲಿಲ್ಲ.

ಇದೇ ಕಾರಣದಿಂದ ಭಾವನಾ ಪ್ರದರ್ಶನದಲ್ಲೂ ಅವನು ವಿಚಿತ್ರವಾಗಿದ್ದ. ಹೊರಪ್ರಪಂಚದ ಅರಿವು ಆದಾಗ, ಅದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಭಾವನೆಗಳಲ್ಲಿ ಹೂಡಲೇಬೇಕು. ಮನಸ್ಸಿನ ಆ ಭಾಗವು ಒಡೆದು ಹೋಳಾದುದರಿಂದ, ನಿರೀಕ್ಷಿತ ಪ್ರತಿಕ್ರಿಯೆಯನ್ನು ಅವ ತೋರಿಸಲು ಆಗುತ್ತಿರಲಿಲ್ಲ. ಆದಕಾರಣ, Callous, ನಿರ್ಲಿಪ್ತನಂತೆ, ನಡೆದುಕೊಳ್ಳುತ್ತಿದ್ದ.

ಈಗ ಎಲ್ಲವೂ ಅರ್ಥವಾಯಿತೇ? ಜಾಣತನವೂ ಸ್ಮರಣಶಕ್ತಿಯೂ ಇದ್ದು, ಸ್ಕೀಜೋಫ್ರೆನಿಯಾದ ಮುನ್ಸೂಚನೆಗಳೂ ಕಾಣಬರುತ್ತವೆ.

'ನಾಲ್ಕು ವಾರಗಳ ಚಿಕಿತ್ಸೆಯಿಂದ ಸೀತುವಿನಲ್ಲಿ ತುಂಬಾ ಗುಣ ಉಂಟಾಗಿದೆ. ಇಷ್ಟು ಬೇಗ ಇಷ್ಟರಮಟ್ಟಿಗೆ ಗುಣ ಹೊಂದುತ್ತಾನೆ ಎಂದು ನಾನು ನಿರೀಕ್ಷಿಸಿರಲಿಲ್ಲ. ಇನ್ನೊಂದು ಎರಡು ವಾರಗಳಲ್ಲಿ ಮನೆಗೆ ಹಿಂತಿರುಗಿ ಕಳಿಸುತ್ತೇನೆ, ಕಾಲೇಜು ವಿದ್ಯಾಭ್ಯಾಸವನ್ನು ಮುಂದುವರಿಸಲಿ. ಎಲ್ಲರಂತೆ ಅವನೂ ಬಾಳಲು ಸಾಧ್ಯ ; ಸ್ವಲ್ಪ ಎಚ್ಚರಿಕೆಯನ್ನು ವಹಿಸಿದರೆ ಸಾಕು.'

ಎಂದು ವೈದ್ಯರು ಹೇಳಿದರು. ಸೀತುವನ್ನು ವಾರ್ಡಿನಲ್ಲಿ ನೋಡಹೋದರು,

ತಂದೆ, ಕಣ್ಣೆದುರಿಗೆ ಕಂಡ ಮಗನ ಮುಖಚರ್ಯೆಯೇ ಬದಲಾಗಿಬಿಟ್ಟಿತ್ತು. ಸಿಂಡರಿಸಿಕೊಂಡಂತೆ ಇರುತ್ತಿದ್ದ ಮುಖ ಈಗ ಸರಳವಾಗಿತ್ತು, ಒಂದೆರಡು ಮಾತುಗಳಲ್ಲಿಯೇ ತಂದೆಯು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟರೂ, ಸಮಂಜಸವಾಗಿ, ಮುಖವನ್ನು ಕೆಳಗೆ ಮಾಡದೆ, ಸೀತು ಮಾತನಾಡಿದ.

**ಸಕ್ಕೂಬಾಯಿಯ ಕೆಟಟೋನಿಯ**

'ಗಂಟಲು ನೋವು ಅಂತ ಹೇಳಿದಳು, ಡಾಕ್ಟರೇ, ಊರಿನಲ್ಲಿರುವ ಡಾಕ್ಟರ ಹತ್ತಿರಕ್ಕೆ ಕರೆದುಕೊಂಡು ಹೋದೆ. ದವಡೆಯ ಮೂಲೆಯಲ್ಲಿ ಹದ್ದಗಳಲೆ ಉಬ್ಬಿಕೊಂಡಿದೆ. ಸೀತದ ಗೆಡ್ಡೆ ಇರಬೇಕು. ಎಂದು ಹೇಳಿ ಎರಡು ದಿನ ಇನ್ಜಕ್ಷನ್ ಕೊಟ್ಟರು. ಸ್ವಲ್ಪ ವಾಸಿಯಾದ್ಹಾಗೆ ಆಯಿತು. ಆದರೆ ಮೊದಲಿನಂತೆ ಹುಷಾರಾಗಲಿಲ್ಲ. ನಾಳೆಯ ಬೆಳಗ್ಗೆ ಊರಿನಿಂದ ಕರೆದುಕೊಂಡ ಬರ್ತೀನಿ. ಗಂಟಲು ಸರಿಯಾಗಿದೆಯೇ ಅಂತ ಪರೀಕ್ಷೆ ಮಾಡಿ ಹೇಳಿ' ಎಂದು ಸಾವಂದಪ್ಪ ಹೇಳಿದ.

'ರೋಗಿಯನ್ನು ಪರೀಕ್ಷೆ ಮಾಡುವುದಕ್ಕೆ ಇಷ್ಟೆಲ್ಲಾ ಹೇಳಬೇಕೇ ! ಸಾವಂದಪ್ಪ, ಯಾವಾಗ ಬೇಕಾದರೂ ಕರೆದುಕೊಂಡು ಬಾ. ಆದರೆ ಅದಕ್ಕೆ ಮೊದಲು, ನಿಮ್ಮೂರ ಡಾಕ್ಟರ ಕೈಲಿ, ಇನ್ನೊಮ್ಮೆ ಪರೀಕ್ಷೆಮಾಡಿಸು. ಡಿಫ್ತೀರಿಯಾ ತರಹ ಏನಾದರೂ ಕೆಟ್ಟ ಬೇನೆ ಬಂದಿದ್ದರೆ, ಬಸ್ಸಿನಲ್ಲಿ ಊರಿಂದ ಊರಿಗೆ ಪ್ರಯಾಣ ಮಾಡಿಸೋದು ತುಂಬಾ ತಪ್ಪು. ಅವರ ಅನುಮತಿ ಪಡೆದು ಕರೆದುಕೊಂಡುಬಾ' ಎಂದೆ.

ನಾಲ್ಕು ದಿನಗಳಾದ ಮೇಲೆ ಮಗಳನ್ನು ಕರೆದುಕೊಂಡು ಸಾವಂದಪ್ಪ ಒಂದು ಬೆಳಿಗ್ಗೆ ಬಂದ. 'ಇಲ್ಲಿ ಕೂತುಕೊ ಸಕ್ಕೂ' ಎಂದು ಹೇಳಿ ಮಗಳನ್ನು ಎದುರು ಕುರ್ಚಿಯಲ್ಲಿ ಕೂರಿಸಿದ.

ಹದಿನೈದು ಹದಿನಾರು ವರ್ಷಗಳ ಹುಡುಗಿ, ಧೃಢಕಾಯವಿಲ್ಲದಿದ್ದರೂ ಸಣಕಲ ಕಡ್ಡಿ ಏನಲ್ಲ. ತಲೆಯನ್ನು ತಗ್ಗಿಸಿಕೊಂಡು ಕೂತಿದ್ದಳು. 'ಶಾಲೆಗೆ ಹೋಗ್ತಾ ಇದೀಯಮ್ಮಾ, ಸಕ್ಕೂ' ಎಂದು ಕೇಳಿದೆ. ಮೂರನೇ ಸ್ಟಾಂಡರ್ಡ್‌ನಲ್ಲಿ ಓದುತ್ತಾ ಇದ್ದಾಳೆ, ಎಂದು ಸಾವಂದಪ್ಪ ಉತ್ತರಿಸಿದ. ತಲೆಯೆತ್ತಿ ಸಕ್ಕು ಅರೆಕ್ಷಣ ನನ್ನ ಮುಖವನ್ನು ನೋಡಿದಳು. ಉತ್ತರವನ್ನು ತಂದೆ ಕೊಟ್ಟ ಮೇಲೆ, ತಲೆ ತಗ್ಗಿಸಿದಳು. ತಂದೆಯೆದುರಿಗೆ ಯಾವ ಪ್ರಶ್ನೆಯನ್ನು ಮಗಳಿಗೆ ಹಾಕಿದರೂ, ತಂದೆಯೇ ಉತ್ತರವನ್ನು ಕೊಡುತ್ತಾನೆ, ಮಗಳಿಗೆ ಅವಕಾಶವಿರುವುದಿಲ್ಲ ಎನ್ನುವುದು ತಿಳಿಯಿತು. ಆ ಮೇಲೆ ಪ್ರಶ್ನೆಗಳನ್ನು ಕೇಳಿದರಾಯಿತು. ದೇಹಾರೋಗ್ಯವನ್ನು ಸ್ಥೂಲವಾಗಿ

ಪರೀಕ್ಷಿಸೋಣ ಎಂದುಕೊಂಡು, 'ನಾಲಿಗೆ ತೋರಿಸು, ಸಕ್ಕೂ' ಎಂದೆ. 'ಗಂಟಲನ್ನೂ ಹಾಗೆಯೇ ತೋರಿಸಮ್ಮಾ' ಎಂದ, ಸಾವಂದಪ್ಪ.

ತಲೆ ಎತ್ತಿದಳು ಸಕ್ಕೂಬಾಯಿ, ಬಾಯಿನಿಂದ ಹೊರಕ್ಕೆ ನಾಲಿಗೆಯನ್ನು ಸ್ವಲ್ಪ ಚಾಚಿದಳು. ನಾಲಿಗೆಯ ತುದಿ ಹೊರಗೆ ಇತ್ತು. ಬಾಯಿಯನ್ನು ಮುಚ್ಚಿಕೊಂಡಳು. ಇಷ್ಟು ಮಾಡುವುದಕ್ಕೆ ಕತ್ತನ್ನು ನನ್ನ ಕಡೆಗೆ ಚಾಚಿದ್ದಳು. ಅದೇ ಸ್ಥಿತಿಯಲ್ಲಿ ಒಂದೆರಡು ನಿಮಿಷಗಳು ಇದ್ದಳು. ಆಗ ಸಕ್ಕೂವಿನ ಮುಖ, ಮುಖವಾಡವನ್ನು ಧರಿಸಿದ ಮುಖದಂತಿತ್ತು. ಜೀವಕಳೆಯು ಗೆಲುವಾಗಿರಲಿಲ್ಲ. 'ಗಂಟಲು ತೋರಿಸು ಸಕ್ಕು' ಎಂದ ಸಾವಂದಪ್ಪ.

ನೋಡುತ್ತಲೇ ಇದೀನಿ, ನನ್ನ ಕಡೆಗೆ ಚಾಚಿದ್ದ ಕತ್ತನ್ನು ಬಲಗಡೆಗೆ ತಿರುಗಿಸಿದಳು. ನಿಲುವು ಗೌರಿ ಬೊಂಬೆಗಳು ತಲೆ ತಿರುಗಿಸಿದಂತೆ, ಸಕ್ಕು, ತಲೆಯನ್ನು ತಿರುಗಿಸಿದಳು. ಅಷ್ಟು ಸ್ಪಷ್ಟವಾಗಿ ಯಾಂತ್ರಿಕವಾಗಿತ್ತು. ಹಾಗೆ ತಿರುಗಿಸಿದಾಗ, ಕೆಳದವಡೆಯನ್ನೂ ಮುಂದಕ್ಕೆ ಝಾಡಿಸಿದಳು. ಮೇಲು ರೆಪ್ಪೆಗಳು ಅರ್ಧ ಕಣ್ಣನ್ನು ಮುಚ್ಚಿದ್ದುವು. ಅದೇ ಭಂಗಿಯಲ್ಲಿ ಮೂರು ನಾಲ್ಕು ನಿಮಿಷ ಇದ್ದಳು.

'ಗಂಟಲು ತೋರಿಸಮ್ಮಾ ಸಕ್ಕು' ಎಂದು ಸಾವಂದಪ್ಪ ತಿರುಗಿ ಹೇಳಿದ.

ನನ್ನ ಕಡೆಗೆ ಮುಖವನ್ನು ತಿರುಗಿಸಿ ಬಾಯಿ ತೆರೆದಳು. ಟಾರ್ಚ್ ಬೆಳಕನ್ನು ಗಂಟಲೊಳಕ್ಕೆ ಹರಿಸಿ ಪರೀಕ್ಷೆಯನ್ನು ಮಾಡಿದೆ. ಸಾವಂದಪ್ಪನ ಮನಸ್ಸಿಗಾದರೂ, ಡಾಕ್ಟರು ತುಂಬಾ ಶ್ರದ್ಧೆಯಿಂದ ಮಾಡಿದರು, ಎನ್ನುವ ಸಮಾಧಾನವಾಗಲಿ ಅಂತ.

ಏಕೆಂದರೆ, ಸಕ್ಕೂವಿನ ಮುಖಭಂಗಿಗಳನ್ನು ಕಂಡಾಗ, ಅವಳ ಚಾಕಚಕ್ಯತೆಯನ್ನೂ ವಿದ್ಯಾಭ್ಯಾಸದ ಮಟ್ಟವನ್ನೂ ತಿಳಿದಾಗ ; ಈಕೆಗೆ ಕೆಟಟೋನಿಕ್ ಸ್ಕೀಜೋಫ್ರೆನಿಯಾ ಇರಬೇಕು ಎನ್ನುವುದು ಸುಮಾರು ಸ್ಪಷ್ಟವಾಗಿತ್ತು.

ಅನಂತರ ರೋಗಿಯ ವಿವರಗಳನ್ನು ಸಾವಂದಪ್ಪನಿಂದ ಪಡೆಯಲಾಯಿತು.

ಸಕ್ಕೂಬಾಯಿಯ ತಾಯಿಗೆ ಹತ್ತೆಂಟು ವರ್ಷಗಳಿಂದಲೂ ಮಾನಸಿಕ ಅಸ್ಪತ್ರೆಯಲ್ಲಿ, 'ಷಾಕ್ ಟ್ರೀಟ್‌ಮೆಂಟ್' ಅನ್ನು ಆಗಿಂದಾಗ್ಗೆ ಕೊಡಿಸಿದ್ದರು. ಮಾನಸಿಕ ಆಸ್ಪತ್ರೆಗೆ ಹೋಗುವುದಕ್ಕೆ ಮೊದಲು ಸಕ್ಕೂಬಾಯಿಯ ತಾಯಿಯು ಇದ್ದುದರಲ್ಲಿ ಸ್ವಸ್ಥವಾಗಿಯೇ ಇದ್ದಳು. ಆದರೂ ಸಂಸಾರದಲ್ಲಿ ಚಾಲೂಕಾಗಿರಲಿಲ್ಲ. ಆದರೆ ಆಸ್ಪತ್ರೆಗೆ ಹೋಗಲೇಬೇಕು ಎನ್ನುವಂತೆ ಎಂದೂ ನಡೆದುಕೊಂಡಿರಲಿಲ್ಲವಂತೆ. ಸಕ್ಕೂವಿನ ಹೆರಿಗೆಯಾದ ಮೇಲೆ ಒಂದೆರಡು ತಿಂಗಳು 'ಭೂತಚೇಷ್ಟೆ' ಆಗಿತ್ತು.

ಪೂಜೆ ಹಾಕಿಸಿದ ನಂತರ ಅದು ಬಿಟ್ಟುಹೋಯಿತು. ಅದಾದ ಎರಡು ವರ್ಷಗಳಾದ ಮೇಲೆ, ಮತ್ತೊಂದು ಸರ್ತಿ ಬಸಿರಾಗಿ ಮೈ ಇಳಿದ ಮೇಲೆ, ಆಸ್ಪತ್ರೆಗೆ ಹೋಗುವುದು ಅನಿವಾರ್ಯವಾಯಿತು. ಮಾನ ಮರ್‍ಯಾದೆಯ ಮೇಲೆ ಗಮನವಿರಲಿಲ್ಲವಾದ ಕಾರಣ, ಆಸ್ಪತ್ರೆಗೆ ಸೇರಿಸಲೇಬೇಕಾಯಿತು. ಈಗ ಸ್ವಸ್ಥವಾಗಿದ್ದಾಳೆ. ಆದರೆ ಮನೆಯ ಯಾವ ಹೊಣೆಯೂ ಅವಳ ಮೇಲಿಲ್ಲ. ಸಾವಂದಪ್ಪನ ದೊಡ್ಡ ಅಕ್ಕ ಸಂಸಾರದ ಎಲ್ಲಾ ಹೊಣೆಯನ್ನೂ ಹೊತ್ತಿದ್ದಾಳೆ.

ಸಕ್ಕೂಬಾಯಿಗೆ ದೊಡ್ಡ ಅಣ್ಣ ಒಬ್ಬನಿದ್ದಾನೆ. ಮೂರು ವರ್ಷ ದೊಡ್ಡವನು. ಅವನೂ ಶಾಲೆಗೆ ಹೋಗುತ್ತಾನೆ. ಸಕ್ಕೂಬಾಯಿಯ ಕ್ಲಾಸಿನಲ್ಲೇ ಓದುತ್ತಿದ್ದಾನೆ. ಮನೆಪಾಠವನ್ನು ಇಡಿಸಿದ್ದಾರೆ. ಆದರೆ ತಂದೆಯು ಹೇಳಿದಂತೆ 'ಅವನಿಗೆ ಪಾಠ ಹಿಡಿಸುಲ್ಲ ಅಂತ ಕಾಣುತ್ತೆ.' ಇತರ ಕೆಲಸಗಳನ್ನು ಹೇಳಿದರೆ, ಸರಿಯಾಗಿ ಮಾಡುತ್ತಾನೆ. ಅಂದರೆ ಅಂಗಡಿಗೆ ಹೋಗಿ ಬೆಂಕಿಪೊಟ್ಟಣವನ್ನು ತಾ ಅಂದರೆ ತರುತ್ತಾನೆ. ಅಂಚೆ ಕಚೇರಿಗೆ ಹೋಗಿ ಕವರ್ ತಾ ಎಂದರೆ ತರುತ್ತಾನೆ. ಸಿನಿಮಾಕ್ಕೂ ಒಬ್ಬನೇ ಹೋಗಿ ಬರುತ್ತಾನೆ. ಊಟ ತಿಂಡಿಗಳನ್ನು ಹಾಕಿದಾಗ ತಿನ್ನುತ್ತಾನೆ. ಯಾವ ಗಲಾಟೆಯನ್ನೂ ಮಾಡುವುದಿಲ್ಲ. ತುಂಬಾ ಒಳ್ಳೆಯ ಹುಡುಗ, ಯಾವ ಕೆಟ್ಟ ಅಭ್ಯಾಸವೂ ಇಲ್ಲ. ಅಷ್ಟಾಗಿ ಸ್ನೇಹಿತರೂ ಹೆಚ್ಚಿಲ್ಲ.

ಮನೆಯ ಈ ವಿವರಗಳನ್ನು ಕೇಳಿದ ಮೇಲೆ, ಕೆಟಟೋನಿಕ್ ಸ್ಕೀಜೋಫ್ರೆನಿಯಾ ಸಕ್ಕೂಬಾಯಿಗೆ ಆಗಿದೆ ಎನ್ನಲು ಅಭ್ಯಂತರವೇ ಇರಲಿಲ್ಲ.

ತಾಯಿಯನ್ನು ಮಾನಸಿಕ ಆಸ್ಪತ್ರೆಯಲ್ಲಿ ಚಿಕಿತ್ಸೆಗೆ ಒಳಪಡಿಸಿದ್ದರು. ಅಂದರೆ ಸಾವಂದಪ್ಪನಿಗೆ ಈ ಬೇನೆಯ ಸ್ವರೂಪವು ತಿಳಿದಿದ್ದಿರಬೇಕು. ಮಕ್ಕಳಲ್ಲಿ ಮಂದ ಬುದ್ಧಿ, ವಿಚಿತ್ರವರ್ತನೆ, ಇವುಗಳನ್ನು ಕಂಡಾಗ, ಮಾನಸಿಕ ಆಸ್ಪತ್ರೆಗೆ ಮೊದಲೇ ಏಕೆ ಕರೆದುಕೊಂಡು ಹೋಗಲಿಲ್ಲ ?

ಸಾವಂದಪ್ಪನೊಬ್ಬನನ್ನೇ ನಂತರ ಬರಹೇಳಿ, 'ಮಕ್ಕಳನ್ನು ಮನೋವೈದ್ಯರಿಗೆ ಯಾಕೆ ತೋರಿಸಲಿಲ್ಲವಪ್ಪಾ ? ಈ ಅನುಮಾನವು ನಿನಗೂ ಬಂದಿರಬೇಕು' ಎಂದು ಕೇಳಿದೆ.

'ನನ್ನ ಹೆಂಡತಿಗೆ ಎರಡು ಮೂರು ವರ್ಷಗಳು ಚಿಕಿತ್ಸೆ ನಡೆಸಿದೆ, ಡಾಕ್ಟರೇ! ಈಗೆಷ್ಟೋ ಗುಣ ಹೊಂದಿದ್ದಾಳೆ. ಆದರೆ ಮಂಕು ಬಡಿದಂತೆ ಇರುತ್ತಾಳೆ, ಕೆಲವೊಮ್ಮೆ, ಮತ್ತೆ ಕೆಲವು ದಿನಗಳು ಸ್ವಲ್ಪ ವಾಸಿ. ಯಾವುದಾದರೂ ಮನೆ ಕೆಲಸವನ್ನು ಹೇಳಿದರೆ ಮಾಡುತ್ತಾಳೆ. ಆದರೆ ನಿಜಮನುಷ್ಯರಂತೆ ಎಂದೂ ಆಡಿಲ್ಲ. ನುಡಿದಿಲ್ಲ. ಅಂದ ಮೇಲೆ ಮಕ್ಕಳನ್ನು ಅಲ್ಲಿಗೆ ಕರೆದುಕೊಂಡುಹೋಗಲು

ಉತ್ಸಾಹವಿರಲಿಲ್ಲ.

'ಅವಳಿಗೂ ಷಾಕ್ ಟ್ರೀಟ್‌ಮೆಂಟ್ ಕೊಡಿಸಬೇಕು ಎಂದು ನೀವು ಹೇಳಿದರೆ, ಮನೋವೈದ್ಯರ ಬಳಿಗೆ ಅಗತ್ಯವಾಗಿ ಕರೆದುಕೊಂಡು ಹೋಗುತ್ತೀನಿ' ಎಂದ.

ಸಾವಂದಪ್ಪನ ಬಾಳಿನಲ್ಲಿ ಇಷ್ಟೆಲ್ಲಾ ಕಷ್ಟ ದುಃಖಗಳು ಸಂಭವಿಸಿವೆ ಎಂದು ಯಾರೂ ಹೇಳುವಂತಿರಲಿಲ್ಲ. ನಗುನಗುತ್ತಲೇ ಇರುತ್ತಿದ್ದ. ತನ್ನ ವ್ಯಾಪಾರವನ್ನು ಮಾಡಿಕೊಂಡೇ ಇದ್ದ, ಎಂದರೆ ಏನು ? ಇವನೇನು ಸ್ಥಿತಪ್ರಜ್ಞನೆ ? ಹೆಂಡತಿಗೆ ಮೊದಲಿನಿಂದಲೂ ಸ್ಕೀಜೋಫ್ರೇನಿಯಾ ಆದರೆ ಪ್ರಾಯದ ಬಾಳಿನಲ್ಲಿ ಹೆಂಡತಿಯ ಆ ಬೇನೆಯು ಗಂಡನಿಗೆ ಪತ್ತೆಯಾಗಲೇ ಇಲ್ಲ. ಹೆಂಗಸರ ನಡವಳಿಕೆಯಲ್ಲಿ ಇವೆಲ್ಲಾ ಸಾಮಾನ್ಯ ಎಂದುಕೊಂಡಿದ್ದ. ಮಕ್ಕಳಾದ ಮೇಲೆ, ಮಾನಸಿಕ ಆಸ್ಪತ್ರೆಗೆ ಹೋಗುವುದು ಅನಿವಾರ್ಯವಾದಾಗ, ನನ್ನ ಹೆಂಡತಿಗೆ ಮನೋರೋಗವಿದೆ, ಎಂದು ಅವನಿಗೆ ತಿಳಿಯಬಂತು. ಆದರೆ ಆ ವೇಳೆಗೆ ಅವ ಒಗ್ಗಿ ಹೋಗಿದ್ದ ಆ ವಿಚಿತ್ರ ನಡವಳಿಕೆಗಳಿಗೆ. ವ್ಯಾಪಾರಸ್ಥ ; ಹೊರ ಊರುಗಳಿಗೆ ವಾರಕ್ಕೆ ನಾಲ್ಕೈದು ದಿನಗಳು ಹೋಗಿ ಬರಬೇಕಾಗಿತ್ತು. ಕಾರಣ ಮನೆಯ ಕಾರ್ಪಣ್ಯಗಳನ್ನು ಅಷ್ಟಾಗಿ ಹಚ್ಚಿಕೊಳ್ಳಬೇಕಾಗಿರಲಿಲ್ಲ. ಅವನೇ ಅಂದ 'ಬೇಕಾದರೆ, ಡಾಕ್ಟರೇ, ನನ್ನ ದೊಡ್ಡಕ್ಕನನ್ನು ಕರೆದುಕೊಂಡು ಬರ್ತೀನಿ. ಸಕ್ಕೂಬಾಯಿ ಮನೆಯಲ್ಲಿ ಹೇಗೆ ಆಡುತ್ತಾಳೆ, ನಡೆದು ಕೊಳ್ಳುತ್ತಾಳೆ, ಎಲ್ಲವನ್ನೂ ಆಕೆ ಚೆನ್ನಾಗಿ ಬಲ್ಲಳು' ಎಂದ. ಹಾಗೇ ಮಾಡಪ್ಪ ಎಂದೆ. ತಾತ್ಕಾಲಿಕವಾಗಿ ಉಪಶಮನದ ಚಿಕಿತ್ಸೆಯನ್ನು ನಡಸಿದೆ.

ಸಾವಂದಪ್ಪನ ದೊಡ್ಡ ಅಕ್ಕ ಬಂದಳು. ಸುಮಾರು ಅರವತ್ತರ ಪ್ರಾಯ. ಭಾರೀ ಬಂಗಾರದ ಬಳೆಗಳನ್ನು ಹಾಕಿಕೊಂಡಿದ್ದಳು. ಶ್ರೀಮಂತರಂತೆ ಕಾಣಿಸುತ್ತಿದ್ದಳು. ಸಕ್ಕೂಬಾಯಿಯ ವಿವರಗಳನ್ನು ಕೇಳಿದೆ. 'ಅದನ್ನು ಹೇಳುಕ್ಕೇ ಬಂದೆ. ಸಾವಂದಪ್ಪ ಹೇಳಿದ, ನೀವು ಮಾತಾಡಬೇಕು ಅಂದಿರಂತೆ. ಹೇಳೋದೇನಿದೆ, ಡಾಕ್ಟರೇ ! ಇವಳಮ್ಮನಿಗೂ ಹುಚ್ಚು, ಇವಳಿಗೂ ಹುಚ್ಚು, ಇವಳ ಅಣ್ಣನಿಗೂ ಹುಚ್ಚು, ಹುಚ್ಚಾಸ್ಪತ್ರೆಗೆ ಸೇರಿಸಪ್ಪಾ ! ಇನ್ನು ಬೇರೆ ಕಾಯಿಲೆ ಯಾವುದೂ ಇಲ್ಲ ಅಂತ ಹೇಳಿದೆ. ನನ್ನ ತಮ್ಮನಿಗೆ ಏನೋ ಆಸೆ. ಮಗಳಿಗೆ ಗಂಟಲು ನೋವು, ಅದು ಸರಿಹೋದರೆ, ಚೆನ್ನಾಗುತ್ತಾಳೆ ಅಂತ' ಎಂದಳು.

ತಮ್ಮನ ಹೆಂಡತಿ, ಮಕ್ಕಳ ಮೇಲೆ, ದೊಡ್ಡ ಅತ್ತಿಗೆಗೆ ಅಷ್ಟೇನೂ ಆದರವು ಇರಬೇಕಾಗಿಲ್ಲ ಎನ್ನುವುದು ಎಲ್ಲರಿಗೂ ತಿಳಿದ ವಿಷಯ. ಕಾರಣ, ಆಕೆಯು ಹೇಳಿದ್ದನ್ನು ಸಮರ್ಥಪಡಿಸಲು, ಮಿಕ್ಕ ಪ್ರಶ್ನೆಗಳನ್ನು ಎಳ್ಳಂಬಳಸೆಯಾಗಿ ಕೇಳಿದೆ.

ಕೆಲವು ದಿನಗಳು, ಎರಡು ತಾಸು, ಸಕ್ಕೂಬಾಯಿಯು ಕೆಟ್ಟ ಕೆಟ್ಟದಾಗಿ ಅರಚಿಕೊಳ್ಳುತ್ತಿದ್ದಳೆಂದು ತಿಳಿದುಬಂದಿತು. ತನ್ನ ಪಾಡಿಗೆ ತಾನು ಏನೇನೋ ಅಸಂಬದ್ಧವಾಗಿ ಮಾತನಾಡುವುದು, ಹೀಗೆಲ್ಲಾ ಆಗಿಂದಾಗ್ಗೆ ಮಾಡುತ್ತಿದ್ದಳಂತೆ.

'ಏನು ಮಾಡೋದು, ಡಾಕ್ಟರೇ? ಒಬ್ಬಳೇ ಮಗಳೂ ನನಗೆ, ಅವಳನ್ನು ನನ್ನ ತಮ್ಮನಿಗೆ ಕೊಟ್ಟು ಮದುವೆ ಮಾಡಿದರೆ, ಮನೆ ಆಸ್ತಿ ಮನೆಯಲ್ಲೇ ಉಳಿಯುತ್ತೆ ಅಂತ ಅಂದುಕೊಂಡೆ. ಮಗಳು ಹಾಗಾದಳು ಅಂದರೆ, ಅವಳ ಮಕ್ಕಳೂ ಹೀಗಾಗ ಬೇಕೇ, ಎಲ್ಲಾ ನಮ್ಮ ಖರ್ಮ.'

ಎಂದು ಕೊನೆಗೆ ಹೇಳಿದಳು.

* * *

ಸ್ಕೀಜೋಫ್ರೇನಿಯಾ ಪ್ರವೃತ್ತಿ ಇದ್ದವರಲ್ಲಿ, ತಮ್ಮ ತಮ್ಮಲ್ಲೇ ಮದುವೆ ಮಾಡಿದರೆ, ಅಂತಹ ಪ್ರವೃತ್ತಿಯು ಮಕ್ಕಳಲ್ಲಿ ಹೆಚ್ಚಾಗಿ ಕಾಣಬರುತ್ತದೆ. ಮದುವೆಯನ್ನು ಮಾಡಬೇಕಾದಾಗ, ಈ ವಿಷಯವನ್ನು ಜನರು ನೆನಪಿನಲ್ಲಿಟ್ಟುಕೊಳ್ಳ ಬೇಕು. ಸಂಶಯವು ಉಂಟಾದರೆ, ಮನೋವೈದ್ಯರ ಸಲಹೆಯನ್ನು ಪಡೆಯಬೇಕು. ಸಂಸಾರ ಗುಟ್ಟು ಎಂದು ಪೆಚ್ಚುಪೆಚ್ಚಾಗಿ ಮುಚ್ಚಿಟ್ಟುಕೊಂಡರೆ ಜೀವಾವಧಿ ನರಳಬೇಕಾಗಬಹುದು. ಸಂಸಾರ ಗುಟ್ಟು ಎಂದು ಗಾದೆಯನ್ನು ಕಟ್ಟಿದ ಅನುಭಾವಿಗಳು ರೋಗ ರಟ್ಟು ಎಂದೂ ಹೇಳಿದರು. ಸ್ಕೀಜೋಫ್ರೇನಿಯಾ ಒಂದು ರೋಗ, ಅದನ್ನು ರಟ್ಟು ಮಾಡಬೇಕು, ಎಂದರೆ ಡಂಗೂರ ಸಾರಬೇಕು ಅಂತಲ್ಲ. ಮನೋವೈದ್ಯರ ಬಳಿಗೆ ಹೋಗಿ, ಇದ್ದುದನ್ನು ಮರೆಮಾಚದೆ ಹೇಳಬೇಕು. ಆಗ ಬೇನೆಯ ದುಷ್ಪರಿಣಾಮಗಳನ್ನು ಸಾಕಷ್ಟು ಹತೋಟಿಯಲ್ಲಿಡಬಹುದು. ಸಂಪೂರ್ಣವಾಗಿ ವಾಸಿ ಮಾಡುತ್ತೇವೆ. ಎಂದು ಮನೋವೈದ್ಯರು ಹೇಳುವುದಿಲ್ಲ. ಆದರೂ ಸಾಕಷ್ಟು ನೆಮ್ಮದಿಯಿಂದ ಬಾಳನ್ನು ಸಾಗಿಸುವಂತೆ ಮಾಡಲು ಸಾಧ್ಯ.

**ರಘುಪತಿಯ ರಜ**

'ಕೆಲಸಕ್ಕೆ ಸೇರಿ, ಬಹಳ ವರ್ಷಗಳೂ ಕೆಲಸಕ್ಕೆ ಸರಿಯಾಗಿ ಹೋಗುತ್ತಿದ್ದೆ. ನಂತರ ಒಂದೊಂದು ದಿನ ರಜ ಹಾಕುತ್ತಿದ್ದೆ. ಬರಬರುತ್ತಾ ಎರಡು ದಿನಗಳು ನಂತರ ಮೂರು ದಿನ ರಜ ಹಾಕುವುದು ಪ್ರಾರಂಭವಾಯಿತು. ಬೆಳಗ್ಗೆ ಏಳುವುದಕ್ಕೆ ಮುಜುಗರವಾಗುತ್ತಿತ್ತು, ಅಷ್ಟೆ.

ನಂತರ ಮದುವೆಯಾಯಿತು. ಮದುವೆಯಾದ ಮೇಲೆ ಹೆಂಡತಿಯೊಬ್ಬಳು ಜತೆಗೆ ಬರುತ್ತಾಳೆ. ಹೇಗೆ ನೋಡಿಕೊಳ್ಳುವುದು ಎಂಬ ಭಯ ಕಾಡುತ್ತಿತ್ತು.

ಮದುವೆಯಾದ ಮೇಲೆ ತಂದೆತಾಯಿಗಳಿಗೂ ನನಗೂ ಸ್ವಲ್ಪ ದೂರವಾಗಿ ಮನಸ್ಸಿನಲ್ಲಿ ಬಾಧೆಯುಂಟಾಗುತ್ತಿತ್ತು. ಮದುವೆಯಾದ ಮೇಲೆ ರಜಾ ಹಾಕುವುದು ಜಾಸ್ತಿಯಾಯಿತು. ಒಟ್ಟೊಟ್ಟಿಗೆ ನಾಲ್ಕೈದು ದಿನಗಳು ಹೋಗುತ್ತಿರಲಿಲ್ಲ.

Present Illness ಹೀಗೆ ರಜಾ ಹಾಕುವುದು ಆಗಾಗ್ಗೆ ಜಾಸ್ತಿಯಾದುದರಿಂದ ಮನಸ್ಸಿನಲ್ಲಿ ನೆಮ್ಮದಿಯಿರಲಿಲ್ಲ... ರಜ ತೆಗೆದುಕೊಂಡಾಗ ಬೇರೇನೂ ಕೆಲಸ ಮಾಡುತ್ತಿರಲಿಲ್ಲ. ಮನೆಯಲ್ಲಿ ಸುಮ್ಮನೆ ಮಲಗಿಕೊಂಡಿರುವುದು. ಏನೇನೋ ಯೋಚನೆಗಳನ್ನು ಮೆಲಕು ಹಾಕುವುದು. ಇಷ್ಟೇ ಕೆಲಸ. ರಜ ತೆಗೆದುಕೊಳ್ಳುವುದು ಜಾಸ್ತಿಯಾಗಿ, ಮನಸ್ಸಿನಲ್ಲಿ ಅದೇ ಯೋಚನೆ ಬಾಧಿಸತೊಡಗಿತು. ಕೂತರೆ ನಿಂತರೆ ಅದೇ ಯೋಚನೆಯಾಯಿತು. ಹೀಗಾಗಿ ಕೆಲಸದ ಮೇಲೆ ಇದ್ದಾಗಲೂ ಅದೇ ಯೋಚನೆಯಾಗಿ ಕೆಲಸದ ಮೇಲೆ Concentrate ಮಾಡುವುದು ಆಗುತ್ತಿರಲಿಲ್ಲ. ಇದೇ ಸಂದರ್ಭದಲ್ಲಿ ಮನಸ್ಸಿನಲ್ಲಿ ಅದೇ ಭಾವನೆ ಉತ್ಕಟವಾಗಿ ಮುಖಭಾವದಲ್ಲಿ ಬದಲಾವಣೆಯಾಗುತ್ತಿತ್ತೋ ಏನೋ? ಎಲ್ಲರೂ ನನ್ನನ್ನು ನೋಡಿ ನಗಲು ಪ್ರಾರಂಭಿಸಿದರು. ಹೀಗೇ ಸ್ವಲ್ಪ ದಿನ ನಡೆಯಿತು. ನನಗೆ ಇದಕ್ಕೆ ಪರಿಹಾರ ಕಾಣದಾಯಿತು. ಅಷ್ಟು ಹೊತ್ತಿಗೆ ನನ್ನನ್ನು ನೋಡಿ ಎಲ್ಲರೂ ನಗುತ್ತಾರೆ ಎಂಬ ಭಾವನೆ ಬೆಳೆದುಬಿಟ್ಟಿತು. ಮನಸ್ಸಿನಲ್ಲಿ ಅದನ್ನೇ ಮೆಲುಕು ಹಾಕುತ್ತಿದ್ದಾಗ ಎಲ್ಲ ನೋಡಿ ಆಡಿಕೊಳ್ಳುತ್ತಿದ್ದರು . . . .

ಫ್ಯಾಕ್ಟರಿಗೆ ಹೋಗುವುದು ತೀರ ಕಮ್ಮಿಯಾಗಿದೆ. ತಿಂಗಳಿಗೆ ಐದಾರು ದಿನಗಳೋ, ಎಂಟು ಹತ್ತು ದಿನಗಳು ಮಾತ್ರ ಹೋಗುತ್ತಿರುತ್ತೇನೆ. ಈಗ ಏಳುವುದಕ್ಕೆ ಮತ್ತು Factory ಗೆ ಹೋಗಲು ಮನಸ್ಸೇ ಇಲ್ಲ. ಕೆಲಸಕ್ಕೆ ಹೋಗದೆ ಇರುವುದರಿಂದ ಆಗುವ ತೊಂದರೆಗಳು ನನ್ನ ಮೇಲೆ ಪರಿಣಾಮವನ್ನುಂಟುಮಾಡುತ್ತಿಲ್ಲ. ಕೆಲಸ ಹೋಗುತ್ತದೆ. ನಂತರ ಸಂಸಾರದ ಗತಿಯೇನು ? ಎಂಬ ಭಾವನೆಯೂ ನನಗೆ ಬರುತ್ತಿಲ್ಲ . . .

ಜೀವನದಲ್ಲಿ ಉತ್ಸಾಹವಾಗಲೀ ಹೆಂಡತಿ ಮಕ್ಕಳು ಎಂಬ ಪ್ರೀತಿ ವಿಶ್ವಾಸವಾಗಲೀ ಇಲ್ಲ. ಯಾವಾಗಲೂ ನಿರುತ್ಸಾಹ ಒಂಟಿತನ ಬೇಜಾರು ಕಾಡುತ್ತಿರುತ್ತವೆ.

ಮೇಲಿಂದ ಮೇಲೆ ರಜ ತೆಗೆದುಕೊಂಡು, ಚಾಕರಿಯನ್ನು ಊನ ಮಾಡಿಕೊಳ್ಳುತ್ತಿದ್ದ ರಘುಪತಿಯು ತನಗಾಗುವುದನ್ನು ವಿವರಿಸಿ ಬರೆದು ತಂದ ವರದಿಯಿಂದ, ಮೇಲೆ ಹೇಳಿರುವುದನ್ನು ಬಳಸಿಕೊಂಡಿದ್ದೇನೆ.

ಒಂಭತ್ತು ಮಕ್ಕಳಿದ್ದ ತುಂಬಿದ ಮನೆಯಲ್ಲಿ ರಘುಪತಿ ಹಿರಿಯ ಮಗ

ತಂದೆಯು ದೃಢಕಾಯ, ತಾಯಿಯು ಏಕಾಂತ ಸ್ವಭಾವದಾಕೆ, ರೋಗಿಷ್ಠೆ. ಎರಡು ಮೂರು ಬಾರಿ ಕರೆಂಟ್ ಟ್ರೀಟ್‌ಮೆಂಟನ್ನು ತೆಗೆದುಕೊಂಡಿದ್ದಳು. ಮೊದಲಿನಿಂದಲೂ ವಿದ್ಯಾಭ್ಯಾಸದಲ್ಲಿ ರಘುಪತಿಗೆ ಆಸ್ಥೆಯಿರಲಿಲ್ಲ. ಉಪಾಧ್ಯಾಯರನ್ನು ಕಂಡರನಕ ನಡುಗುತ್ತಿದ್ದ. ಕತ್ತಲು ಕಳ್ಳಕಾಕರು ದೆವ್ವ ಭೂತಗಳೆಂದರೆ ತುಂಬ ಹೆದರಿಕೆ, ಸರಿಯಾದ ಬಟ್ಟೆಬರೆಗಳಾಗಲೀ ದುಡ್ಡುಕಾಸಾಗಲೀ ಇರುತ್ತಿರಲಿಲ್ಲವಾದ್ದರಿಂದ ತಾನು ಎಲ್ಲರಿಗಿಂತ ಕೀಳು ಎಂಬ ಭಾವನೆ ಬೆಳೆದು ಬೇರೆಯವರ ಜತೆಯಲ್ಲಿ ಸ್ನೇಹವನ್ನಾಗಲೀ ಕೂಡಿ ಮಾತನಾಡುವುದನ್ನಾಗಲೀ, ಮಾಡುತ್ತಿರಲಿಲ್ಲ. ಮೊದಲಿನಿಂದ ಈ ತನಕ ಸ್ನೇಹಿತರೇ ನನಗಿಲ್ಲ ಎಂದವನ ಹೇಳಿಕೆ. ಕಾಲೇಜಿನಲ್ಲಿ ಓದುವಾಗಲೂ ಒಂಟಿತನದಿಂದ ಬೇಸರ ಪಡುತ್ತಿದ್ದ. ಕೊನೆಯ ಪರೀಕ್ಷೆಯಲ್ಲಿ ನಪಾಸಾದ, ಮುಂದೆ ಓದಲು ಸಾಧ್ಯವಾಗಲಿಲ್ಲ. ಏಳು ಎಂಟು ವರ್ಷ ಕೆಲಸ ದೊರಕದೆ ತುಂಬಾ ಒದ್ದಾಡಿದ. ನಂತರ ಫ್ಯಾಕ್ಟರಿಯೊಂದರಲ್ಲಿ ಕೆಲಸ ದೊರೆಯಿತು. ಒಂದೆರಡು ವರ್ಷಗಳು ನೆಮ್ಮದಿಯಿಂದಿದ್ದ. ಅನಂತರ ಶುರುವಾಯಿತು; ರಜಹಾಕುವ ಗೀಳು. ಇಂತಹ ಗೀಳಿನಿಂದ ಮುಂದೆ ಆಗುವ ದುಷ್ಪರಿಣಾಮಗಳು ರಘುಪತಿಗೆ ಗೊತ್ತು. ಆದರೆ ಭವಿಷ್ಯದ ಭಯವು ಅವನನ್ನು ನರಳುಸುತ್ತಿರಲಿಲ್ಲ. ಏನು ಬೇಕಾದರೂ ಆಗಲಿ ; ಹೇಗೆ ಬೇಕಾದರೂ ನಡೆಯಲಿ, ಎನ್ನುವ ಉಗ್ರ ಉದಾಸೀನತೆಯು ಅವನಿಗೆ ಬಡಿದಿತ್ತು.

ಮೂರು ಮಕ್ಕಳು ಮತ್ತು ಹೆಂಡತಿ ಇರುವ ಸಂಸಾರ. ತನ್ನ ಹೆಂಡತಿ, ತನ್ನ ಮಕ್ಕಳು. ಆದರೆ ಅವರಲ್ಲಿ ಪ್ರೀತಿಯಾಗಲೀ ವಿಶ್ವಾಸವಾಗಲೀ ಹುಟ್ಟಲಿಲ್ಲ, ಬೆಳೆಯಲಿಲ್ಲ. ಸಂಸಾರದ ಹೊಣೆಯ ಅರಿವು ರಘುಪತಿಗಿದೆ. ಆದರೆ ಹೊಣೆಯನ್ನು ಹೊರಲು ಉದಾಸೀನತೆಯು– Callousness –ಅಡ್ಡ ಬರುತ್ತಿದೆ.

ಒಬ್ಬನೇ ಬಿದ್ದುಕೊಂಡು, ತನ್ನ ಯೋಚನೆಗಳಲ್ಲಿ ತಾನೇ ಮಗ್ನನಾಗಿರುವುದು ಅವನಿಗೆ ಸುಲಭವಾಗಿದೆ. ಮನಸ್ಸಿನಲ್ಲಿ ಭಾರವಾಗಿದ್ದುದನ್ನು ಗೆಳೆಯರೊಂದಿಗೆ ಹೇಳಿಕೊಂಡರೆ ಮನಸ್ಸು ಹಗುರವಾಗುತ್ತದೆ. ಅಂತಹ ಅನುಕೂಲವು ರಘುಪತಿಗಿರಲಿಲ್ಲ. ನಾನು ಎಲ್ಲರಿಗಿಂತಲೂ ಕೀಳು ; ನನ್ನನ್ನು ಕಂಡರೆ ಎಲ್ಲರೂ ನಗುತ್ತಾರೆ, ಎನ್ನುವ ಭಾವನೆಯು ಮೂಡಿ, ಅವ ಇತರರೊಂದಿಗೆ ಬೆರೆಯಲಿಲ್ಲ. ಊಹಾ ಲೋಕದಲ್ಲಿ ಹೆಚ್ಚು ಮಗ್ನನಾಗತೊಡಗಿದ. ಒಂಟಿತನದ ಭಾವನೆಯೂ ವೃದ್ಧಿಯಾಗತೊಡಗಿತು.

ಮಾನವನಿಗೆ ಸಹಜವಾದ ಭಾವನೆಗಳು ಬಾಳಿನ ಹಿತವನ್ನು ಸಾಧಿಸುತ್ತವೆ. ಮಗುವನ್ನು ತಾಯ್ತಂದೆಯರು ಪ್ರೀತಿಸುವುದರಿಂದ, ಮಗುವಿಗೆ ಎಷ್ಟು

ಪ್ರಯೋಜನವಾಗುತ್ತದೆಯೋ, ಅಷ್ಟೂ ಸುಖವು ತಾಯ್ತಂದೆಯರಿಗೂ ದೊರಕುತ್ತದೆ. ಸೋದರ ಸೋದರಿಯರ ಪ್ರೇಮವೂ ಅವರುಗಳೆಲ್ಲರ ಬಾಳಿಗೆ ಹಿತಕೊಡುತ್ತವೆ. ಗಂಡನ ಕಷ್ಟಕ್ಕೆ ಹೆಂಡತಿಯು ಅಯ್ಯೋ ಎಂದರೆ ; ಗಂಡನಿಗಾದ ಅವಮಾನವು ತನ್ನದು ಎಂದು ನಡೆದುಕೊಂಡರೆ ; ಗಂಡ ಹೆಂಡರ ಪ್ರೇಮವೂ ಬಲಿಯುತ್ತದೆ. ಸಂಸಾರವೂ ಸುಖಮಯವಾಗುತ್ತದೆ. ಸಮಾಜದಲ್ಲಿ ಏನು ಅನ್ಯಾಯವಾದರೂ, ಮನೆಗೆ ಬಂದಾಗ ಹೆಂಡತಿಯ ನೆರವು ಮತ್ತು ಸಹಾನುಭೂತಿಯು ದೊರಕುತ್ತದೆ ಎಂದು ಗಂಡಸು ಆಸೆಪಡುತ್ತಾನೆ. ಹೆಂಡತಿಯೂ ಹಾಗೆಯೇ ! ಒಬ್ಬರಿಗೊಬ್ಬರು ನೆರವಾದರೆ ಇಬ್ಬರಿಗೂ ಸುಖ. ಸಂಸಾರವು ಚೆಂದ. ದೈಹಿಕ ಸಂಬಂಧವಿಲ್ಲದಿದ್ದರೂ, ರಕ್ತ ಸಂಬಂಧವಿರದಿದ್ದರೂ ; ಮಾನವರ ನಡುವೆ ಆತ್ಮೀಯತೆಯು ಬೆಳೆದಾಗ, ಒಲವೂ ಮೂಡುತ್ತದೆ. ಪವಿತ್ರ ಸ್ನೇಹದ ತಳಹದಿಯೇ ಇದು. ಇವೆಲ್ಲಾ ನಿದರ್ಶನಗಳಲ್ಲಿಯೂ, ಬಾಳಿನಲ್ಲಿ ಹಿತವನ್ನು ಪಡೆಯಬೇಕಾದರೆ, ತೃಪ್ತಿಯನ್ನು ಹೊಂದಬೇಕಾದರೆ ಭಾವನೆಗಳು ಅತಿ ಮುಖ್ಯವಾದ ಪಾತ್ರವನ್ನು ವಹಿಸುವುದನ್ನು ಕಾಣಬಹುದು.

ಆದರೆ ಪ್ರೀತಿ, ಅನುಕಂಪ, ಸಹಾನುಭೂತಿ, ಇತ್ಯಾದಿ ಭಾವನಾ ಅನುಭವಗಳನ್ನು, ಪ್ರದರ್ಶಿಸಬೇಕಾದರೆ, ಯೋಚನೆಗಳನ್ನೂ ಮನಸ್ಸು ಮಾಡಬೇಕು. ಸಹಜವಾಗಿ ಯೋಚನೆಗಳು ತಾವಾಗಿಯೇ ಮೂಡಿ ಆದರವನ್ನು ಕಾಣಿಸಬಹುದು. ಅಥವಾ ಪ್ರಯತ್ನಪಟ್ಟು ಬುದ್ಧಿಯನ್ನು ಉಪಯೋಗಿಸಿ ಹಾಗೆ ಮಾಡಬಹುದು. ಭಾವನೆಗಳೂ, ಬುದ್ಧಿಯ ಚಾಕಚಕ್ಯತೆಯೂ ಪರಸ್ಪರವಾಗಿದ್ದರೆ ಬಾಳು ಹಸನಾಗುತ್ತದೆ.

ಆದರೆ ರಘುಪತಿಯಲ್ಲಿ ಭಾವನೆಗಳು ಮರೆಯಾಗಹತ್ತಿದುವು. ಮಾಯವೂ ಆದುವು. ಹೀಗಾಗುತ್ತಿದೆ ; ಇದು ಸರಿಯಲ್ಲ ; ಎಂದು ರಘುಪತಿಗೆ ತಿಳಿಯಿತು. ಆದರೆ ದುಃಖವಾಗಲಿಲ್ಲ. ತಪ್ಪು ಮಾಡಿದೆ ಎನ್ನುವ ಭಾವನೆಯೂ ಬರಲಿಲ್ಲ. ಇವೆಲ್ಲದಕ್ಕೂ ಉದಾಸೀನನಾಗಿದ್ದ.

ಅಂದರೆ ಅವನ ಮನಸ್ಸಿನಲ್ಲಿ, ಭಾವನೆಗಳನ್ನು ಕಾಣಿಸುವ ಭಾಗಕ್ಕೂ ; ಯೋಚಿಸುವ ಭಾಗಕ್ಕೂ, ಮಧ್ಯೆ ಇರಬೇಕಾದ ಸಂಪರ್ಕವು ಮುರಿದು ಬಿದ್ದಿತ್ತು. ಆದುದರಿಂದಲೇ ಅವ ಉದಾಸೀನನಾಗಿದ್ದ. ಮನಸ್ಸಿನ ಮುಖ್ಯವಾದ ಎರಡು ಭಾಗಗಳಿಗೂ ಸಂಪರ್ಕವು ಹರಿದುದರಿಂದ, ಮನಸ್ಸು ಛಿದ್ರವಾಯಿತು ; ಹೋಳಾಯಿತು ; ಎನ್ನಬಹುದು. ಈ ತೆರನ ಮಾನಸಿಕ ಅವ್ಯವಸ್ಥೆಗಳನ್ನು ಸ್ಕೀಜೋಫ್ರೆನಿಯಾ ಎಂದು ಹೆಸರಿಸುತ್ತಾರೆ.

ಹೀಗೆ ಮನಸ್ಸು ಛಿದ್ರವಾದಾಗ, ಆಳ ಮನಸ್ಸಿನಲ್ಲಿ ಹುದುಗಿಕೊಂಡಿದ್ದ ID-compulsions ವನ್ಯ ಮೃಗಗಳ ನಡತೆಯು ರಘುಪತಿಯನ್ನು ಜಗ್ಗಿಸಿ ಆಡಿಸಬಹುದು. ಆಗ ಮಾನವ ಸಹಜವಾದ ಆಸೆ, ಆಕಾಂಕ್ಷೆ ; ಸುರಕ್ಷಿತವಾಗಿರಬೇಕು, ಸಮಾಜದಲ್ಲಿ ಮನ್ನಣೆಯನ್ನು ಪಡೆಯಬೇಕು, ಎಂಬುವೆಲ್ಲಾ ನಶಿಸಿಹೋಗುತ್ತಾ ಇರುತ್ತವೆ. ಇದರ ಲಕ್ಷಣವೇ ಮಹತ್ ಉದಾಸೀನತೆ. ರಘುಪತಿಯು ಮಹಾ ಉದಾಸೀನನಾಗಿದ್ದು ಈ ಕಾರಣದಿಂದ.

ರೋಗದ ಚಿಹ್ನೆಗಳನ್ನೆಲ್ಲಾ ಬರೆದು ರಘುಪತಿಯು ತಂದುಕೊಟ್ಟ. ಯೋಚನೆಗಳನ್ನು ಸಮಂಜಸವಾಗಿ ಬರೆದಿಟ್ಟ ರೀತಿಯನ್ನು ನೋಡಿದರೆ, ಯೋಚನೆಗಳನ್ನು ಹೊರಪಡಿಸುವಾಗ ಯಾವ ತಪ್ಪೂ ಇಲ್ಲ ಎನ್ನುವುದು ಸ್ಪಷ್ಟವಾಯಿತು. ಹೊರಪಡಿಸುವುದು ಸಮಂಜಸವಾಗಿದ್ದರೂ, ಅವ ಯೋಚನೆಗಳನ್ನು ಮಾಡುವಾಗ ತೀವ್ರವಾಗಿ ಎಡವುತ್ತಿದ್ದ ಎನ್ನುವುದೂ ಸ್ಪಷ್ಟವಾಗಿತ್ತು. ಭಾವನೆಗಳು ನಶಿಸುತ್ತಿದ್ದುದರಿಂದ ಯೋಚಿಸುವಾಗ ಎಡವುತ್ತಿದ್ದ.ಹಾಗೆ ಹೊರಬಂದ ಯೋಚನೆಗಳನ್ನು ಮಾತುಗಳಲ್ಲಿ ಮೂಡಿಸುವಾಗ, ಸಮಂಜಸವಾಗಿಯೇ ಮಾಡುತ್ತಿದ್ದ. ಇವನ ಮನಸ್ಸು ಸರಿಯಾಗಿ ಕೆಲಸ ಮಾಡುತ್ತಿದೆ ; ಇವನಿಗೇನೂ ಬೇನೆ ಇರಲಾರದು ; ಎಂದು ಅನ್ನುವಂತಿದ್ದ.

ರಘುಪತಿಯು ಕೆಲಸದ ಮೇಲಿದ್ದಾಗಲೂ ಕೂಡ, 'ನನ್ನನ್ನು ನೋಡಿ ಜನರು ನಗುತ್ತಾರೆ, ನನ್ನ ಹಿಂದೆ ಮೂದಲಿಸುತ್ತಿದ್ದಾರೆ' ಎನ್ನುವ ಯೋಚನೆಗಳು, ಒದ್ದುಕೊಂಡು ಬಂದು, ಕೆಲಸದ ಮೇಲಿರಬೇಕಾಗಿದ್ದ ಗಮನವನ್ನು ತಪ್ಪಿಸಿದುವು. ರಘುಪತಿಯ ಈ ಅವಸ್ಥೆಯನ್ನು Thought-disorder ಎಂದು ಕರೆಯುತ್ತಾರೆ, ಸ್ಕೀಜೋಫೆನ್ರಿಯಗಳ ಒಂದು ಪ್ರಮುಖವಾದ ಚಿಹ್ನೆ ಇದು.

'ಇಷ್ಟು ದುರ್ಬಲವೇನೋ, ನಿನ್ನ ಮನಸ್ಸು, ರಘುಪತಿ ; ಸಾಹಸಪಟ್ಟು ಮನಸ್ಸಿನ ಯೋಚನೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕಪ್ಪಾ' ಎಂದು ಬುದ್ಧಿಯನ್ನು ಹೇಳುವುದು, ಶುದ್ಧ ಮೌಢ್ಯತನ. ಅದು ಸಾಧ್ಯವಾಗಿದ್ದರೆ ಅವ ಡಾಕ್ಟರ ಬಳಿಗೆ ಏಕೆ ಬರುತ್ತಿದ್ದ? ಮನಸ್ಸು ಹತೋಟಿಯಲ್ಲಿರದೆ, ಸೂತ್ರವನ್ನು ಹರಿದುಕೊಂಡ, ಹಾಗೂ ಬಾಲಂಗೋಚಿ ಇಲ್ಲದ ಗಾಳಿಪಟದಂತೆ, ತಿಪ್ಪರಲಾಗ ಹಾಕಿ ಬೆದರಿಸುತ್ತಿರುವಾಗ, ಅವನನ್ನು ಧೈರ್ಯ ತಂದುಕೋಪ್ಪಾ ಎನ್ನುವುದು ಶುದ್ಧ ಅನ್ಯಾಯ. ಹೀಗಂದರೆ ರಘುಪತಿಯು ಸಿಡುಕಿ ರೇಗುವುದು ಸಹಜ. ಯೋಚಿಸಿ, ದೃಢ ನಿರ್ಧಾರ ಮಾಡುವ ಶಕ್ತಿಯು ಕಳೆದು ಹೋಗುವುದು ಸ್ಕೀಜೋಫ್ರೆನಿಯಾಗಳ ಮುಖ್ಯ ಲಕ್ಷಣ.

ಈ ಬೇನೆಯಿಂದ ರಘುಪತಿಯು ಹದಿನೈದು ಹದಿನಾರು ವರ್ಷಗಳಿಂದಲೂ ನರಳುತ್ತಿದ್ದಾನೆ. ಈ ಅವಧಿಯಲ್ಲಿ ಕೆಲವು ದಿನಗಳನ್ನು ಕಾಲೇಜಿನಲ್ಲಿ ಕಳೆದ. ಪರೀಕ್ಷೆಯಲ್ಲಿ ಉತ್ತೀರ್ಣನಾಗಲಿಲ್ಲ. ನಂತರ ಚಾಕರಿಗಾಗಿ ಕೆಲವು ಕಾಲ ಒದ್ದಾಡಿದ. ಕೆಲಸ ಸಿಕ್ಕಿತು, ಒಂದೆರಡು ವರ್ಷಗಳು ನೆಮ್ಮದಿಯಿಂದ ಕೆಲಸ ಮಾಡಿಕೊಂಡಿದ್ದಂತೆಯೇ ಇದ್ದ. ಮದುವೆಗೂ ಒಪ್ಪಿದ. ತಂದೆತಾಯಿಗಳೊಡನಿದ್ದ ಸಂಬಂಧವು ಸಡಿಲಗೊಂಡಿತು. ತದನಂತರ ಸ್ಕಿಜೋ ಪ್ರವೃತ್ತಿಯು ಹೆಚ್ಚಾಯಿತು. ರಜೆ ತೆಗೆದುಕೊಳ್ಳುವುದೂ ಅತಿಯಾಯಿತು. ಭಾವನೆಗಳೂ ಕ್ಷಯಿಸುತ್ತ ಹೋದುವು. ಕಡೆಯ ಈ ಹಂತವನ್ನು ಮುಟ್ಟುವ ತನಕ, ರಘುಪತಿಗೆ ಈ ಬೇನೆ ಇದೆ, ಅಥವಾ ಇರಬಹುದು ಎಂಬುದೂ ತಿಳಿಯುತ್ತಿರಲಿಲ್ಲ ; ವೈದ್ಯರ ಸೂಕ್ಷ್ಮ ಪರೀಕ್ಷೆಗೆ ಒಳಪಡದೇ ಇದ್ದರೂ ಅಂದರೆ ಬೇನೆಯು ಇದ್ದರೂ ಅವ ಎಲ್ಲರಂತೆಯೇ ಇದ್ದ, ಹೊರ ನೋಟಕ್ಕೆ; ಎನ್ನಬಹುದು. ವರ್ಷಾನುಗಟ್ಟಲೆ ಇರುವ ಈ ಬೇನೆಯು, ಸ್ವಲ್ಪಸ್ವಲ್ಪವಾಗಿಯಾದರೂ, ಖಂಡಿತವಾಗಿ, ವ್ಯಕ್ತಿತ್ವವನ್ನು ನಾಶಪಡಿಸುತ್ತ ಹೋಗುತ್ತದೆ. ಸಂಸಾರದಲ್ಲಿ ಅಥವಾ ಸಮಾಜದಲ್ಲಿ ವ್ಯಕ್ತಿಯ ವರ್ತನೆಯಿಂದ ಧಕ್ಕೆ ಆಗುವಂತಾದಾಗ, ಮನೋವೈದ್ಯರ ನೆರವನ್ನು ಪಡೆಯುವಂತಾಗುತ್ತದೆ. ಅಂತಹ ಹಂತದಲ್ಲೂ ಚಿಕಿತ್ಸೆಯು ಸಾಕಷ್ಟು ಯಶಸ್ವಿಯಾಗುತ್ತದೆ.

ರಘುಪತಿಯು ಚಿಕಿತ್ಸೆಯನ್ನು ಪಡೆದ ; ಉತ್ತಮ ರೀತಿಯ ಚಿಕಿತ್ಸೆ. ಕೆಲವು ತಿಂಗಳುಗಳಲ್ಲಿ ಗುಣಮುಖನಾದ. ಈಗ ತಿರುಗಿ ಕೆಲಸಕ್ಕೆ ಹೋಗುತ್ತಿದ್ದಾನೆ. ರಜ ತೆಗೆದುಕೊಳ್ಳುವ ಗೀಳು ಬಿಟ್ಟುಹೋಗಿದೆ. ಕೆಲಸದಲ್ಲಿ ಜಾಣತನವನ್ನು ತೋರಿಸುತ್ತಿಲ್ಲ, ದಿಟ. ಆದರೆ ಹೇಳಿದ್ದನ್ನು ಶ್ರದ್ಧೆಯಿಂದ ಮಾಡುತ್ತಿದ್ದಾನೆ. ತಾನಾಗಿ ಸ್ವಂತ ಬುದ್ಧಿಯನ್ನು ಉಪಯೋಗಿಸಲಾರ. ಆದರೂ ಮಾಡಿದ ಕೆಲಸದಲ್ಲಿ ತುಂಬಾ ತಪ್ಪುಗಳಿರುವುದಿಲ್ಲ. ಹೆಂಡತಿ ಮಕ್ಕಳು ಎಂದರೆ, ಎಲ್ಲರಂತೆ ಸಂಭ್ರಮ ಪಡುತ್ತಿಲ್ಲ. ಒಂದು ರೀತಿಯಲ್ಲಿ ಉದಾಸೀನನೇ ಆಗಿದ್ದಾನೆ. ಹಾಗಿದ್ದರೂ ನಾಲ್ಕನೆಯ ಮಗುವೂ ಆಗಿದೆ. 'ಒಳ್ಳೆಯ ಮಾತುಗಳನ್ನಾಡದಿದ್ದರೂ, ಪರವಾಗಿಲ್ಲ. ಮೊದಲಿದ್ದಂತೆ, ಜೋಭದ್ರೆ ಬಡಿದವರಂತೆ ಬಿದ್ದುಕೊಂಡಿರುವುದರ ಬದಲು, ಎಲ್ಲ ಗಂಡಸರಂತೆ ಈಗ ಚಾಕರಿಗೆ ಹೋಗಿ ಬರುತ್ತಾರೆ, ಸಂಬಳ ತರುತ್ತಾರೆ. ಅಷ್ಟೇ ಸಾಕು' ಎಂದು ಹೆಂಡತಿಯೂ ಒಗ್ಗಿಕೊಂಡು ನೆಮ್ಮದಿಯಿಂದಲೇ ಇದ್ದಾಳೆ.

**ರ್‍ಯಾಂಕುಗಳ ರಾಮಭದ್ರ**

ಪ್ರತಿಯೊಂದು ಪರೀಕ್ಷೆಯಲ್ಲೂ ಮೊದಲ ಮೂರು ರ್‍ಯಾಂಕುಗಳಲ್ಲಿ ಒಂದನ್ನು

ರಾಮಭದ್ರ ಗಳಿಸುತ್ತಿದ್ದ. ಹೀಗಾಗಿ ಬಿ.ಎಸ್‌ಸಿ. ಆನರ್ಸ್‌ನಲ್ಲಿ ಎರಡನೆ ರ‍್ಯಾಂಕು ಪಡೆದಾಗ ಅವನ ತಾಯ್ತಂದೆಯರು ಕೂಡ ಹಿಗ್ಗಲಿಲ್ಲ. ಅಷ್ಟು ಸರ್ವೇಸಾಮಾನ್ಯವಾಗಿ ಹೋಗಿತ್ತು ರಾಮಭದ್ರನ ರ‍್ಯಾಂಕು ಗಿಟ್ಟಿಸುವುದು. ರ‍್ಯಾಂಕ್ ಬರದೇ ಇದ್ದಿದ್ದರೆ, ಪ್ರಾಯಶಃ ತಾಯ್ತಂದೆಯರು ಆಶ್ಚರ್ಯಪಟ್ಟು ಕುಗ್ಗುತ್ತಿದ್ದರೇನೋ?

ಪರೀಕ್ಷೆಯ ಫಲಿತಾಂಶಗಳು ಹೊರಬಿದ್ದ ೨–೩ ವಾರಗಳೊಳಗೆ ಅಮೆರಿಕಾದ ವಿಶ್ವವಿದ್ಯಾಲಯದಿಂದ ರಾಮಭದ್ರನಿಗೆ ಕಾಗದವೊಂದು ಬಂದಿತು. ಡಾಕ್ಟರೇಟ್ ಪರೀಕ್ಷೆಗೆ ಓದುವುದಾದರೆ ವಿದ್ಯಾರ್ಥಿವೇತನವನ್ನು ಕೊಡುವುದಾಗಿ ಆಮಂತ್ರಣವಿತ್ತು. ಅದನ್ನು ಸ್ವೀಕರಿಸುವುದಾಗಿ ರಾಮಭದ್ರ ಉತ್ತರವನ್ನು ಬರೆದು ಹಾಕಿದ.

ಪರೀಕ್ಷೆಯ ಫಲಿತಾಂಶಗಳು ಹೊರಬಿದ್ದ ಕೂಡಲೇ, 'ಮುಂದೆ ದಿಳ್ಳಿ ಪರೀಕ್ಷೆಗೆ ಕೂತುಕೊಳ್ಳುತ್ತೀಯಾ ? ಅಥವಾ ಎಂ.ಎಸ್‌ಸಿ. ಪರೀಕ್ಷೆಗೆ ಓದುತ್ತೀಯಾ' ಎಂದು ತಾಯಿ ಕೇಳಿದಳು. ದಿಳ್ಳಿ ಪರೀಕ್ಷೆಗೆ ಕೂತು ಐ.ಎ.ಎಸ್. ಮಾಡಿ ದೊಡ್ಡ ಆಫೀಸರ್ ಆದರೆ ಸಂಭ್ರಮದ ಮದುವೆಯನ್ನು ಅದ್ದೂರಿಯಾಗಿ ಮಾಡಿಸಬಹುದು ಎಂದಾಕೆಯ ಆಸೆ. ಹಾಗೂ ಇನ್ನೂ ಓದು ಓದು ಅಂತ ಮುಂದುವರೆಯುತ್ತಲೇ ಇದ್ದರೆ, ದೊಡ್ಡ ಚಾಕರಿ ಸಿಗುವುದು ಯಾವಾಗ ? ಆತನಕ ತಾನು ಬದುಕಿರುತ್ತೇನೆ ಎನ್ನುವ ನಂಬಿಕೆ ಎಲ್ಲಿದೆ ? 'ಮುಂದೇನು ಮಾಡಬೇಕು ಎನ್ನುವುದನ್ನು ಈಗಲೇ ಯಾಕೆ ತೀರ್ಮಾನಿಸಬೇಕು' ಎಂದು ಮಗ ಉತ್ತರಿಸಿದ. ತಾಯಿ ಮಕ್ಕಳ ಮಧ್ಯೆ ಇರುವ ಆದರದ ಧ್ವನಿಯಲ್ಲಲ್ಲ. ರೈಲ್ವೆ ಸ್ಟೇಷನ್ನಿನಲ್ಲಿ ಅಪರಿಚಿತರು ಟೈಂ ಎಷ್ಟು ಎಂದು ಕೇಳಿದರೆ, ಇಷ್ಟು ಅಂತ ಕೈಗಡಿಯಾರವನ್ನು ನೋಡಿಕೊಂಡು ಉತ್ತರಿಸುವವನ ಧ್ವನಿಯಲ್ಲಿ, ರಾಮು ನುಡಿದಿದ್ದ. ಮಾತನ್ನು ಮುಂದುವರಿಸಲಿಲ್ಲ, ತಾಯಿಯೂ ತೆಪ್ಪಗಾಗಿದ್ದಳು.

ಆ ರಾತ್ರಿ ತಾಯಿಯು, 'ಏನೂ ಅಂದ್ರೆ, ಮುಂದೇನು ಮಾಡಬೇಕು ಅಂತಿದಾನೆ, ರಾಮು ; ನೀವೊಂದು ಮಾತು ಕೇಳಬಾರದೇ ? ಬೆಳಗ್ಗೆ ನಾನು ಕೇಳಿದೆ. ಹೀಗಂತ ಉತ್ತರ ಕೊಟ್ಟ. ನೀವು ಕೇಳಿದರೆ ಸರಿಯಾಗಿ ಉತ್ತರ ಕೊಟ್ಟಾನು. ಅವನಿಗೆ ಅಸಡ್ಡೆ, ನನ್ನ ಕಂಡರೆ ; ಓದು ಬರಹ ಕಾಣದ ಮುದುಕಿ ಅಂತ', ಎಂದು ಗಂಡನಿಗೆ ಹೇಳಿದಳು.

'ರಾಮುವಿನ ಸ್ವಭಾವ ನಿನಗೆ ತಿಳಿದಿದೆ. ನಮ್ಮಿಬ್ಬರ ಹತ್ತಿರ, ಹುಡುಗತನದಿಂದಲೂ, ಮುಖ ಕೊಟ್ಟು ನಗುನಗುತ ಮಾತನಾಡಿದ್ದಿಲ್ಲ, ಎಂದೂನು, ಅಗತ್ಯ ಬಿದ್ದಾಗ ಅವಶ್ಯಕವಾದ ಎರಡು ಮಾತಾಡ್ತಾನೆ. ಅಷ್ಟೇ, ಯಾವ ಪರೀಕ್ಷೆಯಲ್ಲಿ

ಸೆಕೆಂಡ್ ಕ್ಲಾಸ್‌ಗಿಂತ ಹೆಚ್ಚಿನದನ್ನು ನಾನು ಪಡೆಯಲೇ ಇಲ್ಲ. ಕೇವಲ ಹೈಸ್ಕೂಲ್ ಮಾಸ್ತರು, ನಾನೀಗ. ಅವನಾದರೋ ಬಲು ಜಾಣ. ರ್‍ಯಾಂಕ್ ಪಡೆಯದೆ ಯಾವ ಪರೀಕ್ಷೆಯಲ್ಲೂ ಸೋತಿಲ್ಲ. ಅವನ ಹತ್ತಿರ ಮಾತನಾಡುಕ್ಕೆ ನನಗೆ ಸ್ವಲ್ಪ ಭಯ. ತಾಯಿ ಅಂದರೆ ಅಸಡ್ಡೆ ಇರುಲ್ಲ ಮಕ್ಕಳಿಗೆ; ನೀನೇ ಇನ್ನೊಂದು ಸರ್ತಿ ಕೇಳು' ಎಂದರು ತಂದೆ.

ಮಗನದು ಬಾಲ್ಯದಿಂದಲೂ ಸಂಕೋಚ ಪ್ರವೃತ್ತಿ. ತಾನಾಯಿತು, ತನ್ನ ಪುಸ್ತಕಗಳಾಯಿತು. ಬರುತ್ತಿದ್ದ ವಿದ್ಯಾರ್ಥಿವೇತನದ ಕಾರಣದಿಂದ, ತಂದೆಯ ಬಳಿ ಫೀಜು, ಪುಸ್ತಕ, ಅಂತ ಏನೂ ಬೇಡಬೇಕಾಗಿರಲಿಲ್ಲ. ಅಪ್ಪಿತಪ್ಪಿ, ಅಪ್ಪ ಮೇಲು ಬಿದ್ದುಕೊಂಡು ಮಾತನಾಡಿಸಿದರೆ, ಹ್ಞೂ; ಊಹ್ಞೂ; ಇರಬಹುದು ; ಗೊತ್ತಿಲ್ಲ ; ಇವೇ ಮಗನಿಂದ ಬರುತ್ತಿದ್ದ ಉತ್ತರ. ಸದರದಿಂದ ಯಾರೊಡನೆಯೂ ಮಗ ನಡೆದುಕೊಳ್ಳುತ್ತಿರಲಿಲ್ಲ ಎನ್ನುವುದನ್ನು ಮನೆಗೆ ಬಂದ ನೆಂಟರಿಷ್ಟರೂ ಗಮನಿಸಿದ್ದರು. ಆ ವಿಷಯವನ್ನು ಆಡಿಕೊಂಡೂ ಇದ್ದರು. ರ್‍ಯಾಂಕ್ ಪಡೆದು ಪತ್ರಿಕೆಗಳಲ್ಲಿ ಫೋಟೋ ಹಾಕಿಸಿಕೊಳ್ಳುವ ಹುಡುಗನೊಡನೆ, ನಮ್ಮ ಹುಡುಗ ಇವ, ಎಂದು ಮಾತನಾಡಲು ನೆಂಟರಿಗೆಲ್ಲಾ ಬಲು ಆಸೆ. ಆದರೆ ರಾಮಭದ್ರ ಸಹಕರಿಸುತ್ತಿರಲಿಲ್ಲ. ತನ್ನ ಪಾಡಿಗೆ ತಾನು ಅಲಕ್ ಆಗಿರುವುದರಲ್ಲಿ ಅವನಿಗೆ ಖುಷಿ ಇದ್ದಿತು.

'ನಿಮ್ಮ ಮಗ ಅಮೆರಿಕಾಕ್ಕೆ ಹೋಗುತ್ತಾನಂತೆ' ಎಂದು ಮಾಸ್ತರೊಬ್ಬರು, ರಾಮಭದ್ರನ ತಂದೆಯವರನ್ನು ಕೇಳಿದರು. ಅವರಿಗೇನು ಉತ್ತರ ಹೇಳುವುದು; ಯಾವ ವಿಷಯವೂ ಗೊತ್ತಿರಲಿಲ್ಲ. 'ಹೋಗಬೇಕು ಅಂತಿದಾನೆ ಇನ್ನೂ ವ್ಯವಸ್ಥೆಯಾಗಿಲ್ಲ' ಎಂದು ತೇಲಿಸಿ ಹೇಳಿದರು. ಮನೆಗೆ ಬಂದು ರಾತ್ರಿ ಮಗನನ್ನು ಕರೆದು ಹೀಗಂತ ಹೇಳಿದರು. ಸಮಾಚಾರ ಏನು, ಎಂದು ಕೇಳಿದರು. ಏನು ಮಾಡುತ್ತಿದೀಯೋ ಅದನ್ನು ಹೇಳಬಾರದೇಪ್ಪಾ ಎಂದೂ ಕೇಳಿದರು. 'ಏನು ಮಹಾ ಸುದ್ದಿ ಅಂತ ಹೇಳಬೇಕು. ಇನ್ನೂ ನಾಲ್ಕು ದಿನಗಳಿವೆ, ಹೊರಡುಕ್ಕೆ. ಆಮೇಲೆ ಹೇಳಿದರಾಯಿತು ಅಂತ ಸುಮ್ಮನಿದ್ದೆ,' ಎಂದು ರಾಮಭದ್ರ ಉತ್ತರಿಸಿದ. ಊರು ಬಿಟ್ಟು, ಮನೆಯವರನ್ನು ಬೀಳ್ಕೊಟ್ಟು ಪರದೇಶಕ್ಕೆ ಕೆಲವು ವರ್ಷಗಳ ವಿದ್ಯಾಭ್ಯಾಸಕ್ಕೆ ಹೋಗುತ್ತಿದ್ದಾನೆ. ತಂದೆ ತಾಯಿಯರನ್ನು ಬಿಟ್ಟು ಹೋಗಬೇಕಲ್ಲಾ ಎಂಬ ಆತಂಕವಾಗಲೀ, ಇನ್ನೆಂದೋ ಇವರನ್ನು ಕಾಣುವುದು ಎನ್ನುವ ಕೊರಗಾಗಲೀ ಅವನಲ್ಲಿ ಕಾಣಬರಲಿಲ್ಲ. ಅಮೆರಿಕಾಕ್ಕೆ ಹೋದ.

ನಾಲ್ಕು ವರ್ಷಗಳು ಅಲ್ಲಿದ್ದ. ಡಾಕ್ಟರೇಟ್ ಪ್ರಶಸ್ತಿಯನ್ನು ಸುಲಭವಾಗಿ

ಗಳಿಸಿದ. ಆ ಅವಧಿಯಲ್ಲಿ ಎರಡು ಮೂರು ತಿಂಗಳಿಗೊಂದರಂತೆ ಪತ್ರವನ್ನು ಬರೆದಿದ್ದ. ಮೂರು ಪಂಕ್ತಿಗಳಿದ್ದ ಕೇವಲ ಯೋಗಕ್ಷೇಮದ ಪತ್ರಗಳು. ಕ್ರಿಸ್‌ಮಸ್ ಹಬ್ಬದ ವೇಳೆಯಲ್ಲಿ ಒಂದು ವರ್ಷ ಮಾತ್ರ, ಕೆನಡಾಕ್ಕೆ ಒಂದು ವಾರ ಪ್ರವಾಸವನ್ನು ಮಾಡುತ್ತೇನೆ, ಎಂದು ಬರೆದಿದ್ದ. ವರ್ಣಚಿತ್ರದ ಎರಡು ಕಾರ್ಡುಗಳನ್ನು ಕಳುಹಿಸಿಯೂ ಇದ್ದ.

ಹಿಂತಿರುಗಿದ ಹುಟ್ಟಿದೂರಿಗೆ ; ಡಾಕ್ಟರ್ ರಾಮಭದ್ರನ್. ಮಗ ಉದ್ದಾಮ ಪಂಡಿತನಾಗಿ ಹಿಂತಿರುಗಿದ. ಇನ್ನು ಮದುವೆಯನ್ನು ಮಾಡಬಹುದು ಎಂದು ಅಮ್ಮನಿಗೆ ಸಡಗರ. ಮಗನೊಡನೆ ಆ ಮಾತನ್ನೆತ್ತಿದಾಗ 'ಮಾಡಿಕೊಳ್ಳುವ ಕಾಲಕ್ಕೆ ನಾನೇ ಹೇಳ್ತೀನಿ. ನೀನು ಆ ವಿಷಯವನ್ನು ಎತ್ತಬೇಡ, ಅಮ್ಮಾ' ಎಂದಿದ್ದ. ಅಮ್ಮಾ ಅಂತ ಮಗ ಅಂದನಲ್ಲಾ ಅಂತಲೇ ಅಮ್ಮನಿಗೆ ಸಂತೋಷ. ಯಾವು ಯಾವುದೋ ಕೆಲಸಕ್ಕೆ, ಅರ್ಜಿಗಳನ್ನು ಹಾಕತೊಡಗಿದ ರಾಮಭದ್ರ, ಕೊಠಡಿಯಲ್ಲಿ ಕುಳಿತು ಕಾಗದ ಬರೆಯುವುದು, ಅಂಚೆಗೆ ಹಾಕಿ ಬರುವುದು, ಇವೆಲ್ಲಕ್ಕೂ ದಿನಕ್ಕೆ ಒಂದು ತಾಸು ಹಿಡಿಯುತ್ತಿತ್ತು. ಮಿಕ್ಕೆಲ್ಲಾ ಹೊತ್ತೂ ಕೊಠಡಿಯನ್ನು ಬಿಟ್ಟು ಹೊರಕ್ಕೆ ಬರುತ್ತಿರಲಿಲ್ಲ. ಬಾಗಿಲು ಹಾಕಿಕೊಂಡು ಒಳಗೇ ಇರಲು ಪ್ರಾರಂಭಿಸಿದ. ಊಟಕ್ಕೆ ಕರೆದರೆ, ಬಾಗಿಲು ತೆಗೆದುಕೊಂಡು ಬರುತ್ತಿದ್ದ. ಉಂಡು ಹಿಂತಿರುಗುತ್ತಿದ್ದನೇ ವಿನಾ ತಾಯ್ತಂದೆಯರೊಡನೆ ಅಥವಾ ತಂಗಿ, ತಮ್ಮಂದಿರೊಡನೆ ಮಾತಿಗೆ ಕೂರುತ್ತಿರಲಿಲ್ಲ. ಬಾರೋ ಕೂತುಕೋ ಎಂದು ಯಾರಾದರೂ ಸಲಿಗೆಯಿಂದ ಕರೆದರೆ ಸಿಡುಕುತ್ತಾ ಕೊಠಡಿಗೆ ಹೋಗಿಬಿಡುತ್ತಿದ್ದ.

ಒಂದು ಸಂಜೆ ಐದರ ವೇಳೆಗೆ 'ನಾನು ಊರಿಗೆ ಹೋಗುತ್ತೇನೆ' ಎಂದು ತಾಯಿಗೆ ಹೇಳಿ ಹೊರಟುಹೋಗಿದ್ದ. ಎಲ್ಲಿಗೆ ಏತಕ್ಕೆ ಎಂದೇನೂ ಹೇಳಲಿಲ್ಲ. ಕೇಳುವ ಧೈರ್ಯವೂ ತಾಯಿಗಿರಲಿಲ್ಲ. ಪ್ರಯಾಣ ಮಾಡ ಹೊರಡುವಾಗ ಹಾಗೆ ಕೇಳಬಾರದು, ಅದು ಅಪಶಕುನ, ಅಂತ ತಾಯಿಗೆ ಗೊತ್ತು.

'ನಿಮ್ಮಗ ನಮ್ಮೂರಿನಲ್ಲಿ ಕೆಲಸದಲ್ಲಿದ್ದಾನೆ. ಇಲ್ಲಿಗೆ ಬರುತ್ತಾರೆ ಅಂತ ಕಾಗದ ಬರೆಯಬಾರದಾಗಿತ್ತೆ ?' ಎಂದು ಹೊರ ಊರಿನಲ್ಲಿ ಇಂಜನಿಯರಾಗಿದ್ದ, ಸ್ನೇಹಿತರೊಬ್ಬರು ಕಾಗದ ಬರೆದಾಗ, ಮಗ ಅಲ್ಲಿದ್ದಾನೆ ಎಂಬುದು ತಿಳಿದಿದ್ದು. 'ಹೋಗಲಿ ' ಎಲ್ಲಿಯಾದರೂ ಕೆಲಸ ಮಾಡಿಕೊಂಡು ಸುಖವಾಗಿರಲಿ, ನಮಗೆ ಹೇಳದಿದ್ದರೆ ಏನಾಯಿತು ? ಎಂದು ತಾಯ್ತಂದೆಯರು ಸಮಾಧಾನ ಮಾಡಿ ಕೊಂಡರು.

ಆದರೆ ಆರು ತಿಂಗಳುಗಳಲ್ಲಿ ಒಂದು ಬೆಳಗ್ಗೆ ರಾಮಭದ್ರ ಮನೆಗೆ ಹಿಂತಿರುಗಿದ. 'ಆ ಕೆಲಸವನ್ನು ಬಿಟ್ಟೆ' ಎಂದು ಮಾತ್ರ ಹೇಳಿದ. ಯಥಾಪ್ರಕಾರ

ಕೊಠಡಿ ಹಿಡಿದ. ದಿನಕ್ಕೆ ಇಪ್ಪತ್ತು, ಇಪ್ಪತ್ಮೂರು ತಾಸು, ಒಂದೇ ಕೊಠಡಿಯಲ್ಲಿ ಇರಬೇಕಾದರೆ, ಅದೂ ೨೫–೨೬ರ ಪ್ರಪಂಚವನ್ನು ನೋಡಿ ಬಂದ ಯುವಕ; ಏನೋ ಎಲ್ಲೋ ಹಳಿ ತಪ್ಪಿದೆ ಎನ್ನುವ ಅನುಮಾನವು ಮನೆಯ ಹಿರಿಯರಿಗೆ ಬಂದಿರಬೇಕು. 'ಯಾಕಪ್ಪಾ ! ಹೀಗೆ ಶೋಂಭೇರಿಯಾಗಿದಿ, ಮನೋವೈದ್ಯರನ್ನು ಕಾಣೋಣ' ಎಂದು ತಂದೆ ಒಮ್ಮೆ ಹೇಳಿದರು. 'ಮನೋವೈದ್ಯರನ್ನು ಕಾಣುವುದಕ್ಕೆ ನನಗೇನು ಹುಚ್ಚೇ ! ನನ್ನ ಪಾಡಿಗೆ ನನ್ನನ್ನು ಬಿಡಿ. ನನ್ನ ಜವಾಬ್ದಾರೀ ನನಗೇ ಇರಲಿ' ಎಂದು ರಾಮಭದ್ರ ಖಂಡತುಂಡಾಗಿ ಹೇಳಿದ. ಅದೆಷ್ಟು ಕೋಪ ಬಂದಿತ್ತೋ? ಥರ ಥರ ನಡುಗುತ್ತಿದ್ದ. ಮಾತುಗಳನ್ನಾಡುವಾಗ ತಡೆದು ಹಿಡಿದು ಆಡಿದ್ದ. ಮುಖವೆಲ್ಲಾ ಕೆಂಪೇರಿತ್ತು. ತಂದೆಯು ಮಾತನ್ನು ಮುಂದುವರಿಸಲಿಲ್ಲ.

ಎರಡು ಮೂರು ವರ್ಷಗಳಲ್ಲಿ ನಾಲ್ಕು ಕಡೆ ಕೆಲಸಕ್ಕೆ ಸೇರಿಕೊಂಡು, ಕೆಲವೇ ತಿಂಗಳುಗಳಲ್ಲಿ ರಾಜೀನಾಮೆ ಕೊಟ್ಟು ಹಿಂತಿರುಗುತ್ತಿದ್ದ. ಅತ್ಯುತ್ತಮ ಸರ್ಟಿಫಿಕೇಟ್‌ಗಳಿದ್ದುವು. ಪ್ರಕಟಿಸಿದ್ದ ರೀಸರ್ಚ್ ಪೇಪರುಗಳು ಪ್ರಸಿದ್ಧವಾಗಿದ್ದುವು. ಇಂತಹವನಿಗೆ ಕೆಲಸ ಸಿಗುವುದು ಸುಲಭವಾಗಿತ್ತು. ಸೇರಿಕೊಂಡ ಒಂದೆರಡು ತಿಂಗಳುಗಳು ಎಲ್ಲರಿಂದಲೂ ಹೊಗಳಿಸಿಕೊಳ್ಳುತ್ತಿದ್ದ ; ಪಾಂಡಿತ್ಯಕ್ಕಾಗಿ. ಆದರೆ ಯಾರೊಡನೆಯೂ ಸ್ನೇಹವನ್ನು ಮಾಡಿಕೊಳ್ಳುತ್ತಿರಲಿಲ್ಲ. ರಾಜೀನಾಮೆಯನ್ನು ಕೊಟ್ಟು ಹಿಂತಿರುಗುವಾಗ, ಯಾಕೆ ಇವ ರಾಜೀನಾಮೆಯನ್ನು ಕೊಡುತ್ತಿದ್ದಾನೆ ಎನ್ನುವುದು ಆ ಸಂಸ್ಥೆಯವರಿಗೆ ತಿಳಿಯುತ್ತಿರಲಿಲ್ಲ, 'ಅನಾನುಕೂಲಗಳು ಯಾವುದಾದರೂ ಇದ್ದರೆ, ನೀವು ಹೇಳಿದ್ದರೆ, ಅವನ್ನು ಸರಿಪಡಿಸುತ್ತಿದ್ದೆವು : ಕೆಲಸಕ್ಕೆ ಹಿಂತಿರುಗಿ ಬನ್ನಿ' ಎಂದು ಒಮ್ಮೆ ಕಾಗದವೂ ಬಂದಿತ್ತು. ರಾಮಭದ್ರ ಉತ್ತರಿಸಲೇ ಇಲ್ಲ.

ಕೊಠಡಿಯಿಂದ ಹೊರಕ್ಕೆ ಒಮ್ಮೆ ಬಂದಾಗ, ಅಕ್ಕಿ ಆರಿಸುತ್ತಾ ಅಮ್ಮ ಕುಳಿತಿದ್ದರು. ತಲೆಯೆತ್ತಿ ಮಗನ ಮುಖವನ್ನು ನೋಡಿದರು. ಹೀಗಾದನಲ್ಲ ಎಂದು ಕೊರಗು ಇತ್ತೇ ವಿನಾ ಬಾಯಿ ಬಿಚ್ಚಲು ಧೈರ್ಯವಿರಲಿಲ್ಲ. ಕಾರಣ, ತಲೆ ತಗ್ಗಿಸಿ ಅಕ್ಕಿ ಆರಿಸುವುದನ್ನು ಮುಂದುವರಿಸಿದರು. ಬಚ್ಚಲಮನೆಯ ಕಡೆಗೆ ಹೋಗುತ್ತಿದ್ದ ರಾಮಭದ್ರ ಅಮ್ಮನ ಬಳಿ ಅರೆಕ್ಷಣ ನಿಂತು 'ಪಿಸುಪಿಸು ಯಾಕೆ ಗೊಣಗುತ್ತೀ ! ಕೇಳಿಸುವ ಹಾಗೆ ಏನು ಹೇಳಬೇಕೋ ಅದನ್ನು ಹೇಳಬಾರದೇ?' ಎಂದು ರೇಗುತ್ತಾ ಹೇಳಿದ. ನಾನೇನೂ ಗೊಣಗುತ್ತಲೇ ಇಲ್ಲವಲ್ಲೋ ಎಂದು ಅಮ್ಮ ತಲೆಎತ್ತಿ ಹೇಳುವ ವೇಳೆಗೆ, ರಾಮಭದ್ರ ಬಚ್ಚಲುಮನೆಯೊಳಗಿದ್ದ.

ತನ್ನ ಬಟ್ಟೆಗಳನ್ನು ತಾನೇ ಒಗೆದು ಮಡಿಮಾಡಿಕೊಳ್ಳುವ ಅಭ್ಯಾಸವನ್ನು

ಬಾಲ್ಯದಿಂದಲೂ ರಾಮಭದ್ರ ಕಲಿತುಕೊಂಡಿದ್ದ. ಅಮೇರಿಕಾದಿಂದ ಹಿಂತಿರುಗಿದ ಮೇಲೆ ಕೂಡ ಅದೇ ಅಭ್ಯಾಸವನ್ನು ಮುಂದುವರಿಸಿದ್ದ. 'ನೀನು ಯಾಕೆ ಒಗೆದು ಕೋತೀಯೋ. ಎಲ್ಲರ ಬಟ್ಟೆಗಳ ಜತೆಗೆ ನಿನ್ನದೂ ಎರಡು ಬಟ್ಟೆಗಳನ್ನು ಕಸಕಿ ಹಾಕಲು ನನಗೇನೂ ಕಷ್ಟವಿಲ್ಲ' ಎಂದು ತಾಯಿ ಹೇಳಿದರು. ಆದರೆ ಅವ ಒಪ್ಪಲಿಲ್ಲ. ಹೀಗಿದ್ದವನು ಈ ಮೂರು ನಾಲ್ಕು ವರ್ಷಗಳಿಂದ ಮೂರು ದಿನಕ್ಕೊಮ್ಮೆ ನಾಲ್ಕು ದಿನಗಳಿಗೊಮ್ಮೆ ಬಟ್ಟೆಗಳನ್ನು ಮಡಿಮಾಡತೊಡಗಿದ. ಮೈಲಿಗೆ ಬಟ್ಟೆಗಳನ್ನು ಎಂದೂ ಹಾಕಿಕೊಳ್ಳದೇ ಇದ್ದವನು, ಇತ್ತಿಂದೀಚೆಗೆ ಕೊಳೆಯಾದ ಬಟ್ಟೆಗಳಲ್ಲಿರುತ್ತಿದ್ದ. ಶುಭ್ರವಾದ ಮತ್ತು ಮಡಿಯಾದ ಬಟ್ಟೆ ಎಂದು ಶಿಸ್ತು ಮಾಡುತ್ತಿದ್ದವ ಈಗ ಉದಾಸೀನನಾಗಹತ್ತಿದ.

ಒಂದು ದಿನ ಕಾಲೇಜಿನ ಪ್ರೊಫೆಸರು, ರಾಮಭದ್ರನ ಮನೆಗೆ ಬಂದರು. ಅವರ ಚಿಕ್ಕ ಹುಡುಗನಿಗೆ ಅರಿಸಿನಕಾಮಾಲೆಯಾಗಿತ್ತು. ಈ ಬೇನೆಗೆ ಮೂರು ದಿವಸಗಳು ಹಸಿರು ಔಷಧಿಯನ್ನು ರಾಮಭದ್ರನ ತಾಯಿಯು ಕೊಡುತ್ತಾರೆ ಎನ್ನುವುದು ಪಟ್ಟಣಕ್ಕೆಲ್ಲಾ ಗೊತ್ತಿತ್ತು. ಆದ್ದರಿಂದ ಪ್ರೊಫೆಸರು ಮಗನನ್ನು ಕರೆದುಕೊಂಡು ಬಂದಿದ್ದರು. ಹಳೆಯ ಪ್ರೊಫೆಸರ ಧ್ವನಿಯನ್ನು ಕೇಳಿಯೋ ಏನೋ, ಕೊಠಡಿಯಿಂದ ಹೊರಕ್ಕೆ ರಾಮಭದ್ರನ್ ಬಂದ. ಪ್ರೊಫೆಸರಿಗೆ ವಂದಿಸಿದ, 'ಈಗ ಎಲ್ಲಿ ಕೆಲಸ ಮಾಡುತ್ತಿದ್ದೀ ; ಎಷ್ಟು ದಿನಗಳಾಯಿತು ಊರಿಗೆ ಬಂದು ?' ಎಂದು ಕ್ಷೇಮ ಸಮಾಚಾರವನ್ನು ಕೇಳಿದರು. ಅದಕ್ಕೆ ಉತ್ತರವನ್ನು ರಾಮಭದ್ರ ಕೊಡಲಿಲ್ಲ 'ರಿಟೈರ್ ಆಯಿತೇ ಸಾರ್ ? ಈಗೇನ್ಮಾಡ್ತಾ ಇದ್ದೀರಿ' ಎಂದು ಕೇಳಿದ. 'ಎರಡು ವರ್ಷಗಳ ಹಿಂದೆ ರಿಟೈರ್ ಆಯ್ತಪ್ಪಾ ! ಈಗ ಪತ್ರಿಕೆಗಳನ್ನು ಓದುವುದು, ಪಾರಾಯಣ ಮಾಡೋದು ; ಹೇಗಾದರೂ ಹೊತ್ತು ಕಳೀಬೇಕಲ್ಲ' ಎಂದರು.

ಆಮೇಲೆ ಪತ್ರಿಕೆಗಳಲ್ಲಿ ಬಂದ ರಾಜಕೀಯ ಮತ್ತು ಸಾಮಾಜಿಕ ವಿಷಯಗಳನ್ನು ಕುರಿತು ರಾಮಭದ್ರನ್ ಒಂದೈದು ಹತ್ತು ನಿಮಿಷಗಳು ಟೀಕೆಯನ್ನು ಮಾಡಿದ. ಪ್ರೊಫೆಸರು ಮೂಗಿನ ಮೇಲೆ ಬೆರಳನ್ನಿಟ್ಟುಕೊಂಡರು. ಅಷ್ಟು ಹೊತ್ತಿಗೆ ಹಸಿರು ಔಷಧಿಯನ್ನು ಕೊಟ್ಟಾಗಿತ್ತು. ಹಿಂತಿರುಗುವಾಗ ಪ್ರೊಫೆಸರು 'ನಿಮ್ಮ ಮಗ ಅದೆಷ್ಟು ಸೂಕ್ಷ್ಮಗ್ರಾಹಿಯಮ್ಮ ! ಗಣಿತದ ವಿದ್ಯಾರ್ಥಿ, ಅದರಲ್ಲಿ ಪಾಂಡಿತ್ಯ ಇರುವುದು ಸಹಜ ; ಆದರೆ ರಾಜಕೀಯ ವಿಷಯಗಳನ್ನು ಎಷ್ಟು ಸಮಂಜಸವಾಗಿ, ಎಳೆಯೆಳೆಯಾಗಿ ವಿಶ್ಲೇಷಿಸಿ ಮಾತನಾಡುತ್ತಾನಮ್ಮಾ ; ತುಂಬಾ ಪ್ರಚಂಡ' ಎಂದು ರಾಮಭದ್ರನ ತಾಯಿಗೆ ಹೇಳಿದರು.

'ಪ್ರೊಫೆಸರು ಬಂದಿದ್ದರು, ಹೀಗಂದರು, ರಾಮೂನ ತುಂಬಾ ಪ್ರಚಂಡ ಅಂತ ಹೊಗಳಿದರು' ಎಂದು ತಾಯಿ ರಾತ್ರಿ ಊಟವಾದ ಮೇಲೆ ಗಂಡನಿಗೆ ಹೇಳಿದಳು. ನಿಟ್ಟುಸಿರು ಬಿಡುತ್ತಾ, ತಂದೆ 'ನಿನ್ನ ಮಗನ ಪ್ರಚಂಡ ಜಾಣತನವನ್ನು ಎಲ್ಲರೂ ಹೊಗಳುತ್ತಾರೆ, ದಿಟ. ಆದರೆ ಒಂದು ಕೆಲಸದಲ್ಲಿ ನಿಲ್ಲುಲ್ಲ. ಎಲ್ಲರಂತೆ ನಗುನಗುತ್ತಾ ಮಾತನಾಡುಲ್ಲ. ಅಪ್ಪ ಅಮ್ಮ ಅಂದರೆ ಸ್ವಲ್ಪವಾದರೂ ವಿಶ್ವಾಸವಿರಬೇಡವೇ ? ಇವನ ಜಾಣತನ ಕಟ್ಟಿಕೊಂಡು ಏನು ಮಾಡೋದು ? ರ್‍ಯಾಂಕೂ ಬೇಕಾಗಿತ್ತಿಲ್ಲ ; ಫಸ್ಟ್‌ಕ್ಲಾಸೂ ಬೇಡ. ಎಲ್ಲರ ಹಾಗೆ ಹೇಗೋ ಪ್ಯಾಸು ಮಾಡಿಕೊಂಡು, ಒಂದು ಚಾಕರೀನ ಹಿಡಿದಿದ್ದರೆ, ಎಷ್ಟು ಚೆನ್ನಾಗಿರುತ್ತಿತ್ತು ? ನಲವತ್ತರ ಹತ್ತಿರ ಹತ್ತಿರ ವಯಸ್ಸು ಬಂತು. ಒಂಟಿ ಗುಂಡುಗೋವಿಯಾಗಿಯೇ ಇದ್ದಾನೆ. ಜತೆಯವರೆಲ್ಲಾ ಸ್ವಂತ ಮನೆ ಮಾಡಿಕೊಂಡು ಮೂರು ನಾಲ್ಕು ಮಕ್ಕಳನ್ನು ಪಡೆದಿದ್ದಾರೆ. ಹೀಗೆ ಶೋಂಭೇರಿಯಾಗಿ ಬಿದ್ದಿರುವ ಬದಲು, ಅಪಾಪೋಲಿಯಾಗಿ ತಿರುಗ್ತಾ ಇದ್ದರೂ ಚೆನ್ನಾಗಿರುತ್ತಿತ್ತು' ಎಂದು ತಮ್ಮ ಮನದಾಳದ ಅಳಲನ್ನು ತೋಡಿಕೊಂಡರು.

* * *

ಮನೋವೈದ್ಯರ ಬಳಿಗೆ ರಾಮಭದ್ರನನ್ನು ಕರೆದುಕೊಂಡು ಹೋಗಲು ಸಾಧ್ಯವಾಗಲೇ ಇಲ್ಲ. ತಂದೆಯು ಹೋಗಿ ಅವರ ಸಲಹೆಯನ್ನು ಕೇಳಿದಾಗ, 'ಜುಲುಂ ಮಾಡಿ ಅವನನ್ನು ಎಳೆದುಕೊಂಡು ಬರಬೇಡಿ. ಹಾಗೆ ಮಾಡಿದರೆ ನನ್ನ ಮೇಲೆ ಅವನಿಗೆ ವೈರ ಹುಟ್ಟುತ್ತದೆ, ಅಂತರಂಗದಲ್ಲಾಗುವುದನ್ನು ಅವ ಮುಚ್ಚಿಟ್ಟುಕೊಳ್ಳುತ್ತಾನೆ. ಅಂದ ಮೇಲೆ ಚಿಕಿತ್ಸೆಯು ನಿರರ್ಥಕವಾಗುತ್ತದೆ. ಅವನನ್ನು ಎದುರು ಹಾಕಿಕೊಳ್ಳಬೇಡಿ ; ಅಂಕೆಶಿಕ್ಷೆಯಲ್ಲಿಡಹೋಗಬೇಡಿ. ಅವನೇ ಏನಾದರೂ ವೈದ್ಯ ಸಲಹೆಯನ್ನು ಅಪೇಕ್ಷಿಸಿದರೆ, ತತ್‌ಕ್ಷಣ ಹೇಳಿ ಕಳುಹಿಸಿ. ಅಲ್ಲಿಯ ತನಕ ಆದರ, ಸಹಾನುಭೂತಿ, ಮತ್ತು ಅನುಕಂಪವನ್ನು ತೋರಿಸಿ. ನಿಮಗೆ ಬೇಸರ ಬರುವಂತೆ, ಅವಮಾನವಾಗುವಂತೆ, ಅವ ಕೆಲವೊಮ್ಮೆ ನಡೆದುಕೊಳ್ಳಬಹುದು. ಬೇಕಾಗಿ ಹಾಗೆ ಅವ ಮಾಡುವುದಿಲ್ಲ. ಅವನ ಮನಸ್ಸು ಛಿದ್ರವಾಗಿ ಅವನನ್ನು ಜಗ್ಗಾಡಿಸುತ್ತಿದೆ. ಮನಸ್ಸಿನ ಮೇಲಿನ ಹತೋಟಿಯು ಎಂದೋ ತಪ್ಪಿಹೋಗಿದೆ. ವಾಸ್ತವಿಕತೆಯ ಅರಿವೇ ನಾಶವಾಗಿದೆ. ಮನಸ್ಸಿನಲ್ಲಿ ಕಾಡಬರುವ ಭ್ರಮೆಗಳೇಸತ್ಯ ಎಂದವನಿಗನ್ನಿಸುತ್ತಿದೆ. ನರಕಯಾತನೆ ಎಂದರೆ, ಅವನು ಅನುಭವಿಸುತ್ತಿರುವುದು' ಎಂದು ಹೇಳಿ ಕಳುಹಿಸಿದರು.

ದಿನದಿನಕ್ಕೆ ರಾಮಭದ್ರನ್‌ನ ಸ್ಕೀಜೋ ಹೆಚ್ಚುತ್ತ ಹೋಯಿತು. ಒಂದೆರಡು

ವರ್ಷಗಳು ಚಾಕರಿಯನ್ನು ಮಾಡುವ, ಮಿಕ್ಕ ಮಾಸ್ತರುಗಳು, ಮತ್ತು ವಿದ್ಯಾರ್ಥಿಗಳ ಮೆಚ್ಚುಗೆಯನ್ನು ಗಳಿಸುವಂತೆ ಪಾಠ ಕಲಿಸುವ. ಮಾತಾಡುವುದು ವಿರಳವಾಗಿದ್ದರೂ. ಆಡಿದಾಗ ಅತಿ ಜಾಣತನವನ್ನು, ಒಮ್ಮೊಮ್ಮೆ ಶುದ್ಧ ಪೆಚ್ಚುತನವನ್ನೂ ಕಾಣಿಸುತ್ತಿದ್ದ. ನಂತರ ಹಠಾತ್ತನೆ ರಾಜೀನಾಮೆ ಇತ್ತು ಹಿಂತಿರುಗಿಬಿಡುತ್ತಿದ್ದ. ಹೀಗೆಯೇ ಹಲವಾರು ವರ್ಷಗಳು ನಡೆಯಿತು. ಐವತ್ತರ ವೇಳೆಗೆ ಚಾಕರಿ ಹುಡುಕುವುದನ್ನೂ ಬಿಟ್ಟ. ವ್ಯಕ್ತಿತ್ವವೇ ಬದಲಾಯಿತು, ಮುಖದಲ್ಲಿ ಕಳೆಯೂ ಹೋಯಿತು. ಬೆಪ್ಪ ಹಿಡಿದವನಂತೆ ಇರುತ್ತಾನೆ. ಮುದಿತಾಯಿ ಇರುವ ತನಕ ಊಟಕ್ಕೆ ಕೊರತೆ ಇಲ್ಲ. ಆಕೆಯು ಮರಣ ಹೊಂದಿದ ಮೇಲೆ, ಇವ ಏನಾಗುತ್ತಾನೋ, ದೇವರೇ ಬಲ್ಲ.

**'ಪಾರ್ಟಿ' ಕೊಡುವ ಪೀತಾಂಬರ್**

'ಹೊಟ್ಟೆ ತೊಳಸುತ್ತಿದೆ, ಡಾಕ್ಟರೇ, ನಾಲಿಗೆಯೆಲ್ಲಾ ಒಣಗಿ ಸುಕ್ಕಾದ ಚರ್ಮದಂತೆ ಇದೆ. ತಲೆ ಭಾರವಾಗಿ ಸಿಡಿಯುತ್ತಿದೆ.' ಎಂದು ಲಚಮನ್ ಹೇಳಿದ. ಅವನ ನಾಲಿಗೆಯ ಮೇಲೆ ದಪ್ಪವಾದ ಬಿಳಿ ದೋಷವು ಹೆಪ್ಪುಗಟ್ಟಿತ್ತು. ಕಣ್ಣುಗಳೆಲ್ಲವೂ ಕೆಂಪಗಿದ್ದುವು. ನಿನ್ನೆ ಸಂಜೆ ಪಗದಸ್ತಾಗಿ ಕುಡಿದುಬಿಟ್ಟು ಸಿಕ್ಕಿದ್ದನ್ನು ಮುಕ್ಕಿರಬೇಕು, ಅದಕ್ಕೇ ಈ ಬೆಳಿಗ್ಗೆ ಹೀಗೆ, ಎಂದಂದುಕೊಂಡು ; 'ಲಚಮನ್ ! ಬಟ್ಟೆ ತುಂಡುಗಳನ್ನು ರಸ್ತೆ ಅಂಚಿನಲ್ಲಿ ವ್ಯಾಪಾರ ಮಾಡುತ್ತ, ಜೀವನ ಮಾಡ್ತೀ ; ಹೆಂಡತಿ ಮಕ್ಕಳು ಇದಾರೆ. ಹೊಟ್ಟೆ ಬಟ್ಟೆಗೆ ಸಾಲದೆ ಇರುವವ ನೀನು. ಇಂತೋನು ಸಿಕ್ಕಾಪಟ್ಟೆ ಕುಡಿದರೆ ಹೇಗೆ ಬಾಳುಕ್ಕೆ ಸಾಧ್ಯವೋ ?' ಎಂದು ರೇಗಿ ಕೇಳಿದೆ. ಬಾಲ್ಯದಿಂದಲೂ ಪರಿಚಯವಿದ್ದವ, ಈಗ ಇಪ್ಪತ್ತೆಂಟರ ಪ್ರಾಯ. ಆದರೂ ವಿಶ್ವಾಸವನ್ನೂ ಗೌರವವನ್ನೂ ನನ್ನಲ್ಲಿಟ್ಟುಕೊಂಡಿದ್ದುದರಿಂದ, ಬುದ್ಧಿ ಹೇಳುವ ಅವಕಾಶವು ನನಗಿತ್ತು.

'ನಿನ್ನೆ ರಾತ್ರಿ ಸಿಕ್ಕಾಪಟ್ಟೆ ಕುಡಿದಿದ್ದೇನೋ ನಿಜ, ಡಾಕ್ಟರೇ ; ಆದರೆ ಒಂದು ಪೈಸೇನೂ ನಾನು ಖರ್ಚು ಮಾಡಲಿಲ್ಲ. ಪೀತಾಂಬರ್ ಪಾರ್ಟಿಕೊಟ್ಟಿದ್ದ. ಪುಕಟ್ಟು ಸಿಕ್ಕಿತು ಅಂತ ನಾನೂ ಮಿತಿಮೀರಿದೆ. ಸಂಪಾದಿಸಿದ ಹಣದಲ್ಲಿ ಒಂದು ಪೈಸೇನೂ ಇಂತಹ ದುಂದು ಖರ್ಚಿಗೆ ಬಳಸುಲ್ಲ' ಎಂದ ಲಚಮನ್.

ಪೀತಾಂಬರನ ಪರಿಚಯವೂ ನನಗಿತ್ತು. ಅವನೂ ಲಚಮನನ ವಯಸ್ಸಿನವನೇ. ಬಾಲ್ಯದಿಂದಲೂ ಪರಿಚಯವಿದ್ದವನೇ. ಅವನ ತಂದೆ ಮದ್ರಾಸಿನಲ್ಲಿ ಲೇಣೆ ದೇಣೆ ವ್ಯಾಪಾರದಲ್ಲಿದ್ದ. ಶಾಖೆಯೊಂದನ್ನು ನಮ್ಮ ಷಹರಿನಲ್ಲಿ ಇಟ್ಟು, ದೊಡ್ಡ ಮಗ ಪೀತಾಂಬರನನ್ನು ಮ್ಯಾನೇಜರ್ ಆಗಿ ನೇಮಿಸಿದ್ದ. ಲೇಣೆದೇಣೆ

ವ್ಯವಹಾರದಲ್ಲಿ ಸಾಕಷ್ಟು ಸಂಪಾದನೆ ಇತ್ತು. ಆದರೆ 'ಪಾರ್ಟಿ'ಗಳನ್ನು ಆಗಿಂದಾಗ್ಗೆ ಕೊಡಹೋದರೆ, ಅದರಲ್ಲೂ ಕುಡಿದು ತಿನ್ನುವ ಪಾರ್ಟಿಗಳನ್ನು ಕಂಡ ಕಂಡವರಿಗೆಲ್ಲಾ ಕೊಡಹೋದರೆ, ಬದುಕಲು ಸಾಧ್ಯವೇ? ಆದುದರಿಂದ ಪೀತಾಂಬರನ ಪಾರ್ಟಿಗಳ ವಿವರಗಳನ್ನು ತಿಳಿದುಕೊಳ್ಳುವ ಕುತೂಹಲವಾಯಿತು. 'ಈ ಔಷಧಿಯನ್ನು ಸೇವಿಸು ; ಈ ರೀತಿ ಪಥ್ಯವಿರು, ಸಂಜೆ ಹೊತ್ತಿಗೆ ಆರಾಮ ಆಗ್ತೀ. ಆಗ ನನ್ನ ಬಂದು ಕಾಣು, ಸ್ವಲ್ಪ ಮಾತಾಡುವುದಿದೆ' ಎಂದು ಲಚಮನನಿಗೆ ಹೇಳಿದೆ.

ಸಂಜೆ ಬಂದು ಕಂಡ. 'ಪೀತಾಂಬರ್ ಪಾರ್ಟಿ ಕೊಟ್ಟ ಅಂದೆ, ಎಷ್ಟು ಜನರನ್ನು ಕರೆದಿದ್ದ. ಖರ್ಚೆಷ್ಟಾಗಿರಬಹುದು, ಅವನೂ ನಿನ್ನಂತೆಯೇ ನನಗೆ ಬೇಕಾದವನು, ಅವನೂ ಚೆನ್ನಾಗಿ ಬಾಳುವ ಹಾಗೆ ನಾವೆಲ್ಲಾ ಬುದ್ಧಿ ಹೇಳಬೇಕು,' ಎಂದು ಪೀಠಿಕೆ ಹಾಕಿ ವಿಚಾರಿಸಿದೆ.

'ಹೌದು, ಡಾಕ್ಟರೇ, ನನಗೂ ಹಾಗೆಯೇ ಅನ್ನಿಸುತ್ತೆ. ಎರಡು ದಿನಕ್ಕೊಮ್ಮೆ, ಮೂರು ದಿನಗಳಿಗೊಮ್ಮೆ 'ಪಾರ್ಟಿ' ಕೊಡ್ತಾನೆ. ತಿಕ್ಕಲು ತಿರುಗಿದಾಗ ಪಾರ್ಟಿ ಅಂತಾನೆ ; ಮತ್ತೆ ಯಾವ ಕಾರಣವೂ ಇರುವುದಿಲ್ಲ. ಪೀತಾಂಬರ್ ಪಾರ್ಟಿ ಕೊಡ್ತಾನೆ ಅಂದರೆ ತಿಳಿದವರು ತಿಳಿಯದವರು ; ಕರೆದವರು, ಕರೆಯದೆ ಇದ್ದವರು ; ಎಲ್ಲರೂ ಕೂಡಿಕೊಳ್ಳುತ್ತಾರೆ. ಬಂದವರೆಲ್ಲರೂ ಪೀತಾಂಬರನನ್ನು ಹೊಗಳಿದ್ದೂ ಹೊಗಳಿದ್ದೆ. ಪಾರ್ಟಿ ಒಂದಕ್ಕೆ ಸಾವಿರ, ಸಾವಿರದೈನೂರು ಖರ್ಚಾಗುತ್ತೆ. ಆ ಹೊಟೆಲಿನವರನಕ, ಒಂದಕ್ಕೆ ಎರಡು ಬಿಲ್ ಮಾಡುತ್ತಾರೆ. ಪೀತಾಂಬರನಿಗೆ ಗೊತ್ತೇ ಆಗುವುದಿಲ್ಲ. ಪೆಂಗು ಪೆಂಗಾಗಿ ತೆರುತ್ತಾನೆ. ಇಷ್ಟರಲ್ಲೇ, ಹೀಗೆಯೇ ನಡೆದರೆ, ಪೀತಾಂಬರನಿಗೆ ಪಾಪರ್ ಚೀಟಿ ಖಂಡಿತ. ಒಂದೆರಡು ಸರ್ತಿ ನಾನೇನೋ ಹೇಳಿದೆ, ಇದೆಲ್ಲಾ ಹುಚ್ಚುತನ, ಹುಷಾರಾಗಿರು ಅಂತ. ನನ್ನ ಜವಾಬ್ದಾರಿ ನನಗೆ ಗೊತ್ತಿಲ್ಲವೇ ಎಂದು ಚುಡಾಯಿಸಿದ. ಆಮೇಲೆ ನಾನು ಸುಮ್ಮನಾದೆ. ಸಿಕ್ಕಿದ್ದು ಗಿಟ್ಟಿಸಿಕೊಂಡು, ತಂಟೆಗೆ ಸಿಗದೆ ಇದ್ದು ಬಿಡ್ತೀನಿ' ಎಂದ.

ಬಾಲ್ಯದಿಂದಲೂ ಪೀತಾಂಬರನ ಪರಿಚಯವಿತ್ತು ಎಂದು ಹೇಳಿದೆನಲ್ಲ. ಅಷ್ಟೇನೂ ಹೇಳಿಕೊಳ್ಳುವಂತಹ ಪ್ರಗತಿಯನ್ನು ಶಾಲೆಯಲ್ಲಿ ಸಾಧಿಸದೆ ಇದ್ದರೂ, ಪೆದ್ದು ಹುಡುಗನೇನೂ ಅಲ್ಲ. ಶೇಕಡಾ ೫೫–೬೦ ನಂಬರುಗಳನ್ನು ಪಡೆದು ಪ್ಯಾಸು ಮಾಡುತ್ತಿದ್ದ. ೧೫ನೇ ವರ್ಷಕ್ಕೆ ಎಸ್. ಎಸ್. ಎಲ್. ಸಿ. ಪ್ಯಾಸು ಮಾಡಿದ. ನಂತರ ವಿದ್ಯೆಗೆ ತುಂಡು ಹಾಕಿ ತಂದೆಯ ವಹಿವಾಟಿನಲ್ಲಿ ಚಾಕರಿಗಿಳಿದ. ಮೂರು ನಾಲ್ಕು ವರ್ಷಗಳಲ್ಲಿ ಸಾಕಷ್ಟು ಅನುಭವವನ್ನು ಪಡೆದಿದ್ದ. ಅನಂತರವೇ

ಬೆಂಗಳೂರು ಶಾಖೆಯನ್ನು ಸ್ಥಾಪಿಸಲಾಯಿತು, ಇಲ್ಲಿಯ ಮ್ಯಾನೇಜರ್ ಅವ ಆದುದು ಆಗ.

ಚಿಕ್ಕ ಪುಟ್ಟ ಕಾಯಿಲೆಗಳ ಚಿಕಿತ್ಸೆಗಾಗಿ, ಅಜ್ಜಿ, ಪೀತಾಂಬರನನ್ನು ಕರೆತರುತ್ತಿದ್ದಳು. ಅಜ್ಜಿಯು ಬಾಯಿ ತುಂಬ ಮಾತನಾಡುತ್ತಿದ್ದಳು. ಪೀತಾಂಬರ್ ಸ್ವಲ್ಪ ನಾಚಿಕೆಯ ಸ್ವಭಾವದವ. ಬಹಳ ಸಂಕೋಚಪಡುತ್ತಿದ್ದ. ಅಜ್ಜಿಯ ಮನೆಯಲ್ಲಿ ಬೆಳೆದುದರಿಂದ, ತುಂಬಾ ಮುದ್ದು ಮುದ್ದು ಆಗಿರಬೇಕಾಗಿತ್ತು. ಆದರೆ ಅಜ್ಜಿಯ ಮುದ್ದು ಇವನಿಗೆ ಹತ್ತಿದಂತೇ ಇರಲಿಲ್ಲ. ಒಂಟಿಯಾಗಿ ಆಡಿಕೊಳ್ಳುವುದರಲ್ಲಿ ಹೆಚ್ಚು ಇಷ್ಟವಿತ್ತೇ ಹೊರತು, ಹೆಚ್ಚಾಗಿ ಜತೆಯವರೊಂದಿಗೆ ಕೂಡುತ್ತಿರಲಿಲ್ಲ. 'ತುಂಬಾ ಸಂಕೋಚಪಡುತ್ತಾನೆ. ಬಹಳ ನಾಚಿಕೆ, ಶುದ್ಧ ಹೆಣ್ಣಿಗನಂತೆ ಆಡುತ್ತಾನೆ' ಎಂದು ಅಜ್ಜಿಯು ಕೂಡ ಮೂದಲಿಸುತ್ತಿದ್ದಳು ; ನನ್ನ ಎದುರಿಗೇನೇ.

ಎಸ್.ಎಸ್.ಎಲ್.ಸಿ. ಆದ ಮೇಲೆ ಮದ್ರಾಸಿಗೆ ತಂದೆಯೊಡನೆ ಇದ್ದು ಕೆಲಸ ಕಲಿತುಕೊಳ್ಳುವುದಕ್ಕೆ ಹೋಗುವ ಮೊದಲು, ನನ್ನ ಬಳಿಗೆ ಬಂದಿದ್ದ. ಬಾಗಿಲನ್ನು ಹಾಕುವಾಗ, ಬೆರಳು ಸಿಕ್ಕಿಕೊಂಡು ಜಜ್ಜಿಹೋಗಿತ್ತು. ಒದ್ದೆ ಬಟ್ಟೆಯನ್ನು ಕಟ್ಟಿ ಅಜ್ಜಿ ಅಳುತ್ತಾ ಕರೆದುಕೊಂಡು ಬಂದಿದ್ದಳು. ದಿಟವಾಗಲೂ ಬೆರಳು ಅಜ್ಜಿ ಬಜ್ಜಿಯಾಗಿತ್ತು. ಅಸಾಧ್ಯ ಯಾತನೆಯಾಗಿರಬೇಕು. ಆದರೂ ಪೀತಾಂಬರ್ ಎಗರಾಡುತ್ತ ಒದ್ದಾಡುತ್ತ ಬೊಬ್ಬೆ ಇಡುತ್ತಿರಲಿಲ್ಲ. 'ಬಲು ಧೈರ್ಯಶಾಲಿ ಗಂಡಸಪ್ಪ' ಎಂದು ಚಿಕಿತ್ಸೆ ಮಾಡುತ್ತ ಹೊಗಳಿದೆ. ನನ್ನ ಹೊಗಳಿಕೆಯೂ ಅವನ ಮುಖದಲ್ಲಿ ಮಂದಹಾಸವನ್ನು ಮೂಡಿಸಲಿಲ್ಲ. ಎಲ್ಲರಂತೆ ಇವ ಇಲ್ಲ ಎಂಬ ಅನುಮಾನವು ಆಗ ಮೂಡಿತ್ತು.

ನಾಲ್ಕು ವರ್ಷಗಳು ಮದ್ರಾಸಿನಲ್ಲಿ, ಲೇಣೆದೇಣಿಯ ಗುಟ್ಟುಗಳನ್ನೆಲ್ಲಾ ಕಲಿತುಕೊಂಡ ಮೇಲೆ ಹಿಂತಿರುಗಿ, ಇಲ್ಲಿ ವ್ಯವಹಾರವನ್ನು ಆರಂಭಿಸಿದ ಮೇಲೆ ಹೆಚ್ಚು ಹೆಚ್ಚಾಗಿ ನನ್ನಲ್ಲಿಗೆ ಬರುತ್ತಿದ್ದ. ಅಂದರೆ ಅವನಿಗೆ ಕಾಯಿಲೆ ಬರುತ್ತಿತ್ತು ಅಂತಲ್ಲ, ಮದುವೆಯಾಗಿತ್ತು. ಎರಡು ಮಕ್ಕಳೂ ಆಗಿದ್ದುವು. ಇದೆಲ್ಲಾ ಸಂಸಾರದ ಸಡಗರದಲ್ಲಿ ಡಾಕ್ಟರ ನೆರವು ಮೇಲಿಂದ ಮೇಲೆ ಅಗತ್ಯವಾಗಲೇಬೇಕು. ಮೊದಲ ಮಗುವಿಗೆ ಭಯಂಕರ ಪ್ರಮಾಣದ ಅತಿಸಾರವು ಬಡಿದಿತ್ತು. ಉಳಿಯುತ್ತೋ ಇಲ್ಲವೋ ಎಂದು ಶಂಕಿಸುವಂತಿತ್ತು. ಪೀತಾಂಬರನ ಹೆಂಡತಿ ಮತ್ತು ಅಜ್ಜಿ ಕೊರಗುತ್ತಾ ಕಣ್ಣೀರಿಡುತ್ತಿದ್ದರು. ಬೆಳೆದ ಗಂಡಸು ಕಣ್ಣೀರಿಡಬೇಕಿರಲಿಲ್ಲ ಆದರೂ ಖಿನ್ನತೆಯಾದರೂ ಮೊಗದಲ್ಲಿ ಕಾಣಿಸಲೇ ಬೇಕು ಅಲ್ಲವೆ? ಪೀತಾಂಬರನು ಶೋಕಿಸುವಂತೆ ಕಾಣಿಸಲೇ ಇಲ್ಲ. 'ಇವನೆಂತಹ ಸ್ಥಿತ ಪ್ರಜ್ಞನಪ್ಪ? ಎಂದನ್ನಿಸಿತ್ತು.

ಲಚಮನನು ಪಾರ್ಟಿಗಳ ವಿವರಗಳನ್ನು ಹೇಳಿದ ಮೇಲೆ ತುಂಬಾ ಅನುಮಾನ ಉಂಟಾಯಿತು, ನನಗೆ. ನಿರ್ಲಿಪ್ತನಂತೆ ; ಸ್ಥಿತ ಪ್ರಜ್ಞನಂತೆ ಇದ್ದವ, ಹಠಾತ್ತನೆ ಬೇಜವ್ದಾರಿಯಿಂದ ದುಂದು ಖರ್ಚು ಮಾಡುತ್ತಾ, ಹತ್ತಾರು ಮಂದಿಗಳಿಗೆ ಪಾರ್ಟಿ ಕೊಡಬೇಕಾದರೆ, ಇವನಲ್ಲಿ ಯಾವುದೋ ಪ್ರಮಾದವಾಗಿರಬೇಕು ಎಂದು ಅನ್ನಿಸಿತು. ಕಾರಣ ನನ್ನ ಬಂದು ಕಾಣು ಎಂದು ಹೇಳಿ ಕಳುಹಿಸಿದೆ.

ಎರಡು ಮೂರು ದಿನಗಳಾದ ಮೇಲೆ ಅವ ಬಂದ. 'ಹೇಳಿ ಕಳುಹಿಸಿದಿರಂತೆ ನೀವು ತುಂಬಾ ಕೆಲಸದಲ್ಲಿರುತ್ತೀರಿ ಎಂದು ತಿಳಿಯೋದು, ಆದ್ದರಿಂದ ತಡವಾಗಿ ಬಂದೆ. ಏನಾಗಬೇಕಾಗಿತ್ತು' ಎಂದು ಕೇಳಿದ.

'ತುಂಬಾ ದಿನಗಳಾಗಿತ್ತು, ನಿನ್ನ ಕಂಡು, ಯೋಗಕ್ಷೇಮವನ್ನು ವಿಚಾರಿಸೋಣ ಅಂತ ಕರೆಕಳಿಸಿದೆ. ಅಲ್ಲದೆ ಈಚೀಚೆಗೆ ಪಾರ್ಟಿಗಳ ಭರಾಟೆ ಹೆಚ್ಚಾಗಿದೆ ಎಂದು ಕಿವಿವದಂತಿ ಕೇಳಿಸಿತು. ಆರೋಗ್ಯಕ್ಕೆ ಅಪಾಯವಾಗಬಹುದು, ಅಂತಹ ದುಶ್ಚಟಗಳಿಂದ, ಆದ್ದರಿಂದ ಅದನ್ನೂ ನಿನ್ನಿಂದ ತಿಳಿದುಕೊಳ್ಳೋಣ ಎನ್ನಿಸಿತು,' ಎಂದೆ.

ಈ ರೀತಿ ನೇರವಾಗಿ ಕೇಳಿದೆ ಅಂತ ಅವನಿಗೆ ಬೇಸರವಾಗಲೀ, ಕೋಪವಾಗಲೀ ಬರಲಿಲ್ಲ. 'ಪಾರ್ಟಿಗೆ ನೀವೂ ಬನ್ನಿ ಡಾಕ್ಟರೇ, ನಗುನಗುತ್ತಾ ಮಜಾ ಮಾಡಿದರೆ ಖುಷಿಯಾಗಿರುತ್ತೆ ; ಆಹ್ವಾನವನ್ನು ಕಳುಹಿಸಲಿ, ಅಂತ ಕಾಯಬೇಡಿ. ಯಾವಾಗ ಬಂದರೂ ಸ್ವಾಗತ' ಎಂದು ಹೇಳಿದ. ಹೀಗನ್ನುವಾಗ ಆದರದಿಂದಾಗಲೀ, ವಿಶ್ವಾಸದಿಂದಾಗಲೀ ಅವ ನುಡಿದಂತೆ ಅನಿಸಲಿಲ್ಲ. ನಾನು ಪಾರ್ಟಿಗೆ ಹೋದರೂ ಒಂದೇ ಹೋಗದೆ ಇದ್ದರೂ ಒಂದೇ ಎನ್ನುವ ಭಾವನೆ ಇದ್ದಂತಿತ್ತು.

'ಹುಷಾರಾಗಿರಪ್ಪ, ಅಷ್ಟೆಲ್ಲಾ ಖರ್ಚು ಮಾಡಿದರೆ, ಎಷ್ಟು ಸಂಪಾದನೆಯನ್ನು ಮಾಡಿದರೂ, ಸಾಲದೆ ಬರುವಂತಾಗುತ್ತದೆ. ಅಲ್ಲದೆ ದೇಹಕ್ಕೂ ಬೇನೆ ಬಡಿಯುತ್ತದೆ. ಬೆಳೆದು ಕಲಿತ ಯುವಕ ನೀನು, ನಿನ್ನ ಜವಾಬ್ದಾರಿಯು ತಿಳಿದಿರಬೇಕು. ಈ ವಿಷಯ ತಿಳಿದಾಗ ಸುಳ್ಳಿರಬಹುದು ಎಂತಿದ್ದೆ. ನೀನೇ ಒಪ್ಪಿಕೊಂಡಿದ್ದನ್ನು ಕೇಳಿ ಮನಸ್ಸಿಗೆ ಕಸಿವಿಸಿಯಾಗಿದೆ. ಜಾಣನಾಗಿ ಬಾಳಪ್ಪ' ಎಂದು ಹೇಳಿ ಕಳುಹಿಸಿದೆ.

ಇನ್ನೇನು ತಾನೆ ಮಾಡಲು ನನ್ನಿಂದ ಸಾಧ್ಯವಿತ್ತು ? ನಾಚಿಕೆ, ಮತ್ತು ಸಂಕೋಚದ ಪ್ರವೃತ್ತಿಯ ಬಾಲಕ ಬೆಳೆದು ಪ್ರೌಢನಾದ ಮೇಲೆ, ಭಾವನೆಗಳನ್ನು ಕಳೆದುಕೊಂಡಿದ್ದಾನೆ ಎಂದರೆ, ಸ್ಕೀಜೋ ತಲೆ ಹಾಕಿದೆಯೇನೋ ಎಂದು

ಅನುಮಾನವು ಮೂಡುತ್ತದೆ. ಶೋಕಿಸುವಂತಹ ಸಂದರ್ಭಗಳಲ್ಲಿ, ಮತ್ತೆ ರೇಗಬೇಕಾದ ಸನ್ನಿವೇಶಗಳಲ್ಲಿ, ಯಾವ ರಾಗ ಪ್ರದರ್ಶನವನ್ನೂ ಮಾಡದೆ ಇದ್ದರೆ, ಇವನಿಗೆ Feelings ಇಲ್ಲವೇ ? ಎಂದೆನಿಸುತ್ತದೆ. ಮಗುವಿಗೆ ಸಕತ್ ಕಾಯಿಲೆಯಾದಾಗ, ನೆಂಟನಲ್ಲದ ನಾನು ಅವನ ವೈಯಕ್ತಿಕ ಜೀವನದ ಬಗ್ಗೆ ಪ್ರಶ್ನೆಯನ್ನು ಕೇಳಿದಾಗ ; ಎರಡೂ ಸಂದರ್ಭಗಳಲ್ಲಿ ಅವ, ರಾಗರಹಿತನಾಗಿದ್ದ. ಹೀಗಾಗುವುದು ಸ್ಕೀಜೋ ಬೇನೆಗಳಲ್ಲಿ.

ನಾನು ಕೇಳಿದ ಪ್ರಶ್ನೆಗೆ ಸಮಂಜಸವಾದ ಉತ್ತರವೆಂದರೆ ; 'ಇಲ್ಲ ಸಾರ್ ಇನ್ನು ಮೇಲೆ 'ಪಾರ್ಟಿ'ಗಳ ಬೆಡಗಿಗೆ ಬೀಳುವುದಿಲ್ಲ. ಖರ್ಚನ್ನು ದುಂದಾಗಿಸುವುದಿಲ್ಲ' ಎನ್ನುವುದು. ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಡಬೇಕು ಎಂದು ಅವನು ಯೋಚಿಸಲಿಲ್ಲ. ಪಾರ್ಟಿ ಎನ್ನುವ ಪದವನ್ನು ಹಿಡಿದುಕೊಂಡಿದ್ದ, ನನಗೂ ಆಹ್ವಾನವನ್ನು ಕೊಟ್ಟಿದ್ದ. ಯೋಚನಾಸರಣಿಯಲ್ಲಿ ಅವ ತಪ್ಪಿದ್ದ. ಆದರೆ ಹಳಿ ತಪ್ಪಿದ ಯೋಚನೆಯನ್ನು ಮಾತುಗಳಲ್ಲಿ ಮೂಡಿಸುವಾಗ ಲಕ್ಷಣವಾಗಿ ನುಡಿದಿದ್ದ. ಪಾರ್ಟಿಗೆ ಬಾ ಎಂದಿದ್ದ. ಇದೂ ಸ್ಕೀಜೋವಿನ ಒಂದು ಚಿಹ್ನೆ.

ಇವನ ತಂದೆಗೆ ಒಂದು ಕಾಗದವನ್ನು ಬರೆದು ; ನಿಮ್ಮ ಮಗ ಪಿತಾಂಬರ್‌ಗೆ ಹೀಗೆ ಸ್ಕೀಜೋ ಬೇನೆಯು ತಗುಲಿದಂತಿದೆ. ಇಲ್ಲಿಗೆ ಬಂದು, ಮನೋವೈದ್ಯರಲ್ಲಿಗೆ ಕರೆದುಕೊಂಡು ಹೋಗಿ ಪರಣಾಮಕಾರಿ ಚಿಕಿತ್ಸೆಯನ್ನು ನಡಸಿ ; ಎಂದು ಹೇಳಲೇ ? ಎನ್ನಿಸಿತು. ಇದು ಕರ್ತವ್ಯ ಎಂದೂ ಅನಿಸಿತು.

ಆದರೆ ಅವನ ತಂದೆಯ ಪರಿಚಯವು ಸಾಕಷ್ಟು ಇರಲಿಲ್ಲ. ಆ ರೀತಿ ಕಾಗದ ಬರೆದರೆ, ಆತ ಬಂದು 'ನನ್ನ ಮಗನಿಗೇನಾಗಿದೆ. ಹುಚ್ಚು ಅಂತ ಹೇಳುವ ನೀನು ಹುಚ್ಚ ಎಂದು ದಬಾಯಿಸಬಹುದು. ಪಾರ್ಟಿಗಳನ್ನು ಏರ್ಪಡಿಸಿದರೆ, ಸ್ಕೀಜೋ ಅನ್ನುತ್ತಾರೆಯೇ ಎಂದು ಮೂದಲಿಸಬಹುದು. ಸುಮ್ಮಸುಮ್ಮನೆ ಈ ಗೋಜಿಗೆ ಏಕೆ ಕೈಹಾಕಲಿ ಅಂತ ತೆಪ್ಪಗಾದೆ.

* * *

ಒಂದೆರಡು ತಿಂಗಳುಗಳಲ್ಲಿ ಪಿತಾಂಬರನ ಅಜ್ಜಿಯು, ಮಗನನ್ನು ಚಿಕಿತ್ಸೆಗೆ ಕರೆತಂದಳು. 'ನನ್ನ ಮಗ, ಮದ್ರಾಸಿನಿಂದ ನಾಲ್ಕು ದಿನಗಳ ಹಿಂದೆ ಬಂದ. ಎರಡು ದಿನಗಳಿಂದ ಎದೆಯು ನೋವುತ್ತೆ, ತುಂಬಾ ಸುಸ್ತಾಗುತ್ತದೆ ಎಂದು ಹೇಳಿದ. ಡಾಕ್ಟರ ಬಳಿಗೆ ಹೋಗೋಣ ಅಂದೆ. ವಿಶ್ರಾಂತಿ ತೆಗೆದುಕೊಂಡರೆ ಸರಿಹೋಗುತ್ತೆ ಅಂತ ಹಠ ಹಿಡಿದ. ಅದಕ್ಕೆ ಈ ತನಕ ಬರಲಿಲ್ಲ. ಆದರೆ ನಿನ್ನೆ ರಾತ್ರಿಯೆಲ್ಲಾ ನರಳುತ್ತಿದ್ದ. ಜುಲುಂ ಮಾಡಿ ಈಗ ಕರತಂದೆ' ಎಂದು ಪೀತಾಂಬರನ

ಅಜ್ಜಿ ಹೇಳಿದಳು. ವಯಸ್ಸಾದ ತಂದೆಗೆ ಎದೆ ನೋವು ಅಂದರೆ ಹೃದಯಕ್ಕೆ ಧಕ್ಕೆ ಆಗಿರಬಹುದು ಎಂದು ಯಾರಾದರೂ ಕಾತರಗೊಳ್ಳುತ್ತಾರೆ. ರೋಗಿಯೊಡನೆ ಡಾಕ್ಟರ ಬಳಿಗೆ ಹೋಗುತ್ತಾರೆ. ಆದರೆ ಈಗ ಪೀತಾಂಬರ್ ಬಂದಿರಲಿಲ್ಲ.

ರೋಗಿಯನ್ನು ಪರೀಕ್ಷೆಮಾಡಿದೆ. ಈ ಷಹರಿನ ಶಾಖೆಯಲ್ಲಿ ತುಂಬಾ ನಷ್ಟವಾಗಿದೆಯೆಂದೂ ಪೀತಾಂಬರ್, ಬಹಳ ದುರ್ವ್ಯಸನಿಯಾಗಿದ್ದಾನೆಂದೂ, ತಿಳಿದು, ಸ್ಥಿತಿಗತಿಗಳನ್ನು ಅರಿತು, ಸರಿಪಡಿಸಲು ಅವ ಬಂದಿದ್ದ. ಇಲ್ಲಿ ಆಗಿದ್ದ ನಷ್ಟದ ಪ್ರಮಾಣವು ಬಹಳವಾಗಿತ್ತು. ಅಲ್ಲದೆ ಮಗ ಕೇಳಿದ ಪ್ರಶ್ನೆಗೆ ಸರಿಯಾಗಿ ಉತ್ತರವನ್ನು ಕೊಡಲಿಲ್ಲ, ಬದಲು ಸಿಡುಕುವುದು, ಅಸಂಬದ್ಧವಾಗಿ ಮಾತನಾಡುವುದು ತಂದೆ ಎಂದು ಗೌರವವನ್ನೂ ಕೊಡದಿರುವುದು : ಇವೆಲ್ಲವೂ ಆಗಿತ್ತು. ತಂದೆಯ ಮನಸ್ಸೂ ಕೊರಗಿನಿಂದ ತಳಮಳಗೊಂಡಿತ್ತು. ಎದೆಯ ನೋವಾಗಿ ದೇಹಕ್ಕೆ ವಕ್ರಿಸಿತ್ತು.

ರೋಗಿಯನ್ನು ಒಳಕ್ಕೆ ಕರೆದುಕೊಂಡು ಹೋಗಿ ಏಕಾಂತದಲ್ಲಿ ತಿಳಿದುದನ್ನು ಹೇಳಿದೆ :

ಪೀತಾಂಬರ್‌ಗೆ ಸ್ಕೀಜೋ ಬೇನೆ ಬಂದಿದೆ. ಆದುದರಿಂದ ಅವ ಹೀಗೆಲ್ಲಾ ದುರ್ವ್ಯಯ ಮಾಡುತ್ತಿದ್ದಾನೆ. ದುಶ್ಚಟಗಳಿಗೆ ಬಲಿಯಾಗಿದ್ದಾನೆ. ಹೆಂಡತಿ, ಮಕ್ಕಳು, ತಂದೆ, ತಾಯಿ, ಅಜ್ಜಿ, ನೆಂಟರು, ಇವರುಗಳಲ್ಲಿ ಕೂಡ ಪ್ರೀತಿಯೇ ಇಲ್ಲದಂತಾಗಿದೆ. ಅವನನ್ನು ಬೈದು ಬುದ್ಧಿ ಹೇಳಹೋದರೆ ಸ್ಕೀಜೋ ಉಲ್ಬಣಿಸುತ್ತದೆಯೇ ಹೊರತು, ಅವನು ಸರಿಯಾಗುವುದಿಲ್ಲ. ತತ್‌ಕ್ಷಣವೇ ಉಪಾಯ ಮಾಡಿ, ಆದರದಿಂದ ಮಾತನಾಡಿಸಿ, ಮನೋವೈದ್ಯರಲ್ಲಿಗೆ ಹೋಗಿ ಸೂಕ್ತ ಚಿಕಿತ್ಸೆಯನ್ನು ಮಾಡಿದರೆ ಬಹಳಷ್ಟು ಗುಣ ಹೊಂದುತ್ತಾನೆ.

ಆಗ ನಿಮ್ಮ ಎದೆಯ ನೋವೂ ಮಾಯವಾಗುತ್ತದೆ. ನಿಮ್ಮ ಹೃದಯವು ಆರೋಗ್ಯವಾಗಿದೆ. ನಿಮ್ಮ ಮನಸ್ಸಿನಲ್ಲಿ ತುಂಬಿ ತುಳುಕಾಡುತ್ತಿರುವ ಭೀಕರ ಕೊರಗೇ ಎದೆಯ ನೋವಿಗೆ ಮತ್ತು ಸುಸ್ತಿಗೆ ಕಾರಣ ಎಂದು.

ಪೀತಾಂಬರನ ತಂದೆಯು ಲೋಕಾನುಭವವನ್ನು ಪಡೆದಿದ್ದವ. ಹೇಳಿದುದನ್ನು ಅರ್ಥ ಮಾಡಿಕೊಂಡ. 'ಇವನ ಸೋದರಮಾವಂದಿರಿಬ್ಬರು ಹೀಗೇ ಆಡುತ್ತಿದ್ದರು. ಕೊನೆಗೆ ಮಾನಸಿಕ ಆಸ್ಪತ್ರೆಗೆ ಸೇರಿಸಬೇಕಾಯಿತು. ಆದರೆ ಆಗ ಅವರುಗಳಿಗೆ ನಲವತ್ತು ಐವತ್ತು ವಯಸ್ಸಾಗಿತ್ತು. ಪೀತಾಂಬರನೂ ಅವರ ಹಾಗೆಯೇ ಆಗಿಬಿಡುತ್ತಾನೇನೋ ಎನ್ನುವ ಅನುಮಾನ ಮೊದಲಿನಿಂದಲೂ ನನಗಿತ್ತು. ನೀವು ಹೇಳಿದಂತೆ ಮನೋವೈದ್ಯರನ್ನು ಭೇಟಿಯಾಗುತ್ತೇನೆ' ಎಂದು ಹೇಳಿದ.

ತಾತ್ಕಾಲಿಕ ಉಪಶಮನಕ್ಕಾಗಿ ಔಷಧಿಯನ್ನು ತನ್ನ ಬೇನೆಗೆ ಪಡೆದು, ಪೀತಾಂಬರನ ತಂದೆ ಹಿಂತಿರುಗಿದ.

* * *

ಏಳೆಂಟು ತಿಂಗಳು ಮಾನಸಿಕ ರೋಗಿಗಳ ಆಸ್ಪತ್ರೆಯಲ್ಲಿ ಉತ್ತಮ ಚಿಕಿತ್ಸೆಯನ್ನು ಪಡೆದ ಮೇಲೆ ಪಿತಾಂಬರನ ಸ್ಥಿತಿಯು ಬಹುಪಾಲು ಉತ್ತಮಗೊಂಡಿತು. ಈಗ ಅವನು ವ್ಯವಹಾರವನ್ನು ನಡಸುತ್ತಿದ್ದಾನೆ. ಏರುಪೇರಾಗದಂತೆ ಸಹಾಯಕ ಸಿಬ್ಬಂದಿಯನ್ನೂ ನೇಮಿಸಲಾಗಿದೆ.

ಪ್ರೀತಿ, ವಿಶ್ವಾಸ, ಇತ್ಯಾದಿಗಳು ಈಗಲೂ ಎಲ್ಲರಲ್ಲಿರುವಂತೆ ಅವನಲ್ಲಿಲ್ಲ. ಆದರೂ ಮೊದಲಿದ್ದುದಕ್ಕೆ ಹೋಲಿಸಿದರೆ ಎಷ್ಟೋ ಪಾಲು ಮೇಲು.

ಮಾತನಾಡುವಾಗ ಅಸಂಬದ್ಧತೆಯು ಈಗ ಇಲ್ಲ. ಯೋಚನೆಗಳ ಸರಣಿಯೂ ಸುಸೂತ್ರವಾಗಿದೆ. ಮನೋವೈದ್ಯರ ಉಸ್ತುವಾರಿಯಲ್ಲಿ ಈಗಲೂ ಇದ್ದಾನೆ. ತಾನೇ ಅವರಲ್ಲಿಗೆ ಹೋಗಿ ಸಲಹೆಯನ್ನು ಪಡೆದು ಬರುತ್ತಾನೆ. ಕೊಟ್ಟ ಸಲಹೆಯಂತೆ ನಡೆದುಕೊಳ್ಳುತ್ತಾನೆ.

ಅವನ ಲೇಣೆದೇಣಿ ಅಂಗಡಿಗೆ ಬರುವ ಗಿರಾಕಿಗಳಿಗೆ, ಪೀತಾಂಬರನಿಗೆ ಸ್ಕೀಜೋ ಆಗಿತ್ತು, ಅಲ್ಪಸ್ವಲ್ಪ ಉಳಿದಿದೆ ; ಎನ್ನುವುದು ಈಗ ಪತ್ತೆಯೇ ಆಗುವುದಿಲ್ಲ.

ಸ್ಕೀಜೋಫ್ರೆನಿಯಾವು ಬಹಳ ವರ್ಷಗಳು ಕಾಡುತ್ತದೆ, ಆದರೆ ಸೂಕ್ತ ಚಿಕಿತ್ಸೆಯಿಂದ ಅದರ ದುಷ್ಪ್ರಭಾವವನ್ನು ಬಹಳಮಟ್ಟಿಗೆ ತಡೆಯಬಹುದು. ಸಾಮಾನ್ಯ ಜೀವನವನ್ನು ನೆಮ್ಮದಿಯಿಂದ ನಡೆಸಲು ಸಾಧ್ಯವಾಗುತ್ತದೆ. ಇಂತಹ ರೋಗಿಗಳಲ್ಲಿ, ಎಷ್ಟೊ ಜನರು ಚಿಕಿತ್ಸಾನಂತರ, ತಮ್ಮ ಕೆಲಸದಲ್ಲಿ ಅಸಾಧಾರಣ ಚಾಕಚಕ್ಯತೆಯನ್ನೂ ಜಾಣತನವನ್ನೂ ತೋರಿಸುತ್ತಾರೆ.

ಮೊದಮೊದಲ ಹಂತಗಳಲ್ಲಿ ಈ ಬೇನೆಯನ್ನು ಮನೆಯವರು, ಮಿತ್ರರು ಗಮನಿಸಿದರೆ, ಸೂಕ್ತ ಚಿಕಿತ್ಸೆಯನ್ನು ಮಾಡಿಸಿದರೆ, ಗುಣವಾಗುವ ಸಂಭವವು ಬಹಳಷ್ಟು ಇರುತ್ತದೆ. ಈ ಸೌಲಭ್ಯವಿರದಿದ್ದರೆ, ಅಂಕೆ, ಶಿಕ್ಷೆ, ಬುದ್ಧಿ ಹೇಳುವುದು, ಮೂದಲಿಸುವುದು – ಇವು ಮಾತ್ರ ದೊರೆತರೆ ರೋಗವು ಬಲವಾಗಿ ಬೇರೂರಿ, ಮನಸ್ಸಿನ ಛಿದ್ರತೆಯು ಹೆಚ್ಚುತ್ತ ಹೋಗಿ, ಸರಿಪಡಿಸಲಾಗದ ದುಃಸ್ಥಿತಿಗೆ ಮುಟ್ಟ ಬಹುದು. ಅಂತಹವರನ್ನು ಕಂಡು, ಇದು ವಾಸಿಯಾಗಲಾರದ ಕಾಯಿಲೆ ಎಂದು ಜನರು ಅಂದುಕೊಳ್ಳಬಹುದು. ತಪ್ಪಾದ ಈ ವಿನಾಶಕಾರೀ ಅಭಿಪ್ರಾಯವನ್ನು ಆದಷ್ಟು ಬೇಗ ಸಮಾಜದಿಂದ ತೊಡೆದುಹಾಕಬೇಕು.

**ನಿಲೂಫರ್ ಇನ ಇಂಜಿನಿಯರಿಂಗ್ ಓದು**

ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಸಮೀಯುಲ್ಲಾ ನನ್ನ ಸಹಪಾಠಿಯಾಗಿದ್ದ. ಬಡಮನೆತನದಲ್ಲಿ ಹುಟ್ಟಿದ್ದ ಜಾಣ ವಿದ್ಯಾರ್ಥಿ. ನಮ್ಮ ತರಗತಿಯಲ್ಲಿ ಇದ್ದ ವಿದ್ಯಾರ್ಥಿಗಳು ಬಹುತೇಕ ಮಧ್ಯಮ ವರ್ಗದವರು. ಅವನೂ ನಾನೂ, ಇಬ್ಬರೇ ಕಡುಬಡವರು. ನಮ್ಮಿಬ್ಬರಿಗೆ ಮಾತ್ರ ಗಡಿಯಾರವಿರಲಿಲ್ಲ ; ಫೌಂಟನ್‌ಪೆನ್ನೂ ಇರಲಿಲ್ಲ. ಕಾರಣ, ನಮ್ಮಿಬ್ಬರಲ್ಲಿಯೂ ತುಂಬಾ ಗೆಳೆತನವು ಕುದುರಿಕೊಂಡಿತು.

ಎಂಟ್ರೆನ್ಸ್ ಪರೀಕ್ಷೆಯಾದ ಮೇಲೆ ಅವ ಇಂಜನಿಯರಿಂಗ್ ಕಾಲೇಜನ್ನು ಸೇರಿದ ; ವಿದ್ಯಾರ್ಥಿವೇತನವು ದೊರಕಿದುದರಿಂದ. ಸೈನ್ಸ್ ಕಾಲೇಜಿಗೆ ನಾನು ದಾಖಲಾದೆ ; ಫೀಜು ಕಡಿಮೆ ಇದ್ದುದರಿಂದ. ಅನಂತರ ನಾವು ಒಬ್ಬರನ್ನೊಬ್ಬರು ಕಾಣುವುದು ಸ್ವಾಭಾವಿಕವಾಗಿ ವಿರಳವಾಯ್ತು.

ಹದಿನೈದು ಇಪ್ಪತ್ತು ವರ್ಷಗಳಾದ ಮೇಲೆ ಅವನನ್ನು ಸಿನಿಮಾ ಬಳಿ ಆಕಸ್ಮಿಕವಾಗಿ ಭೇಟಿಯಾದೆ. ಸುಮಾರು ಧಡಿಯನಾಗಿದ್ದ ; ಬೇಗ ಗುರುತು ಸಿಗಲಿಲ್ಲ. ಇವ ಸಮೀಯುಲ್ಲಾನೇ, ಎಂದು ಶಂಕಿಸುತ್ತಿದ್ದೆ. ಅಷ್ಟರಲ್ಲೀ ಅವನೇ ಒಂದು ತೋಳ ಮೇಲೆ ಕೈಹಾಕಿ 'ಯಾಕೋ ಹಾಗೆ ನೋಡ್ತೀ ಗುರುತು ಸಿಗಲಿಲ್ಲವೇನೋ' ಅಂದ. ಧ್ವನಿಯನ್ನು ಕೇಳಿದ ಮೇಲೆ ಅವನೇ ಎನ್ನುವುದು ಖಚಿತವಾಯಿತು. ಬಾಲ್ಯದ ಗೆಳೆಯ ಸಿಕ್ಕಿದ ಅಂತ ಹಿಗ್ಗೂ ಆಯಿತು. ಪರಸ್ಪರ ಯೋಗಕ್ಷೇಮದ ವಿಚಾರಣೆಯೂ ಆಯಿತು. ಮರಾಮತ್ತು ಇಲಾಖೆಯಲ್ಲಿ ದೊಡ್ಡ ಕೆಲಸದಲ್ಲಿದ್ದಾನೆ ಎಂದು ತಿಳಿಯಿತು. ನಾನು ವೈದ್ಯನಾಗಿರುವುದು ಅವನಿಗೆ ಮೋಜೆನಿಸಿತು. ಪಿಳ್ಳುಜುಟ್ಟು ಬಿಟ್ಟುಕೊಂಡು, ಹೆಣವನ್ನು ಕಂಡರೆ ಜನಿವಾರವನ್ನು ತೀಡುತ್ತಿದ್ದ ನೀನು, ಡಾಕ್ಟರಾದೆಯೇನೋ, ಹೆಣ ಕುಯ್ದೆಯೇನೋ ? ಹೆಣ ಹಾಕ್ತೀಯೇನೋ ಎಂದೆಲ್ಲಾ ಮೊದಲಿನಂತೆ ಗಹಗಹಿಸಿ ಕುಹಕವಾಡಿದ.

ಮುಂದಿನ ಭಾನುವಾರ ಸಂಜೆ ಅವರ ಮನೆಗೆ ಚಹಾಕ್ಕೆ ಬರುವುದಾಗಿ ಒಪ್ಪಿದೆ.

ಸಮೀಯುಲ್ಲಾ ಅಷ್ಟು ಇಷ್ಟು ಸಾಂಪ್ರದಾಯಕ ಮುಸಲ್ಮಾನ. ಮನೆಯಲ್ಲಿ ಘೋಷಾವನ್ನು ಕಟ್ಟುನಿಟ್ಟಾಗಿ ಆಚರಿಸುವವ. ಆದರೆ ಮಗಳು ಇಂಜಿನಿಯರಿಂಗ್ ಕಾಲೇಜಿನಲ್ಲಿ ಓದುತ್ತಿದ್ದಳು. ಚಹಾಕ್ಕೆಂದು ಅವನ ಮನೆಗೆ ಹೋದಾಗ ಅವಳೇ ಬಾಗಿಲು ತೆಗೆದು ಸ್ವಾಗತಿಸಿದ್ದು. 'ನೀವು ಬರ್ತೀರಿ ಅಂತ ದಾದಾ ಹೇಳಿದ್ದರು. ಸಚಿವರು ತುರ್ತಾಗಿ ಮಧ್ಯಾಹ್ನ ಹೇಳಿಕಳಿಸಿದ್ದರಿಂದ ಹೋಗಿದ್ದಾರೆ. ಇನ್ನೇನು ಬಂದುಬಿಡುತ್ತಾರೆ' ಎಂದಳು. ಅಷ್ಟು ಹೊತ್ತಿಗೆ ಸರಿಯಾಗಿ ಸರ‍್ರಂತ ಬಂದು

ನಿಂತ ಮೋಟಾರು, ಜಟ್ಟಂತ ನಿಂತಿತು. ಇಳಿದು ಓಡೋಡಿ ಬಂದ ಸಮೀಯುಲ್ಲಾ 'ತುಂಬಾ ಹೊತ್ತಾಯಿತೇನೋ ನೀ ಬಂದು. ಬೇಸರವಾಗಲಿಲ್ಲವಾ, ಹಾಳು ಕೆಲಸ, ರಜ ಇದ್ದರೂ ಹೋಗಲೇಬೇಕು' ಎಂದ. 'ಇಲ್ಲ ಕಣ್ಲೋ, ಈಗ ತಾನೇ ಬಂದೆ, ಈ ಹೆಣ್ಣುಮಗಳು ಬಾಗಿಲು ತೆಗೆದಳು. ಎರಡು ಮಾತನಾಡಿದಳು. ಅಷ್ಟರಲ್ಲೇ ನೀ ಬಂದೆ' ಎಂದೆ.

'ಇವಳು ನನ್ನ ದೊಡ್ಡ ಮಗಳು ಕಣ್ಲೋ, ನಿಲೂಫರ್ ಅಂತ. ಇಂಜಿನಿಯರಿಂಗ್ ಕಾಲೇಜಿನಲ್ಲಿ ಓದುತ್ತಿದ್ದಾಳೆ. ಮುಂದೆ ಆರ್ಕಿಟೆಕ್ಟ್ ಆಗಬೇಕು ಅಂತ ಹಂಬಲ ಅವಳಿಗೆ' ಎಂದು ಅವಳನ್ನು ಪರಿಚಯ ಮಾಡಿಸಿದ. 'ನನ್ನ ಹಳೆಯ ಅಪ್ತಗೆಳೆಯ ಕಣೆ. ಮಾಮೂ ಅಂತ ಅವನನ್ನು ಕರಿ ; ಮಸಲಾ ನಾನಿಲ್ಲದೇ ಹೋದರೆ, ಏನಾದರೂ ಬೇಕಾದರೆ, ಇವನ ಹತ್ತಿರ ಹೋಗು. ತನ್ನ ಸ್ವಂತಮಗಳಿಗಿಂತ ಹೆಚ್ಚು ಮಮತೆಯಿಂದ ನಿನ್ನನ್ನು ನೋಡಿಕೊಳ್ಳುತ್ತಾನೆ' ಎಂದು ನನ್ನ ಪರಿಚಯವನ್ನು ಆಕೆಗೆ ಮಾಡಿಸಿಕೊಟ್ಟ. ಸಮೀಯುಲ್ಲನಿಗೆ ತುಂಬು ಹೃದಯ. ಹೃದಯದಲ್ಲಿದ್ದುದನ್ನು ನಿಷ್ಕಪಟದಿಂದ ನುಡಿಯುತ್ತಾನೆ. ಅವನಂದುದನ್ನು ಕೇಳಿ ನನಗೂ ಗಂಟಲು ಒತ್ತಿಕೊಂಡು ಬಂದಿತ್ತು. ವಾತ್ಸಲ್ಯವು ತುಂಬಿದ್ದ ಕಣ್ಣುಗಳಿಂದ ನಿಲೂಫರ್ ನನ್ನನ್ನು ನೋಡಿ, 'ಆದಾಬ್ ಮಾಮೂ' ಎಂದಂದಳು. ಕಿರುನಗೆಯನ್ನು ಹೂಡಿದಳು. 'ಆರ್ಕಿಟೆಕ್ಟ್ ಆಗಬೇಕಾದರೆ ವಿಜ್ಞಾನದ ಕಲಿಕೆಯೊಂದೇ ಸಾಲದು. ಸೌಂದರ್ಯವನ್ನು ಗುರುತಿಸಿ ಅದನ್ನು ಕಲ್ಲುಮಣ್ಣಿನಲ್ಲಿ ಸೆರೆಹಿಡಿಯಬೇಕು, ಆದ್ದರಿಂದಲೇ ಈ ವಿದ್ಯೆಯಲ್ಲಿ ಹೆಂಗಸರು ಪ್ರವರ್ಧಮಾನಕ್ಕೆ ಸುಲಭವಾಗಿ ಬರಬೇಕು. ಒಳ್ಳೆಯ ಕೆಲಸ ಮಾಡಿದೆ. ಮಗಳ ಇಚ್ಛೆಯಂತೆ ಓದನ್ನು ಮುಂದುವರೆಸಿದೆಯಲ್ಲಾ. ಸಂಪ್ರದಾಯಕ್ಕೆ ಶರಣಾಗಿ ಮದುವೆ ಮಾಡಿ ಮೂಲೆಯಲ್ಲಿ ಕೂರಿಸಲಿಲ್ಲವಲ್ಲ' ಎಂದು ನಾನೂ ಹೊಗಳಿದೆ.

ಒಳ ಅಂಗಳಕ್ಕೆ ಕರೆದುಕೊಂದು ಹೋದ. 'ನಿನ್ನ ವಿಷಯದಲ್ಲಿ ಘೋಷಾ ಎಲ್ಲಿ ಬಂತೋ' ಎಂದು ಹೇಳುತ್ತಾ ಹೆಂಡತಿಯನ್ನು ಕರೆದು ಪರಿಚಯ ಮಾಡಿ ಕೊಟ್ಟ. ಇನ್ನಿಬ್ಬರು ಮಕ್ಕಳನ್ನೂ ಕರೆದು ಆದಾಬ್ ಮಾಡಿಸಿದ. ಅವೂ ೧೫– ೧೦ರ ಹೆಣ್ಣು ಮಕ್ಕಳು.

ಆತ್ಮೀಯವಾಗಿ ಅವನೊಡನೆ ಆ ಸಂಜೆಯನ್ನು ಕಳೆದು, ಆ ಮಕ್ಕಳೊಂದಿಗೆ ಆಟವಾಡಿ, ನಕ್ಕುನಲಿಸಿ ನಂತರ ಹಿಂತಿರುಗಿದೆ.

ಸಮೀಯುಲ್ಲಾಗೆ ವರ್ಗವಾಯಿತು ಎನ್ನುವುದನ್ನು ಪತ್ರಿಕೆಗಳಲ್ಲಿ ಕಂಡೆ. ತಿರುಗಿ ಎಂದು ಅವನನ್ನು ಕಾಣುವುದೋ ಎಂದು ಅನ್ನಿಸಿತು. ಸ್ವಲ್ಪ ಬೇಸರವೂ

ಆಯಿತು. ಕೆಲಸದ ನೆಪದಿಂದಾಗಿ ಅವನನ್ನು ಪುನಃ ಭೇಟಿಯಾಗಿರಲಿಲ್ಲ. ಮುಂದಿನ ಭಾನುವಾರ ಅಂತ ಮುಂದಕ್ಕೆ ಹಾಕುತ್ತ ಬಂದಿದ್ದೆ. ಆದರೆ ಎರಡೇ ತಿಂಗಳುಗಳಲ್ಲಿ ವರ್ಗವಾಗಿತ್ತು.

ತಿರುಗಿ ಸಮೀಯುಲ್ಲಾನ ಕಂಡಿದ್ದು, ಅವನೇ ನನ್ನ ದವಾಖಾನೆಗೆ ಬಂದಾಗ: ಎರಡು ವರ್ಷಗಳಾದ ಮೇಲೆ. 'ಯಾವಾಗ ಬಂದೆ? ಇಲ್ಲಿಗೆ ಪುನಃ ವರ್ಗವಾಗಿದೆಯೆ ? ಏನು ಸಮಾಚಾರ?' ಎಂದು ವಿಚಾರಿಸಿದೆ. 'ನಿನ್ನ ಹತ್ತಿರ ಮಾತನಾಡುವುದು ತುಂಬಾ ಇದೆ. ಮನೆಗೆ ಬಂದು ಮಾತನಾಡುತ್ತೇನೆ, ಯಾವಾಗ ವಿರಾಮ ಹೇಳು' ಎಂದ. 'ಮಧ್ಯಾಹ್ನ ಒಂದರ ವೇಳೆಗೆ ಊಟಕ್ಕೆ ಹೋಗುತ್ತೇನೆ, ಆ ವೇಳೆಗೆ ನೀನೂ ಬಾ, ಜತೆಯಲ್ಲಿ ಊಟ ಮಾಡು. ಆಗ ಏನು ಬೇಕಾದರೂ ಮಾತನಾಡು. ನಿನ್ನ ಆರ್ಕಿಟೆಕ್ಟ್ ಮಗಳಿಗೆ ವಿರಾಮವಿದ್ದರೆ ಅವಳನ್ನೂ ಕರೆದು ಕೊಂಡು ಬಾ ತುಂಬಾ ಚೂಟಿ ಹುಡುಗಿ, ಅವಳ ಹತ್ತಿರ ಮಾತನಾಡಿದರೆ ಹಾಯ್ ಎನಿಸುತ್ತೆ' ಎಂದೆ.

'ಅವಳ ವಿಷಯವನ್ನು ಮಾತನಾಡುವುದಕ್ಕೇ ಬರೋದು, ಆದ್ದರಿಂದ ನಾನೊಬ್ಬನೇ ಬರ್ತೀನಿ. ಆಮೇಲೆ ನೀನು ಅವಳನ್ನು ನೋಡಬೇಕಾಗುತ್ತೆಯೇನೋ' ಎಂದ ಸಮೀಯುಲ್ಲಾ. ಸಾಮಾನ್ಯವಾಗಿ ಗಹಗಹಿಸುತ್ತಿದ್ದ ಅವ ಈಗ ಖಿನ್ನನಾದಂತಿತ್ತು. ಯಾವುದೋ ಆತಂಕದಿಂದ ನರಳುತ್ತಿದ್ದಂತಿತ್ತು. ಏನಾಗಿದೆಯೋ ಪಾಪ, ಎಂದಂದುಕೊಂಡೆ ಅವ ಹೊರಟು ಹೋಗುವಾಗ.

ಊಟಕ್ಕೆ ಕುಳಿತಾಗ ಹೇಳಿದ : 'ಏನು ಮಾಡಬೇಕೋ ಒಂದೂ ತಿಳಿಯುವುದಿಲ್ಲ. ನಿನ್ನ ಸಲಹೆ ಕೇಳಿ ನಂತರ ನಿರ್ಧರಿಸೋಣ ಅಂತ ಬಂದೆ, ಊಟ ಮುಗಿದ ಮೇಲೆ ಹೇಳ್ತೀನಿ. ಇಲ್ಲದೆ ಈಗ ಹೇಳಿದರೆ, ಬಡಿಸಿದ ಊಟವು ರುಚಿ ಬರದೇ ಇರಬಹುದು,' ಎಂದು. 'ಅಂತದೇನೂ ಆಗುಲ್ಲ, ಊಟ ಮಾಡುವಾಗಲೇ ಹೇಳು, ಮನಸ್ಸಿನ ಭಾರವಾದರೂ ಕಡಿಮೆಯಾಗುತ್ತೆ' ಅಂದೆ. ಮಾತನಾಡಲಾರಂಭಿಸಿದ, ಮಧ್ಯೆಮಧ್ಯೆ ತುತ್ತು ಉಣ್ಣುತ್ತಾ :

'ನಿಲೂಫರ್ ಅನ್ನು ನೋಡಿದ್ದೆಯಲ್ಲಪ್ಪಾ ! ಇಂಜಿನಿಯರಿಂಗ್ ಕಾಲೇಜು ಸೇರಿದ್ದಳು. ಹೆಚ್ಚು ಮಾತನಾಡದಿದ್ದರೂ, ಆಡಿದಾಗ ವಿನಯದಿಂದ ವೈನವಾಗಿ, ನುಡಿಯುತ್ತಿದ್ದಳು. ಓದಿನಲ್ಲಿ ಯಶಸ್ವಿಯಾಗಿದ್ದಳು. ಓದಿಸುವುದು ಬೇಡ, ಮದುವೆ ಮಾಡಿಬಿಡೋಣ ಅಂತ ಅವಳಮ್ಮ ಹೇಳಿದರೂ ನಾನು ಕೇಳಲಿಲ್ಲ. ಕಾಲೇಜಿಗೆ ಸೇರಿಸಿದೆ. ನನಗೆ ವರ್ಗವಾದಾಗ ನಿಲೂಫರನ್ನು ನಮ್ಮವರೇ ನಡಸುತ್ತಿರುವ ಉತ್ತಮ ಮಟ್ಟದ ಹಾಸ್ಟೆಲಿನಲ್ಲಿ ಸೇರಿಸಿದೆ. ಆಗಲೂ ನನ್ನ ಹೆಂಡತಿ, ಬೆಳೆದ

ಹುಡುಗಿಯನ್ನ ಎಲ್ಲೆಲ್ಲೋ ಬಿಟ್ಟು ಓದಿಸುವುದು ಸರಿಯಲ್ಲ, ಓದಿ ಏನು ಉದ್ಧಾರ ಆಗಬೇಕು. ನಮ್ಮೊಂದಿಗೆ ಕರೆದುಕೊಂಡು ಹೋಗೋಣ. ಓದಿದ್ದು ಸಾಕು' ಎಂದು ಬಹಳ ಹೇಳಿದಳು. ನಾನೊಪ್ಪಲಿಲ್ಲ. 'ಹೀಗೆ ಏರ್ಪಾಡು ಮಾಡಿದ್ದೀನಿ, ನಿನ್ನ ಮುಂದಿನ ವ್ಯಾಸಂಗಕ್ಕೆ, ಇಷ್ಟವಿಲ್ಲದಿದ್ದರೆ ಹೇಳು, ಓದು ಸಾಕು ಎನಿಸಿದರೆ ನಮ್ಮೊಡನೆ ಬಂದುಬಿಡು. ಒಂದು ವರ್ಷದ ಓದು ಹಾಳಾಯಿತು ಅಂತ ಏನೂ ಅಂದುಕೊಳ್ಳಬೇಡ' ಎಂದು ಅವಳಿಗೆ ಹೇಳಿದೆ. ನೀವು ಹೇಳಿದಂತೆ ಆಗಲಿ ಎಂದಳೇ ವಿನಃ, ನನ್ನಿಷ್ಟ ಹೀಗೆ, ನನ್ನ ಕಷ್ಟ ಹಾಗೆ ಎಂದೇನನ್ನೂ ಹೇಳಲಿಲ್ಲ. ಹಾಸ್ಟಲಲ್ಲಿ ಬಿಟ್ಟು ಹೋದೆ. ಹಾಸ್ಟಲ್ ವಾರ್ಡ್‌ನ್‌ನಿಂದ ಮೂರು ತಿಂಗಳಾದ ಮೇಲೆ ಕಾಗದ ಬಂತು.' 'ಒಂದು ವಾರದಿಂದ ನಿಲೂಫರ್ ಕಾಲೇಜಿಗೆ ಹೋಗುತ್ತಿಲ್ಲ. ಡಾಕ್ಟರ್ ಅನ್ನು ಕರೆಸಲೇ, ಮೈ ಜಡ್ಡಾಗಿದೆಯೇ ಅಂದರೆ, ಏನೂ ಬೇಡ, ಒಂದೂ ಇಲ್ಲ ಎಂದು ಸಿಡುಕುತ್ತಾಳೆ. ಊಟವನ್ನು ಸರಿಯಾಗಿ ಮಾಡುತ್ತಿಲ್ಲ. ನೀವು ಬಂದು ಕರೆದುಕೊಂಡು ಹೋಗಿ. ಸರಿಯಾದ ಶುಶ್ರೂಷೆಯನ್ನು ಮಾಡುವುದಕ್ಕೆ ನಮಗೆ ಸಾಧ್ಯವಿಲ್ಲ. ನಲವತ್ತು ಜನ ಹುಡುಗಿಯರಿದ್ದಾರೆ. ನಾನೊಬ್ಬಳೇ ನೋಡಿಕೊಳ್ಳಬೇಕು' ಎಂದು ಬರೆದಿದ್ದಳು.

ನಮಗೆಲ್ಲಾ ಗಾಬರಿಯಾಯಿತು. ನಿಂತಕಾಲಲ್ಲೇ ಇಲ್ಲಿಗೆಬಂದು ಹಾಸ್ಟಲಿಗೆ ಹೋದೆ. ನನ್ನನ್ನು ಕಂಡಾಗ 'ದಾದಾ ಚೆನ್ನಾಗಿದಿಯಾ? ಯಾವಾಗ ಬಂದೆ.' ಎಂದು ಕೇಳಲಿಲ್ಲ, ಸುಮ್ಮನೆ ನನ್ನ ಮುಖವನ್ನು ನೋಡುತ್ತಿದ್ದಳು. 'ಚೆನ್ನಾಗಿದೀಯಾ? ಕಾಲೇಜಿಗೆ ಹೋಗಲಿಲ್ಲವಂತೆ, ಏನು ಕಾಯಿಲೆಯಾಗಿದೆ ; ಅಥವಾ ಕಾಲೇಜಿನಲ್ಲಿ ಯಾರಾದರೂ ಕೀಟಲೆ ಮಾಡಿದರೇ?' ಎಂದು ಕೇಳಿದೆ. ಬೆಪ್ಪು ಬಡಿದಂತಿದ್ದ ಅವಳ ಮುಖವನ್ನು ನೋಡಿ ನನಗೆ ಗಾಬರಿಯಾಗಿತ್ತು. ದೆವ್ವಭೂತವನ್ನು ಕಂಡು ಹೆದರಿದವರಂತಿದ್ದಳು. ಯಾವ ಉತ್ತರವನ್ನೂ ಕೊಡಲಿಲ್ಲ. ಅವಳನ್ನು ಮನೆಗೆ ಕರೆದುಕೊಂಡು ಹೋದೆ. ತೌರಿಗೆ ಬಂದ ಮೇಲೆ ಕೂಡ ಗೆಲುವಾಗಲಿಲ್ಲ. 'ಯಾವುದೋ ಭೂತ ಹಿಡಿದುಕೊಂಡಿದೆ, ಎಲ್ಲೆಲ್ಲೋ ಹಸಿ ಮೈಯ್ಯಿನ ಹುಡುಗಿಯನ್ನು ಬಿಟ್ಟು ಬಂದರೆ ಇನ್ನೇನಾಗುತ್ತೆ' ಅಂತ ನನ್ನ ಹೆಂಡತಿ ರೇಗಿದಳು. ಭೂತ ಬಿಡಿಸುವುದಕ್ಕೆ ಮೌಲ್ವಿಯನ್ನು ಕರೆಸಿ ಏರ್ಪಾಡು ಮಾಡಿದಳು. ಭೂತ ಬಿಡಿಸುವ ಕ್ರಮವನ್ನು ಯಾರು ನೋಡಿದರೂ ಹೆದರಬೇಕು, ಆದರೆ ನಿಲೂಫರ್ ಉದಾಸೀನಳಾಗಿಯೇ ಇದ್ದಳು. ಬೇವಿನಸೊಪ್ಪಿನ ಬರಲಿಂದ ಬಾರಿಸಿದಾಗಲೂ ಸ್ವಲ್ಪಹೊತ್ತು ಸುಮ್ಮಗಿದ್ದಳು. ನಂತರ ರೇಗಾಡಿದಳು, ಯಾವುದಕ್ಕೂ ಭಯ ಬಿದ್ದಂತೆ ಕಾಣಿಸಲಿಲ್ಲ. ಆಮೇಲೆ ಒಂದೆರಡು ವಾರ ಎಲ್ಲರೊಂದಿಗೂ ಒಂದೆರಡು

ಮಾತುಗಳನ್ನಾಡುತ್ತಿದ್ದಳು. ಅಷ್ಟೇ ವಿನಹಾ ಸದರವನ್ನಾಗಲೀ ವಿಶ್ವಾಸವನ್ನಾಗಲೀ ತೋರಿಸುತ್ತಿರಲಿಲ್ಲ. 'ಕಾಲೇಜಿನಲ್ಲಿ ಯಾವ ಪಾಠ ಕಲಿಸಿದರು ? ಮನಸ್ಸಿಗೆ ಸುಲಭವಾಗಿ ಹಿಡಿಸುವಂತೆ ಕಲಿಸಿದರೇ' ಎಂದು ಮೇಲೆ ಮೇಲೆ ಕೇಳಿದೆ. ಒಂದೊಂದು ಸರ್ತಿ ಗೆಲುವಾಗಿ ಉತ್ತರಿಸುತ್ತಿದ್ದಳು. ಗಣಿತ ಕಲಿಸುತ್ತಿದ್ದವರು ಬಲು ಸ್ವಾರಸ್ಯವಾಗಿ ಪಾಠ ಕಲಿಸುತ್ತಿದ್ದರು ಎಂದೊಮ್ಮೆ ಅಂದಳು. ಒತ್ತಾಯ ಮಾಡಿ ಕೇಳಿದಾಗ ಸಿಡುಕುತ್ತಾ ಎದ್ದು ಹೋಗಿ ಬಿಡುತ್ತಿದ್ದಳು. ಇಂತಹ ವಯಸ್ಸಿನಲ್ಲಿ ಈ ರೀತಿಯ ಬೇನೆಗಳಿಗೆ, ಮದುವೆಯೇ ಶಾಶ್ವತವಾದ ಮದ್ದು ಎಂದು ನನ್ನ ಹೆಂಡತಿ ನಂಬಿದ್ದಾಳೆ. ಮಗಳಿಗೆ ಮದುವೆ ಮಾಡಿ ಎಂದು ಹಟ ಹಿಡಿದಿದ್ದಾಳೆ.

ಅವಳ ಈಗಿನ ಸ್ಥಿತಿಯಲ್ಲಿ ಮದುವೆ ಮಾಡುವುದು ಸರಿಯೇ, ಅಥವಾ ಅವಳ ಮನಃಸ್ಥಿತಿ ಸರಿಹೋದ ಮೇಲೆ, ಅವಳ ಅಭಿಪ್ರಾಯವನ್ನು ಕೇಳಿ ಮದುವೆ ಮಾಡುವುದೋ ಅಥವಾ ಪುನಃ ಓದನ್ನು ಮುಂದುವರೆಸುವುದೋ ಎನ್ನುವುದನ್ನು ನಿರ್ಧರಿಸಬೇಕೇ ? ಒಂದೂ ತೋಚುಲ್ಲಪ್ಪ ನನಗೆ. ಕಳೆದ ಎರಡು ವರ್ಷಗಳಿಂದ ಮನೆಯಲ್ಲಿ ಬಿದ್ದಿರುತ್ತಾಳೆ. ಯಾರ ಜತೆಯೂ ಸೇರುವುದಿಲ್ಲ. ಯಾರಾದರೂ ತಿಳಿದವರು ಬಂದರೆ, ಅವರೆದುರಿಗೆ ಸ್ವಲ್ಪ ಹೊತ್ತು ಕೂತಿರುತ್ತಾಳೆ. ಒಂದೆರಡು ಮಾತೂ ಆಡುತ್ತಾಳೆ. ಅವರು ಆ ಕಡೆ ಹೋದರೆ, ಅಮ್ಮನ ಮೇಲೋ, ತಂಗಿಯ ಮೇಲೋ ಸಿಕ್ಕಾಪಟ್ಟೆ ಸಿಡುಕಿ, ಅನ್ನಬಾರದ್ದನ್ನೆಲ್ಲಾ ಅನ್ನುತ್ತಾಳೆ. ಇವಳಿಗೇನು ಹುಚ್ಚೇ ಹಿಡಿದಿದೆಯೋ ಅನಿಸುತ್ತೆ ಆಗ. ಮಿಕ್ಕಂತೆ ಸರಿಯಾಗಿರುತ್ತಾಳೆ. ಆದರೆ ನನಗನ್ನಿಸುತ್ತಪ್ಪ ; ಯಾರ ಮೇಲೂ ಅವಳಿಗೆ ಪ್ರೀತಿ ಇದ್ದಂತಿಲ್ಲ. ಯಾರನ್ನು ಕಂಡರೂ, ಯಾವುದನ್ನು ಕಂಡರೂ ಅಸಾಧ್ಯ ಉದಾಸೀನ. ಏನಾದರೂ ಮಾತನಾಡಿದರೆ, ನಾವು ಹೇಳಿದುದರ ಮೇಲೆ ಅವಳ ಗಮನವು ಕ್ಷಣ ಮಾತ್ರವೂ ಇರುವುದಿಲ್ಲ ಅನಿಸುತ್ತೆ. ಯಾತರಮೇಲೂ ಅವಳ ಗಮನವು ಸ್ವಲ್ಪಕಾಲ ನಿಲ್ಲುವುದಿಲ್ಲವೇನೋ, ಯಾವುದರಲ್ಲಿಯೂ ಆಸಕ್ತಿಯೇ ಇಲ್ಲವೇನೋ ಅನಿಸುತ್ತೆ. ಒಂದೊಂದು ಸರ್ತಿ ಮನೆಗೆಲಸವನ್ನು ಮಾಡುತ್ತಾ ಅಮ್ಮನಿಗೆ ನೆರವಾಗುತ್ತಾಳೆ. ಮತ್ತೆ ಕೆಲವು ಸರ್ತಿ ಸುಸ್ತಾಗಿದೆ ನಿಲೂಫರ್, ಸ್ವಲ್ಪ ತರಕಾರಿ ಹೆಚ್ಚಿಡ್ತೀಯಾ ಅಂತ ಅಮ್ಮ ಅಂದರೆ, ಕೇಳಿಸದೇ ಇದ್ದವಳಂತೆ ಏನನ್ನೊ ಓದುತ್ತಾ ಕುಳಿತೇ ಇರುತ್ತಾಳೆ.

ನಿನ್ನ ಮಗಳಿಗೆ ಹೀಗಾಗಿದ್ದರೆ ನೀನೇನು ಮಾಡ್ತಾ ಇದ್ದಿ, ಹೇಳು. ಆದರೆ ಒಂದು ವಿಷಯವನ್ನು ಗಣನೆಗೆ ತೆಗೆದುಕೊಂಡು ಸಲಹೆ ಕೊಡು. ನಿಮ್ಮಲ್ಲಿ ಮದುವೆಯಾದರೆ, ಅದು ಶಾಶ್ವತವಾದ ಬಂಧನವಾಗುತ್ತೆ. ಆದರೆ ನಮ್ಮಲ್ಲಿ

ಮದುವೆಯು ಶಾಶ್ವತವಾಗಿರಲೇ ಬೇಕಾಗಿಲ್ಲ. ಏರುಪೇರಾದರೆ ತಲಕ್ ಮಾಡಿಕೊಳ್ಳಬಹುದು. ಇದನ್ನು ನೆನಪಿನಲ್ಲಿಟ್ಟುಕೊಂಡು ನಿರ್ಧಾರವನ್ನು ಹೇಳು' ಎಂದ ಸಮೀಯುಲ್ಲಾ.

ಹುಟ್ಟುಜಾಣತನವಿದ್ದವ, ಅಭ್ಯಾಸದಿಂದ ವಿಶ್ಲೇಷಿಸುವ ಮನಸ್ಸನ್ನು ಹರಿತ ಮಾಡಿಕೊಂಡಿದ್ದ. ಲೋಕಾನುಭವವೂ ಇತ್ತು. ಕಂಡುದನ್ನು ಸೂಕ್ಷ್ಮವಾಗಿ ಗ್ರಹಿಸುತ್ತಿದ್ದ, ಸ್ಕೀಜೋಫ್ರೆನಿಯಾದಿಂದ ನರಳುವವರ ಮುಖ್ಯ ಚಿಹ್ನೆಗಳಾದ : ೧. ಭಾವನೆಗಳು ಇಲ್ಲದಿರುವುದು ೨. ಯೋಚನಾಸರಣಿಯಲ್ಲಿ ಕುಂದು ಕಾಣುವುದು ೩. ಗಮನವನ್ನು ಕೇಂದ್ರೀಕರಿಸಿ ಹಿಡಿದಿಡುವುದಕ್ಕೆ ಆಗದೆ ಇರುವುದು, ಇವೆಲ್ಲವನ್ನೂ ನಿಲೂಫರ್‌ನಲ್ಲಿ ಗುರುತಿಸಿದ್ದ, ವಿವರಿಸಿದ್ದ. ಆದರೆ ಇವು ಆ ಬೇನೆಯ ಕುರುಹುಗಳು ಎಂದವನಿಗೆ ತಿಳಿಯದು.

'ಮದುವೆಯನ್ನು ಈಗ ಮಾಡುವುದು ಬೇಡ, ಮನೋವೈದ್ಯರಲ್ಲಿ ಚಿಕಿತ್ಸೆಯನ್ನು ಜರೂರಾಗಿ ಮಾಡಿಸು. ಸ್ವಾಸ್ಥ್ಯವು ಉಂಟಾದ ಮೇಳೆ, ಮನೋವೈದ್ಯರು ಒಪ್ಪಿದಾಗ, ಮದುವೆಯ ಯೋಚನೆಯನ್ನು ಮಾಡುವಿಯಂತೆ. ಇಂತಹ ವೈದ್ಯರ ಬಳಿಗೆ ಹೋಗು. ನಾನವರೊಡನೆ ಮಾತನಾಡುತ್ತೇನೆ. ತುಂಬಾ ಶ್ರದ್ಧೆ ಮತ್ತು ಅನುಕಂಪದಿಂದ ಚಿಕಿತ್ಸೆಯನ್ನು ನಡಸುತ್ತಾರೆ' ಎಂದು ಹೇಳಿದೆ. ಸಮೀಯುಲ್ಲಾನ ಮನಸ್ಸು ತುಸು ಹಗುರವಾಯಿತು, ನನ್ನ ಮನಸ್ಸು ತುಸು ಭಾರವಾಯಿತು. ಗೆಳೆತನ ಎಂದರೆ ಇದೆಯೇನೋ ?

ಒಂದು ವರ್ಷ ಚಿಕಿತ್ಸೆಯನ್ನು ಮಾಡಿದ ಮೇಲೆ ನಿಲೂಫರಳು ಬಹಳಮಟ್ಟಿಗೆ ಗುಣಹೊಂದಿದಳು. ಓದನ್ನು ಮುಂದುವರಿಸಲಿಲ್ಲ. ಮದುವೆಗೂ ಒಪ್ಪಿದಳು. ನಿಧಾನಸ್ಥ ಗಂಡನೂ ದೊರಕಿದ. ಮದುವೆ ಆಯಿತು. ಗಂಡನ ಮನೆಯಲ್ಲಿ ಎಲ್ಲರೊಂದಿಗೂ ಹೊಂದಿಕೊಂಡಳು, 'ಚೆಲ್ಲುಚೆಲ್ಲಾಗಿ ಮಾತನಾಡುಲ್ಲ, ನಮ್ಮ ಸೊಸೆಯದು ತುಂಬಾ ಗಂಭೀರ ಸ್ವಭಾವ' ಎಂದು ಅತ್ತೆಯಿಂದ ಮೆಹನತ್ತು ಪಡೆದಳು.

ಮೊದಲ ಹೆರಿಗೆಯಾಗುವ ವೇಳೆಗೆ, ನನಗೆ ಸ್ವಲ್ಪ ಕಸಿವಿಸಿಯಾಯಿತು. ಹೆರಿಗೆಯಾದ ಸುಸ್ತಿನಿಂದ ಬೇನೆಯು ತಿರುಗಿ ಮರುಕಳಿಸುವುದೋ ಎಂದ. ಅಲ್ಲಾನ ಕೃಪೆ. ಹಾಗಾಗಲಿಲ್ಲ. ಮಗು ಬಾಣಂತಿ ಆರೋಗ್ಯವಾಗಿದ್ದರು.

* * * *

# ೭. ಶೀನಪ್ಪನ ಅಮ್ನೀಸಿಯ

ಐದಾರು ಮಕ್ಕಳಿದ್ದ ಮನೆಯಲ್ಲಿ ಶೀನಪ್ಪ ಜನ್ಮ ತಾಳಿದ. ತುಂಬಾ ಒಳ್ಳೆಯ ಮಗು ; ಯಾರಿಗೂ ಯಾವ ತೊಂದರೆಯನ್ನೂ ಕೊಡುವುದಿಲ್ಲ, ಎಂದು ಅಮ್ಮ ಹೊಗಳುತ್ತಿದ್ದಳು. ಹೀಗಿದ್ದರೂ ಒಮ್ಮೊಮ್ಮೆ ರಚ್ಚೆ ಹಿಡಿದು ಅಳಲು ಪ್ರಾರಂಭಿಸಿದರೆ ಬಡಪೆಟ್ಟಿಗೆ ಸಮಾಧಾನವನ್ನು ಹೊಂದುತ್ತಿರಲಿಲ್ಲ. ಹೆದರಿಸಿ ಬೆದರಿಸಿದರೆ, ಹೊಡೆದರೆ ಬಡಿದರೆ ಇನ್ನೂ ಹೆಚ್ಚಾಗಿ ಮೊಂಡು ಹಿಡಿಯುತ್ತಿದ್ದ. ಆದರೆ ಬಹಳ ವಿರಳವಾಗಿ ಅವ ಹಟ ಹಿಡಿಯುತ್ತಿದ್ದುದರಿಂದ ಯಾರಿಗೂ ಅವನ ಮೇಲೆ ಬೇಸರ ಬಂದಿರಲಿಲ್ಲ. ಶೈಶವದಲ್ಲಿ ಹೇಳಿಕೊಳ್ಳುವಂತಹ ಯಾವ ಬೇನೆಯೂ ಬರಲಿಲ್ಲ. ಲಕ್ಷಣವಾಗಿ ಉಂಡು ತಿಂದು ಬೆಳೆದ.

ಎಂಟು ಹತ್ತು ವರ್ಷಗಳಾದುವು. ಶಾಲೆಗೆ ಹೋಗಿ ಬರುತ್ತಿದ್ದ. ಆ ವಯಸ್ಸಿನಲ್ಲಿ ಜತೆ ಹುಡುಗರೊಡನೆ ಗೋಲಿ ಆಡುತ್ತಾ ಜಗಳ ಕಾಯಬೇಕು. ಮರಕೋತಿ ಆಡುಕ್ಕೆ ಹೋಗಿ ಮೈ ಕೈ ತರಚಿಕೊಂಡು ಬರಬೇಕು. ಆದರೆ ಶೀನಪ್ಪನದು ಎಷ್ಟು ಸಂಕೋಚ ಪ್ರವೃತ್ತಿ ಅಂತ ; ಇಂತಹ ಆಟಗಳಿಗೆ ಹೋಗುತ್ತಲೇ ಇರಲಿಲ್ಲ. ಬದಲು ಹರಿಕತೆಗಳಿಗೆ ಹೋಗಿ ಒಂದು ಮೂಲೆಯಲ್ಲಿ ಒಬ್ಬನೇ ಕೂರುತ್ತಿದ್ದ. ಆಗಲೂ ಜತೆ ಹುಡುಗರನ್ನು ಕರೆಯುತ್ತಿರಲಿಲ್ಲ. ಓದನ್ನೇನೋ ಸಾಂಗವಾಗಿ ಮುಂದುವರೆಸುತ್ತಿದ್ದ. ಉತ್ತಮ ಕ್ಲಾಸುಗಳನ್ನು ಪರೀಕ್ಷೆಗಳಲ್ಲಿ ಪಡೆಯದೆ ಇದ್ದರೂ ಎಲ್ಲೂ ಯಾವಾಗಲೂ ಫೈಲ್ ಆಗಲಿಲ್ಲ. ಎಂ.ಕಾಂ. ಪ್ಯಾಸುಮಾಡಿದ ಮೇಲೆ ದೊಡ್ಡ ಕಂಪನಿಯಲ್ಲಿ ಜವಾಬ್ದಾರಿಯುತವಾದ ಕೆಲಸವು ದೊರಕಿತು. ಅಂದಮೇಲೆ ಮದುವೆಯೂ ಆಯಿತು : ಹೆಣ್ಣನು ನೋಡಿ ಮಾತನಾಡಿಸಿ, ನೀ ಒಪ್ಪಿದರೆ ಮದುವೆ ಮಾಡುತ್ತೇವೆ; ಎಂದು ತಾಯ್ತಂದೆಯರೆಂದರು. ಹಿರಿಯರು ನೀವು, ನೀವು ಸರಿ ಎಂದುದಕ್ಕೆ ನಾನು ಒಪ್ಪುತ್ತೇನೆ. ಹೆಣ್ಣನ್ನು ನಾನೇನು ನೋಡಬೇಕಾಗಿಲ್ಲ; ಎಂದು ಶೀನಪ್ಪ ಹೇಳಿದ. ಹೆಣ್ಣನ್ನು ನೋಡದೆ ಅವ ಮದುವೆಯಾಗಲು ಒಪ್ಪಿದ. ಅವನಿಗೆ ಲಭಿಸಿದ ಹೆಣ್ಣು ಕೂಡ, ಗಂಡನ್ನು ನೋಡದೆ ಮದುವೆಗೆ ಒಪ್ಪಿದಳು. ಮಲತಾಯಿಯಿರುವ ಮನೆಯನ್ನು ಬಿಟ್ಟರೆ ಸಾಕು ಎಂದವಳಿಗೆ ಅನಿಸಿರಬೇಕು. ಮದುವೆಯು ಆದಮೇಲೆ ಯಥಾಪ್ರಕಾರದ ಸಂಸಾರವು

ಶುರುವಾಯಿತು. ಆರೇಳು ವರ್ಷಗಳಲ್ಲಿ ಮೂರು ಮಕ್ಕಳೂ ಆದುವು. ಪ್ರಾರಬ್ಧ ಕರ್ಮದಿಂದ ಹೀಗಾಯಿತು ಎನ್ನಬೇಕೇ ಹೊರತು ಸುರಸ ದಾಂಪತ್ಯದಿಂದ, ಸರಸ ಸಂಸಾರದಿಂದ; ಬಯಸಿಬಂದ ಮಕ್ಕಳು ಎಂದು ಯಾರೂ ಹೇಳುವಂತಿರಲಿಲ್ಲ. ಆದರೆ ಗಂಡ ಹೆಂಡಿರಲ್ಲಿ ವಿರಸವಿತ್ತು ಎಂದೇ? ಛೇ ! ಪರಸ್ಪರವಾಗಿ ದನಿಯೆತ್ತಿ ಗಂಡ ಹೆಂಡಿರು ಎಂದೂ ಮಾತನಾಡಿರಲಿಲ್ಲ. ಅಂತೆಯೇ ನಗುನಗುತ ಹತ್ತೂ ಜನರಿದ್ದರೂ, ಕಣ್ಣ ಹೊಳಪಿನ ಝಳಪದಿಂದ, ಒಬ್ಬರೊಡನೆ ಇನ್ನೊಬ್ಬರು, ಆದರವನ್ನು ತೋರಿಸಲೂ ಇಲ್ಲ. ಉದ್ವೇಗದ ಆಕರ್ಷಣೆಯನ್ನು ಪ್ರದರ್ಶಿಸಲೂ ಇಲ್ಲ.

ಕಚೇರಿಯ ಕೆಲಸದಲ್ಲಿ ಶೀನಪ್ಪ ಶ್ರದ್ಧೆಯನ್ನು ವಹಿಸುತ್ತಿದ್ದ. ಆದರೆ ಸಮಸ್ಯೆಯೊಂದು ಎದುರಾದರೆ, ವಿಶ್ಲೇಷಿಸಿ, ಪರಿಹಾರ ಮಾರ್ಗವನ್ನು ಕಂಡುಹಿಡಿಯಲು ಅಸಮರ್ಥನಾಗಿದ್ದ. ರೂಢಿಯಲ್ಲಿದ್ದ ಕೆಲಸವನ್ನು ಚಾಚೂ ತಪ್ಪದೆ ಕುಂದಿಲ್ಲದಂತೆ ಮಾಡುತ್ತಿದ್ದನೇ ಹೊರತು, ಸ್ವಂತ ವಿವೇಚನೆಯಿಂದ ಯಾವ ಪ್ರಗತಿಯನ್ನೂ ಸಾಧಿಸಲಿಲ್ಲ. ಇಂತಹ ಕುರಿಗಳಂತಿರುವವರಿಂದಲೇ ಸಂಸ್ಥೆಯ ಸುಸೂತ್ರ ಕಾರ್ಯವು ಸಾಧ್ಯ ! ಸಂಸ್ಥೆಯ ಪ್ರಗತಿಗೆ, ಟಗರುಗಳಂತಿರುವ, ಹಿಂದೂ ಮುಂದೂ ನೋಡದೆ ನುಗ್ಗುವ, ಮಾಲೀಕ ವರ್ಗದವರು ಕಾರಣರು. ಅಂತಹ ಟಗರುಗಳಿಗೆ ಇಂತಹ ಕುರಿಗಳು ಬಲು ಪ್ರಿಯ. ಹಾಗಾಗಿ ಶೀನಪ್ಪ, ಕಂಪನಿಯ ಮ್ಯಾನೇಜಿಂಗ್ ಡೈರೆಕ್ಟರಿಗೆ ತುಂಬಾ ಬೇಕಾದವನಾಗಿದ್ದ ; ಅವರ ಮೆಚ್ಚುಗೆಯನ್ನೂ ಪಡೆದಿದ್ದ.

ಸೋಮವಾರ ಎಂದಿನಂತೆ ಬೆಳಿಗ್ಗೆ ಕಚೇರಿಗೆ ಹೋದ. ಹನ್ನೊಂದು ಗಂಟೆಯ ಹೊತ್ತಿಗೆ ಮೇಜಿನ ಮೇಲೆ ಎಂಟು ಹತ್ತು ಮುಖ್ಯವಾದ ಕಾಗದಪತ್ರಗಳಿದ್ದುವು. ಪಕ್ಕದಲ್ಲಿ ಬೀಗದಕೈಗಳ ಗೊಂಚಲೂ ಇತ್ತು. ಇದ್ದುದನ್ನೆಲ್ಲ ಹಾಗೆಯೇ ಬಿಟ್ಟು ಶೀನಪ್ಪ ಎದ್ದುಹೋದ. ಬಾತ್‌ರೂಮಿಗೆ ಹೋಗುತ್ತಿರಬಹುದು ಎಂದುಕೊಂಡ ಪಕ್ಕದಲ್ಲಿದ್ದ ಸಹೋದ್ಯೋಗಿ. ಹನ್ನೆರಡಾಯಿತು, ಒಂದು ಗಂಟೆಯಾಯಿತು, ಶೀನಪ್ಪ ಹಿಂತಿರುಗಿ ಬರಲಿಲ್ಲ. ನೆರೆಯ ಅಧಿಕಾರಿ, ಈ ಸುದ್ದಿಯನ್ನು ಹಿರಿಯ ಅಧಿಕಾರಿಗೆ ಮುಟ್ಟಿಸಿದ. ಅವರು ಬಂದು ತನಿಖೆ ಮಾಡಿದರು. ಸಧ್ಯ ! ಹಣಕಾಸು ಎಲ್ಲವೂ ಸರಿಯಾಗಿತ್ತು. ಕಾಗದ ಪತ್ರಗಳೂ ಇದ್ದುವು. ಶೀನಪ್ಪನ ಮನೆಗೆ ಆರ್ಡರ್ಲಿಯನ್ನು ಕಳಿಸಿದರು. ಊಟಕ್ಕೇನಾದರೂ ಮನೆಗೆ ಹೋಗಿರಬಹುದೊ ಎಂದು. ಶೀನಪ್ಪ ಅಲ್ಲಿಗೆ ಹೋಗಿರಲಿಲ್ಲ ಎಂದು ತಿಳಿಯಿತು. ಮನೆಯವರಿಗೆ ಮತ್ತು ಪೋಲೀಸಿನವರಿಗೆ, ಕಂಪೆನಿಯ ಮ್ಯಾನೇಜಿಂಗ್ ಡೈರೆಕ್ಟರು

ವಿಷಯವನ್ನು ತಿಳಿಸಿದರು.

ಏನೆಲ್ಲ ಶೋಧನೆಗಳನ್ನು ಪೋಲೀಸರು ನಡೆಸಿದರು. ಶೀನಪ್ಪನ ಪತ್ತೆ ಆಗಲೇ ಇಲ್ಲ. ನಾಲ್ಕು ತಿಂಗಳುಗಳಾದರೂ ಯಾವ ಸುಳಿವೂ ದೊರೆಯಲಿಲ್ಲ. ಯಾವ ಯಾವ ಊರಿನಲ್ಲಿರುವ ಶೀನಪ್ಪನ ಸಂಬಂಧೀಕರಿಗೆ ಮತ್ತು ಸ್ನೇಹಿತರಿಗೆ, ಹೀಗಾಗಿದೆ, ಇಲ್ಲಿ, ಅಕಸ್ಮಾತ್ ನಿಮ್ಮಲ್ಲಿಗೆ ಬಂದರೆ ತತ್‌ಕ್ಷಣ ತಿಳಿಸಿ ; ಎಂದು ಶೀನಪ್ಪನ ತಂದೆ ಕಾಗದಗಳನ್ನು ಬರೆದು ಹಾಕಿದರು. ಜ್ಯೋತಿಷ್ಯರ ಬಳಿಗೆ ಹೋಗಿ 'ಪ್ರಶ್ನೆ' ಕೇಳಿ ಸಮಾಧಾನವನ್ನು ತಾತ್ಕಾಲಿಕವಾಗಿಯಾದರೂ ಪಡೆಯಲಾರಂಭಿಸಿದರು.

* * *

ಹಿಮಾಚಲ ಪ್ರದೇಶದ ಲಾಂಘೀರಿನಲ್ಲಿ ಲಕ್ಷ್ಮಣರಾಯರು ತರಕಾರಿ ಕೊಂಡು ಬರಲು ಹೊರಟಿದ್ದರು. ಮಾರುಕಟ್ಟೆಯ ಬಳಿ ಹೋಗುತ್ತಿದ್ದಾಗ, ಎದುರು ಕಂಡ ಅಪರಿಚಿತನನ್ನು ದಾಟಿ ಮುಂದುವರೆದಾಗ, 'ಎಲ್ಲಿಯೋ ಕಂಡ ಮುಖ,' ಎಂದನಿಸಿತು. ಯಾರು ಎಂದು ನಿಖರವಾಗಿ ನೆನಪಾಗಲಿಲ್ಲ. ಮುಂದೆ ಸಾಗಿದ್ದವರು ಹಿಂತಿರುಗಿ ಅಪರಿಚಿತನ ಬಳಿಗೆ ಬಂದರು. ಹಿಂತಿರುಗುವಾಗ, ನಾಲ್ಕು ತಿಂಗಳ ಹಿಂದೆ ಶೀನಪ್ಪನ ತಂದೆಯು ಬರೆದಿದ್ದ ಕಾಗದದ ನೆನಪೂ ಆಗಿತ್ತು. ಅಪರಿಚಿತನ ಬಳಿಗೆ ಬಂದು 'ಶೀನಪ್ಪಾ' ಎಂದು ಕೂಗಿದರು. ಯಾವ ಪ್ರತಿಕ್ರಿಯೆಯನ್ನೂ ಅಪರಿಚಿತ ವ್ಯಕ್ತಪಡಿಸಲಿಲ್ಲ. ಇನ್ನೂ ಹತ್ತಿರಕ್ಕೆ ಹೋಗಿ 'ಯಾರು ನೀವು? ನಿಮ್ಮನ್ನೆಲ್ಲಿಯೋ ಕಂಡ ನೆನಪು, ಹಾಸನದ ಕಡೆಯವರ ಹಾಗೆ ಕಾಣಿಸುತ್ತೀರಿ. ನಾನೂ ಅದೇ ಊರಿನವ. ಹೊಟ್ಟೆ ಪಾಡಿಗಾಗಿ ಉತ್ತರದ ಈ ಕೊಯ್ ಮೂಲೆಯಲ್ಲಿ ಇರಬೇಕಾಗಿದೆ. ನಮ್ಮ ಊರ ಕಡೆಯವರೇ ಎಂದು ಲಕ್ಷ್ಮಣರಾಯರು ಹೇಳಿದರು. 'ಹಾಸನ? ಅಂದರೆ ಅದು ಏನು?' ಎಂದು ಅಚ್ಚ ಕನ್ನಡದಲ್ಲಿ ಅಪರಿಚಿತ ನುಡಿದ. ಧ್ವನಿಯನ್ನು ಕೇಳಿದ ಮೇಲೆ, ಭಾವ ಮೈದುನ ಶೀನಪ್ಪನ ಧ್ವನಿಯೇ ಇದು ಎಂದು ಖಂಡಿತವಾಯಿತು. ನಾಲ್ಕು ತಿಂಗಳ ಹಿಂದೆಯೇನೋ ಶೀನಪ್ಪ ಇಲ್ಲಿಗೆ ಬಂದಿಲ್ಲ ಎಂದು ಊರಿಗೆ ತಂತಿಯನ್ನು ಕಳುಹಿಸಿದ್ದರು. ಇಷ್ಟು ದಿನಗಳಾದ ಮೇಲೆ ಇಲ್ಲಿಗೆ ಹೇಗೆ ಬಂದ ಎಂದು ಕುತೂಹಲವೂ ಉಂಟಾಗಿತ್ತು. 'ಬಾಪ್ಪ, ಶೀನಪ್ಪ, ನಮ್ಮ ಮನೆಗೆ ಹೋಗೋಣ' ಎಂದು ಕರೆದರು. ಅಪರಿಚಿತನಿಗೆ ಯಾವುದೂ ಅರ್ಥವಾದಂತೆ ಕಾಣಲಿಲ್ಲ ಆದರೂ ಯಾಂತ್ರಿಕವಾಗಿ ಲಕ್ಷ್ಮಣರಾಯರ ಜತೆಯಲ್ಲಿ ನಡೆದ. ಮನೆಗೆ ಹೋದ ಕೂಡಲೇ, ಶೀನಪ್ಪನನ್ನು ಕಂಡು ಅಕ್ಕ ಅತ್ತು ಅತ್ತು ಆದರರಿಂದ ಮಾತನಾಡಿಸಿದಳು. ಸ್ವಲ್ಪ ಹೊತ್ತಾದ ಮೇಲೆ ಶೀನಪ್ಪನ

ಮುಖದಲ್ಲಿ ಸ್ವಲ್ಪ ಬದಲಾವಣೆಯಾಯಿತು. 'ಎಲ್ಲಿದ್ದೇನೆ? ಇದು ಯಾವ ಊರು? ನೀನು ಲಕ್ಕು ಅಲ್ಲವೇ?' ಎಂದು ಅಕ್ಕನನ್ನು ಕೇಳಿದ. ಆನಂತರ ಶೀನಪ್ಪನಿಗೆ ತಾನು ಯಾರು ಎಂಬುದು ಸ್ಪಷ್ಟವಾಗಿ ತಿಳಿಯಿತು. ಆದರೆ ಕಳೆದ ನಾಲ್ಕು ತಿಂಗಳುಗಳು ಏನು ಮಾಡಿದೆ ಎಂಬುದು ಸಂಪೂರ್ಣವಾಗಿ ಮರೆತು ಹೋಗಿತ್ತು.

ಕೆಲವು ದಿನಗಳು ಲಾಂಘೀರಿನಲ್ಲಿ ಆರೈಕೆ ಪಡೆದು, ತನ್ನೂರಿಗೆ ಶೀನಪ್ಪ ಹಿಂತಿರುಗಿದ. ಪುನಃ ಕೆಲಸಕ್ಕೆ ಹಾಜರಾದ. ಕಂಪೆನಿಯವರು ವೈದ್ಯರ ಸಲಹೆಯನ್ನು ಪಡೆದು ಶೀನಪ್ಪನನ್ನು ಕೆಲಸಕ್ಕೆ ಸೇರಿಸಿಕೊಂಡರು. ಶೀನಪ್ಪ ಎಂದಿನಂತೆ ಕೆಲಸವನ್ನು ಮಾಡಿಕೊಂಡಿದ್ದಾನೆ.

* * *

ತನ್ನತನವೇ ಮರೆತು ಹೋಗಿ ; ಹಿಂದಿನ ಬಾಳಿನ ನೆನಪೆಲ್ಲವೂ ಅಳಸಿ ಹೋಗಿ ; ಹೊಸ ಬಾಳನ್ನು ಅಡ್ಡಾದಿಡ್ಡಿಯಾಗಿ ನಡಸುವಂತಾಗುವ ಬೇನೆಗೆ ಫ್ಯೂಗ್ಯೂ ಅಥವಾ ಅಮ್ನೀಸಿಯಾ ಎಂಬ ಹೆಸರು.

ತಲೆಗೆ ಭಾರಿ ಪೆಟ್ಟು ಬಿದ್ದವರಿಗೆ ಸ್ವಲ್ಪ ಕಾಲ ಪ್ರಜ್ಞೆಯು ತಪ್ಪಿರುತ್ತದೆ. ಒಂದೆರಡು ವಾರಗಳಲ್ಲಿ ಜ್ಞಾನವು ಪುನಃ ಬಂದಾಗ, ಪೆಟ್ಟು ಬಿದ್ದ ಕಾರಣ, ಅಥವಾ ಸನ್ನಿವೇಶ ಇವೆಲ್ಲವೂ ಮರೆತು ಹೋಗಿರುತ್ತದೆ. ಆ ಅವಧಿಯ ಅನುಭವವು ಅವರ ಸ್ಮರಣೆಯಲ್ಲಿ ಉಳಿದಿರುವುದಿಲ್ಲ. ಇದು ಅಮ್ನೀಸಿಯಾ.

ಅದರಂತೆಯೇ ಮೆದುಳಿನಲ್ಲಿ ಬೆಳೆಯುವ ಕೆಲವು ಗೆಡ್ಡೆಗಳು ಅಮ್ನೀಸಿಯಾವನ್ನು ಕಾಣಿಸುತ್ತವೆ. ಹಿಸ್ಟಿರಿಯಾ ಎಂಬ ಮಾನಸಿಕ ರೋಗದ, ಒಂದು ಪರಿಸ್ಥಿತಿ ಇದು, ಎಂದು ಮನಃಶಾಸ್ತ್ರಜ್ಞರ ನಂಬಿಕೆ. ವಾಸ್ತವಿಕ ಪರಿಸ್ಥಿತಿಯನ್ನು ಮನಸ್ಸು ಒಪ್ಪದೆ ಹೋದರೆ ಬೇರೆ ಇನ್ನಾವ ಪರಿಹಾರವನ್ನೂ ಸಾಧಿಸಲು ಆಗದೆ ಇದ್ದರೆ, ಆಗ ಮನಸ್ಸು 'ಮರೆವಿನ' ನೆರವನ್ನು ಪಡೆಯುತ್ತದೆ. ಆ ಮರೆವು ಸಂಪೂರ್ಣವಾಗಿಯೂ ಇರುತ್ತದೆ. ಕೆಲಕಾಲ ಹೀಗಿದ್ದು ನಂತರ ಯಾವುದಾದರೂ ಪ್ರೇರಕದಿಂದ, ಮೊದಲಿದ್ದ ವಾಸ್ತವಿಕ ಪರಿಸ್ಥಿತಿಗೆ ಹಿಂತಿರುಗುತ್ತದೆ.

* * *

ಪ್ರಕೃತಿಯಲ್ಲಿ ಪ್ರಾಣಿಗಳ ಪ್ರಗತಿಯಲ್ಲಿಯೂ, ಮೂಲಭೂತವಾದ ಈ ವರ್ತನೆಯನ್ನು ಕಾಣಬಹುದು. ಅಪಾಯವನ್ನು ಎದುರಿಸಬೇಕಾದಾಗ ಪ್ರಾಣಿಗಳು ಎರಡು ವಿಧಾನಗಳನ್ನು ಅನುಸರಿಸುತ್ತವೆ.

ಒಂದು, ಅಪಾಯವನ್ನೆದುರಿಸಿ, ಇದ್ದ ಬಲವನ್ನೆಲ್ಲಾ ಉಪಯೋಗಿಸಿ ಹೋರಾಡಿ, ಗೆಲ್ಲುವುದು. ಹಾಗೆ ಅಪಾಯವನ್ನು ನಿವಾರಿಸುವುದು. ಎರಡನೆಯದು,

ಅಪಾಯದಿಂದ ದೂರ ಓಡಿಹೋಗುವುದು, ಆರೀತಿ ಅಪಾಯವನ್ನು ನಿವಾರಿಸಿಕೊಳ್ಳುವುದು. ಪ್ರಾಣಿಗಳಲ್ಲಿ ದೇಹಕ್ಕೆ ಅಪಾಯವು ಉಂಟಾಗುತ್ತದೆ ಎಂದಾಗ ಪ್ರಾಣ ಭಯವು ಓಡು ಅಥವಾ ಹೋರಾಡು, ಎಂಬ ಎರಡು ಉಪಾಯಗಳಲ್ಲಿ ಒಂದನ್ನು ಸೂಚಿಸುತ್ತದೆ.

ಮಾನವ ಹಂತದಲ್ಲಿ, ದೇಹಕ್ಕಿಂತಲೂ ಮನಸ್ಸಿಗೆ ಹೆಚ್ಚು ಪ್ರಾಧಾನ್ಯವಿದೆ. ಮನಸ್ಸಿಗೆ ಅಪಾಯ ಬರುವುದು ಎಂದರೆ ಏನು ? ಯಾವುದಾದರೂ ಸಮಸ್ಯೆಯು ತಲೆದೋರಿದಾಗ, ಆಗುಹೋಗುಗಳನ್ನು ವಿಚಾರಮಾಡಿ ಗಮನಿಸಿ ಸೂಕ್ತ ನಿರ್ಧಾರವನ್ನು ಮಾಡುವುದು ಮನಸ್ಸಿನ ಕೆಲಸ. ಹೀಗೆ ನಿರ್ಧರಿಸಬೇಕಾದ, ಹೀಗೆ ಮಾಡಿದರೆ ಅನಾಹುತವೇನಾಗುತ್ತೋ ; ಹಾಗೆ ಮಾಡಿದರೆ ಯಾವ ಕಷ್ಟ ಬರುತ್ತೋ ಎಂದು ಅನುಮಾನವು ಬರುವುದು ಸಹಜ. ಆಗ ಏನಾದರೂ ಆಗಲಿ ; ಹೀಗೇ ಮಾಡುತ್ತೇನೆ, ಬಂದುದನ್ನು ಅನುಭವಿಸುತ್ತೇನೆ, ಎಂದು ಧೈರ್ಯಮಾಡಿ ಮುನ್ನುಗ್ಗುವುದು ಸಾಮಾನ್ಯ ನಡವಳಿಕೆ, ಮನಸ್ಸು ಸುದೃಢವಾಗಿರದೆ ಇದ್ದರೆ, ಆಗ ಅದು ಎದುರಿಸಿ ಹೋರಾಡುವ ಸ್ಥಿತಿಯಲ್ಲಿರುವುದಿಲ್ಲ. ಆಗ ವಾಸ್ತವಿಕ ಪರಿಸ್ಥಿತಿಯಿಂದ ಮನಸ್ಸು ಓಡಿಹೋಗುತ್ತದೆ ಅದೇ ಅಮ್ನೀಸಿಯಾ, ಫ್ಯೂಗ್ಯೂ.

ಕಾಡುಮೃಗಗಳು ದೇಹದ ನಡವಳಿಕೆಯಲ್ಲಿ ಪ್ರದರ್ಶಿಸುವ ರೀತಿಯನ್ನು, ನಾಡ ಮನುಷ್ಯರು ಮನಸ್ಸಿನ ನಡವಳಿಕೆಯಲ್ಲಿ ಅನುಸರಿಸುತ್ತಾರೆ.

ಶೀನಪ್ಪನ ಮನಸ್ಸು, ಯಾವ ಸಮಸ್ಯೆಯ ಪರಿಹಾರಕ್ಕಾಗಿ, ಮಂಥನವನ್ನು ಮಾಡುತ್ತಿತ್ತೋ, ಆ ಸಮಸ್ಯೆಯ ಮನದಾಳದಲ್ಲಿರುವ ಬೇರು ಬುಡಗಳನ್ನು ಶೀನಪ್ಪನೂ ತಿಳಿದಿರಲಿಲ್ಲ. ಮನೆಯವರಿಗಾಗಲೀ, ಸ್ನೇಹಿತರಿಗಾಗಲಿ ತಿಳಿಯಲು ಅಸಾಧ್ಯ. ಪ್ರತಿ ವ್ಯಕ್ತಿಯ ಮನಸ್ಸೂ ಅತಿ ಗುಪ್ತವಾದ, ಭದ್ರವಾದ ಕೋಟೆ. ಆ ಕೋಟೆಯಲ್ಲಿರುವ ಸುರಂಗ ಮಾರ್ಗಗಳಾಗಲೀ ಗುಪ್ತ ಕೊಠಡಿಗಳಾಗಲೀ, ಆ ವ್ಯಕ್ತಿಗೆ ತಿಳಿದಿರುವುದಿಲ್ಲ. ಅಂದ ಮೇಲೆ ಆ ಕೋಟೆಗೆ ಲಗ್ಗೆ ಹಾಕಿ ಎಲ್ಲವನ್ನೂ ತಿಳಿಯುವುದು ದುಸ್ಸಾಧ್ಯ.

ಮನಮಂಥನವನ್ನು ಸೀನಪ್ಪ ಮಾಡಿದಾಗ, ಹೋರಾಡಿ ಗೆಲ್ಲುವ ನಿರ್ಣಯವನ್ನು ಮಾಡಲು ಸಾಧ್ಯವಾಗಲಿಲ್ಲ. ಏಕೆಂದರೆ ಅವನ ಮನಸ್ಸು ದೃಢವಾಗಿರಲಿಲ್ಲ ; ಇನ್ನೂ ಮಕ್ಕಳ ಮನಸ್ಸಿನಂತೆಯೇ ವಯಸ್ಸಾದರೂ ಉಳಿದಿತ್ತು. ಆದಕಾರಣ ವಾಸ್ತವಿಕ ಪರಿಸ್ಥಿತಿಯಿಂದ ದೂರ ಓಡಿಹೋಯಿತು. ಕೆಲಕಾಲಾನಂತರ ಹಿಂದೆ ಕಾಡುತ್ತಿದ್ದ ಸಮಸ್ಯೆಯು, ತೀವ್ರತೆಯನ್ನು ಸ್ವಾಭಾವಿಕವಾಗಿ, ಕಾಲಾನುಕಾಲದಲ್ಲಿ

ಕಳೆದುಕೊಂಡಾಗ, ಹಿಂದಿನ ವಾಸ್ತವಿಕ ಬಾಳಿನ ಸ್ಮರಣೆಯು ಉಂಟಾಯಿತು.

ಎಲ್ಲೋ ಒಮ್ಮೊಮ್ಮೆ ಸಂಭವಿಸುವ ಈ ಬೇನೆಯು ನಮಗೂ ಎಂದೋ ಸಂಭವಿಸುತ್ತದೆ, ಎಂದು ಹಲವರು ಭೀತಿ ಪಡುತ್ತಾರೆ. ಅತಿ ವಿರಳವಾದುದು ಇದು ಎಂದು ತಿಳಿದಾಗ ; ಸುದೃಢ ಮನಸಿಗರಿಗೆ ಸಂಭವಿಸುವುದಿಲ್ಲ ಎಂದು ಖಚಿತವಾದಾಗ, ಶಂಕಿಸುವವರಿಗೆ ಸಮಾಧಾನವಾಗಬೇಕು. ಮನಸ್ಸಿನಲ್ಲಿ ಸ್ವಲ್ಪ ಕಾತರವು ಕಾಡಿದರೆ, ಆತಂಕವು ಕೊರೆಯಹತ್ತಿದರೆ, ಈ ಭಯವು ಉಲ್ಬಣಗೊಳ್ಳುತ್ತದೆ. ಭಯದಿಂದ ಆತಂಕವೂ ಇಮ್ಮಡಿಯಾಗುತ್ತದೆ. ಇಂತಹ ವಿಷಚಕ್ರದಿಂದ ಪಾರಾಗಲು ಭಯವನ್ನು ನಿರ್ಮೂಲಗೊಳಿಸಬೇಕು. ಬೇನೆಯ ಅರಿವಿನಿಂದಿದು ಸಾಧ್ಯ.

ಹಿಸ್ಟೀರಿಯಾಕ್ಕೆ ತುತ್ತಾದವರ ಮನಃಸ್ಥಿತಿಯೇ ಈ ಬೇನೆಗೂ ಆಧಾರವೆಂಬುದನ್ನು ತಿಳಿದರೆ ಮೊದಮೊದಲ ಸೂಚನೆಗಳನ್ನು ಸುಲಭವಾಗಿ ಗಮನಿಸಬಹುದು. ಇಂತಹ ಮನಃಸ್ಥಿತಿಯವರು ತಮ್ಮ ಭಾವ ರಾಗಗಳನ್ನು, ಪ್ರೀತಿ ದ್ವೇಷಗಳನ್ನು : ಕಲೆಯ ಯಾವುದಾದರೂ ಒಂದು ರೂಪಿನಲ್ಲಿ ಬಹಿರಂಗಪಡಿಸುವುದರ ಮೂಲಕ, ಬೇನೆಯು ಬಾರದಂತೆ ತಡೆಗಟ್ಟಬಹುದು. ಈ ತೆರನ ಮನಃಸ್ಥಿತಿಯವರಿಗೆ, ಕಲಾರೂಪಗಳಲ್ಲಿ, ನಾಟಕವು, ಮತ್ತು ಸಂಗೀತವು ತುಂಬಾ ಯಶಸ್ವಿಯಾಗುತ್ತದೆ. ಜನರ ಸಂಪರ್ಕವನ್ನು ನೇರವಾಗಿ ಹೊಂದುವ ಕಲಾರೂಪಗಳು ಈ ದೃಷ್ಟಿಯಲ್ಲಿ ತುಂಬಾ ಉಪಯುಕ್ತ. ಆದಕಾರಣ ನಾಟಕ, ಸಂಗೀತ, ಹರಿಕಥೆ, ಶಿವಕಥೆ ; ಇವು ಬಲು ಪ್ರಶಸ್ತ.

* * * *

# ೮. ದೈಹಿಕ ಬೇನೆಗಳಿಂದ ಉಂಟಾಗುವ ಮನೋರೋಗಗಳು

ಪ್ಲೇಗು, ವಿಷಮಶೀತಜ್ವರ, ದೊಡ್ಡ ಸಿಡುಬು ; ಇತ್ಯಾದಿ ಅತ್ಯುಗ್ರವಾದ ಕಾಯಿಲೆಗಳು ಬಡಿದಾಗ ರೋಗಿಗೆ ಸನ್ನಿ ಬಡಿಯುತ್ತದೆ. ಅಂದರೆ ಅವ ಹುಚ್ಚು ಹುಚ್ಚಾಗಿ ಅಸಂಬದ್ಧವಾಗಿ ಮಾತನಾಡುತ್ತಾನೆ. ಆದರೆ ಬೇನೆಯು ಇಳಿಮುಖವಾದಾಗ ಅವನ ಸನ್ನಿಯೂ ಇಳಿಯುತ್ತದೆ. ನಂತರ ಅವನ ಮನಸ್ಸು ಸ್ವಾಸ್ಥ್ಯವನ್ನು ಪಡೆಯುತ್ತದೆ. ಬೇನೆಯು ಉಲ್ಬಣವಾಗಿದ್ದಾಗ ಮನಸ್ಸೂ ಹುಚ್ಚೆದ್ದಂತೆ ಇದ್ದರೂ ; ಇವೆಲ್ಲಾ ಮನೋರೋಗಗಳು ಎಂದೆನಿಸಿಕೊಳ್ಳುವುದಿಲ್ಲ. ಏಕೆಂದರೆ ಮನಸ್ಸು ಸ್ವಸ್ಥವಾಗಿದ್ದರೂ, ದೇಹದ ಬೇನೆಯು ತಾಪದಿಂದ ಮತ್ತು ವಿಷದಿಂದ, ಕೆಟ್ಟಿದ್ದಂತೆ ತಾತ್ಕಾಲಿಕವಾಗಿ ವರ್ತಿಸುತ್ತದೆ.

ಆದರೆ ಕೆಲವು ದೈಹಿಕ ಲೋಪಗಳು ಅಥವಾ ಬೇನೆಗಳು, ಮನಸ್ಸಿನ ಬೆಳವಣಿಗೆಯಲ್ಲಿ ಹಾಗೂ ನಡವಳಿಕೆಯಲ್ಲಿ ಶಾಶ್ವತವಾದ ಏರುಪೇರುಗಳನ್ನು ಮಾಡುತ್ತದೆ. ಮನಸ್ಸು ಪಲ್ಲಟವಾದಂತೆಯೇ ಇವರು ನಡೆದುಕೊಳ್ಳುತ್ತಾರೆ. ಪೂರ್ಣ ಸ್ವಾಸ್ಥ್ಯವನ್ನು ಇವರು ಎಂದೂ ಪಡೆಯಲು ಸಾಧ್ಯವಿಲ್ಲ. ಈ ಚಿಕಿತ್ಸೆಯನ್ನು ಮಾಡಿಸೋಣ, ಆ ಪೂಜೆಯನ್ನು ಹಾಕಿಸೋಣ; ಪ್ರಸಿದ್ಧವಾದ ಆ ಯಾತ್ರಾಸ್ಥಳಕ್ಕೆ ಹೋಗೋಣ; ಎಂದು ವೃಥಾ ಶ್ರಮವನ್ನೂ ಹಣದ ದುರ್ವ್ಯಯವನ್ನೂ ಮಾಡುವಂತಾಗುತ್ತದೆ. ಇದನ್ನಾದರೂ ತಪ್ಪಿಸಿಕೊಳ್ಳಬಹುದು ; ವಿಷಯವನ್ನು ಸರಿಯಾಗಿ ಅರ್ಥಮಾಡಿಕೊಂಡರೆ, ತಿಳಿದುಕೊಂಡರೆ ; ಇಂತಹ ಮನೋರೋಗಗಳನ್ನು ಇನ್ನು ಮುಂದೆ ವಿವರಿಸಲಾಗುವುದು.

## ಮಕ್ಕಳಲ್ಲಿ

**ಹುಟ್ಟು ದೋಷದ ಕಾಯಿಲೆಗಳು (Down's Syndrome)**

ಐದು ವರ್ಷದ ಹೆಣ್ಣು ಮಗುವನ್ನು ಕರೆತಂದರು ಪರೀಕ್ಷೆಗೆಂದು. ಸರಿಯಾಗಿ ಬೆಳೆದಿಲ್ಲ. ಕೆಮ್ಮು ಕಸಾಲೆ ಮೇಲಿಂದ ಮೇಲೆ ಬರುತ್ತದೆ. ಪರೀಕ್ಷೆ ಮಾಡಿಸಿ, ಸೂಕ್ತ ಟಾನಿಕ್ ಕೊಡಿಸಬೇಕು ಎಂದು ಕರೆತಂದಿದ್ದರು. 'ಬಾ' ಎಂದು ಕರೆದಾಗ

ನಗುನಗುತ್ತಾ ಡಾಕ್ಟರ ಹತ್ತಿರಕ್ಕೆ ಮಗು ಬಂದಿತು.

ತಾಯಿಯು ಕಂಚಿ ಕಡಸಿನ ತರಹ ಗಿಡ್ಡು. ಅಂದಮೇಲೆ ಮಗುವೂ ಗಿಡ್ಡಾಗಿದೆ. ಆದರೆ ಕಣ್ಣಿಗೆ ಕಾಣುವಂತೇನೂ ಬಡಕಲಾಗಿರಲಿಲ್ಲ. ಕಣ್ಣುಗಳು ಮಾತ್ರ ಚೀನಿಯರ ಕಣ್ಣುಗಳಂತೆ, ಬಂಗಾಳೀ ಚಿತ್ರಕಾರರ ಮೀನಾಕ್ಷಿಯರಂತೆ V ಹಾಗಿದ್ದುವು. ಹೊರ ತುದಿಯು ಒಳತುದಿಗಿಂತ ಮೇಲಕ್ಕಿತ್ತು. ಕಣ್ಣುಗಳ ಮೂಗಿನ ಕಡೆಯ ತುದಿಯಲ್ಲಿ ತೆಳು ಪೊರೆಯ ದುರ್ಮಾಂಸವು ಇತ್ತು.

ಮಗುವು ಹತ್ತಿರಕ್ಕೆ ಬಂದಿತು. ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೊಡುತ್ತಿತ್ತು. ಪೆಚ್ಚು ಪೆಚ್ಚಾಗಿ ಏನೂ ಉತ್ತರಿಸಲಿಲ್ಲ. ಕೆಲವು ಮಕ್ಕಳು ಅತಿ ನಾಚಿಕೆಯಿಂದ, ಬಲು ಸಂಕೋಚದಿಂದ ಹೊಸಬರೊಡನೆ ಮಾತನಾಡುತ್ತವೆ. ಆದರೆ ಈ ಮಗು ಹಾಗಲ್ಲ. ಸದರದಿಂದಲೇ ಮಾತನಾಡುತ್ತಿತ್ತು.

ದೇಹಪರೀಕ್ಷೆಯನ್ನು ಮಾಡಿದಾಗ ಹೃದಯದಲ್ಲೂ ಹುಟ್ಟು ಲೋಪವು ಇದ್ದುದು ಪತ್ತೆಯಾಯಿತು. ಇವೆಲ್ಲಾ ಚಿಹ್ನೆಗಳು (Down's Syndrome) ಬೇನೆ ಎಂದು ಸ್ಪಷ್ಟ ಮಾಡಿದುವು.

ತಾಯ ಗರ್ಭದಲ್ಲಿ ಇಂತಹ ಮಕ್ಕಳು ಬೆಳೆಯುವಾಗ, ಮೆದುಳಿನ ಬುಡದ ಭಾಗದಲ್ಲಿ; ಹೃದಯದಲ್ಲಿ; ಹಾಗೂ ಪಿಟ್ಯೂಟರಿ ಗ್ರಂಥಿಯಲ್ಲಿ ವಯಸ್ಸಿಗೆ ತಕ್ಕ ಬೆಳವಣಿಗೆಯು ಕಾರಣಾಂತರಗಳಿಂದ ಸ್ತಬ್ಧವಾಗಿರುತ್ತದೆ. ಮಗುವು ಮುಂದೆ ಬೆಳೆಯುವಾಗ ಜನ್ಮ ತಾಳಿದ ಮೇಲೆ ಬೆಳೆಯುವಾಗ, ಹುಟ್ಟು ದೋಷದಿಂದಾಗಿ ಆ ಭಾಗಗಳು ವೃದ್ಧಿಯಾಗುವುದಿಲ್ಲ. ಹಾಗಾಗಿ ಒಟ್ಟು ಬೆಳವಣಿಗೆಯೂ ಕುಂಟುತ್ತದೆ. ಅಲ್ಲದೆ ಮನಸ್ಸು ಅಣಿಯಾಗಿ ರೂಪುಗೊಳ್ಳುವುದಿಲ್ಲ. ಸಾಮಾನ್ಯವಾಗಿ ಇಂತಹ ಮಕ್ಕಳ ಬಾಳು ಎರಡು ಮೂರು ದಶಕಗಳಷ್ಟು ಮಾತ್ರ.

ವಿದ್ಯಾಭ್ಯಾಸವನ್ನು ಮಾಡಿಸುವಾಗ, ಬಲು ಎಚ್ಚರವನ್ನು ವಹಿಸಬೇಕು. ಎಲ್ಲ ಮಕ್ಕಳಂತೆ ಬೇಗ ಕಲಿಯಲಿಲ್ಲ ಎಂದು ಶಿಕ್ಷೆ ಮಾಡಿದರೆ, ಅಟ್ಟದ ಮೇಲಿಂದ ಬಿದ್ದು ಗಾಯಗೊಂಡವರನ್ನು ಶಿಕ್ಷಿಸಿದಂತಾಗುತ್ತದೆ. ತಾಳ್ಮೆಯಿಂದ ಸಾಧ್ಯವಾದಷ್ಟು ವಿದ್ಯೆಯನ್ನು ಕಲಿಸಬೇಕು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಇಂತಹ ಮಕ್ಕಳಿಗಾಗಿ ಪ್ರತ್ಯೇಕವಾದ ವಿದ್ಯಾಭ್ಯಾಸ ಕ್ರಮಗಳಿವೆ.

'ನಮ್ಮ ಮಗು ಸ್ವಲ್ಪ ಪೆಚ್ಚು, ಆದರೆ ಎಲ್ಲರಂತೆಯೆ ಸಂಸಾರವನ್ನು ಮಾಡಿಕೊಂಡಿರುತ್ತದೆ' ಎಂದು ತಾಯ್ತಂದೆಯರು ಅಂದುಕೊಳ್ಳುತ್ತಾರೆ. 'ಪ್ರಾಪ್ತವಯಸ್ಸಿನಲ್ಲಿ ಸಾಧ್ಯವಾದರೆ ಮದುವೆಯನ್ನೂ ಮಾಡಿಬಿಡುತ್ತಾರೆ' ಹೇಗೋ ಸಂಸಾರವನ್ನು ನಿಭಾಯಿಸುತ್ತಾಳೆ ಎಂದು ಆಸೆ ಪಡುತ್ತಾರೆ.

'ಪೆದ್ದು ಹೆಣ್ಣು ; ಬಡಿದರೆ ಬುದ್ಧಿ ಬರುತ್ತದೆ' ಎಂದು ಗಂಡನ ಮನೆಯವರು ನಡೆದುಕೊಳ್ಳುತ್ತಾರೆ. ದಿಟವಾಗಿಯೂ ಇಂತಹ ಮಕ್ಕಳ ಭವಿಷ್ಯವು ಶೋಚನೀಯ ಅಲ್ಪಾಯುಗಳಾದುದೊಂದೇ ದೇವರ ಕೃಪೆ.

ಮಗುವಿನ ತಾಯ್ತಂದೆಯರನ್ನು ಕರೆಸಿ, ಇದ್ದ ವಿಷಯವನ್ನು ಸ್ಪಷ್ಟವಾಗಿ ವಿವರಿಸಲಾಯಿತು. 'ಗರ್ಭದಲ್ಲಿದ್ದಾಗಲೇ ಈ ನ್ಯೂನತೆಗಳು ಸಂಭವಿಸಿದವು. ಇದನ್ನು ಸರಿಪಡಿಸುವಂತಹ ಜ್ಞಾನವು ವೈದ್ಯವಿಜ್ಞಾನದಲ್ಲಿ ಇನ್ನೂ ಸಾಧಿತವಾಗಿಲ್ಲ. ಚಿಕಿತ್ಸೆ ಮಾಡಿಸಿದರೆ ಮುಂದೆ ಎಲ್ಲರಂತೆ ಈ ಮಗುವೂ ಬೆಳೆಯುತ್ತದೆ ಎಂದು ನಂಬಕೂಡದು. ಮೆದುಳಿನಲ್ಲಿರುವ ದೋಷದಿಂದ ಮಗುವು ಪೆದ್ದುಪೆದ್ದಾಗಿಯೇ ಇರುತ್ತದೆ. ಮನೆಪಾಠಗಳನ್ನಿಟ್ಟು ಕಲಿಸುತ್ತೀವಿ ಎಂದು ಆಸೆ ಇಟ್ಟುಕೊಳ್ಳಬೇಡಿ. ಹೃದಯದಲ್ಲಿ ಇಂತಹ ಹುಟ್ಟು ದೋಷವಿದೆ. ಅದರಿಂದಾಗಿ ಆಗಾಗ್ಗೆ ಕೆಮ್ಮು, ಜ್ವರ, ಉಬ್ಬಸ, ಇತ್ಯಾದಿ ಶ್ವಾಸಕೋಶದ ಬೇನೆಗಳು ಬರುತ್ತವೆ. ಸೂಕ್ತ ಚಿಕಿತ್ಸೆಯನ್ನು ತತ್‌ಕ್ಷಣ ಕೊಡಿಸಬೇಕು.

ಪಿಟ್ಯೂಟರಿ ದೋಷದಿಂದಾಗಿ ಹಾರ್ಮೋನುಗಳ ಅವ್ಯವಸ್ಥೆಯು ಇರುತ್ತದೆ. ಅದರಿಂದಾಗಿ ಬೆಳವಣಿಗೆಯಲ್ಲೂ ನ್ಯೂನತೆಗಳಿರುತ್ತವೆ. ಇವೆಲ್ಲಾ ಟಾನಿಕ್‌ಗಳಿಂದ ಸರಿಹೋಗುವುದಿಲ್ಲ. ವೃಥಾ ಹಣವನ್ನು ಲೋಪ ಮಾಡಬೇಡಿ. ಇಲ್ಲದ ಅನಿಷ್ಟಗಳನ್ನು ತರಹಾವಾರಿ ಔಷಧಿಗಳಿಂದ ತರಿಸಬೇಡಿ.

ಇದೂ ಒಂದು ಗಂಡು ಮಗು ಎಂದು ತಿಳಿದುಕೊಂಡು ಮನೆಯಲ್ಲಿಯೇ ಇರುವಂತೆ ಏರ್ಪಾಡುಗಳನ್ನು ಮಾಡಿ, ಮದುವೆಗಿದುವೆಯ ಯೋಚನೆಯನ್ನು ಮಾಡಬೇಡಿ,

ಎಂದು ವಿಶದವಾಗಿ ಹೇಳಲಾಯಿತು.

ದೈಹಿಕವಾದ ಹುಟ್ಟು ದೋಷದಿಂದ ಉಂಟಾಗುವ ಈ ಬೇನೆಯನ್ನು ಮನೋರೋಗ ಎಂದು ಕರೆಯಬಾರದು. ಆದರೂ ಮನಸ್ಸಿನ ಪೆದ್ದುತನವೇ ರೋಗದ ಪ್ರಮುಖ ಚಿಹ್ನೆಯಾದುದರಿಂದ, ಸುಲಭವಾಗಿ ತಿಳಿದುಕೊಳ್ಳುವುದಕ್ಕಾಗಿ ಆ ಗುಂಪಿನಲ್ಲಿ ಉಲ್ಲೇಖಿಸಬಹುದು.

**ಮೆನಿಂಜೈಟಿಸ್**

ಮೆದುಳು ಮತ್ತು ಮೆದುಳಿನ ಹೊರಪೊರೆಗಳಿಗೆ ವೈರಸ್ಸುಗಳು ಬ್ಯಾಕ್ಟೀರಿಯಾಗಳು ಸೋಂಕಿಕೊಂಡು, ಜ್ವರ, ಸೆಳೆವು, ಜ್ಞಾನಾಜ್ಞಾನ ಇತ್ಯಾದಿಗಳು ಉಂಟಾಗುತ್ತವೆ. ಮೆನಿಂಜೈಟಿಸ್ ಎಂದು ಈ ಬೇನೆಗಳನ್ನು ಕರೆಯುತ್ತಾರೆ.

ಮೆನಿಂಜೀಸ್:– ಮೆದುಳಿನ ಹೊರಗಿರುವ ರಕ್ಷಣಾ ಪೊರೆಗಳು. ಇವುಗಳಿಗೆ ಸೋಂಕಿ ಕಾಡುವ ಬೇನೆಗಳನ್ನು ಮೆನಿಂಜೈಟಿಸ್ ಎನ್ನುತ್ತಾರೆ.

ಮೂರು ವರ್ಷದ ಲಚ್ಚುವಿಗೆ ಹಠಾತ್ತನೆ ಒಂದು ದಿನ ಕೆಂಡಾಮಂಡಲ ಜ್ವರವು ಬಂತು. ಮೂರು ನಾಲ್ಕು ತಾಸುಗಳಲ್ಲಿ ಉಗ್ರವಾದ ಮೂರ್ಛೆಯೂ ಎರಡು ಮೂರು ಸಾರಿ ಬಂದಿತು. ತತ್‌ಕ್ಷಣ ಆಸ್ಪತ್ರೆಗೆ ಸೇರಿಸಿದರು. ಅಗತ್ಯ ಚಿಕಿತ್ಸೆಯೂ ಸಕಾಲದಲ್ಲಿ ದೊರಕಿತು. ಆರು ದಿನಗಳಾದ ಮೇಲೆ ಜ್ಞಾನ ಬಂತು. ಜ್ವರವೂ ಇಳಿದಿತ್ತು. ಹದಿನೈದು ದಿನಗಳಾದ ಮೇಲೆ ಮನೆಗೆ ಕರೆದುಕೊಂಡು ಬಂದರು.

ಎಂಟು ವರ್ಷದ ಮಗುವಾದಾಗ ದಂಟು ಎನ್ನಲು ಕಲಿಯಲಿಲ್ಲ. ಈ ಮಧ್ಯೆ ಆಗೊಮ್ಮೆ ಈಗೊಮ್ಮೆ ಮೂರ್ಛೆಯು ಬರುತ್ತಿತ್ತು. ಅದಕ್ಕೆಂದು ಔಷಧಿಗಳನ್ನು ಸತತವಾಗಿ ಕೊಡುತ್ತಲೇ ಇದ್ದರು.

ಮಗುವಿನ ಮನಸ್ಸು ದೇಹದ ಜತೆಗೆ ಸರಿಯಾಗಿ ಬೆಳೆಯಲೇ ಇಲ್ಲ. ತಡವರಿಸಿಕೊಂಡು ತೊದಲುತ್ತಾ ಎರಡು ಮಾತಾಡುತ್ತಿದ್ದ ಲಚ್ಚು. ಹೆಸರು ಕೂಗಿದರೆ ಅತ್ತ ನೋಡುತ್ತಲಿದ್ದ. ಮನೆಯವರನ್ನು ಗುರುತಿಸುತ್ತಿದ್ದ. ಅಷ್ಟಕ್ಕೇ ಮುಗಿಯಿತು, ಅವನ ಮನಸ್ಸಿನ ಮುಂದೋಟ.

ಮೆನಿಂಜೈಟಿಸ್ ಬಂದಾಗ, ಮೂರ್ಛೆಗಳು ಯದ್ವಾತದ್ವಾ ಬಡಿದಾಗ, ಜ್ವರದ ತಾಪವು ಅತಿಯಾಗಿದ್ದಾಗ ಮೆದುಳಿನ ಕೆಲಭಾಗಗಳಲ್ಲಿ ಅಲ್ಪಸ್ವಲ್ಪ ರಕ್ತ ಸ್ರಾವವಾಗಬಹುದು. ಕಾಲಾನುಕಾಲದಲ್ಲಿ ಹೆಪ್ಪುಗಟ್ಟಿಕೊಂಡು ಮೆದುಳಿನ ನೆರೆ ಭಾಗಗಳನ್ನು ಒತ್ತಿ ಅಲ್ಲಿನ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ. ಅಂದಮೇಲೆ ಮನಸ್ಸಿಗೆ ಆಧಾರವಾದ ಮೆದುಳು ಅಜ್ಜಿಬಜ್ಜಿಯಾದರೆ, ಮನಸ್ಸು ತಾನೇ ಹೇಗೆ ಬೆಳೆಯಲು ಸಾಧ್ಯ !

ಲಚ್ಚುವಿಗೆ ಮನೋರೋಗವಿದೆ ಎಂದು ಹೇಳುವಂತಿಲ್ಲ. ಮೆದುಳಿಗೆ ಬಡಿದ ಧಕ್ಕೆಯಿಂದಾಗಿ ಅವನ ಮನಸ್ಸಿನ ಬೆಳವಣಿಗೆಯು ಸ್ತಬ್ಧವಾಗಿದೆ. ಹೆಡ್ಡನಂತೆ ನಡೆದುಕೊಳ್ಳುತ್ತಾನೆ. ಆದರೆ ಅದನ್ನು ಸರಿಪಡಿಸುವ ವಿಧಾನಗಳು ಇನ್ನೂ ಕಂಡು ಹಿಡಿಯಲ್ಪಟ್ಟಿಲ್ಲ. ಉಪಶಮನದ ಚಿಕಿತ್ಸೆಗಳೇ ಗತಿ.

**ಮುಪ್ಪಿನಲ್ಲಿ**

ಚೆನ್ನಾಗಿ ಬಾಳಿ ಬದುಕಿದವರು ಸಂಪಂಗಿರಾಮಯ್ಯನವರು. ಅರವತ್ತಾರರ ಪ್ರಾಯವಾದರೂ ಲಕ್ಷಣವಾಗಿ ಉಂಡು ಜೀರ್ಣಿಸಿಕೊಳ್ಳುತ್ತಿದ್ದರು. ಬೆಳೆದ ಮಕ್ಕಳೆಲ್ಲರೂ ಸಾಕಷ್ಟು ಸಂಪಾದಿಸಿಕೊಂಡಿದ್ದರು. ವಿಭೂತಿ, ದೇವರ ಪೂಜೆ,

ಅಭಿಷೇಕ, ಅಂತ ಸುಮಾರು ಹೊತ್ತು ಕಳೆಯುತ್ತಿದ್ದರೂ ಪುಣ್ಯಾತ್ಮ ಏಳುತ್ತಿದ್ದುದು ಬೆಳಿಗ್ಗೆ ಏಳರ ಮೇಲೆಯೇ. ಅನಂತರ ಕಾಫಿ, ನಂತರ ಸ್ನಾನ, ಆಮೇಲೆ ದೇವರಪೂಜೆ, ಆರಾಮವಾಗಿ ಪೂಜೆಯನ್ನು ಮಾಡಿ, ನಂತರ ದೇವರಂತೆ ತಾನೂ ವಿಶ್ರಾಂತಿ ಪಡೆದು, ಊಟಕ್ಕೇಳುತ್ತಿದ್ದ ರಿಟಾಯರ್ಡ್ ಆಫೀಸರು.

ಇತ್ತಿಂದೀಚೆಗೆ ಎಲ್ಲರ ಮೇಲೂ, ಸಣ್ಣಪುಟ್ಟ ಕಾರಣಗಳಿಗೆಲ್ಲಾ ಸಿಡುಕಾಡುವುದು ಹೆಚ್ಚಾಗುತ್ತ ಬಂದಿತು. 'ನಾಳೆ ಗಣೇಶನ ಹಬ್ಬ, ಬೆಳಿಗ್ಗೆ ಎಂಟರ ಹೊತ್ತಿಗಾದರೂ ಪುರೋಹಿತರು ಬಂದರೆ, ಬೇಗ ಪೂಜೆ ಮುಗಿಸಿ ಕಾಫಿ ಕುಡಿಯಬಹುದು ; ಹೇಳಿದ ಹೊತ್ತಿಗೆ ಬರುತ್ತಾರೋ ಇಲ್ಲವೋ, ಎಷ್ಟು ಮನೆಗಳಿಗೆ ಪೂಜೆ ಮಾಡಿಸಲು ಒಪ್ಪಿಕೊಂಡಿದ್ದಾರೋ? ಹೀಗೆ ಹಿಂದಿನ ಸಂಜೆಯಿಂದ ತರಪರಗುಟ್ಟಲು ಆರಂಭಿಸಿದ್ದರು. ತಾವೆಲ್ಲಾ ಏರ್ಪಾಡನ್ನು ಸರಿಯಾಗಿ ಮಾಡಿದ್ದೀವಿ, ಎಂದು ಬೆಳೆದ ಮಕ್ಕಳು ಎಷ್ಟು ಹೇಳಿದರೂ, ಸಮಾಧಾನ ಹೊಂದುತ್ತಿರಲಿಲ್ಲ. ಸರಿಯಾಗಿ ನಿದ್ರೆ ಬರುಲ್ಲ ಅಂತ ಡಾಕ್ಟರ ಬಳಿಗೆ ಹೋಗಿ ನಿದ್ರೆ ಗುಳಿಗೆಗಳನ್ನು ತಂದಿಟ್ಟುಕೊಂಡಿದ್ದರು. ಇಂತಹ ಗುಳಿಗೆಗಳಿಂದ ಮುಂದೆ ದೇಹಾರೋಗ್ಯಕ್ಕೆ ಅಪಾಯವಾಗಬಹುದು ಎಂದುಕೊಂಡು ಅವನ್ನು ಸೇವಿಸದೆ ಹಾಗೆಯೇ ಇಟ್ಟಿದ್ದರು. ಎಲ್ಲದರಲ್ಲಿಯೂ ಅನುಮಾನ, ಯಾವುದಕ್ಕೂ ಸಂದೇಹ. ಮನೆಯವರಿಗೆಲ್ಲಾ ಬೇಸರ ತುಂಬುವಂತಾಗಿತ್ತು. ಹಿರಿಯರು, ನಮ್ಮನ್ನೆಲ್ಲ ವಿಶ್ವಾಸದಿಂದ ಸಾಕಿ ಸಲಹಿದವರು, ಎಂಬ ಕೃತಜ್ಞತೆಯಿಂದಾಗಿ, ಮಕ್ಕಳು ಬೇಸರವನ್ನು ಪ್ರದರ್ಶಿಸುತ್ತಿರಲಿಲ್ಲ.

ಐದಾರು ತಿಂಗಳುಗಳಲ್ಲಿ ಬಹಳಷ್ಟು ಬದಲಾವಣೆಯು ಅವರಲ್ಲಿ ಕಂಡು ಬಂದಿತು. 'ಬ್ಲಡ್‌ಪ್ರೆಷರ್ ಹೆಚ್ಚಾಗಿದೆಯಂತೆ ನನಗೆ, ಉಪ್ಪು ಕಡಿಮೆ ಮಾಡು ಎಂದರು ಡಾಕ್ಟರು' ಎಂದು ಹೇಳಿ ಉಪ್ಪನ್ನು ಬಿಟ್ಟರು. ಊಟವೂ ಕಡಿಮೆಯಾಯಿತು. ದೇಹವೂ ಕೃಶವಾಗತೊಡಗಿತು. ಅದಕ್ಕಿಂತ ಹೆಚ್ಚಾಗಿ ಅವರ ವರ್ತನೆಯು ವಿಚಿತ್ರವಾಗತೊಡಗಿತು. ಮರೆವು ಅತಿಯಾಯಿತು. ರಾತ್ರಿ ಎರಡು ಗಂಟೆಗೆ ಎದ್ದು, ದೀಪ ಹಚ್ಚಿಕೊಂಡು ಕ್ಷೌರ ಮಾಡಿಕೊಳ್ಳಲು ಒಮ್ಮೆ ಶುರು ಮಾಡಿದರು. 'ಇದೇನೂ ಅಂದ್ರೆ, ಈ ಅವೇಳೆಯಲ್ಲಿ ಕ್ಷೌರ, ಬೆಳಗಾದ ಮೇಲೆ ಮಾಡಿಕೊಳ್ಳಬಾರದೆ' ಎಂದು ಹೆಂಡತಿಯು ಹೇಳಿದಾಗ, 'ನೀನು ಮುದುಕಿಯಾದೆ, ಅರಳುಮರಳು, ಈಗಾಗಲೇ ಆರು ಗಂಟೆಯಾಗುತ್ತಾ ಬಂತಲ್ಲೇ' ಅಂತ ದಬಾಯಿಸಿದರು. ಹಗಲು ರಾತ್ರಿ ಅನ್ನುವುದರಲ್ಲಿ ತಪ್ಪು ಮಾಡದೇ ಇದ್ದರೂ, ಹೊತ್ತುಗೊತ್ತುಗಳನ್ನು ಗುರುತಿಸುತ್ತಿರಲಿಲ್ಲ.

ಮನೆಯ ಹತ್ತಿರವೇ ಇದ್ದ ತುಳಸೀತೋಟಕ್ಕೆ ಅಡ್ಡಾಡಿ ಬರೋಣ ಎಂದೊಮ್ಮೆಹೋದರು. ಸುಮಾರು ಎರಡು ಫರ್ಲಾಂಗ್ ದೂರವಿರಬಹುದು. ಎರಡು ರಸ್ತೆಗಳನ್ನು ದಾಟಬೇಕು. ಎಷ್ಟೋ ಸಾರಿ ಹೋಗಿ ಬಂದಿದ್ದರು. ಆದರೆ ಆ ದಿನ ತೋಟಕ್ಕೆ ಹೋದರು. ಹಿಂತಿರುಗಿ ಮನೆಗೆ ಹೋಗಬೇಕು ! ಆದರೆ ದಾರಿ ಗೊತ್ತಾಗಲಿಲ್ಲ. ಎಲ್ಲಿದೆ ನನ್ನ ಮನೆ? ಎಂದು ಎಷ್ಟೋ ಯೋಚಿಸಿದರು. ದಿಕ್ಕು ತೋರಲಿಲ್ಲ. 'ಇದೇನು ಅಜ್ಜಯ್ಯ, ಇಲ್ಲಿ ನಿಂತಿದ್ದೀರಿ, ಅಷ್ಟು ಹೊತ್ತಿನಿಂದ ಒಬ್ಬರೆ' ಎಂದು ಹತ್ತುವರ್ಷದ ಹುಡುಗಿಯೊಬ್ಬಳು ಹತ್ತಿರಬಂದು ಕೇಳಿದಳು, 'ನೀನ್ಯಾರಮ್ಮ ! ನನ್ನ ಪರಿಚಯ ನಿನಗುಂಟೇ' ಎಂದು ಕೇಳಿದರು' 'ನಿಮ್ಮ ಮೊಮ್ಮಗಳು ಉಷಾ ನನ್ನ ಕ್ಲಾಸ್‌ಮೇಟ್' ಎಂದಳು ಆ ಹುಡುಗಿ. 'ಹಾಗಾದರೆ ನಮ್ಮನೆ ಎಲ್ಲಿದೆ ಗೊತ್ತೇ' ಎಂದರು. ಹ್ಞೂ ಅಂದಿತು ಹುಡುಗಿ. 'ರಸ್ತೆ ಮರೆತು ಹೋಗಿದೆ, ಮನೆಯದಾರಿ ತೋರಿಸುತ್ತೀಯಾ' ಎಂದು ಕೇಳಿದರು. ಆ ಹುಡುಗಿ ಕರೆದುಕೊಂಡು ಬಂದು ಮನೆ ಸೇರಿಸಿತು. ಮರವು ಈ ಹಂತವನ್ನು ಮುಟ್ಟಿತ್ತು.

ಇನ್ನೊಂದೆರಡು ತಿಂಗಳುಗಳಾದವು. ಅಸಂಬದ್ಧವಾಗಿ ಮಾತನಾಡುವುದು ಶುರುವಾಯಿತು. ಮಕ್ಕಳನ್ನು ಗುರುತಿಸುವುದರಲ್ಲಿಯೂ ತಪ್ಪು ಮಾಡಲಾರಂಭಿಸಿದರು. ಸಿಡುಕಾಡುವುದು ಅತಿಯಾಯಿತು. ಒಂದು ಬೆಳಗ್ಗೆ ಕಾಫಿಯನ್ನು ಮಗ ತಂದುಕೊಟ್ಟ. ಅವನ ಕುತ್ತಿಗೆಯನ್ನು ಬಲವಾಗಿ ಹಿಡಿದುಕೊಂಡು ಅದುಮತೊಡಗಿದರು. ಒಂದು ನಿಮಿಷ ಮಗ ದಿಗ್ಭ್ರಾಂತನಾದ, ನಂತರ ತಂದೆಯ ಕೈಗಳನ್ನು ಝಾಡಿಸಿ ಒಗೆದ. ಮನೆಯವರು ಆ ವೇಳೆಗೆ ಗದ್ದಲವನ್ನು ಕೇಳಿ ಕೊಠಡಿಗೆ ಬಂದಿದ್ದರು. 'ಇದು ಯಾಕೆ ಹೀಗಾಡ್ತಾ ಇದ್ದಾರೆ. ಹುಚ್ಚುಗಿಚ್ಚು ಹಿಡಿದಿದೆಯೇನೋ?' ಎಂದು ಹೆಂಡತಿ ಬೊಬ್ಬೆ ಹೊಡೆಯಲಾರಂಭಿಸಿದಳು. ಮಗನಿಗೂ ಹೆದರಿಕೆಯಾಗಿತ್ತು. ನನಗೆ ಮಾಡಿದಂತೆ ಮಕ್ಕಳ ಮೇಲೆ ಕೈಮಾಡಿದರೆ, ಅವು ಉಳಿಯಕ್ಕಾಗುತ್ತ್ಯೇ ಎಂಬ ಭಯ. ಕಾರಣ, ಮಾನಸಿಕ ಆಸ್ಪತ್ರೆಗೆ ಜರೂರಾಗಿ ಸೇರಿಸಿದರು.

ಸಂಪಂಗಿರಾಮಯ್ಯನವರ ಮೆದುಳು, ಹಲವಾರು ಕಾರಣಗಳಿಂದ ಶಿಥಿಲವಾಗ ತೊಡಗಿತ್ತು. ಮೊದಮೊದಲು ವಿಚಿತ್ರವಾಗಿ ವರ್ತಿಸತೊಡಗಿದರು. ಶಿಥಿಲತೆಯು ಮೆದುಳಿನಲ್ಲಿ ಹೆಚ್ಚಾದಾಗ, ಮರೆವು ಅತಿಯಾಯಿತು, ಅಸಂಬದ್ಧವಾಗಿ ಮಾತನಾಡಲಾರಂಭಿಸಿದರು. ಶಿಥಿಲತೆಯು ಇನ್ನೂ ಹೆಚ್ಚಾದಾಗ, ಹುಚ್ಚರಂತೆ ವರ್ತಿಸತೊಡಗಿದರು. ಈ ರೀತಿಯ ಹುಚ್ಚು ಗುಣಹೊಂದಬೇಕಾದರೆ, ಮೆದುಳಿಗೆ ಕಾಯಕಲ್ಪವನ್ನು ಮಾಡಬೇಕು. ಈಗಿನ ವೈಜ್ಞಾನಿಕ ಹಂತದಲ್ಲಿ, ಅದು ಸಾಧ್ಯವಿಲ್ಲ;

ಅಂದರೆ ಮೆದುಳಿನ ಶಿಥಿಲತೆಯಿಂದ ಮುಪ್ಪಿಗರಲ್ಲಿ ಸಂಭವಿಸುವ ಮಾನಸಿಕ ಪಲ್ಲಟಕ್ಕೆ ಉಪಶಮನವನ್ನು ಮಾಡಬಹುದೇ ವಿನಹಾ ಸಫಲ ಚಿಕಿತ್ಸೆಯನ್ನಲ್ಲ. ಸಂಪಂಗಿರಾಮಯ್ಯನವರು ಮಾನಸಿಕ ಆಸ್ಪತ್ರೆಯಲ್ಲಿ ಒಂದೆರಡು ತಿಂಗಳು ಇದ್ದರು. ನಂತರ ತೀರಿಕೊಂಡರು.

ಚಿಕ್ಕಪಾಪಯ್ಯನವರ ಬಾಳೂ ಮುಪ್ಪಿನಲ್ಲಿ ವಿಚಿತ್ರವಾಯಿತು. ಪೇಟೆಯಲ್ಲಿ ಅವರು ಮುಖ್ಯಸ್ಥರಾಗಿದ್ದರು. ಶ್ರೀಮಂತರು, ದೊಡ್ಡ ಪ್ರಮಾಣದಲ್ಲಿ ವ್ಯಾಪಾರವನ್ನು ಮಾಡುತ್ತಿದ್ದರು. ಪೇಟೆಯ ಆಂಜನೇಯನ ಗುಡಿಯ ಧರ್ಮದರ್ಶಿಗಳಾಗಿದ್ದರು. ಬಹಳ ಭಕ್ತಿಯಿಂದ ದೇವಸ್ಥಾನದ ಕೈಂಕರ್ಯ ಮತ್ತು ಪೂಜಾದಿಗಳನ್ನು ಏರ್ಪಡಿಸುತ್ತಿದ್ದರು. ತುಂಬಿದ ಮನೆ, ಆದರದ ಸ್ವಭಾವ. ಶ್ರೀಮಂತರಾಗಿದ್ದರೂ ಬಿಡುಗೈ ದೊರೆ.

ಅರವತ್ತರ ಸುಮಾರಿಗೆ ಮಧುಮೂತ್ರದ ಬೇನೆ ಇರುವುದು ತಿಳಿಯಬಂತು. ಇನ್ಸುಲಿನ್ನುಗಳನ್ನು ತೆಗೆದುಕೊಂಡರೂ, ಪಥ್ಯವಿರುವುದು ಅವರಿಗೆ ಸಾಧ್ಯವಾಗಲಿಲ್ಲ. ಜತೆಗೆ ರಕ್ತದ ಒತ್ತಡವೂ ಹೆಚ್ಚಾಯಿತು. ಎಷ್ಟೋ ಜನ ಮುದುಕರಲ್ಲಿ ಇವೆರಡೂ ಬೇನೆಗಳೂ ಒಟ್ಟೊಟ್ಟಿಗೆ ಕಾಣಿಸಿಕೊಳ್ಳುತ್ತವೆ. ಹಾಗೂ ಹೀಗೂ ಒದ್ದಾಡಿಕೊಂಡು ತಮ್ಮ ಕೆಲಸವನ್ನು ಸಾಕಷ್ಟು ಪರಿಣಾಮಕಾರಿಯಾಗಿ ನಡಸಿಕೊಂಡಿರುತ್ತಾರೆ. ಆದರೆ ಚಿಕ್ಕಪಾಪಯ್ಯನವರಂತಹ ಕೆಲವರಲ್ಲಿ ಈ ಬೇನೆಗಳ ಜತೆಗೆ, ಮೆದುಳಿನ ಶಿಥಿಲತೆಯೂ ಕಾಣಿಸಿಕೊಳ್ಳುತ್ತದೆ.

ದೈವಭಕ್ತರೂ ಧಾರ್ಮಿಕರೂ ಆಗಿದ್ದ ಚಿಕ್ಕಪಾಪಯ್ಯನವರು ಅರವತ್ತ ಮೂರರ ವಯಸ್ಸಿನಲ್ಲಿ ಬಿಳಿಮೀಸೆಗೆ ಕರಿಬಣ್ಣವನ್ನು ಹಚ್ಚಲಾರಂಭಿಸಿದರು. ಬಿಳಿರುಮಾಲನ್ನು ಕಟ್ಟುತ್ತಿದ್ದವರು, ಈಗೀಗ ಜರಿ ರುಮಾಲಿಗೆ ಮಾರುಹೋದರು. ಕೆರೆ ಏರಿಯ ಬಳಿಯಿದ್ದ ನಾಗಾಸಾನಿಯ ಮನೆಗೆ ಮೇಲಿಂದ ಮೇಲೆ ಹೋಗಲಾರಂಭಿಸಿದರು. ಕಿಟ್ಟಪ್ಪನ ಗೆಳೆತನವೂ ಆಯಿತು. ಅವನಲ್ಲಿ ನಂಬಿಕೆಯೂ ಹುಟ್ಟಿತು. ಊರಿನಲ್ಲೆಲ್ಲಾ ಕಿಟ್ಟಪ್ಪ ಸುಪ್ರಸಿದ್ಧನಾಗಿದ್ದ. ಹತ್ತಾರು ಹೆಣ್ಣುಮಕ್ಕಳ ಯೋಗಕ್ಷೇಮವನ್ನು ಅವ ನೋಡಿಕೊಳ್ಳುತ್ತಿದ್ದ. ಅದಕ್ಕಾಗಿ ಚಿಕ್ಕಪಾಪಯ್ಯನವರ ಭೋಗ ಕ್ಷೇಮವನ್ನೂ ವಹಿಸಿಕೊಂಡ. ಚಿಕ್ಕಪಾಪಯ್ಯನವರೂ ಬಲೆಗೆ ಬಿದ್ದರು.

ಮಂಡಿಗೆ ಹೋಗಿ ವ್ಯಾಪಾರದ ಉಸ್ತುವಾರಿಯನ್ನು ವೈನವಾಗಿ ನಡಸುತ್ತಿದ್ದರು, ಚಿಕ್ಕಪಾಪಯ್ಯನವರು. ಆದರೆ ಖರ್ಚು ಮಾತ್ರ ವಿಪರೀತವಾಗತೊಡಗಿತು. ಸೆರಗಿನಲ್ಲಿ ಹಣವನ್ನು ಕೇರತೊಡಗಿದರೆ, ಮಣ್ಣು ಧೂಳು ಮಾತ್ರ ಉಳಿಯುತ್ತದೆ. ಚಿಕ್ಕಪಾಪಯ್ಯನವರ ವಿಚಿತ್ರ ವರ್ತನೆಯಿಂದ

ಆಸ್ತಿಯು ಕರಗತೊಡಗಿತು.

ಬೆಳೆದ ಮಕ್ಕಳು : ಸ್ಥಿತಿವಂತ ಅಳಿಯಂದಿರೂ ಮೊಮ್ಮಕ್ಕಳೂ ಎಲ್ಲರೂ ಇದ್ದರು. ಹಿರಿಯರ ಈ ವರ್ತನೆಯಿಂದ ತಮ್ಮ ಆಸ್ತಿಗೆ ಮತ್ತು ಬಾಳಿಗೆ ಎಲ್ಲಿ ಧಕ್ಕೆ ಬರುತ್ತದೆಯೋ ಎಂದು ಮಕ್ಕಳಿಗೆ ಭಯವಾಯಿತು. 'ಪಿತ್ರಾರ್ಜಿತ ಆಸ್ತಿ, ನಮಗೂ ಇದರಲ್ಲಿ ಹಕ್ಕಿದೆ. ಚಿಕ್ಕಪಾಪಯ್ಯನವರು ಅನಿಷ್ಟರ ದುರ್ನುಡಿಗೆ ಮರುಳಾಗಿ ಆಸ್ತಿಯನ್ನು ಮಾರತೊಡಗಿದ್ದಾರೆ. ಇದು ಊರ್ಜಿತವಾಗುವುದಿಲ್ಲ. ಆದಕಾರಣ ಸುಲಭವಾಗಿ ಸಿಕ್ಕಿತು ಎಂದು ಆಸೆ ಪಟ್ಟುಕೊಂಡವರು ಕೆಟ್ಟುಹೋಗುತ್ತಾರೆ'. ಎಂದು ಲಾಯರ ಮೂಲಕ ಎಲ್ಲ ಪತ್ರಿಕೆಗಳಲ್ಲಿಯೂ ಜಾಹೀರಾತು ಮಾಡಿಸಿದರು.

ಅವಮಾನಕರವಾದ ಈ ಜಾಹೀರಾತುಗಳನ್ನು ಕಂಡು ಚಿಕ್ಕಪಾಪಯ್ಯನವರಿಗೆ ಯಾವ ದುಃಖವೂ ಆದಂತೆ ಕಾಣಿಸಲಿಲ್ಲ. ನಾಗಾಸಾನಿಯ ಮನೆಯಲ್ಲೇ ಹೆಚ್ಚು ಕಾಲವನ್ನು ಕಳೆಯಲಾರಂಭಿಸಿದರು. ಆರೇಳು ತಿಂಗಳ ಅವಧಿಯಲ್ಲಿ ಅವರ ವರ್ತನೆಯು ನಾಗಾಸಾನಿಗೂ ಬೇಸರವನ್ನು ತಂದಿತು, ಚಿಕ್ಕಪಾಪಯ್ಯನವರ ಕೈಯೂ ಬರಿದಾಗಿತ್ತು. ಹೊರಗೆ ಹಾಕಿದಳು. ಹುಚ್ಚರಂತೆ ರಸ್ತೆಗಳಲ್ಲಿ ಅಡ್ಡಾಡತೊಡಗಿದರು. ಒಮ್ಮೊಮ್ಮೆ ಮನೆಗೂ ಬರುತ್ತಿದ್ದರು. ಊಟವನ್ನೂ ಮಾಡುತ್ತಿದ್ದರು. ಕಯಾಲಿ ತಿರುಗಿದಂತೆ ಮಾತನಾಡುವುದು ; ಹೆಂಗಸರಿದ್ದಾರೆ ಮಕ್ಕಳಿದ್ದಾರೆ ಎನ್ನುವುದನ್ನು ಗಮನಿಸದೆ ತೋಚಿದ ಕೆಟ್ಟ ಮಾತುಗಳನ್ನು ಆಡಿಬಿಡುವುದು ಇವೆಲ್ಲವೂ ಶುರುವಾಯಿತು.

ಮಾನಸಿಕ ಆಸ್ಪತ್ರೆಗೆ ಸೇರಿಸಬೇಕಾಯಿತು. ಒಂದೆರಡು ವಾರಗಳಲ್ಲಿ ಅಲ್ಲಿ ಲಕ್ವಾ ಬಡಿಯಿತು, ಎಂಟು ಹತ್ತು ದಿನಗಳಲ್ಲಿ ತೀರಿಕೊಂಡರು.

ಮಾನ ಮರ್ಯಾದೆಗಳನ್ನು ಮರೆತು ವಿಷಯಲಂಪಟರಾದ ದಿನದಿಂದ ಸಾಯುವ ವೇಳೆಗೆ ಕೇವಲ ಎರಡೇ ವರ್ಷಗಳಾಗಿತ್ತು. ಅಷ್ಟರಲ್ಲಿ ಅರ್ಧಮುಕ್ಕಾಲು ಆಸ್ತಿಯನ್ನು ವಿಲೇವಾರಿ ಮಡಿಬಿಟ್ಟಿದ್ದರು. ಮನೆಯವರು ಅದನ್ನೆಲ್ಲಾ ಕೋರ್ಟಿನಲ್ಲಿ ಮೊಕದ್ದಮೆ ಹೂಡಿ, ವಾಪಸು ಪಡೆಯುವ ವೇಳೆಗೆ ಅರ್ಧಕ್ಕಿಂತ ಹೆಚ್ಚರಷ್ಟು ಲಾಯರ ಪಾಲಾಗಿರುತ್ತದೆ, ಕೋರ್ಟಿನ ಖರ್ಚಾಗುತ್ತದೆ.

ಮೆದುಳಿನ ಶಿಥಿಲತೆಯಿಂದ ಈ ತೆರನ ನಡವಳಿಕೆಯೂ ಸಾಮಾನ್ಯವಾಗಿ ಕಾಣಬರುತ್ತದೆ.

* * * *

# ೯. ಚಿಕಿತ್ಸಾ ಕ್ರಮಗಳು

ಯಾವ ಬೇನೆಗಾದರೂ, ದೈಹಿಕವಾಗಲೀ, ಮಾನಸಿಕವಾಗಲೀ, ಚಿಕಿತ್ಸೆಯನ್ನು ಮಾಡುವುದಕ್ಕಿಂತ, ಬೇನೆಯು ಬರದೆ ಇರುವಂತೆ ತಡೆಗಟ್ಟುವುದು ಉತ್ತಮ. ಆದರೆ ಈ ನೀತಿಯನ್ನು ಅನುಸರಿಸುವುದು ಮಾನಸಿಕ ಬೇನೆಗಳಲ್ಲಿ ಅಷ್ಟು ಸುಲಭವಲ್ಲ. ಏಕೆಂದರೆ ಮಾನಸಿಕ ಬೇನೆಗಳು ವಿಧವಿಧವಾದುವು. ಒಂದರಂತೆ ಇನ್ನೊಂದು ಇರುವುದಿಲ್ಲ. ಹಾಗೂ ಅಲ್ಲದೆ ಎರಡು ಮೂರು ತೆರನಾದ ಮಾನಸಿಕ ಬೇನೆಗಳು ಒಂದನ್ನೊಂದು ಜತೆಗೂಡಿಕೊಂಡಿರುತ್ತವೆ. ಯಾವುದೊಂದೂ, ಒಂದೇ ಆಗಿ ಇರುವುದಿಲ್ಲ. ಆದಕಾರಣ ಮುಂಜಾಗ್ರತಾಕ್ರಮಗಳನ್ನು ಕೈಗೊಳ್ಳಬೇಕಾದರೆ, ಬೇನೆಗಳಲ್ಲಿ ಅತಿಯಾಗಿ ಕಾಣುವ ಭಾಗವನ್ನು ಗಮನಕ್ಕೆ ತೆಗೆದುಕೊಳ್ಳಬೇಕು.

**ಮುಂಜಾಗ್ರತಾ ಕ್ರಮಗಳು**

೧. ಕೆಲವೊಂದು ಮಾನಸಿಕ ಬೇನೆಗಳಲ್ಲಿ ಆನುವಂಶಿಕ ಪ್ರವೃತ್ತಿಯು ಎದ್ದು ಕಾಣುತ್ತದೆ. ಇಂತಹ ಬೇನೆಗಳಲ್ಲಿ ಸ್ಕೀಜೋಫ್ರೆನಿಯಾ ಮುಖ್ಯವಾದುದು. ಆನುವಂಶಿಕ ಪ್ರವೃತ್ತಿಯು ಇದೆ ; ಆದುದರಿಂದ ಈ ಬೇನೆಯಿಂದ ನರಳುವವರು ಮಕ್ಕಳಾಗದಂತೆ ಎಚ್ಚರವಹಿಸಬೇಕು. ಅಲ್ಲದೆ ಈ ಪ್ರವೃತ್ತಿಯು ಕಂಡುಬಂದಿರುವ ಎರಡು ಮನೆತನದವರು ಬೀಗರಾಗದೆ ಇರುವುದು ಒಳಿತು. ದಂಪತಿಗಳಲ್ಲಿ ಇಬ್ಬರಿಗೂ ಸ್ಕೀಜೋ ಪ್ರವೃತ್ತಿಯು ಇದ್ದರೆ, ಹುಟ್ಟುವ ಮಕ್ಕಳಲ್ಲಿ ಹೆಚ್ಚು ಮಂದಿಗೆ ಸ್ಕೀಜೋ ಕಾಣಿಸಿಕೊಳ್ಳುವ ಸಂಭವವು ಇದೆ. ಆದರೆ ದಂಪತಿಗಳಲ್ಲಿ ಒಬ್ಬರಿಗೆ ಮಾತ್ರ ಈ ಪ್ರವೃತ್ತಿಯು ಇದ್ದರೆ, ಹುಟ್ಟುವ ಮಕ್ಕಳಲ್ಲಿ ಕಡಿಮೆಸಂಖ್ಯೆಗೆ ಸ್ಕೀಜೋ ಬರಬಹುದು.

ಅಂದರೆ ಮದುವೆಯನ್ನು ಮಾಡಿಕೊಳ್ಳುವಾಗ, ಮನೆತನವನ್ನು ಗಮನಿಸಬೇಕು. ಸ್ಕೀಜೋಪ್ರವೃತ್ತಿಯು ಸ್ಪಷ್ಟವಾಗಿ ಮನೆತನದಲ್ಲಿ ಇದೆ ಎಂದು ಕಂಡು ಬಂದರೆ, ಎಚ್ಚರದಿಂದಿರಬೇಕು. ಎರಡೂ ಮನೆತನಗಳಲ್ಲಿದ್ದರೆ ವಿವಾಹ ಸಂಬಂಧವನ್ನು ಮಾಡದೆ ಇರುವುದು ಕ್ಷೇಮ. ಒಂದರಲ್ಲಿ ಮಾತ್ರ ಇದ್ದರೆ, ಮಿಕ್ಕೆಲ್ಲ ಅನುಕೂಲಗಳೂ ಲಕ್ಷಣವಾಗಿದ್ದರೆ, ವಿವಾಹವನ್ನು ನಿಷೇಧಿಸಬೇಕಾಗಿಲ್ಲ.

ಆದರೆ ಹೆಚ್ಚು ಮಕ್ಕಳಾಗದಂತೆ ಎಚ್ಚರವಹಿಸುವುದು ಒಳ್ಳೆಯದು.

ಬಹು ಪಾಲು ಮೂವತ್ತರ ಪ್ರಾಯವು ಮೀರಿದ ಮೇಲೆ ಸ್ಕೀಜೋ ಬೇನೆಯು ಕಾಣಿಸಿಕೊಳ್ಳುತ್ತದೆ. ಆ ವೇಳೆಗೆ ಮದುವೆಯಾಗಿ, ಮಕ್ಕಳೂ ಆಗಿರುತ್ತದೆ, ನಮ್ಮ ಸಮಾಜದಲ್ಲಿ. ಅಂದಮೇಲೆ ನಮ್ಮಲ್ಲಿ ಮುಂಜಾಗ್ರತಾ ಕ್ರಮಗಳಲ್ಲೊಂದಾದ, ಮದುವೆಯ ಸಲಹೆಯು, ಸುಮಾರುಪಾಲು ನಿಷ್ಪ್ರಯೋಜಕ.

ಅದೂ ಅಲ್ಲದೆ ದೇವರು ಎಂದು ಶೈಶವದಿಂದಲೂ ಕೇಳಿಸಿಕೊಳ್ಳುವ ನಮ್ಮ ಸಮಾಜದಲ್ಲಿ, ಇನ್ನೊಂದು ವಿಚಿತ್ರವನ್ನೂ ಕಾಣುತ್ತೇವೆ. ಪ್ರೌಢ ವಿದ್ಯಾಭ್ಯಾಸವನ್ನು ಮಾಡಿದ ಈ ತರುಣನಿಗೆ ಸ್ಕೀಜೋದ ಚಿಹ್ನೆಗಳಿವೆ. ಇವನಿಗೆ ಕೆಲಕಾಲವಾದರೂ ಮದುವೆಯನ್ನು ಮಾಡಬಾರದು ಎಂದು ಮನೋವೈದ್ಯರು ಒತ್ತಿ ಹೇಳಿರುತ್ತಾರೆ. 'ಹುಚ್ಚು ಬಿಟ್ಟ ಹೊರತು ಹೆಣ್ಣು ಕೊಡುವುದಿಲ್ಲ ; ಹೆಣ್ಣು ಕೊಟ್ಟ ಹೊರತು ಹುಚ್ಚು ಬಿಡುವುದಿಲ್ಲ' ಎಂಬ ಗಾದೆಯನ್ನು ಡಾಕ್ಟರು ಕೇಳಿಯೇ ಇಲ್ಲವೇನೋ ? ಎಂದು ಡಾಕ್ಟರನ್ನು ಮೂದಲಿಸಿ, ಆ ತರುಣನಿಗೆ ಮದುವೆಯನ್ನು ಮಾಡಿ ಬಿಡುತ್ತಾರೆ. ಸಂಸಾರದ ಮೊದಲು ಕೆಲವು ವರ್ಷಗಳು ಅಡ್ಡಾದಿಡ್ಡಿಯಾದರೂ, ನಂತರ ತಕ್ಕಮಟ್ಟಿಗೆ ಸುಖವಾಗಿಯೇ ಇರುತ್ತಾರೆ, ಆ ದಂಪತಿಗಳು. ಇದನ್ನು ಸಾಕ್ಷಾತ್ತಾಗಿ ಕಂಡ ಯಾವ ವೈದ್ಯನೂ, ವಿವಾಹವನ್ನು ಮುಂದಕ್ಕೆ ತಳ್ಳಿ ಎಂದು ತಾನು ಕೊಡಬೇಕಾದ ಸಲಹೆಯನ್ನು ಒತ್ತಾಯಪಡಿಸುವುದಿಲ್ಲ. ಪಾಶ್ಚಾತ್ಯ ಸಮಾಜಗಳಲ್ಲಿ ಇಂತಹ ಸಲಹೆಯನ್ನು ಒತ್ತಿ ಹೇಳಬೇಕು. ಆದರೆ ನಮ್ಮ ಸಂಸ್ಕೃತಿಯ ಸಮಾಜದಲ್ಲಿ, ಒತ್ತಾಯಪಡಿಸಬೇಕಾಗಿಲ್ಲ. ದೇವರಲ್ಲಿನ ಶೈಶವದಿಂದ ರೂಢಿಸಲ್ಪಟ್ಟ ನಂಬಿಕೆಯೇ ಇಂತಹ ಉತ್ತಮ ಫಲಿತಾಂಶಕ್ಕೆ ಕಾರಣವೇ? ಎಂಬುದನ್ನು ಮನೋವಿಜ್ಞಾನಿಗಳು ಸಂಶೋಧಿಸಬೇಕು.

ಇನ್ನೂ ಒಂದು ತೊಂದರೆಯಿದೆ, ನಮ್ಮ ಸಮಾಜದಲ್ಲಿ. ಸ್ಕೀಜೋ ತರಹ ಬೇನೆ ಯಾವುದು? ಮ್ಯಾನಿಕ್ ಡಿಪ್ರೆಸಿವ್ ಸೈಕೋಸಿಸ್ ಯಾವುದು ಎಂದು ಜನ ಸಾಮಾನ್ಯರಿಗೆ ತಿಳಿಯುವುದಿಲ್ಲ. ಹುಚ್ಚು ಬೆಪ್ಪು ಶಿವಲೀಲೆ ಎಂದು ನಮ್ಮ ಜನತೆ ಮಾನಸಿಕ ಬೇನೆಗಳನ್ನು ವಿಂಗಡಿಸುತ್ತಾರೆ. ಅವರ ಪಾಲಿಗೆ ಹುಚ್ಚು ಎಂದರೆ ಒಂದೇ ಗುಂಪು. ಹಾಗಾಗಿ ಆನುವಂಶಿಕ ಪ್ರವೃತ್ತಿಯು ಸ್ಪಷ್ಟವಾಗಿರದೆ ಇರುವ ಇತರ ಮಾನಸಿಕ ಬೇನೆಗಳವರನ್ನೂ, ವಿವಾಹಕ್ಕೆ ಅಸಾಧು ಎಂದು ತಳ್ಳಿ ಹಾಕುತ್ತಾರೆ. ಇದರಿಂದ ಸುಮಾರು ತೊಂದರೆಯೂ, ನಿವಾರಿಸಬಹುದಾದ ಕಷ್ಟ ಸಂಕಟಗಳೂ ಉಂಟಾಗುತ್ತವೆ. ಜನತೆಯು ಈ ವಿಷಯದಲ್ಲಿ ಎಚ್ಚರಗೊಳ್ಳಬೇಕಾದರೆ, ಅವರಿಗೆ ಆ ವಿಷಯದ ತಿಳುವಳಿಕೆಯೂ ಕಲಿಸಲ್ಪಡಬೇಕು. ಅಥವಾ ಅನುಮಾನ ಬಂದಾಗ

ಇದು ಬೇಡ ಎಂದು ತಾವೇ ನಿರ್ಧರಿಸುವ ಮೊದಲು ಮನೋವೈದ್ಯರಲ್ಲಿ ಅಗತ್ಯವಾದ ಸಲಹೆಯನ್ನು ಪಡೆಯಬೇಕು.

ಮಾನಸಿಕ ಬೇನೆಯು ಒಂದು ಕಳಂಕ ಎಂದೆಂಬ ನಂಬಿಕೆಯು ನಮ್ಮಲ್ಲಿ ಇನ್ನೂ ಉಳಿದಿದೆ. ಆದರೆ ನಮ್ಮ ಸಮಾಜವು, ಬಹು ಕಾಲದಿಂದ ಕೆಲವು ಮಾನಸಿಕ ಬೇನೆಗಳನ್ನು 'ದೆವ್ವ ಹಿಡಿದಿದೆ, ಅವನಿಗೆ' ; 'ಮೋಹಿನಿ ಬಡಿದಿದೆ' ; 'ಸವತಿಕಾಟ ಅವಳಿಗೆ' ; 'ಕೊಳ್ಳಿ ಪಿಶಾಚಿ ಅವಳ ಹೊಟ್ಟೆಯನ್ನು ಹೊಕ್ಕಿದೆ' ಎಂದು ಹೆಸರಿಡುತ್ತಿದ್ದರು. ಪಂಜುರ್ಲಿ ಭೂತವನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಿಡಿಸಿದರೆ, ಕುಟ್ಟಿಚಾತನ್ನನ್ನು ಕೇರಳದಲ್ಲಿ ದಿಗ್ಬಂಧಿಸುತ್ತಿದ್ದರು.

ದೆವ್ವ ಹಿಡಿದರೆ ಕಳಂಕವೇನೂ ಅಲ್ಲ ಎಂದು ನಂಬಿಕೆಯೂ ಮೂಡಿತ್ತು.

ನಮ್ಮ ಸಮಾಜದ ನಂಬಿಕೆಗಳನ್ನು ಮನೋವೈದ್ಯರೂ ಬಳಸಿಕೊಂಡು; 'ಇದು ಮಾನಸಿಕ ಬೇನೆಯಲ್ಲ–ಕೇವಲ ಭೂತದ ಕಾಟ, ಪಿಶಾಚಿಯ ಆಟ; ಇದನ್ನು ನಾವೂ ದಿಗ್ಬಂಧಿಸಬಲ್ಲೆವು ಈ ರೀತಿಯಲ್ಲಿ' ಎಂದು ಹೇಳಿ ತಾವು ಎಂದಿನಂತೆ ಮಾಡುವ ಚಿಕಿತ್ಸೆಯನ್ನೇ ಪರಿಣಾಮಕಾರಿಯಾಗಿ ಮಾಡಬಹುದು. ಆಗ ಸಮಾಜದಲ್ಲಿ 'ಕಳಂಕ'ದ ಸೊಲ್ಲು ಏಳುವುದಿಲ್ಲ. ಮನೋವಿಜ್ಞಾನಿಗಳು ಈ ಕ್ರಮವನ್ನು ಆಚರಿಸುವುದು ಅಷ್ಟು ಸುಲಭವಲ್ಲ ; ಅವರು ಅಭ್ಯಾಸಿಸುವ ಸಂಸ್ಥೆಗಳೇ ಇದಕ್ಕೆ ಅಡಚಣೆಯಾಗುತ್ತದೆ. ಆದರೆ ಮನೆಯ ವೈದ್ಯರುಗಳು ಈ ಉಪಾಯವನ್ನು ಸುಲಭವಾಗಿ ಆಚರಿಸಿ, ತಟ್ಟಬಹುದಾದ ಕಳಂಕವನ್ನು ನಿವಾರಿಸಬಹುದು.

೨. ಮಾನಸಿಕ ಬೇನೆಗಳ ಮೊದಲ ಹಂತವನ್ನು ಗುರುತಿಸುವುದು :

ಮೊದಮೊದಲ ಹಂತದಲ್ಲಿ ಮಾನಸಿಕ ಬೇನೆಗಳನ್ನು ಗುರುತಿಸಿದರೆ, ಅವುಗಳನ್ನು ಗುಣಪಡಿಸುವುದು ಹೆಚ್ಚು ಸುಲಭ. ಮೊದಲ ಹಂತದಲ್ಲಿ ಗುರುತಿಸಬೇಕಾದರೆ, ಮನೆಯಲ್ಲಿರುವ ಜನರಿಗೆ, ಶಾಲೆಯಲ್ಲಿರುವ ಮಂದಿಗೆ, ಈ ಬೇನೆಗಳ ಸ್ವರೂಪವು ತಿಳಿದಿರಬೇಕು. ವಿಷಯವು ತಿಳಿದಿದ್ದಾಗ ಮಾತ್ರ ಅದನ್ನು ಗುರುತಿಸಲು ಸಾಧ್ಯ. ಬೇನೆಗಳ ಸ್ವರೂಪವು ಎಲ್ಲರಿಗೂ ತಿಳಿಯಲಿ ಎಂದೇ ಈ ಪುಸ್ತಕವನ್ನು ಬರೆದಿರುವುದು. ಚಿಕಿತ್ಸಾ ವಿಧಾನಗಳಲ್ಲಿ ಜ್ಞಾನ ಪ್ರಸಾರವೂ ಮುಖ್ಯವಾದ ಒಂದು ಅಂಶ.

೩. ಹಿರಿಯ ಮನೋವಿಜ್ಞಾನಿಯಾದ Jung ಎಂಬುವನು ಈ ರೀತಿ ಒಂದೆಡೆ ಹೇಳಿದ್ದಾನೆ :

"People are groping for some system of religious belief".

Mayer gross ಎಂಬ ಪ್ರಸಿದ್ಧ ಮನೋವೈದ್ಯನು ಒಂದು ಕಡೆ ಹೇಳಿದ್ದಾನೆ.

"Freudian Analysis will do for some, what Religious Conversion will do for others"

ಈ ಎರಡು ಅರ್ಥಗರ್ಭಿತ ವಾಕ್ಯಗಳನ್ನು ಏಕೆ ಉದ್ಧರಿಸಿದ್ದೇನೆ, ಎಂದರೆ, ಹಲವಾರು ತೆರನ ಮಾನಸಿಕ ತಳಮಳಗಳು ದೇವರು, ದಿಂಡರು ; ಮತ ವ್ರತ; ಪೂಜೆ ಪುನಸ್ಕಾರ ಇತ್ಯಾದಿ ಆಚರಣೆಗಳಿಂದ ಸಾಕಷ್ಟು ಸಮಾಧಾನವನ್ನು ಹೊಂದುತ್ತವೆ. 'ಇವೆಲ್ಲವೂ ಮೂಢನಂಬಿಕೆಗಳು. ದೇವರು ಇದ್ದದ್ದೇ ಆದರೆ, ಈ ಬೇನೆಯನ್ನು ಯಾಕೆ ಕೊಡಬೇಕಾಗಿತ್ತು? ನಂತರ ಅವನೆದುರಿಗೆ ತೆಂಗಿನಕಾಯಿ ಒಡೆದರೆ ವಾಸಿಮಾಡುತ್ತಾನೋ? ಎಂದು ಪದವೀಧರರು ಎನಿಸಿಕೊಂಡವರು ನಗೆಯಾಡುತ್ತಾರೆ ದಿಟ. ಆದರೆ ಇದು ಅವರುಗಳ ಮೌಢ್ಯವನ್ನು ಮುಂದು ಮಾಡಿ ತೋರಿಸುತ್ತದೆಯೇ ವಿನಃ ಅವರ ವೈಜ್ಞಾನಿಕ ಅರಿವನ್ನಲ್ಲ.

ಮಾನಸಿಕ ತಳಮಳವು ಒಬ್ಬನಿಗೆ ಉಂಟಾಗಿದೆ ಎನ್ನೋಣ. ಅವನ ನಡವಳಿಕೆಯನ್ನು ಕಂಡವರು 'ಇವನಿಗೆ ಭೂತ ಹಿಡಿದಿದೆ ಅಥವಾ ದೆವ್ವ ಬಡಿದಿದೆ' ಎಂದನ್ನಬಹುದು. ದೆವ್ವ, ಭೂತ ಅಂಥ ಯಾರು ಅನ್ನುತ್ತಾರೆಯೋ ಅವರುಗಳು ದೇವರುದಿಂಡಿರು ಭೂತವನ್ನು ಓಡಿಸುತ್ತಾರೆ, ದೆವ್ವವನ್ನು ಉಚ್ಚಾಟಣೆ ಮಾಡುತ್ತಾರೆ ಎಂದೂ ನಂಬುತ್ತಾರೆ. ಅಂತಹವರು ದೇವರು, ವ್ರತ, ಪೂಜೆ, ಇತ್ಯಾದಿಗಳಿಂದ ತಮ್ಮ ಮಾನಸಿಕ ತಳಮಳವನ್ನು ಗುಣಪಡಿಸಿಕೊಳ್ಳುತ್ತಾರೆ. ರೋಗಿಗಳಿಗೆ ಸ್ವಾಸ್ಥ್ಯ ಉಂಟಾಗುವುದು ಮುಖ್ಯವೇ ಹೊರತು, ದೇವರು ಇದ್ದಾನೆಯೇ, ಭೂತಗಳು ಇವೆಯೇ ಎಂಬ ಪ್ರಶ್ನೆಯು ಈ ವಿಷಯದಲ್ಲಿ ಅಪ್ರಕೃತ, ಅಸಂಗತ. ಕೆಲವು ಮಾನಸಿಕ ರೋಗಿಗಳಿಗೆ ಪೂಜೆ, ವ್ರತಗಳು ಸಮಾಧಾನವನ್ನು ತಂದಿರುವುದು ಎಲ್ಲರ ಅನುಭವಕ್ಕೂ ಎಂದಾದರೂ ಬಂದೇ ಇರುತ್ತದೆ. ಆದಕಾರಣ, ಇದು ಹೇಗೆ ಸಾಧ್ಯವಾಯಿತು ಎಂದು ಸಂಶೋಧನೆ ನಡೆಸಬೇಕು. ಇದು ಮೂಢನಂಬಿಕೆ ಎಂದು ಅಲ್ಲಗಳೆಯುವುದು ಭಯಂಕರ ಮೌಢ್ಯತನ !

Jung ಮತ್ತು Mayer-Gross ಅವರುಗಳು ಈ ರೀತಿಯ ಸಂಶೋಧನೆಯಲ್ಲಿ ತೊಡಗಿದವರು. ಸಂಪೂರ್ಣವಾಗಿ ವಿವರಗಳನ್ನು ಹೊರಗೆಡವಲು ಸಾಧ್ಯವಾಗಿಲ್ಲ. ಆದರೂ ಪಕ್ವವಾದ ಹಾಗೂ ವಿಶಾಲವಾದ ಅನುಭವದಿಂದ ಮೇಲೆ ಉದ್ಧರಿಸುವ ಮಾತುಗಳನ್ನು ಹೇಳಿದ್ದಾರೆ. ಬಹಳಷ್ಟು ಅರ್ಥಗರ್ಭಿತವಾದ ವಾಕ್ಯಗಳು.

ನಮ್ಮ ಸಂಸ್ಕೃತಿಯಲ್ಲಿ ಬೆಳೆದು ಬಂದಿರುವ ನಮ್ಮ ಸಮಾಜದ ಮಾನಸಿಕ

ರೋಗಿಗಳಿಗೆ, ಪೂಜೆ, ವ್ರತ, ಇತ್ಯಾದಿಗಳು ಸಾಕಷ್ಟು ಪರಿಣಾಮಕಾರಿಯಾಗುತ್ತವೆ. ಆದರೆ ಮಾನಸಿಕ ರೋಗಿಗಳಿಗೆ ಸ್ವಂತ ವಿವೇಚನಾಶಕ್ತಿಯು ಸಾಕಷ್ಟು ದೃಢವಾಗಿರುವುದಿಲ್ಲ. ಹಾಗಿದ್ದಿದ್ದರೆ ಮಾನಸಿಕ ತಳಮಳವೇ ಉಂಟಾಗುತ್ತಿರಲಿಲ್ಲ. ಅಂತಹವರ ಎದುರಿನಲ್ಲಿ ಮನೋವೈದ್ಯರು, ಮನೆಯವೈದ್ಯರಾಗಲೀ 'ಪೂಜೆ ಪುನಸ್ಕಾರ, ಹರಕೆ, ಯಾತ್ರೆ ಇವೆಲ್ಲಾ ಶುದ್ಧ ತಿಳಿಗೇಡಿತನ' ಎಂದು ಹೇಳಿದರೆ, ಮಾನಸಿಕ ತಳಮಳದ ಜತೆಗೆ ಸಂದೇಹವೂ, ಅನಿಶ್ಚಿತತೆಯೂ ಕೂಡಿಕೊಳ್ಳುತ್ತದೆ. ಯಾವ ಪೂಜಾ ಪುನಸ್ಕಾರಗಳಿಂದ, ರೋಗಿಯ ತಳಮಳವು ಬಹುಶಃ ಕಡಿಮೆಯಾಗುತ್ತಿತ್ತೋ, ಅದಕ್ಕೆ ಅಡ್ಡಿಮಾಡಿದಂತಾಗುತ್ತದೆ. ಖಂಡಿತವಾಗಿಯೂ ಇದಾಗಬಾರದು. ನಮ್ಮ ಇಂದಿನ ಮನೋವೈದ್ಯರ ಅರಿವಿನ ಹಂತದಲ್ಲಿ, ದೊರಕುವ ಎಲ್ಲಾ ಸಾಧನೆಗಳನ್ನೂ ಬಳಸಿಕೊಳ್ಳುವುದು ಜಾಣತನ.

ಆದಕಾರಣ, ಮಡಿ, ಮುಸಿರೆ; ವ್ರತ, ಭಜನೆ; ನಗರ ಸಂಕೀರ್ತನೆ, ನಾಮ ಸಂಕೀರ್ತನೆ ಎಂದು ಯಾವುದಾದರೂ ಆಚರಣೆಯನ್ನು ತುಸು ವಿಪರೀತವಾಗಿ ಯಾರಾದರೂ ಮಾಡಲೆತ್ನಿಸಿದರೆ; ಅವರನ್ನು ಅರ್ಥಮಾಡಿಕೊಳ್ಳಬೇಕು. ಮಾನಸಿಕ ತಳಮಳವಾಗಿದ್ದುದರಿಂದಲೇ ಅವರು ಹಾಗೆ ಮಾಡಿ, ಸಮಾಧಾನವನ್ನು ಪಡೆಯ ಲೆತ್ನಿಸುತ್ತಾರೆ. ಹಾಗೆಂದು ವಿವೇಚಿಸಿ, ಯೋಚಿಸಿ, ಅವರುಗಳು ಮಾಡುವುದಿಲ್ಲ. ಮನಸ್ಸಿನ ಅಸ್ಪಷ್ಟವಾದ ಭಾಗಗಳಲ್ಲಿ ಈ ತೆರನ ನಿರ್ಣಯವು ಹೊರಬಂದು, ಅದು ನಡಸಿದಂತೆ ಅವರುಗಳು ಆಚರಿಸುತ್ತಾರೆ. ಹಾಗೆ ಮಾಡುವುದರಿಂದ ಅವರ ಮನಸ್ಸಿಗೆ ಸ್ವಲ್ಪ ಮಟ್ಟಿಗೆ ನೆಮ್ಮದಿಯು ದೊರಕುತ್ತದೆ. ಬೈದು, ಮೂದಲಿಸಿ, ಅವರೆದುರಿಗೆ ಅವರ ಆಚರಣೆಯನ್ನು ಅವಹೇಳನ ಮಾಡಿದರೆ, ಅವರುಗಳ ಡೋಲಾಯಮಾನ ಸ್ಥಿತಿಯಲ್ಲಿರುವ ಮನಸ್ಸು, ಮೊಂಡು ಹಿಡಿದುಕೊಳ್ಳುತ್ತದೆ. 'ಯಾರೂ ನನಗೆ ಸ್ನೇಹಿತರಲ್ಲ, ಯಾರಿಗೂ ನನ್ನ ನೆಮ್ಮದಿಯ ಕಾತರವಿಲ್ಲ.' ಎಂದು ಮನಸ್ಸು, ಸುತ್ತಮುತ್ತಲಿನವರನ್ನು ದ್ವೇಷಿಸುವಂತೆ ಮಾಡುತ್ತದೆ. ಅಂದರೆ ಸಮಾಜದಲ್ಲಿ ಒಬ್ಬನಾಗಿ, ಅದರೊಂದಿಗೆ ಅನುಸರಿಸಿಕೊಂಡು ಹೋಗುವ ಆರೋಗ್ಯವಂತರ ನಡವಳಿಕೆಯು ತಪ್ಪಿಹೋಗುತ್ತದೆ. ಸಮಾಜವನ್ನು ಮನಃಪೂರ್ಣ ದ್ವೇಷಿಸಿ, ತನ್ನಲ್ಲಿ ತಾನೇ ಕೊರಗುತ್ತ ತೊಳಲುತ್ತ, ಅದರಿಂದಲೇ ತುಸು ನೆಮ್ಮದಿಯನ್ನು ಪಡೆಯುವಂತಾಗುತ್ತದೆ. ಅಂದರೆ ಮಾನಸಿಕ ರೋಗವು ಸ್ಥಿರವಾದಂತೆಯೇ.

ಇದಾಗಬಾರದು. ಮೊದಮೊದಲ ಹಂತದಲ್ಲಿ ವಿಪರೀತವಾದ, ವಿಚಿತ್ರವಾದ ಆಚರಣೆಯನ್ನು ಕಂಡರೆ, ತುಂಬಾ ಅನುಕಂಪ ಮತ್ತು ಸಹಾನುಭೂತಿಯನ್ನು ಮನೆಯವರು ಮತ್ತು ಇತರರು ತೋರಿಸಬೇಕು.

ಇದನ್ನೂ ಮುಂಜಾಗ್ರತಾ ಕ್ರಮ ಎನ್ನಬೇಕು. ಏಕೆಂದರೆ, ಮಾನಸಿಕ ತಳಮಳವು ತನ್ನಷ್ಟಕ್ಕೆ ತಾನೇ ಸ್ವಾಭಾವಿಕವಾಗಿ ಸರಿಹೋಗುವಂತಿರುವಾಗ ಉಳಿದವರು ಎಂದರೆ ವೈದ್ಯರುಗಳು ಕೂಡ, ತೆಪ್ಪಗಿರಬೇಕು. ಸಾಧ್ಯವಾದರೆ, ಸ್ವಾಭಾವಿಕವಾಗಿ ನಡೆಯುತ್ತಿರುವ ಆಚರಣೆಗಳಿಗೆ ಸಹಾಯವನ್ನು ಮಾಡಬೇಕು. ಅದು ಬಿಟ್ಟು, ಸ್ವಾಭಾವಿಕವಾಗಿ ನಡೆಯುವ ಸಮಾಧಾನಪಡಿಸುವ ಕಾರ್ಯಗಳಿಗೆ ಅಡಚಣೆಯನ್ನುಂಟುಮಾಡಿದರೆ, ಮಾನಸಿಕ ಬೇನೆಯು ಪ್ರಾರಂಭವಾಗುತ್ತದೆ, ಪ್ರಬಲವೂ ಆಗುತ್ತದೆ. ಹೀಗಾಗಲು ಬಿಡಬಾರದು. ಈ ವಿಷಯದಲ್ಲಿ ಜನರೆಲ್ಲರೂ ಅರಿವನ್ನು ಪಡೆದರೆ, ಆಗ, ತಳಮಳವು ಬೇನೆಯಾಗಿ ಬೇರೂರದಂತೆ ಮುಂಜಾಗ್ರತೆಯನ್ನು ಕೈಗೊಳ್ಳಬಹುದು. ಆದಕಾರಣ ಈ ತೆರನ ಪುಸ್ತಕಗಳ ಅಗತ್ಯವು ಬಹಳ, ನಮ್ಮ ಸಮಾಜದಲ್ಲಿ.

೨. ಕೆಲವು ಮಕ್ಕಳು ಬಹಳ ಚುರುಕಾಗಿರುತ್ತವೆ. ಕೂತಲ್ಲಿ ಕೂರುವುದಿಲ್ಲ. ನಿಂತಲ್ಲಿ ನಿಲ್ಲುವುದಿಲ್ಲ, ಪಾದರಸದಂತೆ ಅಲ್ಲಿ ಇಲ್ಲಿ ಓಡಾಡುತ್ತವೆ. ಹೊಸ ಮುಖ ಅನ್ನುವುದಿಲ್ಲ ಎಲ್ಲರ ಹತ್ತಿರವೂ ಸದರದಿಂದ ಆಡಹೋಗುತ್ತವೆ. ಇದರ ಜತೆಗೂ ಕೋಪ ಹಠವೂ ಅತಿಯಾಗಿರುತ್ತದೆ. ಚಾಕುವನ್ನು ಹಿಡಿದು ಆಡುತ್ತಿರುವಾಗ, ಅದನ್ನು ಕಂಡ ದೊಡ್ಡವರು ಕೈಯಿಂದ ಚಾಕುವನ್ನು ಕಿತ್ತುಕೊಂಡರೆ, ರಚ್ಚಾಟದ ಅಳುವನ್ನು ಶುರು ಮಾಡುತ್ತದೆ. ಯಾರು ಸಮಾಧಾನವನ್ನು ಮಾಡಿದರೂ ಪ್ರಯೋಜನವಿರುವುದಿಲ್ಲ. ಉಸಿರು ಹಿಡಿದು ಅಳಲಾರಂಭಿಸಿ, ಕಡೆಗೆ ಉಸಿರು ಕಟ್ಟಿ ಜ್ಞಾನವೂ ಒಂದೆರಡು ನಿಮಿಷ ತಪ್ಪುತ್ತದೆ. ಆಗ ಮಗು ನೀಲಿಯೂ ಆಗುತ್ತದೆ. ಉಸಿರು ಹಿಡಿದುದರಿಂದ ರಕ್ತದಲ್ಲಿ ಆಕ್ಸಿಜನ್ ಕಡಿಮೆಯಾಗುತ್ತದೆ. ನೀಲಿ ಛಾಯೆಯು ಮೂಡುತ್ತದೆ. ತುಂಬಾ ಭಯ ತರಿಸುವ ದೃಶ್ಯ, ಆದರೆ ಒಂದೆರಡು ನಿಮಿಷಗಳಲ್ಲಿ ದೊಡ್ಡ ಉಸಿರನ್ನೆಳೆದುಕೊಂಡು, ನಂತರ ಸರಾಗವಾಗಿ ಉಸಿರಾಡುತ್ತದೆ. ನಿದ್ರೆಯನ್ನೂ ಸ್ವಲ್ಪ ಕಾಲ ಮಾಡುತ್ತದೆ. ಮೈಯ ಬಣ್ಣವೂ ನೀಲಿಯಿಂದ ಸಾಮಾನ್ಯ ಸ್ಥಿತಿಗೆ ತಿರುಗುತ್ತದೆ. ಎದ್ದ ಕೂಡಲೇ ಮತ್ತೆ ಪಾದರಸದಂತಹ ಚಟುವಟಿಕೆ ಮತ್ತು ಚೇಷ್ಟೆ ಶುರುವಾಗುತ್ತದೆ. Tantrums ಎಂದು ಈ ಪರಿಸ್ಥಿತಿಯನ್ನು ಕರೆಯುತ್ತಾರೆ. ಮಗುವು ಬೆಳೆದಂತೆಲ್ಲ, ಅದರ ನರಮಂಡಲ ರಚನೆಯು ಪ್ರೌಢವಾದಂತೆ Tantrums ಆವೇಷಗಳು ಕಡಿಮೆಯಾಗುತ್ತವೆ. ಸುಮಾರು ೮–೧೦ ಪ್ರಾಯಕ್ಕೆ ಸಂಪೂರ್ಣವಾಗಿ ನಿಂತುಹೋಗುತ್ತದೆ.

ಇಂತಹ ರಚ್ಚೆಯ ಆವೇಶ, ಮತ್ತು ಜ್ಞಾನ ತಪ್ಪುವಿಕೆ, ಹಾಗೂ ಕೈಕಾಲುಗಳ ಸೆಳೆವ ಬಡಿದಾಟ, ಇವನ್ನು ಕಂಡು ಮೂರ್ಛೆರೋಗ ಬಂದಿದೆ ಎಂದು

ಮನೆಯವರು ಅಂದುಕೊಳ್ಳುವುದೂ ಉಂಟು. ಹಾಗಂದುಕೊಂಡು ಮೂರ್ಛೆ ರೋಗಕ್ಕೆ ಬಳಸುವ ಔಷಧಗಳನ್ನು ಕೊಡಲಾರಂಭಿಸಬಹುದು. ಇಂತಹ ಔಷಧಿಗಳು ಬಹಳ ವರ್ಷ ಕೊಡಬೇಕಾದುದರಿಂದ, ಇದು ಮೆದುಳಿನ ಕಾರ್ಯದ ಸುವ್ಯವಸ್ಥೆಗೆ ಅಡ್ಡಿಯಾಗುತ್ತದೆ. ಇದರಿಂದ ದುಷ್ಪರಿಣಾಮವೂ ಮುಂದೆ ಆಗುತ್ತದೆ. ಮಾನಸಿಕ ಮಾಂದ್ಯತೆ, Dull Child ಉಂಟಾಗಬಹುದು. ಬೆಳೆದ ಮೇಲೆ ಮಾನಸಿಕ ಸ್ವಾಸ್ಥ್ಯವೂ ಸಾಕಷ್ಟು ಉಳಿಯುವುದಿಲ್ಲ, ಬೆಳೆಯುವುದೂ ಇಲ್ಲ.

ಆದಕಾರಣ ಮಾನಸಿಕ ಅವ್ಯವಸ್ಥೆಯು ಮುಂದೆ ಉಂಟಾಗದಂತೆ ಎಚ್ಚರಿಕೆಯನ್ನು ವಹಿಸುವಾಗ ಈ ವಿಷಯವನ್ನು ಗಮನಿಸಬೇಕು. ಸ್ವಲ್ಪ ಅನುಮಾನವು ಬಂದರೂ ಕಂದಾಚಾರದ ನಂಬಿಕೆಗಳಿಗೆ ತುತ್ತಾಗದೆ, ನುರಿತ ವೈದ್ಯರ ಸಲಹೆಯನ್ನು ಪಡೆಯಬೇಕು.

* * * *

# ಪರಿವಿಡಿ

## ಭಾಗ–೨

# ಭಾಗ–೨
# ಅರಿಕೆ–ಹಾರೈಕೆ

ಮಾನಸಿಕ ಬೇನೆಗಳ ವಿರಾಟ್ ಸ್ವರೂಪದ, ಚಿತ್ರವಿಚಿತ್ರ ಪ್ರದರ್ಶನಗಳನ್ನು ಸಾಕಷ್ಟು ವಿವರವಾಗಿ ನೋಡಿದೆವು. ಮನಸ್ಸು ಯಾವ ರೀತಿಯಲ್ಲಿ ವಕ್ರವಾಗುತ್ತದೆ ಎಂಬುದನ್ನೂ ಸ್ಥೂಲವಾಗಿ ತಿಳಿದೆವು.

ಸಂಜೆಯ ಮಸುಕಿನಲ್ಲಿ ಹಾದಿಯಲ್ಲಿ ಕಾಣಿಸಿದುದು ಹಾವೋ ಹಗ್ಗವೋ ಎಂಬ ಸಂದೇಹವು ಬರುತ್ತದೆ. ಸಂದೇಹದ ಹಿಂದೆಯೇ ಭಯ ಮತ್ತು ಆತಂಕ. ಟಾರ್ಚ್ ಬೆಳಕನ್ನು ಅದರ ಮೇಲೆ ಚೆಲ್ಲಿದರೆ, ಸಂದೇಹವು ಮಾಯವಾಗುತ್ತದೆ. ಹಗ್ಗವಾಗಿದ್ದರೆ ಮುನ್ನಡೆಯುತ್ತೇವೆ. ಹಾವಾಗಿದ್ದರೆ ಸೂಕ್ತವಾದ ರಕ್ಷಣೆಯನ್ನು ಮಾಡಿಕೊಳ್ಳುತ್ತೇವೆ.

ಮಾನಸಿಕ ಬೇನೆಗಳ ವಿಷಯದಲ್ಲಿ ಜನಸಾಮಾನ್ಯರಲ್ಲಿ ಸಾಕಷ್ಟು ಸಂದೇಹಗಳಿವೆ. ಮನಸ್ಸು ಹೇಗೆ ವರ್ತಿಸುತ್ತದೆ? ನಿರ್ಣಯಗಳನ್ನು ಹೇಗೆ ನಿರ್ಧರಿಸುತ್ತದೆ? ಅದರ ಕಾರ್ಯಕ್ರಮವು ಹಳಿ ತಪ್ಪುವುದು ಹೇಗೆ? ಇವುಗಳನ್ನು ತಿಳಿದುಕೊಂಡರೆ, ಸಂದೇಹದ ಮೇಲೆ ಬೆಳಕನ್ನು ಚೆಲ್ಲಿದಂತಾಗುತ್ತದೆ, ಆಗ ಸಂದೇಹ ಪರಿಹಾರವಾಗುತ್ತದೆ.

ಆದಕಾರಣ ಮನಸ್ಸಿನ ಸ್ಥೂಲ ಪರಿಚಯುವನ್ನು ಮಾಡಿಕೊಡಲು ಈ ಭಾಗದಲ್ಲಿ ಯತ್ನಿಸಿದ್ದೇನೆ. ಮನಸ್ಸಿನ ವಿಷಯದಲ್ಲಿ ಮನೋವೈಜ್ಞಾನಿಕರು ಪ್ರಗತಿಯನ್ನು ಸಾಧಿಸಿದ್ದಾರೆ ಆದರೆ ಆ ಜ್ಞಾನವು ಇನ್ನೂ ಶೈಶವಾವಸ್ಥೆಯಲ್ಲಿದೆಯೋ ಎಂಬ ಅನುಮಾನವು ವಿಜ್ಞಾನಿಗಳಲ್ಲಿ ಬೇರೂರಿದೆ.

ನಮ್ಮ ನಾಡಿನಲ್ಲಿ ಮನಸ್ಸಿನ ವಿಶ್ಲೇಷಣೆ ಮತ್ತು ಮನಸ್ಸನ್ನು ನಡಸುವ ಆವುದೋ ಅವ್ಯಕ್ತವಾದ ಅಂಶವು ಇದೆ, ಅದನ್ನು ಅರಿಯಬೇಕು ಎಂಬುದೇ ಪುರಾತನ ಕಾಲದ ಮನನಿಗರ ಮತ್ತು ಋಷಿಗಳ ಏಕಮಾತ್ರ ಧ್ಯೇಯವಾಗಿತ್ತು.

ಅವರುಗಳು ನುಡಿದ ಭಾಷೆಯು, ನಾವು ವೈಜ್ಞಾನಿಕವಾಗಿ ಆಡುವ ಭಾಷೆಗೆ ಯಾವ ಸಂಬಂಧವನ್ನೂ ಹೊಂದಿಲ್ಲ. ಆದರೂ ಶ್ರದ್ಧೆಯನ್ನು ವಹಿಸಿ ಎರಡನ್ನೂ ಅಭ್ಯಾಸ ಮಾಡಿದರೆ, ಅವುಗಳೆರಡಕ್ಕೂ ಇರುವ ಸಾಮ್ಯವು ಸ್ಪಷ್ಟವಾಗುತ್ತದೆ. ಹಿರಿಯ ಋಷಿಗಳು ಹೇಳಿದುದನ್ನು ಗಮನಿಸಿದರೆ ಮನೋವಿಜ್ಞಾನವು ಮುಂದೆ ಯಾವ

ಹಾದಿಯಲ್ಲಿ ಪ್ರಯೋಗಗಳ ಮೂಲಕ ಅರಿವನ್ನು ಪಡೆಯಬಹುದು ಎಂಬುದನ್ನು ಕಾಣಬಹುದು. ಅಂತಹ ಪ್ರಯತ್ನವೇ ಈ ಭಾಗದ ಧ್ಯೇಯ ಮತ್ತು ಉದ್ದೇಶ.

ಮನಸ್ಸಿನ ವಿಷಯದಲ್ಲೂ ಕನ್ನಡ ಜನರು, 'ಕಾಲದ' ವಿಷಯದಲ್ಲಿ ವಿ.ಸೀ ಅವರು ನುಡಿದಂತೆ, ಜಡರು; ಜಾಡ್ಯರು. ಆದರೂ ಹಲ ಕೆಲವರಾದರೂ, ಒಬ್ಬಿಬ್ಬರಾದರೂ ಸಾಕು, ಇದನ್ನು ಓದಿ, ಮುಂದಿನಪ್ರಗತಿಯ ಪಥವನ್ನು ದರ್ಶನಿಸುವಂತಾದರೆ ಕೃತಾರ್ಥ. ಅವರುಗಳಿಗೆ 'ಧೀಯೋ ಯೋನಃ ಪ್ರಚೋದಯಾತ್' ಎಂದು ಹಾರೈಸಿ, ಈ ಭಾಗವು ಪ್ರಚೋದಿಸಲಿ ಎಂದು ಬೇಡಿಕೊಳ್ಳುತ್ತೇನೆ, (ಅದನ್ನು).

**ಎಂ. ಶಿವರಾಂ**

~~೨೯೦~~

# ಭಾಗ–೨
# ೧. ದೇಹ ಮತ್ತು ಮನಸ್ಸಿನ ಸಂಬಂಧ

ಮೂರು ವರ್ಷದ ದುಂಡು ದುಂಡು ಮಗುವಾಗಿದ್ದಾಗಿನಿಂದಲೂ ಪಮ್ಮಿಗೆ ನನ್ನನ್ನು ಕಂಡರೆ ಸದರ. ಕತ್ತಿನ ಸುತ್ತ ಮಾಲೆಯಂತೆ ಸ್ಟೆತೋಸ್ಕೋಪನ್ನು ಹಾಕಿಕೊಂಡು, ಎದುರು ಹೋದರೆ ಸುಮಾರುಪಾಲು ಮಕ್ಕಳು ಕಿಠಾರಂತ ಅರಚಿಕೊಳ್ಳುತ್ತವೆ. ಆದರೆ ಕೆಲವು ಮಕ್ಕಳು, ಅದೇ ವಯಸ್ಸಿನ ಮಕ್ಕಳು, ನನ್ನೊಂದಿಗೆ ಚಕ್ಕಂದವಾಡತೊಡಗುತ್ತವೆ. ಪಮ್ಮಿ ಇಂತಹದೊಂದು ಮುದ್ದು ಮಗು. ಅಜ್ಜ ಅಜ್ಜಿಯರು ಪ್ರಮೀಳಾ ಎಂದು ಹೆಸರಿಟ್ಟಿದ್ದರೂ, ಮನೆಯವರೆಲ್ಲರೂ ಪಮ್ಮಿ ಎಂದೇ ಕರೆಯುತ್ತಿದ್ದರು. ಮೂರು ತುಂಬಿದ ಮೇಲೆ ಶಾಲೆಗೆ ಸೇರಿಸಿದಾಗ, ಪ್ರಮೀಳಾ ಎಂಬುದು ನನ್ನ ಹೆಸರು ಅಂತ ಅವಳಿಗೆ ಸರಿಯಾಗಿ ತಿಳಿದದ್ದು.

ಮದುವೆಯಾಗಿ, ಹೊಸ ಸಂಸಾರವನ್ನು ಪ್ರಮೀಳಾ ಹೂಡಿದಳು. ಅಣಿಯಾದ ಸುಸಂಸ್ಕೃತ ಗಂಡ. ಇಬ್ಬರೂ ದವಾಖಾನೆಗೆ ಬಂದು, ಅನುಕೂಲವಾದ ಒಂದು ಸಂಜೆ ಅವರ ಮನೆಗೆ ಟೀಗೆ ಬರಬೇಕೆಂದೂ, ರಾಹುಕಾಲವು ಆರಂಭವಾಗುವ ಮೊದಲೇ ಬರುತ್ತೀನಿ. ಮರೆತುಬಿಟ್ಟು ಹರೆಯದ ಹುಮ್ಮಸ್ಸಿನಲ್ಲಿ ಸಿನಿಮಾಕ್ಕೆ ಹೋಗಿಬಿಡಬೇಡಿ, ಎಂದು ಎಚ್ಚರಿಸಿ, ನಾನು ಒಪ್ಪಿಕೊಂಡೆ. ಹೋದೆ; ಭಾನುವಾರ ನಾಲ್ಕರ ವೇಳೆಗೆ. ಲಘುಫಲಾಹಾರವನ್ನು ನೀಡಿದರು. ಇನ್ನೆರಡು ದಿನ ಪೂರ್ಣ ಉಪವಾಸವನ್ನು ಮಾಡಿದರೂ, ತಡೆದುಕೊಳ್ಳಬಹುದು ಎನ್ನುವಷ್ಟು, ಇಬ್ಬರೂ ಆದರದಿಂದ ಗಿಡುಗಿದರು. ರುಚಿರುಚಿಯಾಗಿದ್ದುದರಿಂದ, ಮುದುಕನ ಚಪಲವೂ ಅತಿಯಾಗುವುದರಿಂದ, ಕಬಳಿಸಿದೆ ; ನಂತರ ಯೋಗಕ್ಷೇಮದ ಮಾತುಗಳು.

'ಪಮ್ಮಿ ! ಇನ್ನು ಮೇಲೆ ಹಾಡು ಹಸೆ, ಗಮಕ ಕಲೆ ಎಲ್ಲವೂ ಮುಗಿದಂತೆಯೇನೇ?' ಎಂದು ಕೇಳಿದೆ. ಕನ್ನಡ ಗೀತೆಗಳನ್ನು ಇಂಪಾಗಿ ಮತ್ತು ಭಾವಪೂರ್ಣವಾಗಿ ಪಮ್ಮಿ ಹಾಡುತ್ತಿದ್ದಳು. ಮದುವೆಯಾದಮೇಲೆ ಇತರ ಆತುರಗಳು. ಮನೆಗೆಲಸಗಳೂ ತುಂಬಿಕೊಂಡು ಬರುತ್ತವಲ್ಲ. ಹಾಡು ಹಸೆಗಳಿಗೆ ವ್ಯವಧಾನವಿರುತ್ತದೆಯೇ ? ಆದುದರಿಂದ ಹಾಗೆ ಕೇಳಿದೆ.

‘ಇನ್ನು ಮೇಲೆ ಇವರ ಕುಣಿತಕ್ಕೆ ತಕ್ಕ ಹಾಗೆ ನಾನು ಹಾಡಬೇಕು. ಅಂದ ಮೇಲೆ ಮುಂದೆ ಹೇಗೆ ಎಂದು ಹೇಳಲಿ ಮಾಮ’ ಎಂದಳು ಪ್ರಮೀಳಾದೇವಿ ; ತುಂಟ ನಗುವನ್ನು ಗಂಡನತ್ತ ಮೀಂಟುತ್ತಾ.

‘ಮುಂದೆ ಹೇಗಾದರೂ ಆಗಲಿ, ಈಗ ಒಂದು ಗೀತವನ್ನು ಹಾಡಮ್ಮ’ ಎಂದೆ.

ಪ್ರಮೀಳನಿಗೆ ಕಂಠಶ್ರೀ ಇದೆ. ಶಾರೀರಕ್ಕೆ ತಕ್ಕ ಸೊಬಗಿನ ಶರೀರ. ಇಪ್ಪತ್ತರ ಪ್ರಾಯದ ಕಳೆಯು ಮುಖಕ್ಕೆ ಚೆಲುವನ್ನು ಮಸ್ತು ಮೂಡಿಸಿತ್ತು.

ಕಲ್ಮಶದ ವಲ್ಮೀಕವೆಂದೊಡಲ ಜರೆಯದಿರು
ಬ್ರಹ್ಮಪುರಿಯೆಂದದನು ಋಷಿಗಳೊರೆದಿಹರು
ಹಮ್ಮುಳ್ಳ ಹಯವ ಕಾಪಿಟ್ಟು ಕಡಿವಣ ತೊಡಿಸೆ
ನಮ್ಮ ಗುರಿ ಗೈದಿಪುದು–ಮಂಕುತಿಮ್ಮ

ಎಂಬ ಸುಪ್ರಸಿದ್ಧ ಗೀತೆಯೊಂದನ್ನು ಪಮ್ಮಿ ಬಲು ಭಾವಪೂರ್ಣವಾಗಿ ಹಾಡಿದಳು. ನೆಮ್ಮದಿಯಿಂದ ತುಂಬು ಬಾಳನ್ನು ನಡೆಸಿ ಎಂದು ಹರಸಿ, ಹೊರಬಂದೆ, ಅವರ ಮನೆಯಿಂದ.

ಪಮ್ಮಿ ಹಾಡಿದ ಗೀತವನ್ನು ಎಷ್ಟೋ ಬಾರಿ ಕೇಳಿದ್ದೆ. ಅದು ನನಗೆ ಕಂಠ ಗತವಾಗಿತ್ತು. ಆದರೆ ಈ ಸಂಜೆ ಪಮ್ಮಿ ಹಾಡಿದ್ದು ನನ್ನ ಮನಸ್ಸಿಗೆ ನಾಟಿತು. ಸಂಗೀತ ಲಾಲಿತ್ಯಕ್ಕಿಂತಲೂ ಸಾಹಿತ್ಯವು ಕಾಡಲಾರಂಭಿಸಿತು. ಒಡಲಿನಲ್ಲಿ ಕಲ್ಮಶವು ಇರುವುದು ಎಲ್ಲರಿಗೂ ತಿಳಿದ ವಿಷಯ. ಅದರ ಸುತ್ತಲೂ ದೇಹವು ಹುತ್ತ ಎಂದರೆ ವಲ್ಮೀಕದಂತೆ ಬೆಳೆದಿದೆ. ಆದರೆ ಅದನ್ನು ಜರೆಯಬೇಕೇಕೆ? ಪಮ್ಮಿಯನ್ನು ಕಂಡರೆ ಸಂತಸವುಂಟಾಗುತ್ತದೆ. ತಿರುಗಿ ತಿರುಗಿ ನೋಡಬೇಕು ಎನ್ನುವ ಆಸೆಯಾಗುತ್ತದೆ. ಇಂತಹ ಸುಂದರ ದೇಹವನ್ನು ಜರೆಯದಿರು ಎಂದನ್ನಲು ಕಾರಣವೇನು? ಹಿರಿಯರು ಹಲವರು ಒಡಲನ್ನು ನಿಕೃಷ್ಟವಾಗಿ ಕಂಡಿರಬೇಕು. ಆದುದರಿಂದ, ದೃಷ್ಟಾರರಾದ ಡಿ.ವಿ.ಜಿ.ಯವರು ‘ಒಡಲನ್ನು ಜರೆಯಬೇಡಿ’ ಎಂದು ಒತ್ತಿ ಹೇಳಿದ್ದಾರೆ.

ಒಡಲನ್ನು ಆರೋಗ್ಯವಾಗಿರುವಂತೆ ಕಾಪಾಡಿಕೊಂಡು ಬಂದರೆ, ಮನಸ್ಸಿನ ಆರೋಗ್ಯವೂ ಸ್ವಸ್ಥವಾಗಿರುತ್ತದೆ ಎಂದು, ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ರೋಂ ಸಾಮ್ರಾಜ್ಯದ ಮನಸಿಗರು ನಾಣ್ನುಡಿಯನ್ನು ಕಟ್ಟಿದರು. Mens sane in corpore sano. ಆರೋಗ್ಯವಾದ ದೇಹವಿದ್ದರೆ ಮನಸ್ಸೂ ಆರೋಗ್ಯವಾಗಿರುತ್ತದೆ. ಎಂಬ ಲ್ಯಾಟಿನ್ ನಾಣ್ನುಡಿ. ಅನುಭವ ಹೇಳಲ್ಪಟ್ಟ ನಾಣ್ನುಡಿಯು

ಸತ್ಯವಾಗಲೇಬೇಕು? ಸತ್ಯವಲ್ಲವೇನೋ ಎಂಬ ಸಂದೇಹವುಂಟಾಗುತ್ತದೆ. ಮತ್ತೆ ಯಾಕೆ ರೋಂಇನ ಮನಸಿಗರು ಹಾಗಂದರು?

ರೋಮನ್ ಸಾಮ್ರಾಜ್ಯವು ಆ ಕಾಲದಲ್ಲಿ ಸಂಪದ್ಭರಿತವಾಗಿತ್ತು. ರೋಂನಗರ ವನಕ ಭೋಗ ಜೀವನಕ್ಕೆ ಸುಖ ಲೋಲಾಪ್ತಿಗಳಿಗೆ ಎಲ್ಲ ತೆರನ ಅವಕಾಶಗಳನ್ನೂ ಒದಗಿಸುತ್ತಿತ್ತು ; ಅಲ್ಪಸಂಖ್ಯಾತರಾದ ಶ್ರೀಮಂತ ಕುಟುಂಬದವರು ಆಡಿದ್ದೇ ಆಟ. ಬಹುಸಂಖ್ಯಾತರಾದ ಇತರರು ಇಂತಹ ಶ್ರೀಮಂತರ ಜೀತದಾಳುಗಳು ಅಥವಾ ಗುಲಾಮರು. ತಲತಲಾಂತರದಿಂದಲೂ ಗುಲಾಮರಾಗಿಯೇ ಇರಬೇಕಾಗಿದ್ದವರು. ಸಾಮಾಜಿಕವಾಗಿ ಈ ವ್ಯವಸ್ಥೆಯು ಇದ್ದರೂ, ಗಂಡು ಹೆಣ್ಣು ಎಂಬ ಎರಡೇ ವ್ಯತ್ಯಾಸವು ಬಾಳಿನಲ್ಲಿ ಗುರುತಿಸಲ್ಪಡುತ್ತಿತ್ತು. ಹೀಗಾಗಿ ಗುಲಾಮ ಹೆಣ್ಣುಗಳು, ಶ್ರೀಮಂತರ ಆಟಕ್ಕೆ ಮತ್ತು ಕೂಟಕ್ಕೆ ಸಿದ್ಧವಾಗಿರಬೇಕಾಗಿತ್ತು. ಈ ರೀತಿಯಲ್ಲಿ ಗುಪ್ತ ವ್ಯಾಧಿಗಳು ಎಲ್ಲರಲ್ಲೂ ಸರಿಸಮಾನತೆಯಿಂದ ಹರಡಲು ಅನುಕೂಲವಾಗಿತ್ತು. ಸಿಫಿಲಿಸ್ ಎಂಬ ರತಿ ವ್ಯಾಧಿಯು ಸುಮಾರು ಮಂದಿಯನ್ನು ಕಾಡುತ್ತಿತ್ತು. ಆಗಿನ ಕಾಲದಲ್ಲಿ ಈ ವ್ಯಾಧಿಗೆ ಪರಿಣಾಮಕಾರಿಯಾದ ಯಾವ ಔಷಧವೂ ಇರಲಿಲ್ಲ. ವ್ಯಾಧಿಯು ಉಲ್ಬಣಿಸುತ್ತ ಹೋದಾಗ ನರಗಳು ಮತ್ತು ಮೆದುಳುಗಳನ್ನೂ ಆಕ್ರಮಿಸಿಕೊಳ್ಳುತ್ತಿತ್ತು. ಆಗ ರೋಗಿಗೆ ಪಾರ್ಶ್ವ ಮತ್ತಿತರ ವಾಯುಗಳೂ ಮತ್ತು ಉನ್ಮಾದಾವಸ್ಥೆಯೂ ಉಂಟಾಗುತ್ತಿತ್ತು. General paralysis of the insane ಎಂಬ ಈ ಬೇನೆಯು ರೋಂ ನಗರದ ಬಹಳಷ್ಟು ಮಂದಿಯಲ್ಲಿ ಕಾಣಿಸಿಕೊಂಡಿತ್ತು.

ಈ ದೃಶ್ಯವನ್ನು ಕಂಡ ಆ ಕಾಲದ ಆ ನಗರದ ಮನನಿಗರು, ಸ್ವಾಭಾವಿಕವಾಗಿ ಹೀಗೆ ತೀರ್ಮಾನಿಸಿದರು. 'ಇವರ ದೇಹವು ಕೆಟ್ಟ ಜಾಡ್ಯದಿಂದ ಮಲಿನವಾಯಿತು. ಮಲಿನಗೊಂಡ ದೇಹದಲ್ಲಿ ಸ್ವಸ್ಥ್ಯವನ್ನು ಹೊಂದಿದ ಮನಸ್ಸು ಇರಲು ಸಾಧ್ಯವಿಲ್ಲ. ಆದಕಾರಣ ದೇಹವನ್ನು ಶುಚಿಯಾಗಿರಿಸಿಕೊಂಡರೆ, ಆರೋಗ್ಯವಾಗಿ ಕಾಪಾಡಿಕೊಂಡರೆ, ಆಗ ಮನಸ್ಸು ಆರೋಗ್ಯವಾಗಿರುತ್ತದೆ, ಶುಚಿಯಾಗಿರುತ್ತದೆ' ಎಂದು. ಆಗಿನ ಕಾಲದ ಆ ದೇಶದ ಸ್ಥಿತಿಯಲ್ಲಿ ಅವರು ನುಡಿದುದು ಸತ್ಯ.

ಆದರೆ ಈಗಿನ ಕಾಲದಲ್ಲಿ; ಮಾನವ ಜ್ಞಾನ ಭಂಡಾರವು ಅತ್ಯಾಶ್ಚರ್ಯಕರವಾಗಿ ಅಭಿವೃದ್ಧಿ ಹೊಂದಿರುವಾಗ, ಆ ನಾಣ್ನುಡಿಯು ಸರಿಯಲ್ಲ, ಮುಕ್ಕಾಲು ಪಾಲು ತಪ್ಪು ಎಂಬುದು ಖಚಿತವಾಗುತ್ತದೆ. ಕೆಲವು ವರ್ತಮಾನಕಾಲದ ನಿದರ್ಶನಗಳನ್ನು ಪರಿಶೀಲಿಸೋಣ.

೧. ಹುಚ್ಚು ಬೆಪ್ಪು ಶೀವಲೀಲೆ ಇಂತಹ ಮಾನಸಿಕ ರೋಗಗಳಿಂದ ನರಳುವವರಲ್ಲಿ ಸಾಕಷ್ಟು ಪಾಲು ಜನರ ದೇಹಾರೋಗ್ಯವು ಸಮರ್ಪಕವಾಗಿಯೇ ಇರುತ್ತದೆ. ಹಲವಾರು ಹಿಸ್ಟಿರಿಯಾ ರೋಗಿಗಳು ; ಒಬ್ಸೆಷನ್ ತಗುಲಿದವರು, ಹಾಗೂ ಅತಿ ಆತಂಕದಿಂದ ನರಳುವವರು ; ಮತ್ತು ಇತರ ತೆರನ ಮಾನಸಿಕ ರೋಗಿಗಳು ; ತೋಳದಂತೆ ಶಕ್ತಿಯುತವಾದ ದೇಹವನ್ನು ಹೊಂದಿರುತ್ತಾರೆ, ಕಿರುಬಗಳಂತೆ ಧಂಡಿ ಧಂಡಿ ತಿಂದು ಅರಗಿಸಿಕೊಳ್ಳುತ್ತಾರೆ. ಮಜಭೂತಾಗಿರುವ ಅವರ ದೇಹ ಎಂಬ ದೇವಾಲಯದಲ್ಲಿ ಅಥವಾ ಬ್ರಹ್ಮಪುರಿಯಲ್ಲಿ, ಮನಸ್ಸಿನ ಭೂತಗಳು ಮತ್ತು ಪಿಶಾಚಿಗಳು ಹೇಗೆ ಸೇರಿಕೊಂಡವು? ದೇಹವು ದಾರ್ಢ್ಯವಾಗಿರುವಾಗ, ಮನಸ್ಸಿಗೆ ರೋಗಗಳು ಹೇಗೆ ಬಡಿಯಿತು? ಬ್ರಹ್ಮಪುರಿಯು ಬ್ರಹ್ಮ ರಾಕ್ಷಸನ ಆವಾಸಸ್ಥಳವಾದುದು ಹೇಗೆ? ಅದೂ, ಆರೋಗ್ಯಸ್ಥಿತಿಯಲ್ಲಿರುವಾಗ?

೨. ಮನೋದೈಹಿಕ ಬೇನೆಗಳಿಂದ ನರಳುವವರ ಸಂಖ್ಯೆಯು; ಎಲ್ಲಾ ತರಹ ರೋಗಗಳಿಂದ ನರಳುವವರ ಸಂಖ್ಯೆಯಲ್ಲಿ ಶತಾಂಶ ೭೦–೮೦ ರಷ್ಟಿದೆ ಎಂದು ಅನುಭವಸ್ಥ ವೈದ್ಯರ ಅಂದಾಜು. ಈ ತೆರನ ಬೇನೆಗಳಿಂದ ನರಳುವವರು ಹಲವಾರು ಬಾರಿ, ಕೆಲವಾರು ನುರಿತ ವೈದ್ಯರುಗಳಿಂದ ಸಂಪೂರ್ಣ ದೇಹ ಪರೀಕ್ಷೆಯನ್ನು ಮಾಡಿಸಿ ಕೊಂಡಿರುತ್ತಾರೆ. ನೂರು ನೂರು ಗಟ್ಟಲೆ ಹಣವನ್ನು ನೀರಿನಂತೆ ಖರ್ಚುಮಾಡಿ, ಹತ್ತಾರು ತೆರನಾದ ರಕ್ತ ಪರೀಕ್ಷೆ ; ಎಕ್ಸರೆ ಪರೀಕ್ಷೆ; ಇ.ಇ.ಜಿ. ಪರೀಕ್ಷೆಗಳನ್ನು ಮಾಡಿಸಿಕೊಂಡಿರುತ್ತಾರೆ. 'ದೇಹದ ಕಾರ್ಯಕ್ರಮಗಳಲ್ಲಿ ಯಾವುದೊಂದು ಕೊಂಕೂ ಇಲ್ಲ; ವಿನಾಕಾರಣ ನೀವು ನರಳುತ್ತಿದ್ದೀರಿ ; ಆತಂಕ ಪಡಬೇಡಿ' ಎಂಬ ಸಲಹೆಯನ್ನು ನಿಷ್ಣಾತ ವೈದ್ಯರುಗಳಿಂದ ಪಡೆಯುತ್ತಾರೆ. ಆದರೂ ಅವರುಗಳು ಮನೋ ದೈಹಿಕ ಬೇನೆಗಳಿಂದ ನರಳುತ್ತಲೇ ಇರುತ್ತಾರೆ. ಅಂದರೆ ದೇಹವು ಆರೋಗ್ಯವಾಗಿದ್ದರೂ, ಮಾನಸಿಕ ತಳಮಳದ ಕಾರಣಗಳಿಂದಾಗಿ, ಬೇನೆಯ ಸಂಕಟವನ್ನು ಅನುಭವಿಸುತ್ತದೆ. ಮಾನಸಿಕ ಸ್ವಾಸ್ಥ್ಯವು ಅಲ್ಲೋಲಕಲ್ಲೋಲವಾಗಿರುತ್ತದೆ. ಬ್ರಹ್ಮಪುರಿಯು ಆರೋಗ್ಯದಿಂದಿದ್ದರೆ, ಮಾನಸಿಕ ಬ್ರಹ್ಮರಾಕ್ಷಸನ ಹಾವಳಿಯು ಆಗುವುದೇಕೆ?

೩. ದೀರ್ಘ ಕಾಲದ ಕಾಯಿಲೆಗಳಿಂದ ದೇಹವು ನರಳುತ್ತಿದ್ದರೂ, ಅಂತಹ ರೋಗಿಗಳ ಮನಸ್ಸು ಸ್ವಸ್ಥವಾಗಿಯೇ ಇರುತ್ತದೆ. ಅಲ್ಲದೆ ಹಲವಾರು ರೋಗಿಗಳಲ್ಲಿ ಬಹಳ ಚುರುಕಾಗಿಯೂ ಕೆಲಸವನ್ನು ಮಾಡುತ್ತದೆ. ಉದಾಹರಣೆಗೆ Robert Louis Stevenson, ಮತ್ತು A.j. Cornin, ಇವರುಗಳು ಇಂಗ್ಲೀಷಿನಲ್ಲಿಯೂ,

ನಮ್ಮ ನಂದಳಿಕೆ ಲಕ್ಷ್ಮೀನಾರಣಪ್ಪ ಮುದ್ದು ಮುದ್ದಾಗಿ ಕನ್ನಡದ ಮುದ್ದಣನಾಗಿ ಬರೆದುದೂ; ಅವರುಗಳು ಕ್ಷಯ ರೋಗದಿಂದ ನರಳಲಾರಂಭಿಸಿದ ಮೊದಮೊದಲ ಕಾಲದಲ್ಲಿ. ನಮ್ಮ ರಾಷ್ಟ್ರದ ಮೊದಲ ರಾಷ್ಟ್ರಾಧ್ಯಕ್ಷರಾದ ಕೀರ್ತಿಶೇಷ, ಬಾಬುರಾಜೇಂದ್ರ ಪ್ರಸಾದರು ತೀವ್ರತರದ ಉಬ್ಬಸದಿಂದ ನರಳುತ್ತಿದ್ದರು. ಆದರೂ ಸಾಮಾಜಿಕ ಮತ್ತು ರಾಜಕೀಯ ಚಟುವಟಿಕೆಗಳೊಂದಿಗೆ, ಆಧ್ಯಾತ್ಮಿಕ ಪ್ರಗತಿಯನ್ನೂ ಅಮೋಘವಾಗಿ ಸಾಧಿಸಿದರು. ಭಗವದ್ಗೀತೆಗೆ ತಮ್ಮದೇ ಆದ ವಿಮರ್ಶನಾ ಟೀಕಾವನ್ನು ಬರೆದರು.

J.B.S. Haldane ಎಂಬ ಇಂಗ್ಲೆಂಡಿನ ಪ್ರಚಂಡ ವಿಜ್ಞಾನಿಯೊಬ್ಬನು, ಪಾಶ್ಚಾತ್ಯ ದೇಶಗಳಲ್ಲಿ ಲೋಕ ಪ್ರಸಿದ್ಧಿಯನ್ನು ಪಡೆದಿದ್ದ. ಆದರೆ ಆತನಿಗೆ ತೃಪ್ತಿಯು ದೊರಕಲಿಲ್ಲ. F.R.S. ಎಂಬ ಅತ್ಯಂತ ಔನ್ನತ್ಯದ ವೈಜ್ಞಾನಿಕ ಮನ್ನಣೆಯನ್ನು ಗಳಿಸಿದ್ದ. ನಮ್ಮ ಭಾರತಕ್ಕೆ ವಲಸೆಬಂದು, ಭಾರತೀಯ ಪ್ರಜೆಯಾದ. ಕರುಳಿನಲ್ಲಿ ಅವನಿಗೆ ಅರ್ಬುದ ರೋಗವು ಪ್ರಾರಂಭವಾಯಿತು. ಆ ವಿನಾಶಕಾರೀ ರೋಗವು ವೃದ್ಧಿಸಿತು. ಅದೇ ಅವನಿಗೆ ಯಮಪಾಶವನ್ನೂ ಬೀಸಿ ಎಲ್ಲಿಂದ ಬಂದಿದ್ದನೋ ಅಲ್ಲಿಗೆ ಕೊಂಡೊಯ್ದಿತು. ಆದರೆ ಕೊನೆಯುಸಿರು ಆಡುವತನಕ ಅವನ ಮನಸ್ಸು ಸ್ವಾಸ್ಥ್ಯದಿಂದಲೇ, ಚುರುಕಾಗಿ, ಜ್ಞಾನಾರ್ಜನೆಯನ್ನು ಮಾಡುತ್ತಿತ್ತು.

೪. ಮಾನಸಿಕ ರೋಗಗಳಿಂದ ಬಲು ಕಾಲ ನರಳಿ ನಿಧನರಾದವರ ಮೆದುಳನ್ನು ಬಹಳ ಸೂಕ್ಷ್ಮವಾಗಿ ಪರೀಕ್ಷೆಯನ್ನು ಮಾಡಿದಾಗ, ಮೆದುಳಿನಲ್ಲಿ ಯಾವ ವ್ಯತ್ಯಾಸವೂ ಕಾಣಬರಲಿಲ್ಲ. ಮಾನಸಿಕ ರೋಗಗಳು ಯಾವುವೂ ಕಾಣಬರದೇ, ನೆಮ್ಮದಿಯಿಂದ ಬಾಳುತ್ತಿದ್ದವರು, ಅಕಸ್ಮಾತ್ ಸತ್ತಾಗ, ಪೋಸ್ಟ್ ಮಾರ್ಟಂ ಅನ್ನು ಮಾಡುತ್ತಾರೆ. ಅಂತಹ ಸಂದರ್ಭಗಳಲ್ಲಿ ಯಾವ ಪೆಟ್ಟೂ ತಲೆಗೆ ತಗುಲಿರದ ಕೆಲವರ ಮೆದುಳು ಬಹುಪಾಲು ಅವ್ಯವಸ್ಥಿತವಾಗಿರುತ್ತದೆ. ಸುಮಾರು ಕಾಲದಿಂದಲೂ ಹಾಗೆ ರೋಗ ಪೀಡಿತವಾಗಿತ್ತು ಎನ್ನುವುದಕ್ಕೂ ಪುರಾವೆಗಳು ದೊರೆಯುತ್ತವೆ.

ಅಂದರೆ ಮೆದುಳಿನ ಅವ್ಯವಸ್ಥೆಗೂ ಮಾನಸಿಕ ಬೇನೆಗಳಿಗೂ ಸಂಬಂಧವನ್ನು ಕಲ್ಪಿಸುವಂತಿಲ್ಲ. ಆಜನ್ಮಸಿದ್ಧವಾದ ಹಲವು ಮಾನಸಿಕ ವಿಪರೀತದ ಕಾಯಿಲೆಗಳಲ್ಲಿ ಮೆದುಳಿನ ರಚನೆ ಮತ್ತು ಅಭಿವೃದ್ಧಿಯಲ್ಲಿ ಸಾಕಷ್ಟು ಲೋಪದೋಷಗಳನ್ನು ಕಾಣಬಹುದು. ಆದರೆ ಬಹಳಷ್ಟು ಮಾನಸಿಕ ಬೇನೆಯಿಂದ ನರಳುವವರ, ಮೆದುಳು ಚೆನ್ನಾಗಿರುತ್ತದೆ.

ಈ ಎಲ್ಲ ಕಾರಣಗಳಿಂದ ಇಂದಿನ ವೈಜ್ಞಾನಿಕ ಪ್ರಗತಿಯ ಹಂತದಲ್ಲಿ ಮನಸ್ಸು ಆರೋಗ್ಯವಾಗಿದ್ದರೆ, ದೇಹವೂ ಆರೋಗ್ಯವಾಗಿರುತ್ತದೆ ಎನ್ನುವ ದಾರ್ಢ್ಯವನ್ನು ಹೊಂದಬಹುದು.

ಇಂತಹ ವೈಜ್ಞಾನಿಕ ಕಾರಣಗಳಂತಿರಲಿ, ಸುತ್ತಲೂ ಕಣ್ಣು ಬಿಟ್ಟು ನೋಡಿದರೆ ಬೇಕಾದಷ್ಟು ನಿದರ್ಶನಗಳು ದೊರೆಯುತ್ತವೆ. ಮಹಾತ್ಮಾ ಗಾಂಧೀಯವರ ದೇಹದಾರ್ಢ್ಯವು ಅಂತಹ ಹೇಳಿಕೊಳ್ಳುವಂತೇನೂ ಇರಲಿಲ್ಲ. ಕೀರ್ತಿಶೇಷ ಕೈಲಾಸಂ ಒಮ್ಮೆ ನಗೆಯಾಡಿದಂತೆ, ಯಮಕೆ ಗಾಂಧೀ. ಆದರೆ ಅಂತಹ ಬಡಕಲು ದೇಹದಲ್ಲಿ, ಶಿಸ್ತು ಸಂಯಮಗಳಿಂದ ಸಿದ್ಧಗೊಳಿಸಲ್ಪಟ್ಟ ಮನಸ್ಸು, ಏನೇನೆಲ್ಲವನ್ನೂ ನಮ್ಮ ಜನತೆಗೆ ಸಾಧಿಸಿಕೊಟ್ಟಿತು ! ದೃಢವಾದ ಮನಸ್ಸು ಇದ್ದುದರಿಂದಲೇ ಹಲವಾರು ಬಾರಿ ಕೈಗೊಂಡ ಕಠಿಣ ಉಪವಾಸಗಳನ್ನು ಅವರ ದೇಹವು ತಡೆದುಕೊಂಡಿತು. ಅವರಂತೆಯೇ ಶಿಸ್ತು ಸಂಯಮಗಳಿಂದ, ಯಮ, ನಿಯಮ, ಆಸನ, ಪ್ರಾಣಾಯಾಮ, ಧಾರಣ ಮತ್ತು ಧ್ಯಾನಗಳಿಂದ ಮನಸ್ಸನ್ನು ಹದಗೊಳಿಸಿದ ಆಚಾರ್ಯ ವಿನೋಬಾಜೀಯುವರ ಸಣಕಲ ದೇಹವು ಲಕ್ಷಾಂತರ ಕಿಲೋಮೀಟರುಗಳ ಪಾದಯಾತ್ರೆಯನ್ನು ಮಾಡಿತು.

ದೇಹ ಮತ್ತು ಮನಸ್ಸುಗಳ ಪರಸ್ಪರ ಸಂಬಂಧದಲ್ಲಿ, ಇಂದಿನ ಮಾನವನ ಪ್ರಗತಿ ಹೊಂದಿದ ಮನಸ್ಸು ಹೆಚ್ಚು ಹೊಣೆಯನ್ನು ಹೊಂದಿದೆ.

ಮನುಷ್ಯನು ಸಂಘಜೀವಿ. ಅವನು ಸುರಕ್ಷಿತವಾಗಿರಬೇಕಾಗಿದ್ದರೆ, ಅವನಿರುವ ಸಮಾಜವೂ ಸುಭದ್ರವಾಗಿರಬೇಕು. ಸಮಾಜದ ಸುಭದ್ರತೆಗೆ ಅವನೂ ಹೊಣೆಯನ್ನು ಹೊರಬೇಕು. ಸುಭದ್ರವಾಗಿರಬೇಕಾದರೆ ಅಂತಹ ಸಮಾಜವು ಹಲವಾರು ನಿಯಮಗಳನ್ನೂ ಕಟ್ಟುಪಾಡುಗಳನ್ನೂ ವಿಧಿಸಬೇಕು. ಇವುಗಳಿಗನುಗುಣವಾಗಿ ಸಭ್ಯ ರೀತಿಯಲ್ಲಿ ವ್ಯಕ್ತಿಯು ನಡೆದುಕೊಳ್ಳಬೇಕು. ಸಭ್ಯ ನಡವಳಿಕೆಯನ್ನು ಸಹಜವಾಗಿ ನಡಸಬೇಕಾದರೆ, ವ್ಯಕ್ತಿಗೆ ಸತ್ ಇಂದ ಪ್ರಭಾವಿತವಾದ ಚಿತ್ತವು, ಅಂದರೆ ಸಂಯಮದಿಂದ ನಡೆಸಿಕೊಂಡ ಮನಸ್ಸು ಅಣಿಯಾಗಬೇಕು. ದಾಸವರ್ಯರ 'ಸತ್‌ಚಿತ್ತದಿ ನಡೆದರೆ ಅದೆ ಮಡಿಯು' ಎಂಬ ವಾಕ್ಯದ ಪೂರ್ಣಾರ್ಥವು ಇದು.

ದೇಹ ಮತ್ತು ಮನಸ್ಸಿನ ಪರಸ್ಪರವಾದ ಹಾಗೂ ನಿಕಟವಾದ ಸಂಬಂಧದಲ್ಲಿ; ಇಂದಿನ ಮಾನವನ ಪ್ರಗತಿಯ ಹಂತದಲ್ಲಿ ಮನಸ್ಸಿನ ಪಾತ್ರವು ಹಿರಿದಾದುದು ಎಂದು ತಿಳಿದೆವು. ದೇಹಾರೋಗ್ಯವನ್ನು ಕಾಪಾಡಿಕೊಳ್ಳುವಾಗ, ಅಥವಾ ಸಾಧಿಸುವಾಗ, ಮನಸ್ಸಿನ ಆರೋಗ್ಯಸ್ಥಿತಿಯನ್ನು ಬಲು ಜಾಗ್ರತೆಯಿಂದ ಕಾಪಾಡಿಕೊಳ್ಳಬೇಕು. ಯಶಸ್ವಿಯಾಗಿ ಹಾಗೆ ಸಾಧಿಸಬೇಕಾದರೆ, ಮನಸ್ಸಿನ

ಸ್ವರೂಪವನ್ನೂ ವಿಧವಿಧವಾದ ಅದರ ಚಟುವಟಿಕೆಗಳನ್ನೂ ಹಾಗೂ ಅವ್ಯವಸ್ಥಿತವಾಗಲು ಕಾರಣಗಳನ್ನೂ ತಿಳಿದುಕೊಳ್ಳಬೇಕು. ಅನಂತರ ಮಾನಸಿಕ ಸ್ವಾಸ್ಥ್ಯವನ್ನು ಸಾಧಿಸಿಕೊಳ್ಳುವುದು ಸುಲಭವಾಗುತ್ತದೆ.

* * * *

# ೨. ಮನಸ್ಸಿನ ಸ್ವರೂಪ

ಮನಸ್ಸು ಎಂದರೇನು ? ಯಾವುದರ ನೆರವಿನಿಂದ ನಾವು ಆಲೋಚಿಸುತ್ತೇವೆಯೋ ಅದನ್ನು ಮನಸ್ಸು ಎನ್ನಬೇಕು. ಆಲೋಚನೆಗಳು ಎಂದರೆ ಏನು ? ಮನಸ್ಸಿನಲ್ಲಿ ತೋರಿಬರುವ ವಿಶೇಷಗಳು ಎನ್ನಬೇಕು. ಒಂದು ಪ್ರಶ್ನೆಯನ್ನು ಬಿಡಿಸಲಾಗದೆ ಇನ್ನೊಂದು ಪ್ರಶ್ನೆಯಿಂದ ಉತ್ತರಿಸಿದಂತಾಯಿತು. ಆದುದರಿಂದಲೇ ಅಮೆರಿಕಾದ ಸುಪ್ರಸಿದ್ಧ ಮನನಿಗ–ನಗೆಗಾರ Ambrose Bierce ತನ್ನ Devil's Dictionary ಯಲ್ಲಿ ಮನಸ್ಸನ್ನು ಈ ರೀತಿ ವರ್ಣಿಸಿದ್ದಾರೆ. Mind:- The thing with which we think; we think. ಮನಸ್ಸು ಎಂಬುದರ ಸಮಸ್ಯೆಯನ್ನು ಈ ವಾಕ್ಯವು ಎತ್ತಿ ತೋರಿಸುತ್ತದೆ. ಇಂತಹ ಸಮಸ್ಯೆಗಳನ್ನು ಬಿಡಿಸುವ ಗೋಜು ವೇದಾಂತಿಗಳದು. ನಮ್ಮ ಮನಸ್ಸು ಸ್ವಸ್ಥವಾಗಿರಬೇಕು ; ಆ ಕಾರಣದಿಂದ ಮನಸ್ಸು ಎನ್ನುವುದನ್ನು ಯೋಚಿಸುವ ಹಾಗೂ ಸ್ಮರಣೆಯಲ್ಲಿಟ್ಟುಕೊಳ್ಳುವ, ಒಂದು ತೆರನ ಶಕ್ತಿ ಎಂದು ಹೇಳಬಹುದು. ನಮ್ಮ ದಿನದಿನದ ಅನುಭವಕ್ಕೆ ಈ ವಿವರಣೆಯು ಹೊಂದಿಕೊಳ್ಳುತ್ತದೆ.

ಒಂದು ಉದಾಹರಣೆಯಿಂದ ಮನಸ್ಸಿನ ಹಲವಾರು ತೆರನ ಚಟುವಟಿಕೆಗಳನ್ನು ತಿಳಿಯುವ :

ಬೇಸಿಗೆಯ ರಜದಲ್ಲಿ ನನ್ನ ಅಜ್ಜಯ್ಯನನ್ನು ನೋಡಿಕೊಂಡು ಬರಲು ಹಳ್ಳಿಗೆ ಹೋದೆ. ಅಜ್ಜಯ್ಯನನ್ನು ನೋಡಿಕೊಂಡು ಬರುವುದು ಒಂದು ಆಸೆ. ಆಸೆಯೇ ಯೋಚನೆಯಾಯಿತು. ಈ ಯೋಚನೆಯನ್ನು ಕಾರ್ಯಗತ ಮಾಡಲು ಸಿದ್ಧತೆಗಳನ್ನು ಮಾಡಿಕೊಳ್ಳಬೇಕು. ಅಂದರೆ ಒಂದರಿಂದ ಇನ್ನೊಂದು ಸಂಬಂಧವನ್ನು ಹೊಂದುವಂತೆ ಯೋಚನೆಗಳನ್ನು ಮಾಡಬೇಕು. ಇಂತಹ ರೈಲಿನಲ್ಲಿ ಇಷ್ಟು ಹೊತ್ತಿಗೆ ಹೊರಟರೆ, ಅಜ್ಜಯ್ಯನ ಹಳ್ಳಿಯ ಹತ್ತಿರ ಇರುವ ಸ್ಟೇಷನ್ನಿಗೆ ತಲಪುತ್ತೇನೆ. ಅಲ್ಲಿಂದ ನಾಲ್ಕು ಕಿಲೋಮೀಟರ್ ದೂರದಲ್ಲಿರುವ ಹಳ್ಳಿಗೆ ನಡೆಯಬೇಕು. ಹಳ್ಳಿಯ ಕಡೆಯ ರಸ್ತೆಗಳು ; ಅಂದರೆ ರಸ್ತೆಗಳೇ ಇಲ್ಲ. ಚಪ್ಪಲಿಗಳನ್ನು ಮೆಟ್ಟಿಕೊಂಡು ಅಷ್ಟು ದೂರ ನಡೆದು ಅಭ್ಯಾಸವಿಲ್ಲ. ಬರೀ ಕಾಲುಗಳಲ್ಲಿ ನಡೆಯುವುದನಕ ಅಸಾಧ್ಯ. ಆದ್ದರಿಂದ ಷೂಗಳನ್ನು ಹಾಕಿಕೊಂಡು

ಹೋಗಬೇಕು. ಅಲ್ಲಿ ಒಂದು ವಾರ ಇರುವ ಏರ್ಪಾಡು. ಹಳ್ಳಿಯಲ್ಲಿ ಲಾಂಡ್ರಿ ಇರುವುದಿಲ್ಲ. ಆದಕಾರಣ ವಾರಕ್ಕೆ ಅಗತ್ಯವಾದಷ್ಟು ಬಟ್ಟೆಗಳನ್ನು ತೆಗೆದುಕೊಂಡು ಹೋಗಬೇಕು. ಇದೂ ಮಿತಿಯಲ್ಲಿರಬೇಕು. ಏಕೆಂದರೆ ಸೂಟ್‌ಕೇಸನ್ನು ನಾನೇ ಹೊತ್ತುಕೊಂಡು ನಡೆಯಬೇಕು. ಹೀಗೆಲ್ಲಾ ವಿವರವಾಗಿ ಯೋಚಿಸಿ ಸಾಮಾನುಗಳ ಪಟ್ಟಿಯನ್ನು ಬರೆದಿಡುತ್ತೇನೆ.

ಅಂದರೆ ನನ್ನ ಮನಸ್ಸು ; ನನ್ನ ಪ್ರಮಾಣದ, ನನ್ನ ರಜೆಯ ಅವಧಿಯ, ಎಲ್ಲಾ ಯೋಚನೆಗಳನ್ನೂ ನಿಖರವಾಗಿ ಮಾಡಿತು. 'ನಿನ್ನ ಆಸೆ ಆಕಾಂಕ್ಷೆಯು ಸಫಲವಾಗಬೇಕಾದರೆ ಹೀಗೆ ಹೀಗೆ ಮಾಡು ಎಂದು ನಿರ್ಧರಿಸಿತು. ಅನುಕೂಲಗಳನ್ನು ಮತ್ತು ಪ್ರತಿಕೂಲಗಳನ್ನು ತುಲನಾತ್ಮಕವಾಗಿ ಯೋಚಿಸುವುದು ಮನಸ್ಸಿನ ಒಂದು ಕಾರ್ಯ. ಅನಂತರ ನಿರ್ಧಾರವನ್ನು ಕೈಗೊಳ್ಳುವುದು ಇನ್ನೊಂದು ಕಾರ್ಯ.

ಅಜ್ಜಯ್ಯನ ಮನೆಗೆ ಹೋದೆ. ಎಂಭತ್ತಾರರ ಪ್ರಾಯ ಅಜ್ಜಯ್ಯನಿಗೆ. ಆದರೂ ನನ್ನ ಗುರುತನ್ನು, ಹತ್ತು ವರ್ಷಗಳ ನಂತರ, ಸುಲಭವಾಗಿ ಹಿಡಿದು, ಯೋಗಕ್ಷೇಮವನ್ನು ವಿಚಾರಿಸಿದರು. ನನ್ನ ತಂದೆ, ತಾಯಿ, ಅಣ್ಣ ತಮ್ಮಂದಿರು, ಅಕ್ಕ ತಂಗಿಯರು, ಎಲ್ಲರ ಹೆಸರುಗಳನ್ನು ಹೇಳಿ, ಈಗ ಏನು ಮಾಡಿಕೊಂಡಿದ್ದಾರೆ, ಎಷ್ಟು ಜನ ಮಕ್ಕಳು, ಇತ್ಯಾದಿ ಯೋಗಕ್ಷೇಮವನ್ನು ಕೇಳಿದರು. ಮುಪ್ಪಿನ ಮುದುಕರಾದರೂ ಎಲ್ಲರ ಹೆಸರುಗಳನ್ನೂ ನೆನಪಿನಲ್ಲಿಟ್ಟುಕೊಂಡಿದ್ದಾರಲ್ಲಾ ಎಂದು ಆಶ್ಚರ್ಯವಾಯಿತು.

ಆದರೆ ಮುಂದಿನ ಹತ್ತು ನಿಮಿಷಗಳಲ್ಲಿ ಕೇಳಿದ್ದನ್ನೇ ಕೇಳಿದರು. ಗೆರೆ ತಪ್ಪಿದ ಗ್ರಾಮೋಫೋನ್ ರಿಕಾರ್ಡು, ಬಂದನೋ, ಬಂದನೋ, ಬಂದನೋ ಅಂತ ಕಿಸುಬಾಯಿದಾಸನ ತರಹ ಹೊಡೆದುಕೊಳ್ಳುವುದಿಲ್ಲವೇ, ಅದರಂತೆಯೇ ಅಜ್ಜಯ್ಯನೂ ಕೇಳಿದ್ದನ್ನೇ ಕೇಳಲಾರಂಭಿಸಿದ. ಪುನಃ ಪುನಃ ಕೇಳಿದ. ಹಿಂದೆ ಎಂದೋ ನಡೆದಿದ್ದ ವಿಷಯಗಳ ನೆನಪು ಅಜ್ಜಯ್ಯನ ಮನಸ್ಸಿನಲ್ಲಿ ಹಚ್ಚ ಹಸುರಾಗಿ ಉಳಿದಿದೆ. ಆದರೆ ಈಗ ತಾನೇ ಪ್ರಶ್ನೆಯನ್ನು ಕೇಳಿದೆ ಎಂಬ ನೆನಪು ಉಳಿದೇ ಇಲ್ಲ. ಎಂದನಿಸಿತು.

ಸ್ಮರಣೆಯಲ್ಲಿಟ್ಟುಕೊಳ್ಳುವುದು ; ಅಗತ್ಯ ಬಿದ್ದಾಗ ನೆನಪಿಗೆ ತಂದುಕೊಂಡು ಉಪಯೋಗಿಸಿಕೊಳ್ಳುವುದೂ ಮನಸ್ಸಿನ ಮುಖ್ಯ ಕಾರ್ಯಗಳಲ್ಲಿ ಒಂದು.

* * * * *

'ಭೃಂಗದಾ ಬೆನ್ನೇರಿ ಬಂತು. ಕಲ್ಪನಾ ವಿಲಾಸ' ಎಂದು ಕವಿ ಬೇಂದ್ರೆ ಹಾಡಿದರು. ಕವಿಯ ಮನಸ್ಸಿನ ಕಲ್ಪನೆಯು ಹಾಡಾಗಿ ಹೊರ ಹೊಮ್ಮುವಾಗ ಮಧುವನ್ನರಸುವ ದುಂಬಿಯ ಝೇಂಕಾರದಂತೆ ಮೂಡಿಬರುತ್ತದೆಯಂತೆ. ಎಷ್ಟು ಚೆನ್ನಾಗಿ ನುಡಿದಿದ್ದಾರೆ ಅನ್ನಿಸುತ್ತೆ ನಿಮಗೆ. ಅಯ್ಯೋ ! ಈ ತೆರನಾಗಿ ನಾವು ಹಾಡನ್ನು ಏಕೆ ಕಟ್ಟಬಾರದು ? ಅಂತಹ ಯೋಗ್ಯತೆಯು ನಮಗೇಕೆ ಬರಲಿಲ್ಲ ಎಂದು ತುಸು ವ್ಯಸನವೂ ಆಗುವುದು. ತುಂಬಾ ವಿಚಾರವನ್ನು ನಡೆಸಿದ ನಂತರ ಬೇಂದ್ರೆಯವರ ಮನಸ್ಸಿನಲ್ಲಿ ಈ ನುಡಿಗಳು ಮೂಡಲಿಲ್ಲ ಭಾವನೆಯು – Emotions – ಅವರ ಅಂತಃಕರಣವನ್ನು ತುಂಬಿಕೊಂಡಿತು. ಕಡೆದ ಮೊಸರಲ್ಲಿ ಬೆಣ್ಣೆಯು ತೇಲಿ ಬರುವಂತೆ, ಭಾವನಾ ಮನಸ್ಸಿನಿಂದ ಈ ನುಡಿಗಳು ತಾವಾಗಿ ತಾವೇ ಮೂಡಿಬಂದುವು. ಮನಸ್ಸಿನ ಚಟುವಟಿಕೆಗಳಲ್ಲಿ ಭಾವ ರಾಗ ದ್ವೇಷಾದಿಗಳೂ ಪಾತ್ರವನ್ನು ವಹಿಸುತ್ತವೆ. ಮನಸ್ಸಿನ ಈ ಗುಣವನ್ನು ಸ್ಫೂರ್ತಿ ಎಂದೆನ್ನುತ್ತಾರೆ. ತನ್ನ ಇಷ್ಟದಂತೆ ಮೂಡಿ ಬರುವ, ನಮ್ಮ ಇಷ್ಟದಂತೆ ನಡೆಯದೇ ಇರುವ, ಸ್ಫೂರ್ತಿಯೂ ಮನಸ್ಸಿನ ಒಂದು ಪ್ರದರ್ಶನ. ಕೆಲವೇ ಮಂದಿಗೆ ಲಭಿಸುವ, ಗುಣ.

ನ್ಯೂಟನ್ನನ ಕತೆಯನ್ನು ಎಲ್ಲರೂ ಕೇಳಿದ್ದಾರೆ. ಸೇಬಿನ ಮರದ ಕೆಳಗೆ ಅವಕುಳಿತಿದ್ದ, ಅಥವಾ ನೆರಳಿನಲ್ಲಿ ಮಲಗಿದ್ದರೂ ಇರಬಹುದು. ಅಥವಾ ಅನತಿ ದೂರದಲ್ಲಿ ನಿಂತೋ ನಡೆದೋ ಇದ್ದಿರಬಹುದು. ಮರದಿಂದ ಸೇಬು ಕೆಳಕ್ಕೆ, ನೆಲದ ಮೇಲೆ ಬಿತ್ತು. ಹೀಗೇನಾದರೂ ನನಗೆ ಆಗಿದ್ದಿದ್ದರೆ, ಆ ಸೇಬಿನ ಹಣ್ಣನ್ನು ತೆಗೆದುಕೊಂಡು, ಕೊಳೆತಿದೆಯೋ ಇಲ್ಲವೋ ನೋಡಿಕೊಂಡು, ತಿಂದು ಬಿಡುತ್ತಿದ್ದೆ. ಲೊಟ್ಟೆಯನ್ನು ಹೊಡೆಯುತ್ತಿದ್ದೆ. ಆದರೆ ಸರ್ ಐಸೆಕ್ ನ್ಯೂಟನ್ ಹಾಗೆ ಮಾಲಿಲ್ಲ. ಭೂಮಿಯಮೇಲಕ್ಕೆ ಮರದಿಂದ ಸೇಬಿನ ಹಣ್ಣು ಏಕೆ ಬಿತ್ತು, ಎಂದು ಅವನ ಕುತೂಹಲವು ಕೆರಳಿತು. 'ಮರವು ಹಣ್ಣನ್ನು ದೂಡಿತೇ? ಅಥವಾ ಭೂಮಿಯು ಹಣ್ಣನ್ನು ಸೆಳೆದುಕೊಂಡಿತೆ'? ಎಂದು ಅವನ ವಿಚಾರಪರ ಮನಸ್ಸು, ಕುತೂಹಲದಿಂದ ಕೆರಳಿತು. ಕುತೂಹಲವನ್ನು ನೆಮ್ಮದಿಗೊಳಿಸಲು, ಮನಸ್ಸನ್ನು ತೃಪ್ತಿಗೊಳಿಸಲು, ಅವ ಸಂಶೋಧನೆಯಲ್ಲಿ ತೊಡಗಿದ. ಗುರುತ್ವಾಕರ್ಷಣೆಯ ಸಿದ್ಧಾಂತವನ್ನು ಪ್ರಕಟಿಸಿದ. ಸೇಬಿನ ಹಣ್ಣು ಭೂಮಿಯನ್ನು ಆಕರ್ಷಿಸಿತು. ಭೂಮಿಯು ಸೇಬನ್ನು ಆಕರ್ಷಿಸಿತು. ಇದು ಪರಸ್ಪರ ಆಕರ್ಷಣೆ. ಆಕರ್ಷಣೆಯ ಪ್ರಮಾಣವು ಆಕರ್ಷಿಸುವ ವಸ್ತುವಿನ ಗಾತ್ರಕ್ಕೆ ಅನುಗುಣವಾಗಿರುತ್ತದೆ. ಭೂಮಿಯ ಗಾತ್ರವು, ಸೇಬಿನ ಹಣ್ಣಿನ ಗಾತ್ರಕ್ಕಿಂತ ಕೊಟ್ಯಂತರ ಪಾಲು ಹೆಚ್ಚು. ಆದಕಾರಣ

ಭೂಮಿಯ ಮೇಲಕ್ಕೆ ಸೇಬಿನ ಹಣ್ಣು ಬಿತ್ತು. ಇಲ್ಲದಿದ್ದರೆ ಸೇಬಿನ ಹಣ್ಣಿನ ಮೇಲೆ ಭೂಮಿಯು ಬೀಳಬೇಕಾಗುತ್ತಿತ್ತು! ಎಂದವ ಸಿದ್ಧಾಂತವನ್ನು ಮಾಡಿದ, ಗಣಿತ ಶಾಸ್ತ್ರದ ಪ್ರಕಾರ ತನ್ನ ಸಿದ್ಧಾಂತವನ್ನು ಸಮರ್ಥಿಸಿದ. ಪರಸ್ಪರ ಆಕರ್ಷಣೆಯ ಪ್ರಮಾಣವನ್ನು ಅಳತೆಮಾಡಿ ತೋರಿಸಿದ.

ಕುತೂಹಲವು ನ್ಯೂಟನ್ನನ ಮನಸ್ಸನ್ನು ದೆವ್ವದಂತೆ ಹಿಡಿದುಕೊಂಡಿತ್ತು. ಅವನ ವಿಚಾರಪರ ಮನಸ್ಸು ತಾ ಕಂಡ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯಲು, ಅತಿ ಶ್ರದ್ಧೆಯಿಂದ ತೊಡಗಿತು.

ಮನಸ್ಸಿನ ಕಾರ್ಯಕ್ರಮಗಳನ್ನು ನಡೆಸುವುದರಲ್ಲಿ, ಕುತೂಹಲವು ಒಂದು ಮುಖ್ಯ ಪ್ರೇರಕ.

ದೇಹದ ಹೊರಗಿನ ವಸ್ತು ಸ್ಥಿತಿಯನ್ನು ಇಂದ್ರಿಯಗಳ ಮೂಲಕ ಗ್ರಹಿಸಿ, ನಂತರ ವಿವೇಚಿಸಿ, ಸೂಕ್ತವಾದ ನಿರ್ಣಯಗಳನ್ನು ಮಾಡಿ ಕಾರ್ಯರೂಪಕ್ಕೆ ತರುವುದು ; ಮನಸ್ಸಿನ ಸಾಮಾನ್ಯವಾದ ಒಂದು ಚಟುವಟಿಕೆ. ಅನುಭವಿಸಿದುದನ್ನು ಸ್ಮರಣೆಯಲ್ಲಿಟ್ಟುಕೊಂಡು, ಅದರಿಂದ ಕಲಿತ ಪಾಠವನ್ನು ಅಗತ್ಯ ಬಿದ್ದಾಗ ಬಳಸಿಕೊಳ್ಳುವುದು, ಸಾಮಾನ್ಯವಾದ ಇನ್ನೊಂದು ಚಟುವಟಿಕೆ. ಅಂತಃಕರಣದಿಂದ ಭಾವನಾಪರವಶನಾದಾಗ, ಹಾಗೂ ಕೂತೂಹಲದಿಂದ ಕೆರಳಿದಾಗ, ಹಠಾತ್ತನೆ ತೇಲಿಬರುವ ಸ್ಫೂರ್ತಿಯೂ ಮನಸ್ಸಿನೊಂದು ಗುಣ. ಮನಸ್ಸಿನ ಮುಖ್ಯ ಕಾರ್ಯಗಳಲ್ಲಿ ಇವು ಮೂರನ್ನೂ ಗಮನಿಸಬೇಕು.

* * * * *

ದೇಹ ಮತ್ತು ಮನಸ್ಸು ಇವೆರಡರ ಸಮನ್ವಯವೇ ಬಾಳಿನ ಜೀವಾಳ. ದೇಹವು ಇರದಿದ್ದರೆ, ಮನಸ್ಸು ಸ್ವತಂತ್ರವಾಗಿ ಇರಲು ಸಾಧ್ಯವೇ ಹಾಗೂ ಮನಸ್ಸು ಇಲ್ಲದಿದ್ದರೆ, ದೇಹವು ಉಳಿಯಲು ಸಾಧ್ಯವೇ ? ಈಗಿನ ನಮ್ಮ ತಿಳಿವಳಿಕೆಯ ಪ್ರಕಾರ, ಎರಡರ ಒಕ್ಕೂಟವು ಸಾಧ್ಯವೇ ಹೊರತು, ಒಂದು, ಇನ್ನೊಂದನ್ನು ಬಿಟ್ಟು ಇರಲು ಸಾಧ್ಯವೇ ಇಲ್ಲ. ಅಂದಮೇಲೆ ಮನಸ್ಸು ದೇಹದ ಅಗೋಚರವಾದ ಒಂದು ಅಂಗ, ಅಥವಾ ದೇಹವು ಮನಸ್ಸಿನ ಗೋಚರವಾದ ಒಂದು ಅಂಗ, ಎಂದನ್ನಬಹುದು.

ಕಣ್ಣು, ದೇಹದಲ್ಲಿ ಕಾಣಿಸಿಸುವ ಒಂದು ಅಂಗ. ಕಿವಿಯು ಕೇಳಿಸಿಸುವ ಒಂದು ಅಂಗ. ಮೂಗು ವಾಸನೆಯನ್ನು ಅರುಹುವ ಒಂದು ಅಂಗ. ನಾಲಿಗೆಯು ಉಂಡುದರ ಸವಿ ಕಹಿಗಳನ್ನು ರುಚಿಸಿಸುವ ಒಂದು ಅಂಗ. ಸ್ಪರ್ಶಸುಖ ಅಥವಾ ದುಃಖವನ್ನು ಒದಗಿಸುವ ಚರ್ಮವು ಒಂದು ಅಂಗ. ಪಂಚೇಂದ್ರಿಯಗಳೂ

ವಿವಿಧ ತೆರನಾಗಿ, ಬಾಹ್ಯ ಪ್ರಪಂಚದ, ಅಥವಾ ನಮ್ಮ ಹೊರಗಿನ ಲೋಕದ ಸುದ್ದಿಗಳನ್ನು ನಮಗೆ ತಿಳಿಸಿಕೊಡುತ್ತವೆ. ಪಂಚೇಂದ್ರಿಯಗಳೂ ಕಳುಹಿಸಿಕೊಟ್ಟ ಸುದ್ದಿಗಳನ್ನು ಮನಸ್ಸು ಜರಡಿ ಹಿಡಿದಂತೆ, ಶೋಧಿಸಿ, ಈ ಲೋಕದ, ಈ ಜನ್ಮಕ್ಕೆ ಅಗತ್ಯವಾದವುಗಳನ್ನು ಮನಸ್ಸಿಗೆ ಮುಟ್ಟಿಸುತ್ತದೆ. ಈ ಜನ್ಮದ ಬಾಳಿಗೆ ಅಗತ್ಯವಾದ ಜಳ್ಳುಗಳನ್ನು, ಮನಸ್ಸಿನ ಆಳದಲ್ಲಿರುವ ಹಗೇವುಗಳಿಗೆ ಸಾಗಹಾಕಿ, ಮರೆ ಮಾಡಿ, ಮರೆತು ಹೋಗುವಂತೆ, ಮನಸ್ಸಿನ ಒಂದು ಹಿರಿಯಂಶವು ಅಡ್ಡಗೋಡೆಯನ್ನು ಹಾಕುತ್ತದೆ. ಸಾಕಷ್ಟು ದೃಢವಾಗಿ ಈ ಲೋಕದ, ಈ ಜನ್ಮದ ಬಾಳಿಗೆ ಅತ್ಯವಶ್ಯಕವಾದ ಕಾಳುಗಳನ್ನು, ಮನಸ್ಸಿನ ತೋರ ಹಾಗೂ ಸ್ಮರಣಾ ಭಾಗಗಳಿಗೆ ಮುಟ್ಟಿಸುತ್ತದೆ. ಜಳ್ಳು ಯಾವುದು? ಕಾಳು ಯಾವುದು? ಇವೆರಡೂ ಮನಸ್ಸಿನಲ್ಲಿ ಹುದುಗಿಕೊಂಡಿರುತ್ತವೆ. ಯಾವಾಗಲಾದರೂ ಒದ್ದು ಕೆರಳಿಸುತ್ತವೆ. ಬಾಳಿನಲ್ಲಿ ಇವೆರಡೂ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಜಳ್ಳಾಗಲೀ ಕಾಳಾಗಲೀ ಎರಡೂ ಕೂಡಿ, ಈ ಜನ್ಮದ ಮಾನವ ಬಾಳ್ವೆಯನ್ನು ನಡೆಸುತ್ತದೆ. ಈ ಜನ್ಮದ ಈ ಲೋಕದ ಬಾಳ್ವೆಗೆ ಅಗತ್ಯವಾದುದನ್ನು ಕಾಳು ಎಂದು ಮನಸ್ಸಿನ ವಿಚಾರಪರ ಭಾಗವು ನಿರ್ಣಯಿಸುತ್ತದೆ. ಅಂತೆಯೇ ಜಳ್ಳು ಎಂದು ಮಿಕ್ಕವನ್ನು ಗಣಿಸಿ ಆಳ ಮನಸ್ಸಿನ ಹಗೇವುಗಳಿಗೆ ದೂಡಿಬಿಡುತ್ತದೆ. ಜಳ್ಳು ಕಾಳು ಎಂದು ವಿಂಗಡಿಸುವಾಗ ಮನಸ್ಸು ತಪ್ಪುಮಾಡುವುದಿಲ್ಲ, ಎಂದನ್ನುವಂತಿಲ್ಲ. ತಪ್ಪು ಮಾಡುವುದುಂಟು. ಜಳ್ಳಿನಲ್ಲಿ ಕಾಳುಗಳೂ ಹಗೇವುಗಳಿಗೆ ದೂಡಲ್ಪಡಬಹುದು. ಅದೇ ರೀತಿಯಲ್ಲಿ ಜಳ್ಳು ಕೂಡ ಕಾಳುಗಳೊಂದಿಗೆ ತೋರ ಮನಸ್ಸಿಗೆ ಅಥವಾ ಸ್ಮರಣಾ ಕೇಂದ್ರಗಳಿಗೆ ರವಾನಿಸಲ್ಪಡಬಹುದು. ಈ ತೆರನ ದೋಷಗಳು ಮನಸ್ಸಿನ ಸ್ವಾಸ್ಥ್ಯವನ್ನು ಲೋಕದ ಬಾಳಿನಲ್ಲಿ ಕದಡುತ್ತವೆ. ಮಾನಸಿಕ ಬೇನೆಗಳಿಗೆ, ಮೂಲಭೂತವಾದ ಕಾರಣಗಳಾಗುತ್ತವೆ.

ಅಂದರೆ ಮನಸ್ಸಿನ ಒಂದು ಭಾಗವು ದೇಹದ ಐದು ಇಂದ್ರಿಯಗಳಂತೆ, ಆರನೆಯದೊಂದು ಅಂಗವಾಗಿದೆ ಎಂದನ್ನಬಹುದು. ಮನಸ್ಸಿನ ಮತ್ತೊಂದು ಭಾಗವು ದೇಹದಿಂದ ಪ್ರತ್ಯೇಕವಾದ, ಇನ್ನಾವುದೋ ಲೋಕದ, ಮತ್ತೆ ಯಾವುದೋ ಬಾಳಿನೊಂದಿಗೆ ಕೊಂಡಿಯನ್ನು ಹಾಕಿಕೊಂಡಿರುತ್ತದೆಯೋ ಏನೋ? ಹೌದು ಎಂದು ಸಾರಿದ್ದಾರೆ. ಎಲ್ಲ ಕಾಲದ, ಎಲ್ಲ ದೇಶದ, ಮನನಿಗರು ; ಆಳವಾಗಿ ಅಭ್ಯಾಸ ಮಾಡಿದ ಮನನಿಗರು.

ಅಂದ ಮೇಲೆ ೧. ಮನಸ್ಸು ಒಂದು ತೆರನ ಶಕ್ತಿ ; ವಸ್ತುವಲ್ಲ. ೨. ಅದರದೊಂದು ಭಾಗವು ದೇಹದೊಂದಿಗೆ ನಿಕಟ ಸಂಬಂಧವನ್ನು ಪಡೆದು,

ಪಂಚೇಂದ್ರಿಯಗಳಂತೆ, ಆರನೆಯ ಅಂಗವಾಗಿದೆ. ೩. ಮತ್ತೊಂದು ಭಾಗವು ವ್ಯಾವಹಾರಿಕ ಬಾಳಿನೊಂದಿಗೆ ನಿಕಟ ಸಂಬಂಧವನ್ನು ಹೊಂದಿರದಿದ್ದರೂ, ವ್ಯಾವಹಾರಿಕವಾದ, ನಶ್ವರವಾದ ಈ ಲೋಕದ ಬಾಳನ್ನು, ಅರಿವು ಪೂರ್ಣವಾದ ಮತ್ತಾವುದೋ ಇರುವಿಕೆಯತ್ತ ಸೆಳೆಯುತ್ತದೆ. ಈ ಮೂರು ಅಂಶಗಳನ್ನು ವಿಚಾರಪರವಾಗಿ, ವಿಜ್ಞಾನದ ರೀತಿಯಲ್ಲಿ ಒಪ್ಪಿಕೊಳ್ಳಬೇಕು.

* * * * *

ಮನಸ್ಸು ಎಂಬುದೊಂದು ಶಕ್ತಿಯು ಅಥವಾ ಚೈತನ್ಯವು ಕಾಣಿಸದೇ ಇದ್ದರೂ ದೇಹದಲ್ಲಿದೆ ಎಂದು ಒಪ್ಪಿಕೊಳ್ಳಬೇಕು. ಏಕೆಂದರೆ ಮನಸ್ಸಿನ ಚಟುವಟಿಕೆಗಳಿಂದ ಉಂಟಾಗುವ, ದೇಹದಲ್ಲಿ ಸಾಕ್ಷಾತ್ ಕಂಡುಬರುವ, ಪರಿಣಾಮಗಳು ಸಾಕ್ಷ್ಯಗಳನ್ನು ನೀಡುತ್ತವೆ. ಗಾಳಿಯು ಕಣ್ಣಿಗೆ ಕಾಣಿಸದೇ ಇದ್ದರೂ ಗಿಡಗಳ ಎಲೆಗಳು, ಹೊದ್ದುಕೊಂಡಿರುವ ಸೆರಗುಗಳು, ಹಾರಾಡುವುದನ್ನು ನೋಡಿ, ಗಾಳಿಯು ಬೀಸುತ್ತದೆ ಎಂದು ನಿಸ್ಸಂದೇಹವಾಗಿ ನಿರ್ಧರಿಸುವಂತೆ.

ನನ್ನ ಮನಸ್ಸಿನಲ್ಲಿ ಮೂಡಿದ ಯೋಚನೆಗಳನ್ನು, ಮಾತುಗಳ ಸಂಕೇತದ ಮೂಲಕ, ಬರೆಯುತ್ತೇನೆ. ಬರೆದುದು ಪ್ರಕಟವೂ ಆಗುತ್ತದೆ. ಪ್ರಕಟವಾದುದನ್ನು ಓದಬಹುದಾದ ನೀವು; ಎರಡು ಪಂಙ್ತಿಗಳನ್ನು ಓದಿ 'ತೆಗೆಯೋ, ಇವನ ಕಂತೆಯನ್ನ ; ಬಿಸಾಕೋ, ಬರಿ ಬೋರ್ ಹೊಡೀತಾನೆ' ಎಂದು ಪುಸ್ತಕವನ್ನು ಕಸದ ಬುಟ್ಟಿಗೆ ಎಸೆಯಬಹುದು. ಅಥವಾ 'ಪಾಪ ! ಏನೋ ಒದರಲಿಕ್ಕೆ ಹೊಂಟಾನ, ಏನಂತಾನ? ಓದಿ ನೋಡುವ' ಎಂದು ಮುಂದುವರಿಸಲೂಬಹುದು. ಇಂತಹ ವಿಧ ವಿಧವಾದ ಪ್ರತಿಕ್ರಿಯೆಯು ನಿಮ್ಮಲ್ಲಿ ಮೂಡಿ ಬಂದದ್ದು ; ನಿಮ್ಮ ಮನಸ್ಸಿನಿಂದ. Ambrose Bierce ಅನ ವ್ಯಾಖ್ಯಾನವನ್ನು ಕೇಳಿದ ಮೇಲೆ ಕೂಡ, ಮನಸ್ಸು ಎಂಬ ಶಕ್ತಿಯು ಅಥವಾ ಚೈತನ್ಯವು ನಿಜವಾಗಲೂ ಅಸ್ತಿತ್ವದಲ್ಲಿದೆ ಎಂದು ಒಪ್ಪಲೇ ಬೇಕು.

* * * * *

ಮನಸ್ಸು ಒಂದು ಶಕ್ತಿ, ಒಂದು ಚೈತನ್ಯ, ಒಂದು ಕ್ರಿಯಾಕಾರಣ ಪ್ರಭಾವ ಎಂದೆವು. ಕಣ್ಣುಗಳಿಗೆ ಕಾಣಿಸದಿದ್ದರೂ, ಕಿವಿಗೆ ಕೇಳಿಸದಿದ್ದರೂ ಪಂಚೇಂದ್ರಿಯಗಳಿಗೆ ನೇರವಾಗಿ ಗೋಚರವಾಗದಿದ್ದರೂ, ಮನಸ್ಸು ಅಸ್ತಿತ್ವದಲ್ಲಿದೆ ಎಂದು ತೀರ್ಮಾನಿಸಿದೆವು. ಆದರೆ ಅದು ಯಾವ ತೆರನ ಶಕ್ತಿ? ಎಂತಹ ಚೈತನ್ಯ.

ಧನುರ್ಮಾಸದಲ್ಲಿ ಬೆಳಗಿನ ಝಾಮ ಬಚ್ಚಲೊಲೆಯ ಬೆಂಕಿ ಮುಂದೆ ಕುಳಿತರೆ, ಮೈಕೈ ಹಿತವಾಗಿ ಕಾಯುತ್ತದೆ. ಆದರೆ ಒಲೆಯ ಬೆಂಕಿಯಿಂದ ನಮ್ಮ

ಮೈಯಿಗೆ ಶಾಖವು ಹರಿದು ಬರುವುದು ಕಾಣಿಸುವುದಿಲ್ಲ. ಆದರೆ ಶಾಖವು ಹರಿದು ಬಂದಿರಲೇಬೇಕು. ಶಾಖವು ಒಂದು ರೀತಿಯ ಶಕ್ತಿ.

ಕುದುರೆಯ ಲಾಳದಂತಿರುವ ಮ್ಯಾಗ್ನೆಟ್ಟನ್ನಿಟ್ಟು, ಅದರ ಮೇಲೆ ಕಾಗದವನ್ನು ಹರಡಿ, ಕಾಗದದ ಮೇಲೆ ಕಬ್ಬಿಣದ ಹುಡಿಯನ್ನು ಉದುರಿಸಿದರೆ, ಹುಡಿಯು ಒಂದು ವಿಚಿತ್ರವಾದ ರೇಖಾ ಚಿತ್ರವನ್ನು ರಚಿಸಿಕೊಳ್ಳುತ್ತದೆ. ಲಾಳವಿರುವ ಎರಡೂ ಪಕ್ಕಗಳಲ್ಲಿ ಹುಡಿಯು ರಂಗೋಲಿಯನ್ನಿಟ್ಟಂತಾಗುತ್ತದೆ. ಲಾಳದ ಎರಡು ತುದಿಗಳಲ್ಲೂ ಮೀಸೆ ಕಟ್ಟಿಕೊಳ್ಳುತ್ತದೆ. ಮ್ಯಾಗ್ನೆಟಿಕ್‌ನ ಆಯಸ್ಕಾಂತ ಶಕ್ತಿಯು ಕಬ್ಬಿಣದ ಹುಡಿಯನ್ನು ಈ ರೀತಿ ಚೆಲ್ಲಾಡಿಸುತ್ತದೆ. ಮ್ಯಾಗ್ನೆಟ್ಟಿನ ಶಕ್ತಿಯು ಒಂದು ತೆರನಾದುದು.

ಇಲೆಕ್ಟ್ರಿಕ್ ಸ್ಟವ್‌ನಲ್ಲಿ, ಸ್ವಿಚ್ ಹಾಕಿದ ಮೇಲೆ, ಕೆಂಪಗೆ ಲೋಹದ ಸುರುಳಿಗಳು ಕಾಯುತ್ತವೆ. ಉತ್ಪತ್ತಿಯಾದ ಆ ಶಾಖದಿಂದ ಅಡಿಗೆಯನ್ನು ಬೇಯಿಸಬಹುದು. ಆ ಇಲೆಕ್ಟ್ರಿಕ್ ಶಕ್ತಿಯನ್ನು ತೆಳು ತಂತಿಗಳಿರುವ ಬಲ್ಬಿನಲ್ಲಿ ಹರಿಯ ಬಿಟ್ಟರೆ, ಬೆಳಕು ಹರಡುತ್ತದೆ. ಶಾಖವನ್ನೂ ಬೆಳಕನ್ನೂ ಹಾಗೂ ಮ್ಯಾಗ್ನಟಿಕ್ ಪ್ರತಿಕ್ರಿಯೆಗಳನ್ನೂ, ಇಲೆಕ್ಟ್ರಿಸಿಟಿಯು ಸಾಧಿಸುತ್ತದೆ. ಇಲೆಕ್ಟ್ರಿಸಿಟಿಯೂ ಒಂದು ವಿಧವಾದ ಶಕ್ತಿ.

ಗುರುತ್ವಾಕರ್ಷಣೆಯೂ ಒಂದು ತೆರನ ಶಕ್ತಿ.

ಕಂತ್ರಿ ನಾಯಿಯ ಕಡೆಗೆ ಹುಡುಗನು ಕಲ್ಲನ್ನೆಸೆಯುತ್ತಾನೆ, ಅವನ ತೋಳ್ಬಲದಿಂದ ಎಸೆದ ಕಲ್ಲು ರಭಸದಿಂದ ಸ್ವಲ್ಪ ದೂರ ಸಾಗುತ್ತದೆ. ತೋಳ್ಬಲವು ಒಂದು ವಿಧದ ಶಕ್ತಿ. ಫಿಸಿಕಲ್ ಶಕ್ತಿ.

ಇವೆಲ್ಲ ತೆರನ ಶಕ್ತಿಗಳು, ಆಮೂಲಾಗ್ರವಾಗಿ ವಿಜ್ಞಾನಿಗಳಿಂದ ಅಭ್ಯಸಿಸಲ್ಪಟ್ಟಿವೆ. ಇವುಗಳ ಗುಣಗಳು ಎಣಿಸಲ್ಪಟ್ಟಿವೆ, ಗುಣಿಸಲ್ಪಟ್ಟಿವೆ. ಹಾಗಾಗಿ ಮಾನವನ ಹತೋಟಿಗೆ ಒಳಗಾಗಿವೆ. ಅವನ ಬಾಳನ್ನು ಸುಖಮಯವಾಗಿಸಿವೆ ; ಅವನ ದೈಹಿಕ ಶ್ರಮವನ್ನು ಬಹುಪಾಲು ನಿವಾರಿಸಿವೆ.

ಇತ್ತಿಂದೀಚೆಗೆ ಅಣುವನ್ನು ಬಿರಿಸಿದರೆ ಅಪಾರಶಕ್ತಿಯು ಹೊರ ಹೊಮ್ಮುತ್ತದೆ ಎಂಬುದನ್ನು ಕಂಡು ಹಿಡಿದರು. ಈ ಶಕ್ತಿಯನ್ನು ಶಾಖವನ್ನಾಗಿ ಪರಿವರ್ತಿಸಿ ಏನೆಲ್ಲವನ್ನೂ ಸುಟ್ಟು ಹಾಕಬಹುದು. ಇಲೆಕ್ಟ್ರಿಕ್ ಶಕ್ತಿಯನ್ನಾಗಿ ಪರಿವರ್ತಿಸಿ ಬಳಸಿಕೊಳ್ಳಲೂಬಹುದು. ಅಟಾಮಿಕ್ ಶಕ್ತಿಯುೂ ನಿಖರವಾಗಿ ಅಳೆಯಲ್ಪಡಬಹುದು. ಹೈಡ್ರೊಜನ್ನಿನ ಎರಡು ಅಣುಗಳನ್ನು ಬೆಸೆದರೆ, ಆಗಲೂ ಶಕ್ತಿಯು ಅಪಾರವಾಗಿ ಹೊರ ಹೊಮ್ಮುತ್ತದೆ. ಫ್ಯೂಷನ್ ಬಾಂಬ್ ಎಂಬ

ರಾಕ್ಷಸ ಆಯುಧವು ಈ ರೀತಿಯದು. ಇದೂ ವೈಜ್ಞಾನಿಕನ ಅಳತೆಗೆ ನಿಖರವಾಗಿ ಸಿಕ್ಕಿದೆ.

ಆದರೆ ಇವೆಲ್ಲಾ ಶಕ್ತಿಗಳು, ಮನಸ್ಸು ಎಂಬ ಶಕ್ತಿಗಿಂತ ಪ್ರತ್ಯೇಕವಾಗಿವೆ. ಮನಸ್ಸು ಒಂದು ತೆರನ ಶಕ್ತಿ ಎಂದು ತಿಳಿದಿದ್ದರೂ, ವೈಜ್ಞಾನಿಕ ಗಣಿತ ಶಾಸ್ತ್ರದ ಅಧ್ಯಯನಕ್ಕೆ ಇನ್ನೂ ಒಳಪಟ್ಟಿಲ್ಲ. ಅಂದರೆ ಮನಸ್ಸು ಎಂಬ ಶಕ್ತಿಯ ನಿಖರವಾದ ಪರಿಚಯವು ಇನ್ನೂ ಸಾಧ್ಯವಾಗಿಲ್ಲ.

ನಮ್ಮ ನಾಡಿನ ಪೂರ್ವೀಕ ಮನನಿಗರು, ಮನಸ್ಸನ್ನು 'ಚಿತ್ತ' ಎಂದು ಹೆಸರಿಸಿದ್ದರು. ಚೈತನ್ಯ ಎಂಬ ಪದವು ಶಕ್ತಿ ಎನ್ನುವ ಅರ್ಥವನ್ನೂ ಮೂಡಿಸುತ್ತದೆ. ಚಿತ್ರ ಪದದಿಂದ ಹುಟ್ಟಿ ಬಂದಿದೆ. ಚಿತ್ತ ಎನ್ನುವ ಪದವನ್ನು ಇನ್ನೂ ಹೆಚ್ಚು ಗೂಡಾರ್ಥದಲ್ಲಿ ಬಳಸುತ್ತಿದ್ದರು. ಅದನ್ನು ಮುಂದಿನ ಅಧ್ಯಾಯಗಳಲ್ಲಿ ತಿಳಿಯಲು ಯತ್ನಿಸೋಣ.

ಅಜ್ಜಯ್ಯನ ಮನೆಗೆ ರಜೆಯಲ್ಲಿ ಹೋಗಲೆತ್ನಿಸಿದಾಗ, ನನ್ನ ಮನಸ್ಸಿನಲ್ಲಿ ಮೂಡಿದ ಯೋಚನೆಗಳನ್ನು, ಮನಸ್ಸಿನ ಪರಿವರ್ತನೆಗಳು, ಎಂದು ಹೇಳಬಹುದು. ಚಪ್ಪಲಿಯನ್ನು ಮೆಟ್ಟಿಕೊಂಡು ಹೋಗಬಾರದು ಎಂಬ ಯೋಚನೆಯು ಮೂಡಿದಾಗ ಆ ಕ್ಷಣಾಂಶ ಮನಸ್ಸು ಚಪ್ಪಲಿಯಿಂದ ತುಂಬಿಕೊಂಡಿತು. ಚಪ್ಪಲಿಯೇ ಪೂರ್ಣವಾಗಿ ಪ್ರತಿಬಿಂಬಿಸಿತ್ತು. ಮನಸ್ಸಿನಲ್ಲಿ, ಎನ್ನಲೂಬಹುದು. ಮರುಕ್ಷಣ ಹೂಗಳ ಯೋಚನೆಯು ಮೂಡಿತು. ಕ್ಷಣಾಂಶ ಮನಸ್ಸು ಹೂವಿನಿಂದ ತುಂಬಿತ್ತು. ಹೂವೇ ಆಗಿತ್ತು ಎಂದರೂ ಅಡ್ಡಿಯಿಲ್ಲ. ಯೋಚಿಸುವಾಗ ಮನಸ್ಸಿನಲ್ಲಿ ಉಂಟಾಗುವ ಪರಿವರ್ತನೆಗಳನ್ನು 'ವೃತ್ತಿ' ಎಂದು ಕರೆಯುತ್ತಿದ್ದರು. ಕಣ್ಣಿಗೆ ಕಂಡುಬಂದ ಚೆಂದದ ಹೂವು, ಮನಸ್ಸಿನಲ್ಲಿ ಪ್ರತಿಬಿಂಬಿತವಾಗಿ, ಕ್ಷಣಾಂಶ ಮನಸ್ಸು ಆ ಹೂವೇ ಆಗಿರುತ್ತದೆ. ಕಿವಿಗಳ ಮೂಲಕ ಕೇಳಿಸಿದುದೂ ಹಾಗೆಯೇ ಪಂಚೇಂದ್ರಿಯಗಳ ಮೂಲಕ ಮನಸ್ಸಿಗೆ ತಲುಪಿದ ಎಲ್ಲವೂ ಪ್ರತಿಕ್ರಿಯೆಯನ್ನು ಮೂಡಿಸುತ್ತವೆ. ಹೊರಲೋಕದಿಂದ ಪ್ರತಿಕ್ಷಣವೂ ಪಂಚೇಂದ್ರಿಯಗಳಲ್ಲಿ ಯಾವುದಾದರೂ ಒಂದರಿಂದ ಮನಸ್ಸು ಕೆಣಕಲ್ಪಡುತ್ತದೆ. ಮನಸ್ಸೂ ಪ್ರತಿಕ್ರಿಯೆಯನ್ನು ಹೂಡುತ್ತವೆ. ಆದಕಾರಣ ಮನಸ್ಸು ಒಮ್ಮೆ ಅತ್ತ, ಮತ್ತೊಮ್ಮೆ ಇತ್ತ, ಕೆಲವೊಮ್ಮೆ ಸುತ್ತ, ಎಳೆದಾಡಲ್ಪಡುತ್ತಿರುತ್ತದೆ. ಚಿತ್ರ ವೃತ್ತಿಗಳು ಅಡ್ಡಾದಿಡ್ಡಿಯಾಗಿ ನಡೆಯುತ್ತವೆ. ಚಿತ್ತ ವೃತ್ತಿಯನ್ನು ನಿರೋಧಿಸುವುದೇ ಯೋಗ ಎಂದರು, ಪತಂಜಲಿ ಋಷಿಗಳು. ಈ ವಿಷಯವು ಬಾಳು ಹಸನಾಗಲಿಚ್ಛಿಸುವವರಿಗೆ, ಅಮೂಲ್ಯವಾದುದು. ಮುಂದೆ ಬರುವ ಅಧ್ಯಾಯಗಳಲ್ಲಿ ಇದನ್ನು ಹೆಚ್ಚು ವಿವರವಾಗಿ ಪರಿಶೀಲಿಸೋಣ.

* * * * *

ಮನಸ್ಸು ಮತ್ತು ದೇಹದ ಸಮನ್ವಯಗೊಂಡ ಒಕ್ಕೂಟವೇ ಬಾಳಿನ ಜೀವಾಳ ಎಂದೆವು. ಮನಸ್ಸು ಒಂದು ವಿಧವಾದ ಶಕ್ತಿ, ಅಥವಾ ಚೈತನ್ಯ ಎಂದೆವು. ದೇಹವು ಒಂದು ವಸ್ತು ಎನ್ನುವುದು ಸ್ವತಃಸಿದ್ಧ. ಮನಸ್ಸಿಗೂ ದೇಹಕ್ಕೂ ಇರುವ ವ್ಯತ್ಯಾಸಗಳಲ್ಲಿ ಇದು ಹಿರಿದಾದುದು. ಇದಲ್ಲದೇ ಇತರ ವ್ಯತ್ಯಾಸಗಳು ಇರುವುವೇ? ಅಥವಾ ಸಮಾನ ಗುಣಗಳು ಇರುವುವೇ? ಪರಿಶೀಲಿಸೋಣ.

೧. ದೇಹದ ಹೊರಮೈಯಲ್ಲಿ ಕವಚವಿದ್ದಂತೆ ಚರ್ಮವು ಇದೆ. ಕವಚದಂತೆ ರಕ್ಷಣೆಯನ್ನು ನೀಡುತ್ತದೆ. ಮನುಷ್ಯನಲ್ಲಿ ಚರ್ಮದ ರಕ್ಷಣಾ ಕವಚವು ಅಷ್ಟೇನೂ ದೃಢವಾದುದಲ್ಲ. ಆನೆ, ಘೇಂಡಾಮೃಗ, ಎಮ್ಮೆಗಳು ಇಂತಹ ಪ್ರಾಣಿಗಳಲ್ಲಿ ಚರ್ಮವು ಗುರಾಣಿಯಂತೆ ರಕ್ಷಣೆಯನ್ನು ಕೊಡುತ್ತದೆ. ಗಿಡ ಮರಗಳ ಮುಳ್ಳಿನಿಂದ ಈ ಪ್ರಾಣಿಗಳನ್ನು ಪಾರುಮಾಡುತ್ತದೆ.

ಮನುಷ್ಯನ ಚರ್ಮವು ತೆಳುವಾಗಿದೆ. ಆ ಪ್ರಾಣಿಗಳ ಚರ್ಮದಂತೆ ರಕ್ಷಣೆಯನ್ನು ನೀಡುವುದಿಲ್ಲ. ಆದರೂ ಅಂಗೈ ಮತ್ತು ಅಂಗಾಲುಗಳ ಮೇಲಿರುವ ಚರ್ಮವು ದಪ್ಪನಾಗಿ ದೃಢವಾಗಿರುತ್ತದೆ. ಹಿಡಿಯುವಾಗ ಮತ್ತು ನಡೆಯುವಾಗ, ಅಂಗೈ ಮತ್ತು ಅಂಗಾಲುಗಳಿಗೆ ಹೆಚ್ಚು ಅಘಾತವಾಗುತ್ತದೆ. ಆದುದರಿಂದಲೇ ಪ್ರಕೃತಿಯು ಅವುಗಳನ್ನು ದಪ್ಪವನ್ನಾಗಿ ನಿರ್ಮಿಸಿದೆ. ಮೈಯಿನ ಮಿಕ್ಕ ಭಾಗಗಳಲ್ಲಿ ಚರ್ಮವು ತೆಳುವಾಗಿರುತ್ತದೆ. ಆದರೂ ರಕ್ಷಣೆಯನ್ನು ನೀಡುತ್ತದೆ. ಉದಾಹರಣೆಗೆ, ಬೆಳಗೆದ್ದು ಮುಖ ಕ್ಷೌರವನ್ನು ಮಾಡಿಕೊಳ್ಳುವಾಗ, ಸೊಂಟಮೀಂಟುವ ಯಾವುದೋ ರೇಡಿಯೋ ಹಾಡನ್ನು ಕೇಳಿಸಿಕೊಂಡಾಗ, ಬೇ ಹುಷಾರಾಗಿ ಕೆನ್ನೆಯನ್ನು ತುಸು ಹೆರೆದುಕೊಂಡೆವು, ಎನ್ನಿ. ಎಷ್ಟು ಉರಿ ಮತ್ತು ನೋವಾಗುತ್ತೆ! ಅಲ್ಲದೆ ಗಾಬರಿಯಾಗುವಂತೆ ರಕ್ತವು ಸುರಿಯಲಾರಂಭಿಸುತ್ತದೆ. ಅಂದರೆ ತೆಳು ಚರ್ಮವಾದರೂ ದೇಹಕ್ಕೆ ರಕ್ಷಣೆಯನ್ನು ಒದಗಿಸುತ್ತದೆ.

ಚರ್ಮವು ಸ್ಪರ್ಶೇಂದ್ರಿಯ. ಅದರ ವರ್ಣವು ಮತ್ತು ಕಾಂತಿಯು ಇತರರ ಮನಸ್ಸನ್ನು ಆಕರ್ಷಿಸುತ್ತದೆ. ಅಥವಾ ಬೇಸರವನ್ನು ಮೂಡಿಸುತ್ತದೆ. ಇಂತಹವೇ ಇತರ ಗುಣಗಳು, ದೇಹಕ್ಕೆ ಅಗತ್ಯವಾದ ಕೆಲಸಗಳು ಚರ್ಮದ ಹೊಣೆಯಾಗಿರುತ್ತವೆ. ಆದರೆ ಚರ್ಮದ ವಿಶ್ಲೇಷಣೆಯು ಇಲ್ಲಿ ಅಪ್ರಕೃತ. ದೇಹಕ್ಕೆ ರಕ್ಷಣೆಯನ್ನು ಕೊಡುವ ಒಂದು ಕವಚ ಎಂಬುದೇ ಸಾಕು.

ದೇಹದ ಹೊರಗೆ ಚರ್ಮವಿದ್ದಂತೆ, ದೇಹದ ಒಳಗಡೆಯಲ್ಲಿ ಮ್ಯೂಕಸ್ ಮೆಂಬ್ರೇನ್ ಎನ್ನುವ ತೆಳುವಾದ ಅಂತಃಪೊರೆಯು ಇದೆ. ದೇಹದಲ್ಲಿನ ವಿವಿಧ ಅಂಗಗಳಿಗೆ ಕವಚವಾಗಿದೆ. ಬಾಯಿಯಲ್ಲಿ ಮ್ಯೂಕಸ್ ಮೆಂಬ್ರೇನ್ ಇದೆ ಎನ್ನುವುದು

ಜನರಿಗೆ ತಿಳಿಯದೆ ಇರಬಹುದು. ಆದರೆ ಅದು ತುಸು ಹರಿದು ಬಾಯಿ ಹುಣ್ಣಾದರೆ, ಉಪ್ಪಿನ ಕಾಯಂತಿರಲಿ, ತಿಳಿಸಾರನ್ನವನ್ನೂ ತಿನ್ನಲಾಗುವುದಿಲ್ಲ. ಉರಿ ಮತ್ತು ಯಾತನೆ ಅಷ್ಟಾಗುತ್ತದೆ.

ಮೂಗಿನ ಒಳಗಡೆಯೂ ರಕ್ಷಿಸುವ ಮ್ಯೂಕಸ್ ಮೆಂಬ್ರೇನ್ ಇದೆ. ಮೆಣಸಿನಕಾಯಿನ ಘಾಟು ಮೂಗಿಗೆ ಅಕಸ್ಮಾತ್ ಬಡಿದರೆ, ಮೂಗಿನೊಳಗೆ ಕಾಣಿಸಿಕೊಳ್ಳುವ ಉರಿಯು, ಮ್ಯೂಕಸ್ ಮೆಂಬ್ರೇನ್ ರೇಗಿದೆ, ಎನ್ನುವುದನ್ನು ತಿಳಿಸುತ್ತದೆ.

ಇವುಗಳಿಂದ ದೇಹದ ಒಳಭಾಗಗಳ ರಕ್ಷಣೆಗೆ ಮ್ಯೂಕಸ್ ಮೆಂಬ್ರೇನ್ ಪ್ರಭಾವಿ ಪಾತ್ರವನ್ನು ವಹಿಸುತ್ತದೆ ಎಂದು ಸುಲಭವಾಗಿ ತಿಳಿಯಬಹುದು.

ದೇಹದ ರಕ್ಷಣೆಗೆ, ಹೊರಗಡೆ ಚರ್ಮ, ಒಳಗೆ ಮ್ಯೂಕಸ್ ಮೆಂಬ್ರೇನ್, ಇರುವಂತೆ, ಮನಸ್ಸಿಗೆ ಯಾವುದಾದರೂ ಕವಚವಿದೆಯೇ ? ಇಲ್ಲ. ವಸ್ತುವಿಗೆ ರಕ್ಷಣಾ ಕವಚವನ್ನು ತೊಡಿಸಬಹುದು. ಆದರೆ ಶಕ್ತಿ ಅಥವಾ ಚೈತನ್ಯದಂತಹುದಕ್ಕೆ, ಕವಚವನ್ನು ತೊಡಿಸುವುದು ಸಾಧ್ಯವಿಲ್ಲ. ರಕ್ಷಿಸುವ ಕವಚವನ್ನು ಮನಸ್ಸೇ ಆಗಿಂದಾಗ್ಗೆ, ಅಗತ್ಯ ಬಿದ್ದಾಗ, ಸಾಧ್ಯವಾದಾಗ ನಿರ್ಮಿಸಿಕೊಳ್ಳಬೇಕು.

೨, ಮಾನವನು ಹಿಂಡು ಜೀವಿ. ಇತರರ ಸಂಪರ್ಕವು ಮತ್ತು ಸಹಾಯವು ದಿನದಿನದ ಬಾಳಿಗೆ ಅವಶ್ಯಕ. ಆದುದರಿಂದ ಪರಸ್ಪರ ಆಕರ್ಷಣೆಯು, ಅನಾಕರ್ಷಣೆಯು ಉಂಟಾಗಬೇಕು. ಲೈಂಗಿಕ ದೃಷ್ಟಿಯಿಂದ ಮಾತ್ರ ಇದನ್ನು ಹೇಳುತ್ತಿಲ್ಲ. ಅದಕ್ಕೆ ಹೊರತಾದ ಮಾನವರಲ್ಲಿ ಉಂಟಾಗುವ ಪರಸ್ಪರ ಆಕರ್ಷಣೆ, ವಿಶ್ವಾಸ, ಗೌರವ ಇತ್ಯಾದಿಗಳನ್ನು ಸೂಚಿಸುತ್ತಿದ್ದೇನೆ. ಇಂತಹ ಆಕರ್ಷಣೆಯು ದೇಹದ ಅಚ್ಚುಕಟ್ಟು, ರೂಪು ರೇಷೆಗಳನ್ನು ಕುರಿತುದಲ್ಲ. ವ್ಯಕ್ತಿಯ ನಡವಳಿಕೆ, ಬುದ್ಧಿವಂತಿಕೆ, ಅನುಕಂಪ, ಇತ್ಯಾದಿಗಳಿಂದ ಆಕರ್ಷಣೆಯು, ಮತ್ತು ವಿಶ್ವಾಸ ಗೌರವಗಳು ಉಂಟಾಗುತ್ತವೆ. ಇವುಗಳೆಲ್ಲವೂ ವ್ಯಕ್ತಿಯ ಮನಸ್ಸಿನಿಂದ ಪ್ರಚೋದಿತವಾದುವು. ಆದಕಾರಣ ಮನಸ್ಸು ಮಾನವನ ಪರಸ್ಪರ ಆಕರ್ಷಣೆಗೆ ಮೂಲವಾದುದು ಎಂದನ್ನಬಹುದು.

ಎರಡು ದೇಶಗಳು ಪರಸ್ಪರ ವೈರತ್ವವನ್ನು ಪ್ರಕಟಿಸುತ್ತಿರಬಹುದು. ಆದರೂ ಒಂದು ರಾಷ್ಟ್ರದ ಮೇಧಾವಿ ವಿಜ್ಞಾನಿಗಳನ್ನು, ಉತ್ತಮ ಕಲಾಕಾರರನ್ನೂ, ವೈರಿ ರಾಷ್ಟ್ರದ ವಿಜ್ಞಾನಿಗಳು ಮತ್ತು ಕಲಾಕಾರರು ಮೆಚ್ಚಿಕೊಳ್ಳುತ್ತಾರೆ, ಗೌರವಿಸುತ್ತಾರೆ. ವೈಯಕ್ತಿಕವಾಗಿ ಭೇಟಿಯಾದಾಗ, ಆತ್ಮೀಯರಾಗುತ್ತಾರೆ. ದೇಹದಿಂದ ಇಂತಹ ಆತ್ಮೀಯತೆಯನ್ನು ಸಾಧಿಸಲು ಆಗುವುದಿಲ್ಲ. ಮನಸ್ಸಿನಿಂದಲೇ ಸಾಧ್ಯ.

೩. ವಯಸ್ಸು ಆದಂತೆಲ್ಲಾ ಮುಪ್ಪು ಅಡರುವುದನ್ನು ಎಲ್ಲರೂ ಕಂಡಿದ್ದಾರೆ, ಚರ್ಮವು ಸುಕ್ಕುಗಟ್ಟಿ, ಕಾಂತಿಹೀನವಾಗುವುದು ; ಕೂದಲೂ ನರೆಯುವುದು, ಕಣ್ಣು, ಕಿವಿಗಳು ಮಂದವಾಗುತ್ತಾ ಹೋಗುವುದು, ಇತ್ಯಾದಿಗಳೆಲ್ಲವೂ ಮುಪ್ಪು ಮೂಡುತ್ತಿರುವುದರ ಲಕ್ಷಣಗಳು.

ಆದರೆ ದೇಹದೊಂದಿಗೆ ಜನಿಸಿದ ಮನಸ್ಸು, ದೇಹಕ್ಕೆ ಮುಪ್ಪು ಮೂಡುವುದರ, ಸರಿಸಮನಾಗಿ ಅರಳು ಮರುಳಾಗುತ್ತದೆಯೇ ? ಇಲ್ಲ. ಅರವತ್ತು ಎಪ್ಪತ್ತು ವರ್ಷಗಳಾದರೂ ದೇಹವು ಶಿಥಿಲವಾಗಿರದೆ ಸಾಕಷ್ಟು ದೃಢವಾಗಿರಬಹುದು. ಆದರೆ ಮನಸ್ಸು ಚುರುಕುತನವನ್ನು ಐವತ್ತರ ಪ್ರಾಯದಿಂದ ಕಳೆದುಕೊಳ್ಳಲಾರಂಭಿಸಬಹುದು. ತದ್ರೀತಿ, ದೇಹವು ಐವತ್ತು ಅರವತ್ತಕ್ಕೆ ಶಿಥಿಲವಾಗತೊಡಗಿದರೂ. ಎಂಬತ್ತು ತೊಂಬತ್ತಕ್ಕೆ ತುಂಬಾ ಶಿಥಿಲವಾದರೂ ಅವರುಗಳ ಮನಸ್ಸು ಅತ್ಯಂತ ಚುರುಕಾಗಿ ಉಳಿದಿರಬಹುದು.

ದೇಹ ಮತ್ತು ಮನಸ್ಸು, ಒಂದಕ್ಕೊಂದು ಅಗತ್ಯ ಸಂಬಂಧವನ್ನು ನಿಕಟವಾಗಿ ಹೊಂದಿದ್ದರೂ ವಿವಿಧ ರೀತಿಯಲ್ಲಿ, ಬೇರೆ ಬೇರೆ ಕಾಲಗಳಲ್ಲಿ, ಭಿನ್ನವಾದ ಗತಿಯಲ್ಲಿ ಮುಪ್ಪನ್ನು ಪಡೆಯುತ್ತವೆ.

೪. ಆಜನ್ಮಸಿದ್ಧವಾಗಿ ಪಡೆದ ಜಾಣತನದಿಂದ, ಮನಸ್ಸು, ದೇಹದ ಮುಖ್ಯ ಕಾರ್ಯಕ್ರಮಗಳನ್ನು ನಡಸುತ್ತದೆ.  ಆಳ ಮನಸ್ಸಿನಲ್ಲಿ ಪ್ರತಿಷ್ಠಿತವಾಗಿರುವ ಜನ್ಮ ಜನ್ಮಾಂತರಗಳ ಸ್ಮರಣೆಯು ಮನಸ್ಸಿನ ಹುಟ್ಟು ಜಾಣತನಕ್ಕೆ ಮೂಲಾಧಾರ. ಪ್ರಕೃತ ಜನ್ಮದಲ್ಲಿ ಮನಸ್ಸು ಅಭಿವೃದ್ಧಿ ಹೊಂದುತ್ತದೆ, ಲೋಕಾನುಭವವನ್ನು ಪಡೆಯುವುದರ ಮೂಲಕ.

ಆದರೆ ಮನಸ್ಸನ್ನು ನಡಸುವ ಆಂತರಿಕವಾದ ಚೈತನ್ಯವಾವುದಾದರೂ ಇದೆಯೇ ? ಬಲ್ಲವರಿಂದ ಕಲಿತು, ಮಾಡುವವರನ್ನು ನೋಡಿ ಕಲಿತು, ಆಲೋಚನೆಯನ್ನು ಮಾಡಿ ಅರಿತು, ಲೋಕಾನುಭವವನ್ನು ಪಡೆಯುತ್ತದೆ, ಮನಸ್ಸು. ಅಭಿವೃದ್ಧಿ ಹೊಂದುತ್ತದೆ. ಇದು ಎಲ್ಲರಿಗೂ ಸುಲಭವಾಗಿ ತಿಳಿಯುವ ವಿಷಯ. ಆದರೆ ಮನಸ್ಸಿನ ಅಂತರಾಳದಲ್ಲಿ ಎಲ್ಲೋ ಒಂದು ಶಕ್ತಿ ಇದೆ, ಅಥವಾ ಚೈತನ್ಯವು ಅಡಗಿದೆ. ಅವ್ಯಕ್ತವಾಗಿ ಆ ಚೈತನ್ಯವು ಮನಸ್ಸನ್ನು ನಡಸುತ್ತದೆ, ಎಂದು ಊಹಿಸಲು ಸಾಕಷ್ಟು ಸಾಕ್ಷ್ಯಗಳಿವೆ. ಪ್ರಮಾಣಗಳು ದೊರಕುತ್ತವೆ. ದೇಹದ ಮೇಲೆ ಹತೋಟಿಯನ್ನು ಮನಸ್ಸು ಹೊಂದಿರುವಂತೆ ಮನಸ್ಸಿನ ಮೇಲೆ ಪ್ರಭಾವೀ ಹತೋಟಿಯನ್ನು ಆಂತರಿಕವಾದ ಮತ್ತೆ ಯಾವುದೋ ಚೈತನ್ಯವು ಪಡೆದಿದೆ.

೫. ದೇಹವು ಮಲಿನಗೊಳ್ಳುವುದನ್ನೂ ಕಂಡಿದ್ದೇವೆ. ಬೆವರು ಸುರಿದು,

ಒಣಗಿ ಮೈ ಅಂಟಾದಾಗ, ಸೋಪನ್ನು ತಿಕ್ಕಿ ಸ್ನಾನವನ್ನು ಮಾಡಿದರೆ, ಮೈಗೆ ಎಷ್ಟೋ ಹಗುರವಾಗುತ್ತದೆ, ಮತ್ತು ಮನಸ್ಸೂ ಪ್ರಫುಲ್ಲವಾಗುತ್ತದೆ. ಕಲಿಯುವುದು, ಅಥವಾ ಕಲಿಸುವುದು ಎಂದು ಮನಸ್ಸಿನ ಕಾರ್ಯಗಳನ್ನು ವಿಂಗಡಿಸಬಹುದು, ಸ್ಥೂಲವಾಗಿ. ಮನಸ್ಸು, ಪ್ರಫುಲ್ಲವಾದಾಗ, ಈ ಎರಡೂ ತರಹ ಕಾರ್ಯಗಳನ್ನು ಚುರುಕಾಗಿ ನಡಸುತ್ತದೆ.

ದೇಹದೊಳಗೆ, ಪ್ರಕೃತಿಯ ರೀತ್ಯಾ ವಿಸರ್ಜಿಸಬೇಕಾದ ಜಲ ಮಲಗಳಂತಹ ಮಲಿನಗಳು ಹೆಚ್ಚಾಗಿ ತುಂಬಿಕೊಂಡರೆ, ಬಾಧೆಯನ್ನುಂಟುಮಾಡಲಾರಂಭಿಸಿದರೆ, ಆಗ ಮನಸ್ಸು ಚುರುಕಾಗಿರುವುದಿಲ್ಲ. ಅವುಗಳನ್ನು ಸಾಫಾಗಿ, ಸಂಪೂರ್ಣವಾಗಿ ವಿಸರ್ಜಿಸಿದ ನಂತರ, ದೇಹವು ಖುಷಿಯಾಗುವುದಿರಲಿ ; ಮನಸ್ಸೂ ಹಗುರಾಗುತ್ತದೆ. ಚುರುಕಾಗುತ್ತದೆ. ಯಶಸ್ವಿಯಾಗಿ, ಶ್ರಮವಿಲ್ಲದೆ ತನ್ನ ಕಾರ್ಯಗಳನ್ನು ನಡಸುತ್ತದೆ.

ಶ್ವಾಸಕೋಶಗಳಲ್ಲಿ ಕಫವು ಕಟ್ಟಿದಾಗಲೂ ಇದೇ ರೀತಿ ದೇಹವು ಬಾಧಿಸಲ್ಪಡುತ್ತದೆ. ಮನಸ್ಸೂ ಮುಜುಗರದಿಂದ ತಲ್ಲಣಿಸುತ್ತದೆ. ಕಫವು ಸಡಿಲವಾಗಿ, ಕೆಮ್ಮು ಮೂಡಿ ಹೊರಕ್ಕೆ ಉಗಿಯಲ್ಪಟ್ಟರೆ, ನಂತರ ದೇಹವು ಸಂತಸವನ್ನು ಪಡೆಯುತ್ತದೆ, ಮನಸ್ಸು ನೆಮ್ಮದಿಯಾಗುತ್ತದೆ.

ದೇಹವು ಹಲವಾರು ರೀತಿಯಲ್ಲಿ ಮಲಿನಗೊಳ್ಳಬಹುದು. ಹಲವಾರು ಅಂಗಗಳೂ ಕಲುಷಿತಗೊಳ್ಳಬಹುದು. ಹಲ್ಲು, ವಸಡು, ಕಿವಿ, ಕಣ್ಣು ಇತ್ಯಾದಿ ಇತ್ಯಾದಿ ; ಬೇನೆಯಿಂದ ಮಲಿನಗೊಳ್ಳಬಹುದು. ದುರಭ್ಯಾಸಗಳಿಂದ ಕೆಡಬಹುದು. ದೇಹದ ಎಲ್ಲಾ ಅಂಗಗಳೂ ಯಾವ ಕ್ಷಣದಲ್ಲಿಯೂ ಪರಿಶುದ್ಧವಾಗಿದೆ ಎಂದನ್ನಬರುವುದಿಲ್ಲ. ಆದುದರಿಂದಲೇ, 'ದೇಹಕ್ಕೆ ಮಡಿ ಇಲ್ಲ; ಆತ್ಮಕ್ಕೆ ಮೈಲಿಗೆಯಿಲ್ಲ' ಎಂಬ ಗಾದೆಯನ್ನು ನುಡಿದರು.

ದೇಹವು ಮಲಿನವಾದಂತೆ ಮನಸ್ಸು ಮಲಿನವಾಗುತ್ತದೆಯೇ? ಮನಸ್ಸು ಒಂದು ತೆರನ ಶಕ್ತಿ. ಶಕ್ತಿಯು ಮಲಿನವಾಗುವುದಿಲ್ಲ. ಶಕ್ತಿಯನ್ನು ದುರುಪಯೋಗ ಪಡಿಸಿಕೊಂಡರೆ, ಆಗ ದುಷ್ಪರಿಣಾಮಗಳಾಗುತ್ತವೆ. ಆಗ ಪರಿಣಾಮಗಳು ಕೆಟ್ಟು ದಾದರೆ, ಮಲಿನವಾಯಿತು ಎನ್ನಬೇಕು. ಮನಸ್ಸನ್ನು ಸದುಪಯೋಗಪಡಿಸಿಕೊಂಡರೆ, ಸತ್ಪರಿಣಾಮಗಳಾಗುತ್ತವೆ. ಮಲಿನತೆಯು ಇರುವುದಿಲ್ಲ, ಎನ್ನಬಹುದು.

ಹಣ್ಣನ್ನು ಹೆಚ್ಚಲು ಚಾಕುವನ್ನು ಬಳಸಿಕೊಳ್ಳುತ್ತೇವೆ. ಚಾಕುವಿನ ಸದುಪಯೋಗವಿದು. ಆದರೆ ಅದೇ ಚಾಕುವನ್ನು ಇನ್ನೊಬ್ಬನಿಗೆ ಇರಿಯಲೂ ಉಪಯೋಗಿಸಬಹುದು. ಚಾಕುವಿನ ದುರುಪಯೋಗವಿದು. ಚಾಕುವು ಎರಡೂ ಉಪಯೋಗಗಳಲ್ಲಿ ಪಾತ್ರವನ್ನು ವಹಿಸಿದರೂ, ಸ್ವಂತ ಪ್ರಚೋದನೆಯಿಂದ ಹಾಗೆ

ಮಾಡುವುದಿಲ್ಲ. ಅದು ಬಳಸುವವನ ಕೇವಲ ಆಯುಧ.

ಒಂದು ರೀತಿಯಲ್ಲಿ ಮನಸ್ಸೂ ಚಾಕುವಿನಂತೆಯೇ, ಸದುಪಯೋಗಕ್ಕೂ ಅಣಿಯಾಗುತ್ತದೆ, ದುರುಪಯೋಗಕ್ಕೂ ಸಿದ್ಧವಾಗಿರುತ್ತದೆ. ಸದುಪಯೋಗ ಮತ್ತು ದುರುಪಯೋಗ, ಇವೆರಡೂ ಮನಸ್ಸಿನ ಹಲವಾರು ಅಂಶಗಳಿಂದ ನಡೆಯುತ್ತವೆ. ಮನಸ್ಸಿನ ಆಂತರಿಕ ಅಂಶವೊಂದು,–ಅದನ್ನು ಚೈತನ್ಯ ಎಂದು ಕರೆಯಬಹುದು,–ಅದು ಸತ್ ಉಪಯೋಗ, ಒಳ್ಳೆಯ ಉಪಯೋಗಕ್ಕೆ ಮಾತ್ರ ಪ್ರಚೋದಕವಾಗಿರುತ್ತದೆ. ಆದರೆ ಮನಸ್ಸಿನ ಇತರ ಅಂಶಗಳು, ಚೈತನ್ಯದ ಅಂಶವನ್ನು ಅಡಗಿಸಿರುತ್ತವೆ, ಅಥವಾ ಕಾಣದಂತೆ ಕೆಂಡವನ್ನು ಬೂದಿಯು ಮುಚ್ಚಿಡುವಂತೆ, ಹುದುಗಿಸಿಡುತ್ತದೆ. ಆದುದರಿಂದ ಇತರ ಅಂಶಗಳು ಮನಸ್ಸನ್ನು ದುಷ್ಟ ಅಥವಾ ಅನಿಷ್ಟ ಪರಿಣಾಮಗಳಾಗುವಂತೆ ನಡಸುತ್ತವೆ.

ಮನಸ್ಸು ಮತ್ತು ಅದರೊಳಗೆ ಅಂತರ್ಗತವಾಗಿರುವ ಚೈತನ್ಯ ಇವೆರಡೂ ಸ್ವಾಭಾವಿಕವಾಗಿ ಮಲಿನವಾಗಿರುವುದಿಲ್ಲ. ಎಳೆಯ ಮಗುವಿನ ಮನಸ್ಸಿನಂತೆ, ನಿರ್ಮಲವಾಗಿರುತ್ತದೆ. ಪ್ರಪಂಚದ ಅರಿವನ್ನು ಪಡೆಯುವ ಮಹಾ ಕುತೂಹಲವೂ ಇರುತ್ತದೆ. ಬೆಳೆಯತೊಡಗಿದಾಗ 'ತನ್ನ' ಎಂಬ ಸ್ವತಂತ್ರವಾದ, ಇತರರ ನೆರವಿಲ್ಲದೇ ಬಾಳುವ ಆಸೆಯಿಂದ ಕಾಮ ಕ್ರೋಧಾದಿ ಮಿತ್ರ ಷಡ್ವರ್ಗಗಳನ್ನು ಅಭಿವೃದ್ಧಿಸಿಕೊಳ್ಳುತ್ತದೆ. ಈ ತನಕ ಮನಸ್ಸಿನಲ್ಲಿ ಅಂತರ್ಗತವಾಗಿರುವ ಸತ್ ಉಪಯೋಗದ ಚೈತನ್ಯವು ಪ್ರಭಾವೀಯುತವಾಗಿ ಮಗುವಿನ ಮನಸ್ಸನ್ನು ನಡಸುತ್ತದೆ ಆದುದರಿಂದಲೇ ಎಲ್ಲ ಮಕ್ಕಳೂ, ದೊಡ್ಡವರಿಗೆ ಮುದ್ದಾಗಿ ಕಾಣಬರುವುದು. ಸತ್ ಚೈತನ್ಯವು ಮಕ್ಕಳ ಮನಸ್ಸನ್ನು ಅನಿರ್ಬಂಧಿತವಾಗಿ ನಡಸುವುದರಿಂದ, ಮಕ್ಕಳ ನಡವಳಿಕೆಯು ಹಿರಿಯರಿಗೆ ಆಪ್ಯಾಯಮಾನವಾಗಿರುತ್ತದೆ. ಬಾಳಿನಲ್ಲಿ, ಸ್ಪರ್ಧಾಬಾಳಿನಲ್ಲಿ ಸ್ವತಂತ್ರವಾಗಿ, ತನ್ನ ಕಾಲುಗಳ ಮೇಲೆ ನಿಲ್ಲಬೇಕಾದಾಗ, ಮಿತ್ರ ಷಡ್ವರ್ಗಗಳು, ಮಂಕು ಬೂದಿಯನ್ನು, ಸತ್–ಚೈತನ್ಯಾಂಶದ ಸುತ್ತಲೂ ಭದ್ರವಾಗಿ ಹರಡಿ ಅರಿ–ಷಡ್ವರ್ಗಗಳಾಗುತ್ತವೆ. ಅರಿ ಎಂದರೆ ಶತ್ರು. ಯಾರಿಗೆ ಶತ್ರು? ವ್ಯಕ್ತಿಯು ಈ ಲೋಕದಲ್ಲಿ ಈ ಬಾಳಿನಲ್ಲಿ ಸ್ಪರ್ಧಾಪೂರಿತ ಸಮಾಜದಲ್ಲಿ ಬಾಳ ಬೇಕಾದಾಗ, ಎಲ್ಲರಿಗಿಂತಲೂ ಎತ್ತರವಾಗಿ ತಲೆಯನ್ನು ಎತ್ತತೊಡಗುವಾಗ, ಅರಿಷಡ್ವರ್ಗಗಳು, ನೆರವಾಗುತ್ತವೆ. ಅಂದರೆ ವ್ಯಕ್ತಿಗೆ ಹೇಗೆ ಶತ್ರುವಾಯಿತು? ಶತ್ರುವಾಗಲಿಲ್ಲ. ಲೌಕಿಕ ಬಾಳಿಗೆ ಅಗತ್ಯವಾಯಿತು. ಆದರೆ ಸಂಘದ ದೃಷ್ಟಿಯಿಂದ ಮಿತ್ರನೂ ಆಗಲಿಲ್ಲ, ಕಾರಣ, ಸತ್ ಚೈತನ್ಯದ ಅಂಶದ ಮೇಲೆ, ಮಂಕು ಬೂದಿಯು ಧಂಡಿಯಾಗಿ ತುಂಬಿಕೊಂಡಿರುತ್ತದೆ. ಅಹಂ–ಕಾರವೆಂಬ ಮಂಕುಬೂದಿ.

ಅಂದರೆ 'ಶತ್ರು' ಎಂದು ಷಡ್ವರ್ಗಗಳನ್ನು ಹಿರಿಯರು ಹೆಸರಿಸಿದರೇಕೆ?

ಮನಸ್ಸನ್ನು ನಿರ್ಮಲವಾಗಿ ನಡೆಸುವ, ಮನಸ್ಸಿನ ಒಂದು ಭಾಗದಲ್ಲಿ ಅಂತರ್ಗತವಾಗಿರುವ ಸತ್ ಚೈತನ್ಯದ ಅಂಶವನ್ನು ; ಸ್ವತಂತ್ರವಾಗಿ ಬಾಳುವ ಹೆಬ್ಬಯಕೆಯಿಂದ, ಈ ಷಡ್ವರ್ಗಗಳು ಅದುಮಿ, ಅಮುಕಿ, ಮುಚ್ಚಿಡುವುದರಿಂದ; ಮಂಕು ಬೂದಿಯಿಂದ ಮರೆಮಾಚುವುದರಿಂದ. ಸ್ಪರ್ಧಾಬಾಳಿನ ದ್ವಂದ್ವರೂಪದ ಮಾಯಾ ಸ್ವತಂತ್ರವನ್ನು, ಇದೇ ಸತ್ಯ, ಇದೇ ಶಾಶ್ವತ ಎಂದು ನಂಬಿಕೆಯನ್ನು ಹುಟ್ಟಿಸಿ ಬೆಳೆಸುವುದರಿಂದ, ಯಾವ ಸತ್ ಚೈತನ್ಯದ ಅಂಶವು, ಮನಸ್ಸಿನ ಅಂತರಾಳದಲ್ಲಿ, ಅವಿನಾಶಿಯಾಗಿ, ಆನಂದಮಯವಾಗಿ, ಮಕ್ಕಳನ್ನು ಕೇಕೇ ಹಾಕುವಂತೆ ನಡಸುತ್ತ, ಕಾಲಾತೀತವಾಗಿರುವುದೋ, ಸಾವಿನ ಭಯವೇ ಇಲ್ಲದಿರುವುದೋ, ಸನಾತನವಾದ, ಪುರಾತನವಾದ, ಜೀವದ ಪ್ರಾಣರೂಪವೋ, ಅದನ್ನು ಮಂಕುಬೂದಿಯ ಮುಸುಕಿನಿಂದ, ಸಂಪೂರ್ಣವಾಗಿ, ಅಥವಾ ಹೆಚ್ಚು ಕಡಿಮೆ ಸಂಪೂರ್ಣವಾಗಿ, ಮುಚ್ಚಿಬಿಡುವುದರಿಂದ.

ಈ ಎಲ್ಲ ಕಾರಣಗಳಿಂದ ಷಡ್ವರ್ಗಗಳನ್ನು ; ಬಾಳನ್ನು ಅನುಭವಿಸಿ, ಮನನ ಮಾಡಿದ ಋಷಿಗಳು, 'ಅರಿ–ಷಡ್ವರ್ಗ'ಗಳು ಎಂದು ನುಡಿದರು.

ಮನಸ್ಸು ಎಂಬುದು ಶಕ್ತಿಯಾದರೂ, ಅರಿಷಡ್ವರ್ಗಗಳಿಂದ ಪ್ರಭಾವಿತವಾದಾಗ, ಮಲಿನವಾಗಬಹುದು ಎಂದು ನಿರ್ಧರಿಸಬಹುದು. ದೇಹದ ಮಲಿನತೆಯೂ, ಮನಸ್ಸಿನ ಮಲಿನತೆಯೂ, ಪ್ರಕೃತಿಯ ಕಾರ್ಯಕ್ರಮದಲ್ಲಿ ಅನಿವಾರ್ಯ ಎನ್ನಬಹುದು.

* * *

೬. ದೇಹ ಮತ್ತು ಮನಸ್ಸಿನ ಪರಸ್ಪರ ಸಂಬಂಧವನ್ನು, ದಿನದಿನದ ಅನುಭವಗಳ ದೃಷ್ಟಿಯಿಂದಲೂ ನೋಡಬಹುದು.

(ಅ) ಜ್ವರವು ಉಗ್ರವಾಗಿ ಬಂದಾಗ ರೋಗಿಗೆ ಸನ್ನಿ ಬಡಿದಂತಾಗುತ್ತದೆ. ಮಾನ, ಅವಮಾನ, ಕೆಟ್ಟ ಮಾತು, ಒಳ್ಳೆಯ ಮಾತು ಇವುಗಳನ್ನು ತಾತ್ಕಾಲಿಕವಾಗಿ ಮರೆತು, ಬಡಬಡಿಸುತ್ತಾನೆ. ಕರಪಲ ಮಾಡುತ್ತಾನೆ, ಜ್ವರವು ಉಗ್ರವಾದಾಗ, ಬೇನೆಯ ತೀವ್ರ ವಿಷಯವು ಮೆದುಳಿಗೆ ಅಧಿಕ ಪ್ರಮಾಣದಲ್ಲಿ ಹರಡಿ ಮೆದುಳಿನ ಚಟುವಟಿಕೆಯಿಂದ ಉಂಟಾಗುವ ಮನಸ್ಸು ಎರ್ರಿಬಿರ್ರಿಯಾಗುತ್ತದೆ. ಬೇನೆಯು ಗುಣವಾದ ಮೇಲೆ ಮನಸ್ಸು ಸ್ವಾಸ್ಥ್ಯಸ್ಥಿತಿಯನ್ನು ಮರಳಿ ಪಡೆಯುತ್ತದೆ. ಅಂದರೆ ದೇಹದಲ್ಲಾಗುವ ಉಗ್ರ ವ್ಯತ್ಯಾಸಗಳು, ಮನಸ್ಸಿನ ಮೇಲೆ ಪ್ರಭಾವವನ್ನು ಹೂಡುತ್ತದೆ.

ಜ್ವರವು ಉಗ್ರವಾದರೆ, ಕೆಲವೇ ದಿನಗಳಲ್ಲಿ ವಾಸಿಯಾಗುತ್ತದೆ. ಅಥವಾ ಮಾರಕವಾಗುತ್ತದೆ.

ಆದರೆ ಜ್ವರವು ಉಗ್ರವಾದರೆ, ಸ್ವಲ್ಪವೇ ಆಗಿದ್ದರೆ, ಹಾಗೂ ತಿಂಗಳಾನುಗಟ್ಟಲೆ ಕಾಡುವಂತಹುದಾದರೆ, ಆಗ ಅಂತಹ ಜ್ವರದ ನಂಜು ಅಲ್ಪ ಪ್ರಮಾಣದಲ್ಲಿರುತ್ತದೆ. ಮೆದುಳಿನ ಮೇಲೆ ಅಂತಹ ಅಲ್ಪ ನಂಜು ಪ್ರಚೋದಕವಾಗುತ್ತದೆ. ಅಂದರೆ ಮನಸ್ಸೂ ಚುರುಕಾಗಿ ಕೆಲಸ ಮಾಡುತ್ತದೆ. ಸ್ಫೂರ್ತಿಯನ್ನು ಪ್ರಚೋದಿಸುತ್ತದೆ.

(ಆ) ಜ್ವರವು ಉಗ್ರವಾದಾಗ, ಅಥವಾ ಸೌಮ್ಯವಾಗಿದ್ದಾಗ, ಸನ್ನಿ ಅಥವಾ ಸ್ಫೂರ್ತಿ, ಇವುಗಳು ಕಾಣಬರುತ್ತವೆ. ಅದೇ ರೀತಿಯಲ್ಲಿ ಮಾದಕ ಪದಾರ್ಥಗಳೂ ಮನಸ್ಸಿನ ಮೇಲೆ, ಪ್ರಭಾವವನ್ನು ಬೀರುತ್ತವೆ. ಅಲ್ಪ ಪ್ರಮಾಣದಲ್ಲಿ, ನಿಧಾನವಾಗಿ ಸೇವಿಸಿದಾಗ, ಮನಸ್ಸು ಚುರುಕಾಗುತ್ತದೆ. ಸ್ಫೂರ್ತಿಯೂ ಹೆಚ್ಚುತ್ತದೆ. ಹೆಚ್ಚು ಪ್ರಮಾಣದಲ್ಲಿ ಗಟಗಟನೆ ಇಳಿಸಿದರೆ, ಮನಸ್ಸು ಸನ್ನಿಬಡಿದಂತಾಗುತ್ತದೆ. ಮಾನ ಅವಮಾನ, ಸಭ್ಯ, ಅಸಭ್ಯ ; ಇತ್ಯಾದಿಗಳನ್ನು ಮರೆಯುವುದಲ್ಲದೆ, ವಾಸ್ತವಿಕತೆಯನ್ನೂ ಮರೆಯುತ್ತದೆ. ಎಂತೆಂತದೋ ವಿಕಾರಿ ಭ್ರಮೆಗಳು ಅವನನ್ನು ಕಾಡುತ್ತವೆ. ಅದಕ್ಕನುಗುಣವಾಗಿ ಅವನ ನಡತೆ, ಮಾತು. ಎಲ್ಲರಲ್ಲಿಯೂ ಮಾದಕ ದ್ರವ್ಯಗಳ ಫಲಿತಾಂಶವು ಒಂದೇ ರೀತಿಯಲ್ಲಿ ಇರುತ್ತದೆ ಎನ್ನಲಾಗದು. ಸ್ಫೂರ್ತಿಯು ಸಹಜವಾಗಿದ್ದ ಕೆಲವರು, Confessions of an opium eater ; ತೆರನಾದ ಉತ್ತಮ ಪುಸ್ತಕಗಳನ್ನು ಬರೆಯುತ್ತಾರೆ. ಉಳಿದಂತೆ ಬಹು ಸಂಖ್ಯಾತರು ಮಾದಕ ದ್ರವ್ಯಗಳನ್ನು ಸೇವಿಸಿದಾಗ, ಅಸಭ್ಯ ತೆರನಾಗಿ ತೂರಾಡುತ್ತಾರೆ, ಹುಚ್ಚರಂತೆ ಆಡುತ್ತಾರೆ.

ದೈನಂದಿನ ಸಾಮಾನ್ಯ ಅನುಭವದಲ್ಲಿ ವಿಪುಲವಾಗಿ ಈ ಗುಣವನ್ನು ಕಾಣಬಹುದು, ಅಭ್ಯಾಸಕ್ಕೆ ತಕ್ಕಂತೆ ಮೂರು ನಾಲ್ಕು, ಕುಡಿದು ಬಂದ ಸಂಗೀತಗಾರ ಅಥವಾ ನಟ ; ಅಥವಾ, ಹರಿಕಥೆಯ ದಾಸ ; ಇವರುಗಳ ಕೌಶ್ಯಲವು ಅತ್ಯಂತ ಸ್ಫೂರ್ತಿಯಿಂದಿದ್ದು, ಸಭಿಕರ ಮನಸ್ಸನ್ನು ಸೆರೆ ಹಿಡಿಯುತ್ತದೆ. ಕಲಾಕಾರರಲ್ಲಿ ಇಂತಹ ಪ್ರವೃತ್ತಿಯು ಸಾಮಾನ್ಯ, ಎನ್ನುವಷ್ಟು ಉದಾಹರಣೆಗಳು ಕಾಣಬರುತ್ತವೆ. ಆದರೆ ಪಡಖಾನೆಯಿಂದ ಗುಂಪು ಗುಂಪಾಗಿ ಸಂಜೆಯಾದ ಮೇಲೆ ಹಿಂತಿರುಗುವ ಬಹು ಸಂಖ್ಯಾತರನ್ನು ನೋಡಿ! ಇಲ್ಲದ ರಸ್ತೆಯಲ್ಲಿ ಅಡ್ಡಾಡುತ್ತಾ, ಅಸಭ್ಯ ಮಾತುಗಳನ್ನು ಹಾಡುಗಳು ಎಂದು ಭ್ರಮಿಸುತ್ತ, ತೂರಾಡುವವರು, ಷಹರಿನಲ್ಲಿ ಪ್ರತಿ ಸಂಜೆಯೂ ಹೇರಳವಾಗಿ ಕಾಣಿಸುತ್ತಾರೆ. ಅಯ್ಯೋ ಪಾಪ ಎಂದನಿಸುತ್ತದೆ, ನೋಡಿದವರಿಗೆ. ಒಮ್ಮೊಮ್ಮೆ ನೋಡಿದವರಲ್ಲಿ ಕೆಲವರಿಗಾದರೂ ಮಾತ್ಸರ್ಯವು

ಉಂಟಾಗುತ್ತದೆ, ಕ್ಷಣಕಾಲ. ಅಂದರೆ ಸಭ್ಯ ರೀತಿಯಲ್ಲಿ, ಶಿಸ್ತಿನ ಬಾಳನ್ನು ದೃಢತೆಯಿಂದ ಸಾಧಿಸುವ, ಸಮಾಜದಲ್ಲಿ ಸೈ ಎಂದನಿಸಿಕೊಂಡ ಸಾಧುಗಳಲ್ಲಿ ಕೂಡ, ಸಮಾಜದ ಕಟ್ಟುಪಾಡುಗಳನ್ನು ಅಲ್ಲಗಳೆದ, ದುರಭ್ಯಾಸಿಗಳನ್ನು ಕಂಡು, ಮರುಕವೂ, ಜತೆಯಲ್ಲಿ ಮಾತ್ಸರ್ಯದ ಅಂಚೂ, ಎರಡೂ ಕಾಣಬರುತ್ತವೆ. ಮಾತ್ಸರ್ಯವನ್ನು–ಅರಿ–ಷಡ್ವರ್ಗದ–ಒಂದನ್ನು ಬಲಿಹಾಕಲು, ಅಂತಹವರಿಗೆ ಸ್ಫೂರ್ತಿಯು ಹೆಡೆಯೆತ್ತಿ ಆಡತೊಡಗುತ್ತದೆ. ಆಗ ಮಾತ್ಸರ್ಯವು ಮರುಕದ ಹಿನ್ನೆಲೆಯಲ್ಲಿ, ಅನುಕಂಪದ ಪರದೆಯ ಮುಂದೆ, 'ಯೆಂಡ್ಕುಡುಕ' ರತ್ನವಾಗುತ್ತದೆ. ಕುಡಿಯದೇ ಇದ್ದರೂ, ಕುಡಿದವರಿಗಿಂತ ಅತ್ಯಮೋಘವಾಗಿ ಸ್ಫೂರ್ತಿಯನ್ನು ಪಡೆದು ಅಮರರಾಗುತ್ತಾರೆ; ಚಿರಂಜೀವಿಗಳಾಗುತ್ತಾರೆ, ಸಹಸ್ರಮಂದಿ ಕುಡಿಯುವವರನ್ನು, ಕುಡಿದು ನರಳುವವರನ್ನು ಕಂಡು, ಮರುಕದಿಂದ ನುಡಿಯುವವನು, ಮಾತ್ಸರ್ಯದಿಂದ ಕ್ಷಣಾಂಶ ಪ್ರಚೋದಿತನಾಗಿ, 'ಪುರುಷಾಯ ಶಾಶ್ವತ' ನಾಗುತ್ತಾನೆ. ಮರುಕದ ಮಹಾ ಪ್ರತೀಕನಾಗುತ್ತಾನೆ. 'ಮಹಾ ಕರುಣಿ' ಯಾಗುತ್ತಾನೆ.

ಮಾದಕ ದ್ರವ್ಯಗಳಿಂದ ಮನಸ್ಸು ಈ ವಿಪರೀತಗಳನ್ನು ಅನುಭವಿಸುತ್ತದೆ; ನಡವಳಿಕೆಯಲ್ಲಿ ತೋರಗೊಡುತ್ತದೆ ಆದರೆ ಸಾಮಾನ್ಯವಾಗಿ ಉಣ್ಣುವ ಆಹಾರದಲ್ಲಿ ಸ್ವಲ್ಪ ವ್ಯತ್ಯಾಸವಾದರೆ ಮನಸ್ಸಿನ ಚುರುಕು, ಕಡಿಮೆಯಾಗುವುದೂ ಉಂಟು. ಅವರೆಕಾಯಿ ಉಪ್ಪಿಟ್ಟಿಗೆ ಥೈಂಡಿ ಮೊಸರನ್ನು ಕಲಸಿ ಗಡದ್ದಾಗಿ ತಿಂದರೆ, ಅನಂತರ ಮನಸ್ಸು ಜಡವಾಗುತ್ತದೆ. ಓದಲು ಮಾದಕ ಪದಾರ್ಥಗಳನ್ನು ಸೇವಿಸಿದಂತೆ ಆಗುತ್ತದೆ. ಆದರೆ ಮೊದಮೊದಲ ಹಂತದಲ್ಲಿ ಮನಸ್ಸು ಚುರುಕೇನೂ ಆಗುವುದಿಲ್ಲ. ತೆಪ್ಪಗೆ ಬಿದ್ದುಕೊಳ್ಳೋಣ ಎನಿಸುತ್ತದೆ. ಸಾಮಾನ್ಯವಾಗಿ ಸಭ್ಯಸ್ಥರೂ ಸೇವಿಸುವ ಕಾಫೀ, ಟೀ, ಇತ್ಯಾದಿ ಪಾನೀಯಗಳು, ಮನಸ್ಸಿನ ಚುರುಕನ್ನು ಹೆಚ್ಚಿಸುತ್ತದೆ. ಪರೀಕ್ಷೆಗೆಂದು ಓದುವವರಿಗೆ ಇದು ಸ್ವಯಂ ವೇದ್ಯ.

ಜಲ, ಮಲ ವಿಸರ್ಜನೆಯಲ್ಲಿ ಕಸಿವಿಸಿಗೊಂಡಿರುವವನು, ತನ್ನ ಮನಸ್ಸನ್ನು ಸಹಜರೀತಿಯಲ್ಲಿ ನಡಸಲಾರ. ಅಂತಹವನ ಮನಸ್ಸು ಸ್ವಲ್ಪ ಮಟ್ಟಿಗೆ ವಕ್ರವಾಗಿಯೇ ನಡೆಯುತ್ತದೆ. ಎಲ್ಲದರಲ್ಲಿಯೂ ಎಲ್ಲರಲ್ಲಿಯೂ ತಪ್ಪುಗಳನ್ನೇ ಗಮನಿಸುತ್ತಾನೆ. ಮುಖವನ್ನು ಸಿಂಡರಿಸಿಕೊಂಡು ವಿನಾಕಾರಣ ರೇಗುತ್ತಾನೆ. ವಿಸರ್ಜನಾ ಕ್ರಮಗಳು ಸುಸೂತ್ರವಾಗಿದ್ದಾಗ, ಅದೇ ಮನುಷ್ಯ ನಗುನಗುತಲಿದ್ದು, ಎಲ್ಲದರಲ್ಲಿಯೂ ಒಪ್ಪನ್ನೇ ಕಾಣುತ್ತಾನೆ. ಆಗ ಅವನ ಮನಸ್ಸು ಹಗುರ ; ಚುರುಕಾಗಿ ಕೆಲಸ ಮಾಡುತ್ತಾನೆ.

ಅಂದರೆ ದೇಹದ ವಿಧವಿಧ ಸ್ಥಿತಿಗಳು ಮನಸ್ಸಿನ ಮೇಲೆ ಸಾಕಷ್ಟು ಪರಿಣಾಮವನ್ನುಂಟುಮಾಡುತ್ತದೆ ಎಂಬುದು ಸ್ಪಷ್ಟವಾಯಿತು.

ಅದೇ ರೀತಿಯಲ್ಲಿ ಮನಸ್ಸಿನಲ್ಲಾಗುವ ಆತಂಕ, ದುಃಖ, ಸುಖ, ಇತ್ಯಾದಿಗಳು ದೇಹದ ಮೇಲೆ ಪರಿಣಾಮವನ್ನುಂಟುಮಾಡುತ್ತದೆಯೇ ? ಖಂಡಿತವಾಗಿಯೂ ಹೌದು.

ದಿನವೆಲ್ಲಾ ದೇಹಶ್ರಮದಿಂದ ದುಡಿದು ಬಂದ ಕಾರ್ಖಾನೆಯ ಕೆಲಸಗಾರ, ಮನೆಗೆ ಹಿಂತಿರುಗುವಾಗ 'ಸರ್ವಂಭಕ್ಷಯಾಮಿ' ಎನ್ನುವಂತೆ ಹಸಿದಿರುತ್ತಾನೆ. ಆದರೆ ಮನೆಗೆ ಬಂದಾಗ ಮಗುವಿಗೆ ಕೆಂಡಾಮಂಡಲ ಜ್ವರ ಬಂದಿದ್ದರೆ, ಊಟವನ್ನು ಮಾಡುವುದೇ ಇಲ್ಲ. ತೌರಿಗೆ ಹೆಂಡತಿಯು ಹೋದಾಗ, ಮೊದಲ ಹೆರಿಗೆಗೆ, ಅಡಿಗೆ ಮನೆಯಲ್ಲಿ ಒಬ್ಬನೇ ಕೂತು ಊಟಮಾಡುವಾಗ, ಎರಡೇ ತುತ್ತಿಗೆ ಸಾಕು ಎನಿಸುತ್ತದೆ. ಹಸಿವು ಮುಚ್ಚಿಹೋಗುತ್ತದೆ. ತೌರಿಂದ ಹೆಂಡತಿಯು ಹಿಂತಿರುಗಿದ ಮೇಲೆ ಝುಝುಣದ, ಹಿನ್ನೆಲೆಯಲ್ಲಿ ಆಕೆಯು ಉಪ್ಪಿಲ್ಲದ ಅಡಿಗೆಯನ್ನು ಬಡಿಸಿದರೂ, ನಾಲ್ಕು ತುತ್ತು ಹೆಚ್ಚು ತಿನ್ನುತ್ತಾನೆ. ವರಮಾನ ತೆರಿಗೆಯ ಲೆಕ್ಕವನ್ನು ನಂಬುವಂತೆ ಬರೆಯಲು ಕುಳಿತ ಸಾಹುಕಾರನಿಗೆ, ಹಸಿವಾಗುವುದೇ ಇಲ್ಲ. ಹೆಂಡತಿಯ ಕಾಟಕ್ಕೆ ಎರಡು ರೊಟ್ಟಿಯನ್ನು ತಿಂದು ಮುಗಿಸಿ, ಕಟ್ಟುಕತೆಯನ್ನು ಲೆಕ್ಕದಲ್ಲಿ ಹೇಗೆ ಬರೆದು ನಂಬಿಸಬಹುದು ಎಂಬ ಆತಂಕದಲ್ಲಿ ಮಗ್ನನಾಗಿರುತ್ತಾನೆ. ಚುನಾವಣೆಗಳಲ್ಲಿ ಠೇವಣಿ ಹಣವನ್ನು ಕಳೆದುಕೊಂಡ ಅಭ್ಯರ್ಥಿಯು ಒಂದೆರಡು ವಾರ ತದನಂತರ ಊಟವನ್ನು ಮಾಡುತ್ತಾನಾದರೂ, ಸವಿಯುವುದಿಲ್ಲ. ಮನಸ್ಸು ಕಹಿಯಾದಂತೆ, ಆಗ ಅವನ ನಾಲಿಗೆಯೂ ಕಹಿಯಿಂದ ಲೇಪಿಸಿದಂತಾಗುತ್ತದೆ.

ಕಾಮಾತುರನಾದವನು, ಇಷ್ಟಾರ್ಥವು ಲಭಿಸಿ ಕಾರ್ಯಗತವಾಗುವ ತನಕ, ಅನ್ನ ನೀರುಗಳನ್ನು ನಿರ್ಲಕ್ಷಿಸಿ ಕೃಶನಾಗುತ್ತಾನೆ, ಕ್ಷಯಿಸುತ್ತಾನೆ, ಕೃಷ್ಣಪಕ್ಷದ ಚಂದಿರನಂತೆ. ದೀಪಾವಳಿಗೆಂದು ಮೊದಲ ಬಾರಿಗೆ ಬಂದ ಅಳಿಯನಿಗೆ, ಅತ್ತೆಯು ಬಡಿಸಿದ ಪರಮಾನ್ನದ ಮೇಲೆ ದೃಷ್ಟಿಯೂ ಇರುವುದಿಲ್ಲ.

ಪಿಶಾಚಿ, ದೆವ್ವ, ಭೂತ, ಇತ್ಯಾದಿ ಜಾನಪದ ನಂಬಿಕೆಗಳಲ್ಲಿ ಮಾನಸಿಕ ಅಲ್ಲೋಲಕಲ್ಲೋಲದಿಂದ, ದೇಹದ ಮೇಲೆ ಆಗುವ ಪರಿಣಾಮಗಳನ್ನು ಸ್ಪಷ್ಟವಾಗಿ ಕಾಣಬಹುದು.

ಮೋಹಿನಿ ಎನ್ನುವ, ಬಿಳಿ ಸೀರೆಯನ್ನುಟ್ಟು, ಬಿಳಿ ಸೆರಗನ್ನು ಹಾರಿಸುತ್ತ, ಕಪ್ಪಂಕತ್ತಲೆಯಲ್ಲಿ ಬೆಳ್ಳಂಬೆಳದಿಂಗಳನ್ನು ಹರಡುತ್ತ, ಪಿಶಾಚಿಯು ಅರೆಗೋಚರವಾಗಿ ತೇಲಾಡುತ್ತದಂತೆ. ಕಾಮಾತುರನಾದ, ಆದರೂ ಸಮಾಜದ ಕಟ್ಟುಪಾಡುಗಳಿಗೆ

ಬಿಗಿಯಲ್ಪಟ್ಟ ಯುವಕನು ಈ ಪಿಶಾಚಿಯನ್ನು ಕಾಣುತ್ತಾನಂತೆ. ಅದನ್ನು ಕಂಡು ಬೆಬ್ಬರಗಾಗುತ್ತಾನಂತೆ. ಆಗ ಮೋಹಿನಿಯೇ ಗೆಜ್ಜೆಗಳನ್ನು ಕುಣಿಸುತ್ತಾ, ಹೆಜ್ಜೆಗಳನ್ನು ಮುಂದುಮುಂದಕ್ಕೆ ಹಾಕಿ, ಚೆಂದೊಳ್ಳಿ ಯುವಕನನ್ನು ಅಪ್ಪಿಕೊಳ್ಳುತ್ತದಂತೆ. ಅಪ್ಪಿಕೊಂಡು, ಅವನ ಸತ್ವವನ್ನೇ ಹೀರಿಬಿಡುತ್ತದಂತೆ. ಅನಂತರ ವಾಸ್ತವಿಕ ಪ್ರಪಂಚದಲ್ಲಿ, ಅವನ ಮಾನ ಮರ್ಯಾದೆಗಳು ಸುರಕ್ಷಿತವಾಗಿರುತ್ತದಂತೆ. ಆದರೆ ಅವನ ದೇಹವು, ಕ್ಷೀಣವಾಗಿ, ಸತ್ವವು ಕರಗುತ್ತಾ ನೀರಾಗುತ್ತದಂತೆ. ಮೋಹಿನೀ ಪಿಶಾಚಿಯು ಹಿಡಿದು ಅದುಮಿಕೊಂಡರೆ ಯವ್ವನದ ಯುವಕನು ಕ್ಷಯಿಸುವನಂತೆ.

ಅ–ಸುರರಿಗೆ, ಪುರಾಣದ ಕತೆಗಳಲ್ಲಿ, ಮೋಹಿನಿಯು ಮೋಸಗೊಳಿಸುವುದನ್ನು ಇಲ್ಲಿ ನೆನಪು ಮಾಡಿಕೊಂಡು, ಪುರಾಣದ ಕತೆಗಳೂ, ಜನರಲ್ಲಿ ರೂಢಿತವಾದ ಪಿಶಾಚಿಗಳ ನಂಬಿಕೆಗಳಿಗೂ, ಇಂದಿನ ಮಾನವ ಮನಸ್ಸಿನ ಅರಿವನ್ನು ಪಡೆಯಲು ಶ್ರದ್ಧೆಯಿಂದ ಶ್ರಮಿಸಿದ ಮನೋವಿಜ್ಞಾನಿಗಳ, ತಾತ್ಕಾಲಿಕ ನಿರ್ಧಾರಕ್ಕೂ, ನಂಟು ಮತ್ತು ಗಂಟು ಇರುವುದನ್ನು ಸ್ಪಷ್ಟವಾಗಿ ಕಾಣಬಹುದು.

ದೆವ್ವ ಹಿಡಿದಿದೆ, ಪಿಶಾಚಿಯು ಮೆಟ್ಟಿಕೊಂಡಿದೆ, ಎಂದು ಕರೆಯಲ್ಪಡುವ ರೋಗಿಗಳು, ನಡವಳಿಕೆಯಲ್ಲಿ ವಿಪರೀತವಾದ ಹಾಗೂ ಅಭಾಸವಾದ ವರ್ತನೆಯನ್ನು ಕಾಣಿಸುತ್ತಾರೆ. ಕೆಲವರು ಬಕಾಸುರನಂತೆ ಮೇಲಿಂದ ಮೇಲೆ ತಿನ್ನುತ್ತಲೇ ಇರುತ್ತಾರೆ. ಧಾಂಡಿಗರಂತೆ ಹೊರವಾಗಿ ಬೆಳೆಯುತ್ತಾರೆ. ಯಾವ ನಿರ್ದಿಷ್ಟ ಕೆಲಸವನ್ನೂ ಮಾಡುವುದಿಲ್ಲ, ಹುಚ್ಚುನಾಯಿಯಂತೆ ಅಲೆದಾಡುತ್ತಾರೆ. ಅವರ ಆ ಕ್ಷಣದ ಇಷ್ಟಕ್ಕೆ ವಿರುದ್ಧವಾಗಿ ಯಾರಾದರೂ ತಡೆ ಹಾಕಿದರೆ, ಹುಚ್ಚಾಪಟ್ಟೆ ರೇಗುತ್ತಾರೆ, ಅಥವಾ ಬೆಪ್ಪು ಬಡಿದವರಂತೆ ಮೂಲೆ ಹಿಡಿಯುತ್ತಾರೆ, ಅಥವಾ ಹಾಸಿಗೆಯಲ್ಲಿ ಉರುಟಿಕೊಂಡಿರುತ್ತಾರೆ. ಮತ್ತೆ ಕೆಲವು ಪಿಶಾಚಿ ಮೆಟ್ಟಿದವರು, ಆಹಾರದ ಮೇಲೆ ನಿರ್ಲಕ್ಷ್ಯವನ್ನು ತೋರಿಸುತ್ತಾರೆ, ಕೃಶರಾಗುತ್ತಾರೆ.

ಪಿಶಾಚಿಗಳು, ದೆವ್ವಗಳು, ಭೂತಗಳು ಇವು ಅಮರಿಕೊಂಡಿವೆ ಎಂದು ಜನರು ಹೇಳುವುದು, ಮಾನಸಿಕ ಪಲ್ಲಟವಾದವರನ್ನು ಕುರಿತು. ದೆವ್ವವು ಹಿಡಿದಿದೆ ಎಂದಾಗ ನಮ್ಮ ಹತೋಟಿಯಲ್ಲಿರದೆ ಇತರ ಯಾವುದೋ ಅಗೋಚರವಾದ ದುಷ್ಟಶಕ್ತಿಯು, ಹೊರಗಿನಿಂದ ಬಂದು ರೋಗಿಯನ್ನು ಕಾಡಿ ನಡಸುತ್ತದೆ ಎಂದು ಭಾವಿಸುತ್ತೇವೆ. ರೋಗಿಯ ತಪ್ಪು ಇದರಲ್ಲೇನೂ ಇಲ್ಲ. ಆದರೆ ಮಾನಸಿಕ ರೋಗವು ಬಡಿದಿದೆ ಎಂದಾಗ, ಅಂತಹ ರೋಗಿಯ ಮನಸ್ಸು ಸಧೃಡವಾಗಿಲ್ಲ, ಆದಕಾರಣ ಪಲ್ಲಟವಾಯಿತು ಎಂಬ ಅರ್ಥವು ಬರುತ್ತದೆ. ರೋಗಿಯ ಸ್ವಂತ ಲೋಪದೋಷಗಳಿಂದ ಹೀಗಾಯಿತು ಎಂದರೆ ರೋಗಿಗೆ

ಅವಮಾನವಾದಂತಾಗುತ್ತದೆ. ಹೀನಾಯ ಮನೋಭಾವವು ರೋಗಿಯ ಮನಸ್ಸಿನಲ್ಲಿ ಉಂಟಾಗುತ್ತದೆ. ರೋಗಿಯ ಮನೆಯ ನೆಂಟರಿಗೂ, ಇದೊಂದು ಅಪಕೀರ್ತಿ ಎಂದನಿಸುತ್ತದೆ. ಪ್ರಾಯಶಃ ಈ ಕಾರಣದಿಂದ, ಮಾನಸಿಕ ಪಲ್ಲಟಗಳ ಒಂದು ಹಂತದಲ್ಲಿ, ಅವನ್ನು ದೆವ್ವ ಹಿಡಿದಿದೆ ಎಂದನ್ನುತ್ತಿದ್ದರೇನೋ ! ಆಗ ಅಪಕೀರ್ತಿಯ ಸೋಂಕು ಮನೆತನಕ್ಕೆ ಬಡಿಯುವುದಿಲ್ಲವಲ್ಲ ! ಒಂದು ಹಂತವನ್ನು ಮೀರಿದರೆ, ಮಾನಸಿಕ ಪಲ್ಲಟದಿಂದಾಗಿ ರೋಗಿಯು ಮನೆಯವರಿಗೆ ಮತ್ತು ಸುತ್ತಲಿನ ಸಮಾಜಕ್ಕೆ ಕಂಟಕವಾಗುತ್ತಾನೆಯೋ, ಆಗ ಹುಚ್ಚು ಬೆಪ್ಪು ಶಿವಲೀಲೆಯು ಹಿಡಿದಿದೆ ಎಂದನ್ನುತ್ತಿದ್ದರು.

ಪರೀಕ್ಷೆಯ ಆತಂಕವು ಹೆಚ್ಚಾಗಿರುತ್ತದೆ. ಮದುವೆಗೆ ನೆರೆದ ಹುಡುಗಿಯನ್ನು ಗಂಡಿನವರು ಬಂದು ನೋಡುತ್ತಾರೆ ಎಂದಾಗ ಹೆಣ್ಣಿನಲ್ಲಿ ಆತಂಕವು ಉಲ್ಬಣವಾಗುತ್ತದೆ. ಕೆಟ್ಟ ಕನಸು ಬಿದ್ದು ನಿದ್ರೆಯನ್ನು ಕೆಡಿಸಿ ಎಚ್ಚರಗೊಳಿಸಿದಾಗ, ಭಯವಾಗಿರುತ್ತದೆ. ಇಂತಹ ಮಾನಸಿಕ ಉದ್ವೇಗವಾದಾಗ, ಹೃದಯವು ನಗಾರಿಯಂತೆ ಡಬ ಡಬ ಹೊಡೆದುಕೊಳ್ಳುತ್ತದೆ. ಇಂತಹವರು ತಮಗೆ ಹೃದಯದ ಬೇನೆಯು ಆರಂಭವಾಗಿರಬಹುದು ಎಂದು ಶಂಕಿಸುತ್ತಾರೆ. ಸಂದೇಹವೇ ಹೃದಯದ ಡಬಡಬವನ್ನು ಇನ್ನೂ ಹೆಚ್ಚಿಸುತ್ತದೆ.

ಪರೀಕ್ಷೆಗೆಂದು ವ್ಯಾಸಂಗ ಮಾಡುತ್ತಿರುವವನಿಗೆ, ಆತಂಕದಿಂದ ಹೃದಯವು ಡಬಡಬ ಮಾಡಿದರೆ ಚಿಕಿತ್ಸೆಗೆಂದು ವೈದ್ಯನ ಬಳಿಗೆ ಹೋಗುತ್ತಾನೆ. ಪರೀಕ್ಷೆಯ ಸಮಯದಲ್ಲಿ ಕಾಯಿಲೆಯು ಬಂತು, ಚಿಕಿತ್ಸೆಯನ್ನು ಪಡೆದೆ. ವ್ಯಾಸಂಗವನ್ನು ಮಾಡಲಾಗಲಿಲ್ಲ, ಎಂಬ ಸಬೂಬನ್ನು ನಪಾಸಾದಾಗ ಹೇಳಿಕೊಂಡು, ಮನಸ್ಸಿಗೆ ಸ್ವಲ್ಪ ಸಮಾಧಾನವನ್ನು ಪಡೆಯಬಹುದು. ಮನೋದೈಹಿಕ ಬೇನೆಗಳು, ಮಾನಸಿಕ ತಳಮಳದ ಸಮಾಧಾನಕ್ಕೆ, ಪ್ರಕೃತಿಯು ಹೂಡುವ ಉಪಾಯ. ಪ್ರಕೃತಿಯ ಇಂತಹ ಉಪಾಯವೇ ಹಿಸ್ಟಿರಿಯಾ ಬೇನೆಗೆ ಮೂಲಭೂತ ಕಾರಣ.

ವಸ್ತುವಾದ ದೇಹಕ್ಕೂ, ಶಕ್ತಿರೂಪವಾದ ಮನಸ್ಸಿಗೂ ನಿಕಟ ಸಂಬಂಧವಿರುವುದನ್ನು ತಿಳಿದೆವು. ಹಚ್ಚಹಸಿರು ಬಳ್ಳಿಯನ್ನು ನೋಡಿದಾಗ, ಅದರಲ್ಲಿ ಕಂಗೊಳಿಸುವ ವರ್ಣವರ್ಣದ ಹೂವನ್ನು ನೋಡಿದಾಗ, ಒಂದು ಇನ್ನೊಂದನ್ನು ಹೇಗೆ ಹುಟ್ಟಿ ಬೆಳೆಸಿತು ಎಂದು ಆಶ್ಚರ್ಯವಾಗುತ್ತದೆ. ಹೂವು ಪಕ್ವವಾಗಿ, ನಂತರ ಕಾಯಾಗಿ, ಹಣ್ಣಾಗಿ, ಬೀಜಗಳನ್ನು ಉತ್ಪಾದಿಸಿ ಎಲ್ಲೆಲ್ಲೂ ಹರಡುತ್ತದೆ. ಅನುಕೂಲವಾದ ನೆಲದಲ್ಲಿ ಬೀಜವು ಬಿದ್ದು, ಮೊಳಕೆಯನ್ನು ಹೂಡಿ, ಬಳ್ಳಿಯು ಬೆಳೆಯಲಾರಂಭಿಸುತ್ತದೆ. ಬಳ್ಳಿ, ಹೂವು ಇವುಗಳ ಪರಸ್ಪರ ಸಂಬಂಧವೇ,

ದೇಹ ಮತ್ತು ಮನಸ್ಸಿಗೂ ಇದೆ ಎಂದು ಸ್ಥೂಲವಾಗಿ ಹೇಳಬಹುದು. ಏಕೆಂದರೆ ಮನಸ್ಸಿನ ಸತ್–ಚೈತನ್ಯಾಂಶದಿಂದ ವಿಶಾಲವಾಗಿ ಹರಡಬಹುದು.

ಮನಸ್ಸಿನ ಒಂದು ಅವಸ್ಥೆಯು ಧ್ಯಾನ ಎಂಬುದು. ಧ್ಯಾನವು ದೇಹದ ಮೇಲೆ ಪವಾಡದಂತೆ ಪರಿಣಾಮವನ್ನುಂಟುಮಾಡುವುದಕ್ಕೆ ಸಾಕ್ಷ್ಯಗಳಿವೆ. ಲೂರ್ಡ್ಸ್ ಎಂಬ ಯಾತ್ರಾಸ್ಥಳದಲ್ಲಿ, ಕ್ಷಯರೋಗದಿಂದ ಉಗ್ರ ರೀತಿಯಲ್ಲಿ ನರಳುತ್ತಿದ್ದ ರೋಗಿಯನ್ನು ಕರೆದೊಯ್ದಾಗ, ರೋಗಿಗೆ ಕೆಲವೇ ತಾಸುಗಳಲ್ಲಿ ಪೂರ್ಣವಾಗಿ ಗುಣವಾಯಿತು. ಇನ್ನೇನು, ಕೆಲವು ದಿನಗಳಲ್ಲಿ ಸಾಯುತ್ತಾಳೆ, ಎಂದು ವೈದ್ಯರು ನಿರ್ಧರಿಸಿದ್ದ ರೋಗಿಯೂ, ಪವಾಡದಂತೆ ಕೆಲವೇ ತಾಸುಗಳಲ್ಲಿ ಗುಣವಾದುದು, ಧ್ಯಾನಮಂದಿರದ ಪ್ರಭಾವದಿಂದ ಎಂದು ಒಪ್ಪಿಕೊಳ್ಳಬೇಕು. ನೊಬೆಲ್ ವಿಜೇತ ಕೀರ್ತಿಶೇಷ ಅಲೆಕ್ಸಿಸ್ ಕ್ಯಾರಲ್, ಈ ಪವಾಡವನ್ನು ವಿವರಿಸಿದ್ದಾನೆ. ಧ್ಯಾನದಿಂದ, ತನ್ನ ದೇಹದ ಮೇಲೆ ಪರಿಣಾಮವಾಗುವುದನ್ನು ಒಪ್ಪಬಹುದು. ಆದರೆ ಧ್ಯಾನ ಮಂದಿರದಲ್ಲಿ ಇತರ ರೋಗಿಗಳ, ನಂಬಿಕೆಯೂ ಇರದ ರೋಗಿಗಳ ದೇಹದ ಮೇಲೆ ತೀವ್ರವಾಗಿ ಉತ್ತಮ ಫಲಿತಾಂಶವು ದೊರೆಯುತ್ತದೆ, ಎನ್ನುವುದನ್ನು ಒಪ್ಪಲು ಬಲು ಕಷ್ಟ. ಆದರೆ ಇಂತಹ ಪವಾಡಗಳು ಆಗಿಯೇ ಇವೆ ; ಆಗುತ್ತಲೂ ಇವೆ–ಹೇಗೆ ಎಂಬುದು ಇಂದಿನ ಮನೋವೈಜ್ಞಾನಿಕ ಹಂತದಲ್ಲಿ ತಿಳಿಯದೆ ಇದ್ದರೂ ಹೀಗೆ ಆಗುತ್ತದೆ ಎಂಬುದನ್ನು ನಂಬಲೇಬೇಕು. ಪ್ರತ್ಯಕ್ಷ ಪ್ರಮಾಣವು. ಇಂತಹ ಪವಾಡವು ಆದರೆ ಇಂತಹ ಉತ್ತಮ ಪರಿಣಾಮವು ಧ್ಯಾನಮಂದಿರಕ್ಕೆ ಹೋದವರಿಗೆಲ್ಲಾ ಲಭಿಸುವುದಿಲ್ಲ. ಏಕೆ ಎಂಬುದು ಯಾರಿಗೂ ತಿಳಿದಿಲ್ಲ. ಹೇಗೆ ಎಂಬುದು ತಿಳಿದ ಮೇಲೆ ಏಕೆ ಎಂದು ಯೋಚಿಸಲು ಸಾಧ್ಯ.

ಧ್ಯಾನಾವಸ್ಥೆಯಲ್ಲಿ, ಮನಸ್ಸನ್ನು ಅವ್ಯಕ್ತವಾಗಿ ನಡಸುವ, ಮನಸ್ಸಿನ ಒಂದು ಅಂಶವಾದ ಸತ್ ಚೈತನ್ಯದಿಂದ, ಇಂತಹ ಪವಾಡಗಳು ನಡೆಯುತ್ತವೆ ಎಂದು, ಇಂದಿನ ವೈಜ್ಞಾನಿಕ ಹಂತದಲ್ಲಿ ವಿಚಾರಪರರು ಊಹಿಸಬಹುದು. ಇದರ ವಿವರಗಳನ್ನು ಮುಂದಿನ ಅಧ್ಯಾಯಗಳಲ್ಲಿ ತಿಳಿಯೋಣ.

**ಸ್ಥಾವರ ಮತ್ತು ಜಂಗಮ**

ರೇಷನ್ ಅಂಗಡಿಯ ಬಳಿಯಲ್ಲಿ ಎರಡು ಗಂಟೆ ಕ್ಯೂ ನಿಂತು, ನಂತರ ಅಂಗಡಿಯವರ ಔದಾರ್ಯದಿಂದ ಎರಡು ವಾರಗಳ ಕೋಟಾವನ್ನು ಒಟ್ಟಿಗೆ ಪಡೆದೆ. ಅಷ್ಟನ್ನೂ ಹೊತ್ತುಕೊಂಡು ಮನೆಯ ಕಡೆಗೆ ಹೊರಟೆ. ರೇಷನ್ ಅಂಗಡಿಯಿಂದ ನನ್ನ ಮನೆಗೆ ಮೂರು ಕಿಲೋಮೀಟರ್ ದೂರವಿದೆ. ಆದರೆ ಭಾರವನ್ನು

ಹೊತ್ತು ನಡೆಯುವಾಗ ಆರು ಹರಿದಾರಿ ನಡೆದಂತೆ ದಣಿವಾಗುತ್ತದೆ. ಅರ್ಧದಾರಿ ನಡೆದಿದ್ದೆ. ಅಲ್ಲೊಂದು ಅಶ್ವತ್ಥ ಕಟ್ಟೆ ಇದೆ. ಅದನ್ನು ಕಂಡಾಗ ಸ್ವಲ್ಪ ಹೊತ್ತು ಕುಳಿತುಕೊಂಡು ವಿಶ್ರಮಿಸಿಕೊಳ್ಳೋಣ ಎನಿಸಿತು; ಕುದುರೆಯನ್ನು ಕಂಡು ಕಾಲು ನೋವು ಕಾಣಿಸಿಕೊಳ್ಳುವಂತೆ. ಸಾಮಾನಿನ ಗಂಟನ್ನಿಳಿಸಿ, ಕಟ್ಟೆಯ ಮೇಲಿಟ್ಟು, ಷರಟಿನ ಗುಂಡಿಯನ್ನು ಬಿಚ್ಚಿ, ಹಾಯಂತ, ನಾಗರಕಲ್ಲನ್ನು ಒರಗಿಕೊಂಡು ಕುಳಿತೆ. ಹಗೂರು ಗಾಳಿಯು ಬೀಸುತ್ತಿತ್ತು. ಅಶ್ವತ್ಥಮರದ ಎಲೆಗಳು ನನಗೆ ಚಾಮರಸೇವೆಯನ್ನು ಮಾಡಿದವು. ದಣಿವು ಕಡಿಮೆಯಾಯಿತು. ತಲೆಯೆತ್ತಿ ಮರವನ್ನು ನೋಡಿದೆ. ಅದನ್ನು ಕಂಡು ಸ್ವಲ್ಪ ಹೊಟ್ಟೆಕಿಚ್ಚಾಯಿತು, ಆಗಂದುಕೊಂಡೆ:

'ಲೋ ಮರವೇ ! ನೀನೇ ಪುಣ್ಯವಂತ. ನೀನು ರಾಜಾ. ಇದ್ದಲ್ಲೇ ಇದ್ದು ಮೆರೆಯುತ್ತಿ, ಅಗತ್ಯವಾದ ಆಹಾರವೆಲ್ಲವೂ ನಿನ್ನ ಬಳಿಗೆ ಹರಿದುಬರುತ್ತದೆ. ಹಾಗೂ ಬೀಸಿ ಬರುತ್ತದೆ. ನಿಂತ ನೆಲದಿಂದ ಆಹಾರವನ್ನು ಮತ್ತು ನೀರನ್ನು ದೌಲತ್ತಿನಿಂದ ಹೀರಿಕೊಳ್ಳುತ್ತಿ. ಬೀಸುವ ಗಾಳಿಯಿಂದ ಅಗತ್ಯವಾದುದನ್ನು ಸೆಳೆದುಕೊಳ್ಳುತ್ತಿ. ನಿನ್ನ ಕಂಡರೆ ಮಾತ್ಸರ್ಯ' ನನಗೆ.

'ನನ್ನ ಪಾಡು ನೋಡು, ಹೆಂಡತಿ ಮಕ್ಕಳ ಕಾಟಕ್ಕೋಸ್ಕರ, ಮತ್ತು ಹೊಟ್ಟೆ ಪಾಡಿಗಾಗಿ ದಿನ ಮೂಡಿದರೆ ನಾಯಿಯಂತೆ ಅಂಡಲೆಯಬೇಕು. ಸಂಪಾದಿಸಿ ರೇಷನ್ ಅಂಗಡಿಗೆ ಹೋಗಿ, ಹಣ ಕೊಟ್ಟರೂ ಭಿಕ್ಷೆ ಬೇಡುವಂತೆ, ಕೈಚಾಚಬೇಕು, ಭಾರದ ಗಂಟನ್ನು ಕತ್ತೆಯಂತೆ ಹೊತ್ತು ಮನೆಗೆ ಹೋಗಬೇಕು. ಅಲ್ಲಿ 'ಇಷ್ಟೇನೇ ತಂದಿದ್ದು' ಎಂಬ ಮೂದಲಿಸುವ ಮಾತುಗಳನ್ನು ಕೇಳಬೇಕು. ರೇಗಿ ಉತ್ತರ ಕೊಡಬೇಕು. ಮಾತಿಗೆ ಮಾತು ಬೆಳೆದು ಎಲ್ಲರ ಮನಸ್ಸೂ ಕಸಿವಿಸಿಯಾಗುತ್ತದೆ. ನೀನೋ ಮಹಾತ್ಮ, ಮೌನಿ. ಯಾರನ್ನೂ ನೀನನ್ನುವುದಿಲ್ಲ. ನಿನ್ನನ್ನು ಕುರಿತು ಯಾರು ಅಂದುಕೊಂಡರೂ ನಿನಗೆ ಕೇಳಿಸುವುದೇ ಇಲ್ಲ. ಆದುದರಿಂದಲೇ ಏನೋ ಮೌನಿಯಾಗಿದ್ದಿ. ನಮ್ಮಂತಹವರನ್ನು ಕಂಡರೆ ಬಿಸುಸುಯ್ಯುತ್ತೀ. ನಿನ್ನ ಅನುಕಂಪವೆಲ್ಲಾ ಅಷ್ಟರಲ್ಲೇ ತೀರಿತು. ನಿಜವಾಗಲೂ ಮಹಾತ್ಮ ನೀನು.'

ಹೀಗೆಂದು ಗಟ್ಟಿಯಾಗಿ ಹೇಳಲಿಲ್ಲ. ಆಜೂಬಾಜೂ ಯಾರೂ ಇಲ್ಲದ್ದರಿಂದ ಗಟ್ಟಿಯಾಗಿ ಹೇಳಿದ್ದರೂ ಅಸೆಂಬ್ಲಿಗಳ ಭಾಷಣದಂತೆ, ಯಾರ ಕಿವಿಗೂ ಬೀಳುತ್ತಿರಲಿಲ್ಲ. ಕೇವಲ ಅರಣ್ಯರೋದನವಾಗುತ್ತಿತ್ತು, ಸ್ವಲ್ಪ ಹೊತ್ತಿನ ಮೇಲೆ ಮನೆಗೆ ಹಿಂತಿರುಗಿದೆ. ಹೆಂಡತಿಯೊಡನೆ ಯಥಾಪ್ರಕಾರ ಗೊಣಗಾಡುತ್ತ ಊಟ ಮಾಡಿದೆ.

ಎಲಡಿಕೆಯನ್ನು ವರಾಂಡಾದಲ್ಲಿ ಜಗಿಯುತ್ತಾ ಕುಳಿತೆ ಒಂಟಿಯಾಗಿ. ಮನಸ್ಸು ವಿಚಾರ ಮಾಡತೊಡಗಿತು.

**ಚರ, ಸ್ಥಿರ**

ಜೀವಂತ ವಸ್ತುಗಳಲ್ಲಿ ಎರಡು ವ್ಯತಿರಿಕ್ತವಾದ ಭಾಗಗಳನ್ನು ಕಾಣಬಹುದು. ಒಂದು ಮರದಂತೆ ಇದ್ದಲ್ಲೇ ಬೆಳೆದು, ಬೀಜಗಳನ್ನು ಹರಡಿ ವೃದ್ಧಿಯಾಗುತ್ತಾ ಇರುವ ಸಸ್ಯವರ್ಗ. ನೆಲಸಿದಲ್ಲೇ ನನ್ನ ಬಾಳಿಗೆ ಅಗತ್ಯವಾದ ಆಹಾರಗಳನ್ನು ನೆಲದಿಂದೂ ಸುತ್ತಲೂ ಬೀಸುವ ಗಾಳಿಯಿಂದಲೂ ದಕ್ಕಿಸಿಕೊಂಡು, ಬದುಕುತ್ತದೆ, ಜೀವಿಸುತ್ತದೆ. ಒಂದು ದೃಷ್ಟಿಯಿಂದ ಇದೇ ಚೆನ್ನು ಎನ್ನಿಸುತ್ತದೆ.

ಎರಡನೆಯದು ಪ್ರಾಣಿವರ್ಗ. ಆಹಾರ ಸಂಪಾದನೆಗಾಗಲೀ ಊಟವನ್ನು ಅಡುಗಿಸುವುದಕ್ಕಾಗಲೀ, ಪ್ರಾಣಿಗಳು ಎಲ್ಲೆಲ್ಲೂ ಅಡ್ಡಾಡಬೇಕು, ಒದ್ದಾಡಬೇಕು ; ಕೂಟದ ಅಮಲೇರಿದಾಗ, ತನ್ನವರೊಂದಿಗೆ ಕಾದಾಡಬೇಕು, ಕುಸ್ತಿ ಮಾಡಬೇಕು. ಆ ಉನ್ಮಾದದಲ್ಲಿ ತನ್ನ ಪ್ರಾಣವನ್ನು ಕಳೆದುಕೊಳ್ಳಲೂಬಹುದು. ಮುಖ್ಯವಾದ ಈ ಎರಡು ಪ್ರೇರಕಗಳಿಂದ ಊಟ ಮತ್ತು ಕೂಟ–ಎಲ್ಲಿಯೋ ಹುಟ್ಟಿ, ಎಲ್ಲಿಯೋ ಬೆಳೆದು, ಎಲ್ಲಿಯೋ ಗೋರಿಯಾಗಬೇಕು. ಪ್ರಾಣಿಗಳಲ್ಲಿ ಅತ್ಯುತ್ತಮನೆಂದು ಕೊಂಡಿರುವ ಮಾನವನು ಕೂಡ, 'ಗುರುಗಳಾಣತಿಯಂತೆ ಚರಿಸುತಿಹನು, ಇರಲಾಗದು ಎರಡು ದಿನವು ಒಂದೆಡೆಯೊಳು.' ಅವನು ಕೂಡ ಇತರ ಪ್ರಾಣಿಗಳೂ ದೇಹವನ್ನು ಪರದಾಡಿಸುವಂತೆ ತನ್ನ ಮನಸ್ಸನ್ನು ಯದ್ವಾ–ತದ್ವಾ ಪರದಾಡಿಸುತ್ತಾನೆ.

ಜೀವಂತ ವಸ್ತುಗಳ ಮುಖ್ಯವಾದ ಈ ಎರಡು ಭಾಗಗಳನ್ನು ಕಂಡಾಗ, 'ನಮ್ಮಂತೆ ಗೋಳು ಕರೆಯಿಲ್ಲದೆ ಧಿಮ್ಮ ರಂಗ ಅಂತ ಮರಗಿಡಗಳಂತೆ ಇದ್ದಲ್ಲೇ ಮೋಜು ಮಾಡುವುದು ಚೆನ್ನ' ಎಂದು ಮಾನವನಿಗೆ ಅನಿಸುತ್ತದೆ. ಸಸ್ಯವರ್ಗವನ್ನು ಸ್ಥಾವರ ಎಂದರು. ಪ್ರಾಣಿವರ್ಗವನ್ನು ಜಂಗಮ ಎಂದರು.

* * *

ಪ್ರಕೃತಿಯ ಪ್ರಗತಿಯ ಒಂದು ಹಂತದಲ್ಲಿ, ಮಾನವನ ವಿಚಾರಪರ ಮನಸ್ಸು ಅದ್ಭುತವಾಗಿ ಬೆಳೆಯತೊಡಗಿತು. ಅದನ್ನು ಬೆಳೆಸಿಕೊಳ್ಳುತ್ತಾ, ಮಾನವನು ಪ್ರಕೃತಿಯನ್ನೇ ಹತೋಟಿಯಲ್ಲಿಡತೊಡಗಿದ.

ಪ್ರಾಣಿಗಳಲ್ಲಿ ಅತ್ಯಂತ ನಿಸ್ಸಹಾಯಕ ಪ್ರಾಣಿ ಎಂದರೆ, ಕಾಡುಮನುಷ್ಯ, ಆದಿಮಾನವ. ಆನೆಯು ತನ್ನ ಘನಪ್ರಮಾಣ, ಅದರಿಂದಾಗಿ ಲಭಿಸಿದ ಬಲದಿಂದ,

ಕಾಡುಪ್ರಾಣಿಗಳ ಸ್ಪರ್ಧಾಜೀವನದಲ್ಲಿ ಬದುಕಿ ಉಳಿಯಲು ಸಾಧ್ಯವಾಯಿತು. ಸಿಂಹ ಮತ್ತು ಹುಲಿಗಳು, ತಮ್ಮ ದೇಹಬಲದಿಂದ, ಹಾಗೂ ಚುರುಕು ವೇಗದಿಂದ, ತಮ್ಮ ಇರುವಿಕೆಯನ್ನು ಮುಂದುವರೆಸಿಕೊಂಡವು. ಹುಲ್ಲೇ, ಚಿಗರೆ, ಕುದುರೆ ಮುಂತಾದುವು ಅತಿವೇಗದ ಓಡುವಿಕೆಯನ್ನು ಸಾಧಿಸಿಕೊಂಡು, ತಮ್ಮ ವಂಶಗಳನ್ನು ಉಳಿಸಿಕೊಂಡವು. ಪಕ್ಷಿಗಳು ಎತ್ತರದಲ್ಲಿ ಹಾರಾಡುವುದರಿಂದ, ನೆಲದ ಮೇಲೆ ಜೀವಿಸುವ ಶತ್ರು ಪ್ರಾಣಿಗಳಿಂದ, ರಕ್ಷಣೆಯನ್ನು ಪಡೆದವು. ಆದರೆ ಆಹಾರಕ್ಕಾಗಿ ಭೂಮಿಗೆ ಇಳಿಯಬೇಕಾಯಿತು. ಸಂಸಾರವನ್ನು ನಡಸಿ, ವಂಶಾಭಿವೃದ್ಧಿಯನ್ನು ಮುಂದುವರೆಸಲು, ಮರಗಳಲ್ಲಿ ಗೂಡನ್ನು ಕಟ್ಟಿಕೊಳ್ಳಬೇಕಾಯಿತು. ಉರಗಗಳು ನೆಲದಮೇಲೆ ಹರಿದಾಡುತ್ತ, ಎಲೆಬಳ್ಳಿಗಳ, ಕಲ್ಲುಮಣ್ಣುಗಳ, ಮರೆಯಲ್ಲಿ ರಕ್ಷಣೆಯನ್ನು ಪಡೆಯುತ್ತ, ಬಾಳಿ ಬದುಕುತ್ತಿದ್ದುವು. ಪಕ್ಷಿಗಳು ಅಂದರೆ ಖಗಗಳು ! ಉರಗಗಳು ಎಂದರೆ ಹರಿದಾಡುವುವು, ಇವೆರಡೂ ಜೀವದ ಒಂದೇ ಕಿರುರೆಂಬೆಯಿಂದ ಕವಲೊಡೆದು ಬಾಳತೊಡಗಿದುವು. ಹುಟ್ಟುವಾಗ ಅಣ್ಣತಮ್ಮಂದಿರು ಬೆಳೆದ ಮೇಲೆ ದಾಯಾದಿಗಳು ಎನ್ನುವ ಗಾದೆಗೆ, ಖಗ–ಉರಗಗಳು ಒಂದು ಪುರಾತನ ನಿದರ್ಶನ. ಪಕ್ಷಿಗಳು ಹಾವುಗಳನ್ನು ಕಂಡಾಗ, ದಕ್ಕಿಸಿಕೊಳ್ಳುತ್ತವೆ, ನವಿಲು, ಗರುಡ ಇತ್ಯಾದಿಗಳು ಭಾರೀ ಹಾವುಗಳನ್ನೂ ಕುಕ್ಕಿ ಕೊಂದು ಉಣ್ಣುತ್ತವೆ. ಪಕ್ಷಿಗಳು ಮರಗಳಲ್ಲಿ ಗೂಡನ್ನು ಕಟ್ಟಿಕೊಂಡು, ಮೊಟ್ಟೆಯನ್ನಿಟ್ಟಾಗ, ಉರಗಗಳು ಮರವನ್ನೇರಿ, ಶತ್ರುಗಳಾದ ಪಕ್ಷಿಗಳ ಮೊಟ್ಟೆಗಳನ್ನು ಕಬಳಿಸುತ್ತವೆ.

ಕತ್ತೆಗಳಂತೆ, ಕುದುರೆಗಳಂತೆ ಮನುಷ್ಯನು ಹಿಂಗಾಲುಗಳಿಂದ ಒದ್ದು ಶತ್ರುವನ್ನು ಕುಂಟಿಸಲಾರ ; ಹುಲಿಗಳಂತೆ, ಸಿಂಹಗಳಂತೆ ಕಳ್ಳತನದಲ್ಲಿ ಹಿಂಬಾಲಿಸಿ, ಥಂಗಿಸಿ ಒಂದೇ ಏಟಿಗೆ ದನವನ್ನು ಕೊಂದು ಆಹಾರವನ್ನು ಪಡೆಯಲಾರ ; ಹದ್ದುಗಳಂತೆ ತೀಕ್ಷ್ಣ ದೃಷ್ಟಿಯನ್ನು ಪಡೆದು, ನೆಲದ ಮೇಲೆ ನಡೆಯುವ ಪ್ರಾಣಿಯನ್ನು ಕಂಡು, ವಾಯುವೇಗದಿಂದ ಇಳಿದುಬಂದು, ಕಾಲುಗಳಲ್ಲಿ ಅದನ್ನು ಹಿಡಿದು, ಸರ್ರಂತ ತಿರುಗಿ ಆಕಾಶದತ್ತ ಹಾರಿ ಹೋಗಲಾರ, ಇತ್ಯಾದಿ ಇತ್ಯಾದಿ.

ಆದರೆ ನಿಸ್ಸಹಾಯಕನಾಗಿದ್ದ ಆದಿಮಾನವನು ತನ್ನ ವಿಚಾರಪರ ಮನಸ್ಸನ್ನು ಅಮೋಘವಾಗಿ ಬೆಳೆಸಿಕೊಂಡು, ಯಂತ್ರವನ್ನು ರಚಿಸಿದ್ದಾನೆ. ಇಂದು ಅವನು ಗಿಡಗಳ ದೃಷ್ಟಿಗಿಂತ, ಲಕ್ಷಲಕ್ಷ ಪಾಲು ಹೆಚ್ಚು ಚುರುಕಾದ ದೃಷ್ಟಿಯನ್ನು ಮೈಕ್ರೋಸ್ಕೋಪ್, ಮತ್ತು ಟೆಲಿಸ್ಕೋಪುಗಳ ಮೂಲಕ ಸಾಧಿಸಿಕೊಂಡಿದ್ದಾನೆ. ವಿಮಾನಗಳನ್ನು ಸೃಷ್ಟಿಸಿ, ರಣಹದ್ದುಗಳಿಗಿಂತ ಸಾವಿರಾರು ಪಾಲು ವೇಗವಾಗಿ ಹಾರಬಲ್ಲವನಾಗಿದ್ದಾನೆ. ದೂರವಾಣಿ ಯಂತ್ರಗಳ ಸಹಾಯದಿಂದ ತನ್ನ ಕಿವಿಯ

ಚುರುಕನ್ನು ಅತ್ಯಂತ ಪರಿಣಾಮಕಾರಿಯಾಗಿ ಹೆಚ್ಚಿಸಿಕೊಂಡಿದ್ದಾನೆ. ತಿಮಿಂಗಿಲಗಳಿಗಿಂತಲೂ ಬಹಳ ದೊಡ್ಡದಾದ ಹಡಗುಗಳನ್ನು ಕಟ್ಟಿ ವೇಗವಾಗಿ ಸಮುದ್ರದಮೇಲೆ ಸಂಚರಿಸ ತೊಡಗಿದ್ದಾನೆ. ಗುರುತ್ವಾಕರ್ಷಣ ಶಕ್ತಿಯಿಂದ ಜಿಗಿದು ತೂಕ ರಹಿತ ಸ್ಥಿತಿಯಲ್ಲಿರುವುದನ್ನು ಸಾಧಿಸಿದ್ದಾನೆ. Whatever goes up must come down ಎಂದು ಮೊದಲು ಗಾದೆಯನ್ನು ಕಟ್ಟಿದ್ದರು. ಈಗ whatever goes up may become a satellite ಎನ್ನಬಹುದು. ಮನಸ್ಸಿನ ವಿಚಾರಪರಭಾಗದ ಅದ್ಭುತ ಪ್ರಗತಿಯಿಂದಾಗಿ, ಇಂದಿನ ಮಾನವನು ಭೂಮಿಯ ಮೇಲಿನ ಇತರ ಜೀವಿಗಳ ಮೇಲೆ ಹಾಗೂ ಪ್ರಕೃತಿಯ ಮೇಲೆ ಕೂಡ ಸ್ವಲ್ಪಮಟ್ಟಿಗೆ ಹತೋಟಿಯನ್ನು ಪಡೆದುಕೊಂಡಿದ್ದಾನೆ.

ಮಾನವನು ಜಂಗಮ ಪ್ರಾಣಿ. ಇಂದಿನ ಅತ್ಯದ್ಭುತ ಸಾಧನೆಗಳನ್ನು ಕರಗತ ಮಾಡಿಕೊಟ್ಟ ಅವನ ವಿಚಾರಪರ ಮನಸ್ಸೂ ಜಂಗಮವೇ, ಅದೂ ಪರದಾಡುತ್ತಿರುತ್ತದೆ, ಅವನ ಪ್ರಾಣಿಸ್ವಭಾವಕ್ಕನುಗುಣವಾಗಿ.

ಮನುಷ್ಯನು ಸ್ಥಾವರ ಸ್ಥಿತಿಗೆ ಬರುವುದುಂಟೇ? ಉಂಟು. ಹಣ್ಣು ಹಣ್ಣು ಮುಪ್ಪು ಮೂಡಿದ ಮೇಲೆ ಮನೆಗೊಂದು ಮುದಿಗೊರಡಾಗುತ್ತಾನೆ. ಅವನ ದೇಹವು ಬಹುಮಟ್ಟಿಗೆ ಸ್ಥಾವರ ಸ್ಥಿತಿಗೆ ಬಂದರೂ, ಅವನ ಮನಸ್ಸು, ಅರಳುಮರುಳಾಗಿದ್ದರೂ ಪರದಾಡುತ್ತದೆ. ಚಿಂತಾಕ್ರಾಂತವಾಗಿ ಪರದಾಡುತ್ತದೆ. ಅಂದರೆ ದೇಹವು ಸ್ಥಾವರ ಸ್ಥಿತಿಗೆ ಕಾಲಗತಿಯಲ್ಲಿ ಬಂದರೂ, ಮನಸ್ಸು ಅದಕ್ಕನುಗುಣವಾಗಿ ತೆಪ್ಪಗಿರುವುದಿಲ್ಲ. ಮನಸ್ಸನ್ನು ಚಂಚಲತೆಯಿಂದ ಪಾರುಮಾಡಿ, ಜಂಗಮ ಸ್ಥಿತಿಯಿಂದ ಮುಂದೂಡಿ, ಶೂನ್ಯ ಸಂಪಾದನೆಯನ್ನು ಎಂದರೆ, ಸಮಾಧಿಸ್ಥಿತಿಯನ್ನು ಪಡೆಯಬೇಕಾದರೆ, ಧಾರಣ ಧ್ಯಾನಗಳನ್ನು ಮನಸ್ಸು ಅಭ್ಯಸಿಸಬೇಕು. ಆಗ ಮನಸ್ಸು ಸ್ಥಾವರವಾಗಲು ಸಾಧ್ಯ.

ಧಾರಣಾ ಧ್ಯಾನಗಳು ತೋರ ಮನಸ್ಸಿನಿಂದ The conscious Mind ನಿಂದ ಅಭ್ಯಸಿಸಲ್ಪಡುತ್ತದೆ. ಆಳ ಮನಸ್ಸಿನ ಪದರಗಳು ಕಾಣುವುದಿಲ್ಲ. ಸಮಾಧಿ ಸ್ಥಿತಿಯಲ್ಲಾದರೋ, ಆಳಮನಸ್ಸಿನ ಪದರಗಳೆಲ್ಲವೂ ಸ್ಪಷ್ಟವಾಗಿ, ನಿಖರವಾಗಿ, ಸಾಕ್ಷಾತ್ ಆಗುತ್ತದೆ ಎಂದು ಅಂತಹ ಅನುಭವವನ್ನು ಸವಿದವರು ಹೇಳಿದ್ದಾರೆ. ನಂಬದಿರಲು ನಮಗೆ ಅಧಿಕಾರವಿಲ್ಲ. ಯೋಗ್ಯತೆಯೂ ಇಲ್ಲ.

ಸ್ಥಾವರ ಸ್ಥಿತಿಗೆ ಮನಸ್ಸನ್ನು ಬಿಗಿಹಿಡಿದು ತಂದು, ಅಲ್ಲಿ ಸುಭದ್ರವಾಗಿ ನಿಲ್ಲಿಸಬೇಕಾದರೆ, ಚಿತ್ರ ವಿಚಿತ್ರವಾದ ವಿಧವಿಧವಾದ ಕಾಮನೆಗಳು ಸೆಳೆಯದಂತೆ ಜಾಗರೂಕರಾಗಬೇಕು. ಸಂಸಾರದಲ್ಲಿದ್ದವರಿಗೆ ಆಸೆ ಆಕಾಂಕ್ಷೆಗಳಿಗೆ ಮಿತಿಯೇ

ಇರುವುದಿಲ್ಲ. ಸಂಸಾರದಲ್ಲಿ ಬೇರೂರಿ ಮರಗಳಂತೆ ಸ್ಥಾವರವಾಗಿರುತ್ತಾರೆ. ಆದರೆ ಮನಸ್ಸು ಪರದಾಡುತ್ತಿರುತ್ತದೆ ; ಸಂಸಾರದ ವಿಷಯಗಳನ್ನು ಕುರಿತು. ಯಾವ ವೈಯ್ಯಕ್ತಿಕ ಆಸೆ ಆಕಾಂಕ್ಷೆಗಳೂ ಇಲ್ಲದೆ, ಲೋಕಕಲ್ಯಾಣದ ನಿಸ್ವಾರ್ಥೀ ಆಸೆಯೊಂದನ್ನು ಮಾತ್ರ ಹೊಂದಿರುವ ಕೆಲವರನ್ನು, ಮನಸ್ಸನ್ನು ನಡಸುವ ಸತ್–ಚೈತನ್ಯದ ಅಂಶವನ್ನು ಅರಿಯಲೆತ್ನಿಸುವವರನ್ನು ಸಂನ್ಯಾಸಿಗಳು, ಜಂಗಮರು, ಎಂದು ಸಮಾಜವು ಗೌರವಿಸುತ್ತದೆ. ಇದ್ದ ಊರಲ್ಲಿ ಹೆಚ್ಚುದಿನಗಳು ಇವರುಗಳು ಇರಬಾರದು ಎಂದು ನಿಯಮವನ್ನು ಮಾಡಿದರು. ಯಾವುದರೊಂದಿಗೂ ಅಂಟಿಕೊಳ್ಳಬಾರದೆಂದು.

* * *

ಸಸ್ಯ ವರ್ಗವು ಸ್ಥಾವರ ಎಂದೆವು. ಇದ್ದಲ್ಲೇ ಬೇರೂರಿ ಜೀವಮಾನವನ್ನೂ ಕಳೆಯುತ್ತದೆ ಎಂದೆವು. ಸಸ್ಯಗಳಿಗೆ ಮನಸ್ಸು ಇದೆಯೇ? ಇದ್ದರೆ ಪ್ರಾಣಿಗಳಲ್ಲಿರುವಂತೆ ವಿಚಾರಪರ ಮನಸ್ಸು ಇದೆಯೇ? ಇದ್ದರೆ ಸಸ್ಯಗಳ ಮನಸ್ಸೂ ಜಂಗಮವಾಗಿರಬೇಕಲ್ಲವೇ? ಮರಗಿಡಗಳಿಗೂ ಮನುಷ್ಯಪ್ರಾಣಿಗೂ ಇರುವ ಹಿರಿಯ ವ್ಯತ್ಯಾಸವನ್ನು ಈ ಪ್ರಶ್ನೆಗಳ ಉತ್ತರಗಳಿಂದ ನಿರ್ಧರಿಸಬಹುದು.

ಸಸ್ಯಗಳಲ್ಲಿ, ಅವುಗಳ ಒಡಲಿನ ಕೆಲಸಕಾರ್ಯಗಳನ್ನು ಒಗ್ಗೂಡಿಸಲು, ಸಮನ್ವಯಿಸಲು, ಮನಸ್ಸಿನಂತಹ ಶಕ್ತಿಯೊಂದು ಇರಲೇಬೇಕು. ಹೊರವಲಯದಲ್ಲಿ ನಡೆಯುತ್ತಿರುವ ವ್ಯತ್ಯಾಸಗಳಿಗೆ ಸಸ್ಯವು ಪ್ರತಿಕ್ರಿಯೆನ್ನು ಹೂಡಬೇಕು. ಇಂದ್ರಿಯಗಳು ಪ್ರಾಣಿಗಳಲ್ಲಿರುವಂತೆ, ಹೊರವಲಯದ ವಿಷಯವನ್ನು ಮರಗಳಿಗೆ ತಿಳಿಸಲು, ಇಂದ್ರಿಯಗಳಂತೆ ಸುದ್ದಿಯನ್ನು ಕೊಡುವ ಅಂಗಗಳಿರಬೇಕು. ಇವುಗಳಿಂದ ಬಂದ ಸುದ್ದಿಯನ್ನು ಕ್ರೋಡೀಕರಿಸಿ ಜರಡಿ ಹಿಡಿದು ಯಾವ ಸುದ್ದಿಗೆ ಪ್ರತಿಕ್ರಿಯೆಯನ್ನು ಹೂಡಬೇಕು ಎಂದು ನಿರ್ಧರಿಸುವ ವ್ಯವಸ್ಥೆಯು ಇರಬೇಕು. ಈ ವ್ಯವಸ್ಥೆಯು ಮನಸ್ಸಿನಂತೆ.

ಆದರೆ ವಿಚಾರವನ್ನು, ಸ್ಮರಣೆಗಳ ನೆರವಿನಿಂದ ಮಾಡುವ Brain-Cortexನ ತರಹ ವ್ಯವಸ್ಥೆಯು ಸಸ್ಯವರ್ಗದಲ್ಲಿ ಇರುವಂತೆ ಕಂಡುಬರುವುದಿಲ್ಲ. ಪ್ರಾಯಶಃ ಸ್ಥಾವರ ಜೀವಿಗಳಲ್ಲಿ. Brain-Cortex ತರಹ ಬೆಳವಣಿಗೆಯು ಅಗತ್ಯವಿರುವುದಿಲ್ಲವೇನೋ? ಪ್ರಚೋದನೆ ಇದ್ದರೆ ವೃದ್ಧಿ ; ಅಭಿವೃದ್ಧಿ. ಇದ್ದಲ್ಲೇ ಭದ್ರವಾಗಿದ್ದರೆ, ಪ್ರಚೋದನೆಯು ಇರುವುದಿಲ್ಲ.

ಬೆಳಕು, ಸಸ್ಯಗಳನ್ನು ತನ್ನ ಕಡೆಗೆ ವಾಲಿಸಿಕೊಳ್ಳುತ್ತದೆ. ಶಬ್ದವು, ವಿಹಿತವಾದ ಸಂಗೀತದಂತಿದ್ದರೆ, ಸಸ್ಯಗಳ ಬೆಳವಣಿಗೆಗೆ ಸಹಾಯವಾಗುತ್ತದೆಯಂತೆ. ಕೀರ್ತಿಶೇಷ

ಜಗದೀಶ್‌ಚಂದ್ರ ಬೋಸ್ ಅವರು, ಅತ್ಯಂತ ಸೂಕ್ಷ್ಮವಾದ ಯಂತ್ರಗಳನ್ನು ಅಣಿಮಾಡಿ, ಗಿಡಗಳಿಗೆ ಮನಸ್ಸಿನಂತಹ ಶಕ್ತಿಯು ನೆರವಾಗುತ್ತದೆ, ಎಂದು ಪ್ರಯೋಗಗಳನ್ನು ನಡಸಿ ಸಿದ್ಧಾಂತ ಮಾಡಿದರು. ಸಸ್ಯವರ್ಗದಲ್ಲಿ ಇರಬಹುದಾದ ಅಂತಹ ಮನಸ್ಸಿನಂತಿರುವ ಶಕ್ತಿಯು, ಪ್ರಾಣಿಗಳಿಗೆ ಹೋಲಿಸಲ್ಪಟ್ಟರೆ ಶೈಶವಾಸ್ಥೆಯಲ್ಲಿದೆ ಎನ್ನಬೇಕು.

ಅಂದಮೇಲೆ ಸ್ಥಾವರ ಸಸ್ಯಗಳಲ್ಲಿ, ಮನಸ್ಸಿನಂತಿರುವ ಶಕ್ತಿಯು ಇದ್ದರೆ, ಅದು ಶೈಶವಾವಸ್ಥೆಯಲ್ಲಿದ್ದು, ಸ್ಥಾವರವಾಗಿರುತ್ತದೆ, ಜಂಗಮವಾಗಿರುವುದಿಲ್ಲ ಎನ್ನಬಹುದು. ಇಂದಿನ ಮಾನವನ ಪ್ರಗತಿಹೊಂದಿದ ಅದ್ಭುತವಾದ ಮನಸ್ಸಿಗೂ, ಸಸ್ಯ ವರ್ಗದಲ್ಲಿರಬಹುದಾದ ಮನಸ್ಸಿನಂತಹ ಶಕ್ತಿಗೂ, ಅರ್ಥಾರ್ಥಕ ಸಂಬಂಧವಿಲ್ಲ.

**ಆಲಯ ಮತ್ತು ಬಯಲು**

ನನ್ನ ದೇಹ ಮತ್ತು ಮನಸ್ಸುಗಳ ಒಕ್ಕೂಟವನ್ನು 'ನಾನು' ಎಂದು ದೃಢವಾಗಿ ನಂಬಿದ್ದೇನೆ. ದೇಹಕ್ಕೆ ಗಡಿಯಿದೆ, ಮಿತಿ ಇದೆ. ಅದರ ಸುತ್ತಲೂ ಇರುವ ಪರಿಸರದಿಂದ ಸುದ್ದಿಗಳನ್ನು ಪಡೆದು, ನಾನು ಸುರಕ್ಷಿತವಾಗಿರಲು ಸುಖಪಡಲು ಹಾಗೂ ದುಃಖವಾಗದಂತೆ ಜಾಗರೂಕನಾಗಲು ಪ್ರಯತ್ನಿಸುತ್ತೇನೆ. ನಿಖರವಾದ ಗಡಿರೇಖೆಗಳಿರುವ, ನನ್ನ ದೇಹ ಮತ್ತು ಮನಸ್ಸಿನ ಒಕ್ಕೂಟವನ್ನು 'ಆಲಯ' ಎಂದು ಹತ್ತು ಹನ್ನೆರಡನೆಯ ಶತಮಾನದಲ್ಲಿ ಮನನಿಗರು ಕರೆಯುತ್ತಿದ್ದರು.

ನಾನು ಎಂದುಕೊಳ್ಳುವ ಆಲಯದ ಗಡಿರೇಖೆಗಳನ್ನು ದೇಹದ ದೃಷ್ಟಿಯಿಂದ ವಿಸ್ತರಿಸಿಕೊಳ್ಳುವುದು ಅಲ್ಪಸ್ವಲ್ಪ ಮಾತ್ರ ಧಡಿಯರಾಗುವುದರಿಂದ ಸಾಧ್ಯ. ಆದರೆ ಮನಸ್ಸಿನ ದೃಷ್ಟಿಯಿಂದ ಸುಲಭವಾಗಿ ವಿಸ್ತರಿಸಿಕೊಳ್ಳಬಹುದು. ಸುರಕ್ಷಿತವಾಗಿ ಇರಲು ಕಟ್ಟಿಕೊಂಡ ನಾಲ್ಕೂ ಗೋಡೆಗಳಿಂದ ಆವೃತವಾದ ಮನೆಯನ್ನು ನನ್ನ ಆಲಯ ಎಂದುಕೊಳ್ಳುತ್ತೇನೆ. 'ನಾನು' ಆಲಯವೆಂಬ ಕಲ್ಪನೆಯು, ಈಗ ವಿಶಾಲಗೊಂಡು, ನನ್ನ ಮನೆಯನ್ನೂ, ಒಳಗೊಂಡಿತು, ಏಕೆ ? ಮನಸ್ಸು ಹಾಗೆ ಅಂದುಕೊಂಡುದರಿಂದ, ಸ್ವಾರ್ಥದಿಂದ ಪ್ರಚೋದಿತವಾದರೂ, ಮನಸ್ಸು ವಿಶಾಲವಾಯಿತು, ಆಲಯವು ತುಸು ಹಿರಿದಾಯಿತು. ನನ್ನ ಗ್ರಾಮ ನನ್ನ ಊರು ಎಂಬ ಭಾವನೆಯು ನಂತರ ಮನಸ್ಸಿನಲ್ಲಿ ಉಂಟಾಯಿತು. ಅಂದರೆ ಮನಸ್ಸಿನಿಂದಾಗಿ ಆಲಯವು ಮತ್ತೂ ವಿಶಾಲಗೊಂಡಿತು. ನನ್ನದೇಶ, ನನ್ನ ರಾಷ್ಟ್ರ, ಎಂಬ ಭಾವನೆಯು ಮನಸ್ಸಿನಲ್ಲಿ ಬೇರೂರಿದಾಗ, ನನ್ನ ಆಲಯದ ಗಡಿಯು ಅಪಾರವಾಗಿ ವಿಸ್ತರಿಸಿತು. ಭೂಲೋಕವೇ ನನ್ನದು ಎಂಬ ಭಾವನೆಯು ಆನಂತರ ಬೆಳೆಯ

ತೊಡಗಿತು. One world is my world ಎಂಬ ಭಾವನೆಯು ಉಂಟಾದಾಗ, ನನ್ನ ಆಲಯದ ಗಡಿಯು ಭೂಮಂಡಲದ ಗಡಿಯಾಯಿತು. ಬ್ರಹ್ಮಾಂಡದಲ್ಲಿ, ಭೂಮಂಡಲದ ಹೊರಗಿರುವುದೆಲ್ಲಾ ಬಯಲು ಎಂದಾಯಿತು.

ದೇಹವನ್ನು ನನ್ನ ಆಲಯ ಎಂದುಕೊಂಡ ಮನಸ್ಸು, ಅಮಿತವಾಗಿ ವಿಸ್ತರಿಕೊಂಡು ಬ್ರಹ್ಮಾಂಡವು ನನ್ನದು, ಎಂದು ಅರಿತುಕೊಂಡರೆ, ಆನಂತರ ಬಯಲಾವುದು? ಆಲಯವು ಯಾವುದು? ಗುರುತಿಸಲು ಗಡಿಯೇ ಇರದಿದ್ದರೆ, ಆಲಯವು ಮತ್ತು ಬಯಲು ಎರಡೂ ಒಂದೇ. ಮನಸ್ಸಿನ ಭಾವನೆಯು ಆಲಯ ಮತ್ತು ಬಯಲು ಎನ್ನುವ ವಿಂಗಡಣೆಯನ್ನು ಮಾಡಿಕೊಂಡಿದೆ. ಮನಸ್ಸನ್ನು ವಿಶಾಲಗೊಳಿಸುವ ಇಂತಹ ಭಾವನೆಯು, ಮನಸ್ಸಿನ ಸತ್–ಚೈತನ್ಯ ಎಂಬ ಭಾಗದಿಂದ ಸಾಧ್ಯವಾಗುತ್ತದೆ.

**ಬಯಲು ಆಲಯದೊಳಗೊ, ಆಲಯವು ಬಯಲೊಳಗೊ**

**ಬಯಲು ಆಲಯವೆರಡು ನಿನ್ನೊಳಗೊ ದೇವಾ !**

ಎಂದು ದಾಸವರ್ಯರು, ಅತಿಮಾನವ ಸ್ಥಿತಿಯಲ್ಲಿದ್ದಾಗ, ಅವರ ಮನಸ್ಸಿನ ಸತ್ ಚೈತನ್ಯಾಂಶವು ಪ್ರಜ್ವಲಿಸುತ್ತಿದ್ದಾಗ, ನುಡಿದುದರಿಂದ, ಆ ವಾಕ್ಯಗಳು ಚಿರಂ–ಜೀವಿಯಾಗಿವೆ.

**ಬಯಲರೂಹು ಮಾಡ ಬಲ್ಲಾತನೆ ಶರಣನು**

**ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭವಿ**

**ಈ ಉಭಯ ವೊಂದಾದರೆ ನಿಮ್ಮಲ್ಲಿ ತೆರಹುಂಟೆ**

**ಕೂಡಲ ಸಂಗಮ ದೇವಾ**

ಎಂದು ಸಂತ ಬಸವಣ್ಣನವರು ನುಡಿದುದೂ, ಹೀಗೆಯೇನೇ.

ದೇಹ–ಮನಸ್ಸಿನ ಒಕ್ಕೂಟವನ್ನು, ಆಲಯ ಎಂದು ನಾನು ಅಂದುಕೊಂಡಾಗ ನನ್ನ ಹೊರಗೆ ಸುತ್ತಲೂ ಇರುವ ಪರಿಸರವನ್ನು ಬಯಲು ಎಂದುಕೊಳ್ಳುತ್ತೇನೆ. ಬಯಲಿನ ಅರಿವನ್ನು ಪಡೆಯಲು ಪಂಚೇಂದ್ರಿಯಗಳನ್ನು ; ವಿಚಾರಪರ ಮನಸ್ಸನ್ನೂ ಮತ್ತು ಸ್ಮರಣಾ ನೆರವನ್ನು ಪಡೆಯುತ್ತೇನೆ. ಆಲಯದಲ್ಲಿ ನಡೆಯುವ ವಿಷಯಗಳನ್ನು, ಅಂದರೆ ನನ್ನ ದೇಹ–ಮನಸ್ಸಿನ ಒಕ್ಕೂಟದಲ್ಲಿ ನಡೆಯುವ ವ್ಯವಹಾರಗಳನ್ನು ದೇಹಶಾಸ್ತ್ರದ ಅಧ್ಯಯನದಿಂದ ತಿಳಿಯುತ್ತೇನೆ. ಹಾಗೂ ಮನಃಶಾಸ್ತ್ರದ ಮನಃಶಾಸ್ತ್ರದ ಅಧ್ಯಯನದಿಂದಲೂ ತಿಳಿಯಲೆತ್ನಿಸುತ್ತೇನೆ. ಮನಸ್ಸಿನ ಸತ್–ಚೈತನ್ಯದ ಅಂಶವು ವೈಜ್ಞಾನಿಕ ಸಂಶೋಧನೆಗೆ ಇಂದಿನ ಹಂತದಲ್ಲಿ ಸುಲಭವಾಗಿ ಸಿಕ್ಕುವುದಿಲ್ಲ. ಆದರೂ ಆ ಅಂಶದ ಅರಿವು ಸ್ವಲ್ಪಮಟ್ಟಿಗಾದರೂ ತಿಳಿಯುತ್ತದೆ. ಈ ವಿಷಯವನ್ನು

ಮುಂದೆ ವಿವರವಾಗಿ ತಿಳಿಯುವ; ಮನಃಶಾಸ್ತ್ರದ ವೈಜ್ಞಾನಿಕ ಪ್ರಗತಿಯೊಂದಿಗೆ, ಸಮನ್ವಯ ಮಾಡಿಕೊಂಡು.

'ನಾನು' ಎಂದುಕೊಳ್ಳುವ ನಂಬಿಕೆಯನ್ನು ದೃಢಪಡಿಸುವುದು ಮನಸ್ಸಿನ ಒಂದು ಮುಖ್ಯ ಅಂಶ ಎಂದೆವು. ಮನಸ್ಸಿನ ಈ ಅಂಶವು ಶೈಶವಾವಸ್ಥೆಯಲ್ಲಿ ಅತ್ಯಲ್ಪವಾಗಿರುತ್ತದೆ. ಬಾಲ್ಯದಲ್ಲಿ ಅಭಿವೃದ್ಧಿಗೊಳ್ಳುತ್ತದೆ. ಪ್ರಾಯದಲ್ಲಿ ಹೊರವಾಗುತ್ತದೆ. ಮುಪ್ಪಿನಲ್ಲಿ ಬೆಳೆಯದೆ ಇದ್ದರೂ. ಪ್ರಾಯದಲ್ಲಿ ಇದ್ದಂತೆಯೇ ಉಳಿಯುತ್ತದೆ.

ದೇಹದ ಒಳಗಿನ ಕಾರ್ಯಕ್ರಮಗಳನ್ನು, ನಾಡಿಯ ಬಡಿತ, ಉಸಿರಾಡುವಿಕೆ, ಮುಂತಾದುವನ್ನು ಮನಸ್ಸಿನ ಈ ಅಂಶವು ವ್ಯವಸ್ಥೆ ಮಾಡುತ್ತದೆ.

Walter B cannon ಎಂಬ ಪ್ರಸಿದ್ಧ ದೇಹ ಶಾಸ್ತ್ರಜ್ಞನು, 'The wisdom of the body.' ಎಂಬ ಪುಸ್ತಕದಲ್ಲಿ, ಮನಸ್ಸಿನ ಈ ಅಂಶವು, Visceral Brainನ ಅಂಶವು, ದೇಹದ ಸಕಲ ವಿಧವಿಧವಾದ ಕಾರ್ಯಗಳನ್ನೂ ಹೇಗೆ ಜಾಣತನದಿಂದ, ವಿಚಾರಪರ ಮನಸ್ಸಿನ ಅಂಕೆ ಮತ್ತು ಶಿಕ್ಷೆಗೆ ಹೊರತಾಗಿ, ಸುಸೂತ್ರವಾಗಿ ನಡಸುತ್ತದೆ ಎಂಬುದನ್ನು ವಿವರಿಸಿದ್ದಾನೆ. ಸ್ವತಂತ್ರ ಚಾಲಿತ ನರ ಸಮೂಹಗಳಿಂದ (Autonomic nervous system and the limbic system,) ದೇಹದೊಳಗಿನ ಸಹಸ್ರಾರು ವಿಧವಿಧವಾದ ಕಾರ್ಯಗಳನ್ನು ಸುಸೂತ್ರವಾಗಿ ಸಮನ್ವಯಿಸುತ್ತದೆ ಎಂಬುದನ್ನು ವರ್ಣಿಸಿದ್ದಾನೆ.

ಹಸಿವಾಯಿತು ಎನ್ನಿ. ಮನೆಯಲ್ಲಿ ಮಾಡಿಟ್ಟಿದ್ದ ಅಡಿಗೆಯನ್ನು ತಿನ್ನುತ್ತೇವೆ. ಮಸಲಾ ಅಡಿಗೆ ಮಾಡಿದ ಪಾತ್ರೆಯಲ್ಲಿ ಕಲಾಯಿಯು ಇರಲಿಲ್ಲ. ಆಗ ತಾಮ್ರದ ಲವಣಾಂಶಗಳು ಅಡಿಗೆಯಲ್ಲಿ ಮಿಶ್ರಿತವಾಗುತ್ತವೆ. ಮೈಲುತುತ್ತ ಮತ್ತು ಅಂತಹ ವಿಷ ಪದಾರ್ಥಗಳು ಅಡಿಗೆಯಲ್ಲಿ ಸೇರಲು ಸಾಧ್ಯ. ಉಂಡ ಮೇಲೆ ಆ ವಿಷ ಪದಾರ್ಥಗಳು ಹೊಟ್ಟೆಗೆ ಸೇರಿದೆ ಎಂಬುದು ನಮ್ಮ ಮನಸ್ಸಿಗೆ ತಿಳಿದಿರುವುದಿಲ್ಲ. ಆದರೆ ಹೊಟ್ಟೆಗೆ ಅವುಗಳ ಗುರುತು ಸಿಗುತ್ತದೆ. ದೇಹಕ್ಕೆ ಇವು ಒಳ್ಳೆಯದಲ್ಲ ಎಂದು ದೇಹದ ಹುಟ್ಟು ಜಾಣತನವು ತಿಳಿಸುತ್ತದೆ, ಆಗ ಹೊಟ್ಟೆಯು, ತನ್ನಲ್ಲಿದ್ದುದನ್ನು ವಾಂತಿಯನ್ನು ಮಾಡಿಸಿ ಹೊರದೂಡುತ್ತದೆ. ವಾಂತಿಯನ್ನು ಮಾಡಬೇಕು ಎಂಬ ಆಸೆಯೇನೂ ವ್ಯಕ್ತಿಗೆ ಇರುವುದಿಲ್ಲ. ಅಂತಹ ಯೋಚನೆಯೂ ಬಂದಿರುವುದಿಲ್ಲ. ದೇಹದ ಆಜನ್ಮ ಜಾಣ್ಮೆಯು, ಇಂತಹ ವಿಷ ನಿವಾರಣಾ ಕ್ರಮವನ್ನು, ತನ್ನಂತಾನಾಗಿಯೇ ಹೂಡುತ್ತದೆ. ಇಂತಹ ಸ್ವಯಂ ಸಂರಕ್ಷಣಾ ಕ್ರಮಗಳನ್ನು ದೇಹವು ಹೇಗೆ ನಿರ್ವಹಿಸುತ್ತದೆ, ಎಂಬುದನ್ನು ಅತಿ ಸೂಕ್ಷ್ಮವಾಗಿ ಹಾಗೂ

ವಿವರವಾಗಿ ದೇಹ ಶಾಸ್ತ್ರಜ್ಞರು ಸಂಶೋಧನೆಗಳನ್ನು ನಡಸಿ, ನಿಖರವಾಗಿ ನಿರ್ಧರಿಸಿದ್ದಾರೆ. ಇಂತಹ ವಿಜ್ಞಾನವನ್ನು ಆಲಯದ ವಿಜ್ಞಾನ ಎಂದರೂ ತಪ್ಪಲ್ಲ.

ಮನಸ್ಸಿನ ಈ ಅಂಶವು ದೇಹದ ಸಹಜ ಜಾಣತನಕ್ಕೆ ಸಂಬಂಧವನ್ನು ನಿಕಟವಾಗಿ ಹೊಂದಿದೆ. ಮನಸ್ಸಿನ ಇನ್ನೊಂದು ಪ್ರಮುಖ ಅಂಶವು ವಿಚಾರಪರತೆಯನ್ನು ನಡಸುತ್ತದೆ. Cortical Activity ಎಂಬುದಿದು. ಸ್ಮರಣೆಯನ್ನು ಉಳಿಸಿಕೊಂಡು ಅಳಿಯದಂತೆ ಕಾಪಾಡಿಕೊಂಡು ಬರುವ ಮನಸ್ಸಿನ ಮುಖ್ಯಾಂಶವೊಂದು, ಮೆದುಳಿನ ಒಂದು ಭಾಗದಲ್ಲಿ ವ್ಯವಸ್ಥಿತವಾಗಿದೆ. ಇವೆಲ್ಲವನ್ನೂ ಪ್ರಚೋದಿಸುವ, ಹಾಗೂ ನಡಸುವ, ಸತ್–ಚೈತನ್ಯಾಂಶವೂ ಮೆದುಳಿನಲ್ಲಿ ಪ್ರತಿಷ್ಠಿತವಾಗಿದೆ.

ವಿಚಾರಪರ ಮನಸ್ಸು ಭಾವನಾಪರ ಮನಸ್ಸಿನಿಂದ ಸಮಾನ್ಯವಾಗಿ ಪ್ರಚೋದಿತವಾಗುತ್ತದೆ. ಯಾರಾದರೂ ನಮ್ಮನ್ನು ಅಲ್ಲಗಳೆದರೆ, ನಮಗಿಂತ ಸೆಣಕಲಾಗಿದ್ದರೆ, ಅವರನ್ನು ತದುಕಿಬಿಡು ಎಂದು ವಿಚಾರಪರ ಮನಸ್ಸು ನಿರ್ಧರಿಸುತ್ತದೆ. ನಮಗಿಂತ ಧಡಿಯರಾಗಿದ್ದರೆ, ಸದ್ಯಕ್ಕೆ ತೆಪ್ಪಗಿರು, ಅವಕಾಶವು ದೊರೆತಾಗ ಎಲ್ಲರೆದುರಿಗೂ ಅವರ ಮಾನವನ್ನು ಜಾಲಾಡಿ ಬಿಡೋಣ ಎಂದು ತೀರ್ಮಾನಿಸುತ್ತದೆ.

ವಿಚಾರಪರ ಮನಸ್ಸು ಭಾವನಾಪರ ಮನಸ್ಸಿನ ಭಾಗದ ಮೇಲೆ ಗುರುತರವಾದ ಹತೋಟಿಯನ್ನು ಹೊಂದಿಲ್ಲ. ತುಸು ಮಟ್ಟಿಗೆ ಮಾತ್ರ ಪ್ರಭಾವವನ್ನು ಬೀರುತ್ತದೆ. ಹೀಗಿಲ್ಲದೆ ಇದ್ದರೆ, ಕೋಪವು ಉಕ್ಕೇರಿದಾಗ ತನ್ನ ಮೂಗನ್ನೆ ಕತ್ತರಿಸಿಕೊಳ್ಳುತ್ತಿದ್ದ ಇಂದಿನ ಮಾನವ. ಈಗ ತನ್ನ ತಲೆಯನ್ನು ಮಾತ್ರ ಚಚ್ಚಿಕೊಳ್ಳುತ್ತಾನೆ. ಆದರೆ ಹೆಚ್ಚು ಆಘಾತವಾಗದಂತೆ, ಚಚ್ಚಿಕೊಳ್ಳುತ್ತಾನೆ. ಅದೂ ಇತರರನ್ನು ಹೆದರಿಸುವುದಕ್ಕೆ ಮಾತ್ರ.

ಮನಸ್ಸಿನಲ್ಲಿ ವಿಧವಿಧವಾದ ಕಾರ್ಯಗಳಿಗೆ ಮೀಸಲಾದ ಹಲವಾರು ಮುಖ್ಯ ಅಂಶಗಳನ್ನು ಗಮನಿಸಿದೆವು. ಈ ಎಲ್ಲ ಕಾರ್ಯಗಳನ್ನೂ ಸಮನ್ವಯಿಸಿ ನಡಸುವ ಸತ್–ಚೈತನ್ಯವೆಂಬ ಅಂಶವು ಬಲು ಪ್ರಾಮುಖ್ಯವಾದುದು ಎಂಬುದನ್ನೂ ಗಮನಿಸಿದೆವು.

**ಮನಸ್ಸು ಎಲ್ಲಿದೆ**

ಮೆದುಳಿನಲ್ಲಿ ಮನಸ್ಸು ಕಾರ್ಯವನ್ನು ಮಾಡುತ್ತದೆ, ಎಂಬುದು ಎಲ್ಲರಿಗೂ ತಿಳಿದ ವಿಷಯ. ಮನಸ್ಸು ಹಲವಾರು ರೀತಿಗಳಲ್ಲಿ ಕಾರ್ಯವನ್ನು ಮಾಡುತ್ತದೆ ಎನ್ನುವುದನ್ನು ಸ್ಥೂಲವಾಗಿ ಅರಿತಿದ್ದಾಯಿತು. ಮೆದುಳಿನ ವಿವಿಧ ಭಾಗಗಳು,

ಒಂದಲ್ಲ ಒಂದು ರೀತಿಯಲ್ಲಿ, ಮನಸ್ಸಿನ ಒಂದೊಂದು ತೆರನ ಕಾರ್ಯದಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತದೆ. ಆದರೆ ಮನಸ್ಸು ಕಾರ್ಯ ಮಾಡುವಾಗ ಮೆದುಳಿನ ವಿವಿಧ ಭಾಗಗಳು ಸಂಪರ್ಕವನ್ನು ಹೊಂದಬೇಕು. ಯೋಚನೆಯನ್ನು ಮಾಡುವಾಗ, ವಿಚಾರಪರ ಮನಸ್ಸು, ಸ್ಮರಣಾವಿಭಾಗದೊಂದಿಗೆ ಸಂಬಂಧವನ್ನು ಪಡೆಯಬೇಕು. ವಿಚಾರಪರ ಮನಸ್ಸು ಮೆದುಳಿನ ಕಾರ್ಟೆಕ್ಸ್ ಮತ್ತು ಮುಂಭಾಗಗಳಲ್ಲಿ ಬಹಳಷ್ಟು ಕೇಂದ್ರೀಕೃತವಾಗಿದೆ. ಸ್ಮರಣೆಯು ಮೆದುಳಿನ ಪಕ್ಕಗಳಲ್ಲಿ ಅಚ್ಚಾಗಿರುತ್ತದೆ. ಮೆದುಳಿನ ಈ ಎರಡೂ ಭಾಗಗಳು–ನಿಕಟ ಸಂಪರ್ಕವನ್ನು ಹೊಂದಿರುವುದು ಅತ್ಯಗತ್ಯ. ಇದು ಯಾವ ರೀತಿಯಲ್ಲಿ ನಡೆಯುತ್ತದೆ ?

ಮೆದುಳಿನ ಪ್ರತಿಯೊಂದು ಸೆಲ್ಲೂ, ಇತರ ಸೆಲ್ಲುಗಳಿಂದ ಸುತ್ತುವರಿಯಲ್ಪಟ್ಟಿದೆ. ಪ್ರತಿ ಒಂದು ಸೆಲ್ಲೂ ತನ್ನಲ್ಲಿರುವ ದ್ರವದಲ್ಲಿ ಆಗುವ ರಸಾಯನಿಕ ವ್ಯತ್ಯಾಸಗಳಿಂದ, ವಿದ್ಯುಚ್ಛಕ್ತಿಯನ್ನು ಉತ್ಪಾದಿಸಿಕೊಳ್ಳುತ್ತದೆ. ವಿದ್ಯುತ್‌ಶಕ್ತಿಯು ಸೆಲ್ಲಿನಿಂದ ಸೆಲ್ಲಿಗೆ ಹರಡುತ್ತದೆ. ಹರಡುವಾಗ ಇಂತದೇ ಮಾರ್ಗದಲ್ಲಿ ವಿದ್ಯತ್‌ಶಕ್ತಿಯು ಹರಿಯಬೇಕು ಎಂಬುದು ಜನ್ಮತಾಳಿದಾಗ ನಿರ್ಧಾರವಾಗಿರುತ್ತದೆ. ಹುಟ್ಟಿದ ಮೇಲೆ ಬಾಳಿನ ಅನುಭವಗಳಿಂದ ಕಲಿಯುವಾಗ ಇತರ ಮಾರ್ಗಗಳು ಮೆದುಳಿನಲ್ಲಿ ಅಣಿಗೊಳ್ಳುತ್ತವೆ. ತುಂಬಾ ಪ್ರಚಂಡನೆಂದೆನಿಸಿಕೊಂಡವನ ಮೆದುಳಿನಲ್ಲಿ ಇಂತಹ ಸಂಪರ್ಕ ಮಾರ್ಗಗಳು ಬಹಳಷ್ಟು ಸಂಖ್ಯೆಯಲ್ಲಿರುತ್ತವೆ. ಸಾಮಾನ್ಯನಿಗಿಂತ ಸಹಸ್ರಾರು ಪಾಲು ಹೆಚ್ಚಾಗಿರುತ್ತವೆ. ಪ್ರಚಂಡತನದ (genius) ಅಸ್ತಿಭಾರವು ಇದು. ಹೀಗಾಗಿರದಿದ್ದರೆ ಒಂದು ಸೆಲ್ಲು ಸುತ್ತಲಿರುವ ಯಾವುದಾದರೂ ಸೆಲ್ಲಿನ ಸಂಪರ್ಕ ಪಡೆಯಬಹುದು. ಆಗ ಮನಸ್ಸು ಅಲ್ಲೋಲಕಲ್ಲೋಲವಾಗುತ್ತದೆ. ಪ್ರಚಂಡತನವಾಗಲೀ ಜಾಣತನವಾಗಲಿ, ಅಥವಾ ಸಾಮಾನ್ಯ ಚುರುಕಾಗಲಿ, ಯಾವುದೂ ಸಾಧ್ಯವಾಗುತ್ತಿರಲಿಲ್ಲ.

ಮೆದುಳಿನ ಸೆಲ್ಲು ವಿದ್ಯುತ್‌ಶಕ್ತಿಯನ್ನು, ರಾಸಾಯನಿಕ ಮಾರ್ಪಾಡುಗಳಿಂದ ಉತ್ಪಾದಿಸುತ್ತದೆ ಎಂದೆವು. ಈ ಕಾರ್ಯಕ್ರಮವು ಮೋಟಾರ್ ಕಾರುಗಳಲ್ಲಿರುವ ಬ್ಯಾಟರಿಗಳಂತೆ. ಬ್ಯಾಟರಿಗಳಲ್ಲಿ ದ್ರವವು ಒಂದು ಸ್ಥಿತಿಯಲ್ಲಿರುತ್ತದೆ. ಛಾರ್ಜ್ ಮಾಡಿದಾಗ ದ್ರವದಲ್ಲಿರುವ, ಎಲೆಕ್ಟ್ರೋಲೈಟ್ ವಸ್ತುಗಳು ಬೇರೆ ಬೇರೆಯಾಗುತ್ತವೆ. ಕೆಲವು ಒಂದು ಕಡೆಗೆ, ಮತ್ತೆ ಉಳಿದುವು ಮತ್ತೊಂದು ಕಡೆಗೆ. ಬ್ಯಾಟರಿಯಿಂದ ವಿದ್ಯುತ್ ಶಕ್ತಿಯು ಹೊರಕ್ಕೆ ಹರಿಯತೊಡಗಿದಾಗ, ಎಲೆಕ್ಟ್ರೋಲೈಟ್ ವಸ್ತುಗಳು ಮೊದಲಿದ್ದ ಸ್ಥಿತಿಗೆ ಹಿಂತಿರುಗುತ್ತವೆ. ಇದರಂತೆಯೇ ಮೆದುಳಿನ ಸೆಲ್ಲುಗಳ

ವಿದ್ಯುತ್ ಕಾರ್ಯಕ್ರಮವೂ ಕೂಡ. ಅಂದರೆ ಮೆದುಳಿನ ಸೆಲ್ ಆಗಲೀ ಬ್ಯಾಟರಿಯ ಸೆಲ್ ಆಗಲಿ, ವಿದ್ಯುತ್‌ಪ್ರವಾಹಕ್ಕೆ ಎಷ್ಟುಮುಖ್ಯವೋ, ಸೆಲೆಗಳಲ್ಲಿರುವ ದ್ರವವೂ ಅಷ್ಟೇಮುಖ್ಯ.

ಈ ದ್ರವದಲ್ಲಿ ತುಂಬಾ ವ್ಯತ್ಯಾಸವಾದರೆ ಕಾರ್ ಬ್ಯಾಟರಿಯ ಆಯಸ್ಸು ಮುಗಿಯಿತು. ಬೇರೆ ಬ್ಯಾಟರಿಯನ್ನು ಬಳಸಬೇಕು. ಮೆದುಳಿನ ಸೆಲ್ಲುಗಳ ದ್ರವದಲ್ಲಿಯೂ ಹಾಗೆಯೇ. ಕೆಲವು ಬೇನೆಗಳಲ್ಲಿ ಥೈರಾಯ್ಡ್ ಗ್ರಂಥಿಗಳು ಸಾಕಷ್ಟು ಹಾರ್ಮೋನನ್ನು ಉತ್ಪಾದಿಸಲಾಗುವುದಿಲ್ಲ, ಮೆದುಳಿನ ಸೆಲ್ಲುಗಳ ಒಳಗೆ ಹಾಗೂ ಹೊರಗೆ ಇರುವ ದ್ರವದಲ್ಲಿ ಥೈರಾಯ್ಡ್ ಹಾರ್ಮೋನು ತುಂಬಾ ಕಡಿಮೆ ಪ್ರಮಾಣದಲ್ಲಿರುತ್ತದೆ. ಅಂತಹವರ ಮನಸ್ಸು ಅತಿಮಂದವಾಗಿ ಕಾರ್ಯಮಾಡುತ್ತದೆ. ಮಂಕರಂತೆಯೇ ಇವರ ಮನಸ್ಸಿನ ಕೆಲಸ, ಈ ಬೇನೆಯವರನ್ನು ಕ್ರೆಟೆನ್ಸ್ ಎಂದು ಕರೆಯುತ್ತಾರೆ.

ಮೆದುಳಿನ ಸೆಲ್ಲುಗಳ ರಚನೆಯು ಲಕ್ಷಣವಾಗಿರಬೇಕು. ಅವುಗಳಲ್ಲಿರುವ ದ್ರವಗಳು ಸರಿಯಾಗಿರಬೇಕು, ಸೆಲ್ಲುಗಳನ್ನು ತೋಯಿಸುವ ದ್ರವವೂ ಅಣಿಯಾಗಿರಬೇಕು. ಆಗ ಮನಸ್ಸು ಲಕ್ಷಣವಾಗಿ ಕೆಲಸವನ್ನು ಮಾಡಲು ಸಾಧ್ಯವಾಗುತ್ತದೆ. ಏಕೆಂದರೆ ಮೆದುಳು ಆಗ ಸ್ವಾಸ್ಥ್ಯದಿಂದಿರುತ್ತದೆ.

ಮೆದುಳಿನ ಕಾರ್ಯಕ್ರಮವನ್ನು ತಿಳಿದಾಯಿತು. ಆದರೆ ಅದರ ಘನಪ್ರಮಾಣವನ್ನು ಮನಸ್ಸಿನ ಕಾರ್ಯಕ್ರಮಗಳಿಗೆ ಅನ್ವಯಿಸಬಹುದೇ ? ದಢೂತಿ ಮೆದುಳಿದ್ದವರ ಮನಸ್ಸು ಅತಿ ಚುರುಕಾಗಿ ಕೆಲಸವನ್ನು ಮಾಡುತ್ತದೆಯೇ? ದಪ್ಪ ತಲೆಯಿರುವವರನ್ನು ಪ್ರಚಂಡರು ಅನ್ನಬಹುದೇ? ಕಿರುತಲೆಯವರನ್ನು ಮತಿಹೀನರು ಎನ್ನುವುದೇ? ಸ್ವಾರಸ್ಯವಾದ ಪ್ರಶ್ನೆಗಳು.

ಮಾನವನ ಭವಿಷ್ಯವನ್ನು ಕುರಿತು ಲೇವಡಿ ಮಾಡುವ ವ್ಯಂಗ್ಯ ಚಿತ್ರಕಾರರು ರೇಖಿಸುವ ಚಿತ್ರಗಳನ್ನು ನೋಡಿ. ದೇಹವು ತುಂಬಾ ಸಣಕಲಾಗಿದ್ದು ಭಾರೀ ಕುಂಬಳಕಾಯನಂತಹ ತಲೆಯನ್ನು ಹೊತ್ತ ರೇಖಾಚಿತ್ರವನ್ನು ಬರೆದು ಹತ್ತು ಸಹಸ್ರ ವರ್ಷಗಳಾದ ಮೇಲೆ, ಪ್ರಗತಿ ಹೊಂದಿದ ಮಾನವನು ಹೀಗಿರುತ್ತಾನೆ ಎಂದು ಸೂಚಿಸುತ್ತಾರೆ. ಮನಸ್ಸಿನ ಪ್ರಚಂಡ ಪ್ರಗತಿಯಿಂದ, ದೇಹದ ಅಗತ್ಯವು ಬಹಳಷ್ಟು ಕಡಿಮೆಯಾಗುತ್ತದೆ ಎಂದು ಅವರು ಭವಿಷ್ಯವನ್ನು ಊಹಿಸಿದ್ದಾರೆ.

ಮಿದುಳಿನ ಪ್ರಮಾಣಕ್ಕೂ, ಅಂದರೆ ಅಳತೆ ಮತ್ತು ತೂಕಕ್ಕೂ, ಮನಸ್ಸಿನ ಹಿರಿಮೆಯ ಚೂಟಿಗೂ ಇವರು ಗಂಟು ಹಾಕುತ್ತಾರೆ. ವ್ಯಂಗ್ಯವೆಂದು ಕಾಣಿಸಿದರೂ, ಇದರಲ್ಲಿ ತುಸು ಸತ್ಯಾಂಶವಿದೆ.

ಪ್ರಕೃತಿಯಲ್ಲಿ, ಜಂಗಮ ಜೀವಿಗಳು ಎಂದರೆ ಪ್ರಾಣಿವರ್ಗವು ಸಾಧಿಸಿರುವ ಪ್ರಗತಿಯ ಚರಿತ್ರೆಯನ್ನು ತಿಳಿದುಕೊಂಡರೆ, ಲೇವಡಿ ಮಾಡಿ ವ್ಯಂಗ್ಯ ಚಿತ್ರ ಕಾರರು, ಅಪಹಾಸ್ಯವನ್ನು ಮಾಡಲಿಲ್ಲ ಎನಿಸುತ್ತದೆ.

ಲಕ್ಷಾಂತರ ವರ್ಷಗಳ ಹಿಂದೆ ಪ್ರಪಂಚದಲ್ಲಿ ಡಿನೋಸಾರಸ್ ಜಾತಿಯ ದಢೂತಿಯಾಗಿದ್ದ ಉರಗಗಳಿದ್ದುವು. ಈಗ ಕಾಣಬರುವ ಹಲ್ಲಿ, ಓತಿಕ್ಯಾತ, ಇತ್ಯಾದಿಗಳಂತಿದ್ದ ಭಾರೀ ಮೃಗಗಳು. ಹಿಂಗಾಲಿನ ಮೇಲೆ ಇವು ಕುಳಿತು, ಮೈಯನ್ನು ಎತ್ತಿದರೆ, ಅವುಗಳ ಮುಂಗಾಲು ನೆಲದಿಂದ ೬೦–೭೦ ಅಡಿಗಳಷ್ಟು ಎತ್ತರದಲ್ಲಿರುತ್ತಿದ್ದುವು. ಶ್ರವಣಬೆಳಗೊಳದ ಅಚ್ಚರಿಯನ್ನು ತರುವ ಗೊಮ್ಮಟಗಿಂತಲೂ ಹೆಚ್ಚು ಎತ್ತರದಲ್ಲಿರುತ್ತಿದ್ದುವು. ನೂರಾರು ಟನ್ ತೂಕವಿದ್ದ ಈ ಪ್ರಾಣಿಗಳ ತಲೆಯು, ಒಂದು ತೆಂಗಿನ ಕಾಯಿನ ಗಾತ್ರದಷ್ಟೇ ಇರುತ್ತಿತ್ತು. ತಲೆಯೊಳಗಿರುವ ಮೆದುಳೂ ಅಷ್ಟೇ ಸಣ್ಣದಾಗಿತ್ತು. ಇಂತಹ ಭಾರೀಪ್ರಮಾಣದ ಉರಗಗಳು, ಪ್ರಕೃತಿಯ ಪ್ರಗತಿಯಲ್ಲಿ ಹೇಳ ಹೆಸರಿಲ್ಲದೆ ನಾಶವಾಗಿಹೋದುವು.

ಆದರೆ ಅದೇ ಕಾಲದಲ್ಲಿದ್ದ ಜಿರಳೆಗಳು, ಚಿಕ್ಕದೇಹಕ್ಕೆ ಸಾಕಷ್ಟಾದ ಪುಟ್ಟ ಮೆದುಳನ್ನು ಹೊಂದಿವೆ. ದೇಹವನ್ನು ಅತಿ ಹೊರವಾಗಿ ಅವು ಬೆಳಸಿಕೊಳ್ಳಲಿಲ್ಲ. ಜಿರಳೆಗಳು ಇಂದೂ ಪ್ರಕೃತಿಯಲ್ಲಿ ಉಳಿದಿವೆ. ನಮ್ಮನ್ನು ಕಾಡಿ, ನಮ್ಮ ಊಟ ತಿಂಡಿ ಬಟ್ಟೆಗಳನ್ನು ಹೊಲಸು ಮಾಡುತ್ತಿವೆ ! ಜಿರಳೆಗಳು ಜನ್ಮತಾಳಿದ್ದು ಮುನ್ನೂರಕ್ಕೂ ಹೆಚ್ಚು ಬಿಲಿಯನ್ ವರ್ಷಗಳು ಎಂದು ಅಂದಾಜು ಮಾಡಿದ್ದಾರೆ. ಘಟಾನುಗಟಿ ಪ್ರಾಣಿಗಳ ವಂಶವು ಹಾಳಾಗಿ ಹೋಗಿದ್ದರೂ, ಜಿರಳೆಗಳು ಉಳಿದೇ ಇವೆ. ಡಿ. ಡಿ. ಟಿ. ಯನ್ನು ತಿಂದು ಈಗೀಗ ಅರಗಿಸಿಕೊಂಡು ವೃದ್ಧಿಯಾಗುತ್ತಿವೆ. ಅಂದರೆ ಮೆದುಳಿನ ಪ್ರಮಾಣವು ದೇಹದ ಪ್ರಮಾಣಕ್ಕೆ ಅನುಕೂಲವಾಗಿರಬೇಕು. ಹಾಗಲ್ಲದೆ ಮೆದುಳಿನ ಪ್ರಮಾಣವು ಅತಿ ಸ್ವಲ್ಪವಾಗಿ, ದೇಹವು ಅತಿ ದಢೂತಿಯಾದರೆ, ಕಾಲಾನುಕಾಲದಲ್ಲಿ ನಿರ್ವಂಶವಾಗುತ್ತವೆ. ಪ್ರಾಯಶಃ ಅದೇ ರೀತಿಯಲ್ಲಿ ಮೆದುಳು ಅತ್ಯಮೋಘವಾಗಿ ಬೆಳೆದರೆ, ದೇಹವು ಅತ್ಯಲ್ಪ ಪ್ರಮಾಣಕ್ಕೆ ಕ್ಷಯಿಸಿದರೆ, ಆಗಲೂ ಕಾಲಾನುಕಾಲದಲ್ಲಿ ಮಾನವ ಪ್ರಾಣಿಯು ಉಳಿಯುವುದು ಅಸಂಭವ.

ಈಗಿನ ಪ್ರಮಾಣಕ್ಕಿಂತ ಮೆದುಳು ಹತ್ತಾರುಪಾಲು ಹೆಚ್ಚಾಗಲು ಸಾಧ್ಯ. ಆಗ ದೇಹವೂ ಅಷ್ಟಾಗಿ ಕ್ಷಯಿಸಿರುವುದಿಲ್ಲ. ಅಂತಹ ಮಾನವ ಹತ್ತು ಹದಿನೈದು ಸಾವಿರ ವರ್ಷಗಳಲ್ಲಿ ಕಾಣಬರಬಹುದು. ಇಂದಿನ ಮಾನವನಿಗಿಂತ, ಅವನ ಮೇಧಾ ಶಕ್ತಿಯು ಬಹುಪಾಲು ಅಧಿಕವಾಗಿರುತ್ತದೆ.

ಇತರ ಪ್ರಾಣಿಗಳ ಮೆದುಳಿನ ತೂಕಕ್ಕಿಂತ ಮನುಷ್ಯನ ಮೆದುಳಿನ ತೂಕವು

ತುಂಬಾ ಹೆಚ್ಚಾಗಿದೆ. ಗಂಡಸರ ಮೈ ತೂಕವು ಹೆಂಗಸರ ಮೈ ತೂಕಕ್ಕಿಂತ, ಸಾಮಾನ್ಯವಾಗಿ ಹೆಚ್ಚಾಗಿರುತ್ತದೆ. ಗಂಡಸಿನ ಮೆದುಳಿನ ತೂಕವು ಹೆಂಗಸರ ಮೆದುಳಿಗಿಂತ ತುಸು ಹೆಚ್ಚು ತೂಕವಿರುತ್ತದೆ. ಆದರೆ ತೂಕವೊಂದೇ ಮನಸ್ಸಿನ ಚುರುಕಿಗೆ ಕಾರಣವಲ್ಲ. ಮೆದುಳಿನ ಮೇಲ್ಮೈನ ವಿಸ್ತಾರವು, ತೂಕಕ್ಕಿಂತ ಹೆಚ್ಚು ಪ್ರಾಮುಖ್ಯವಾದುದು. ಈ ದೃಷ್ಟಿಯಿಂದಲೂ ಹೆಂಗಸಿನ ಮೆದುಳಿನ ಮೇಲ್ ಮೈಯಿನ ವಿಸ್ತಾರವು ಗಂಡಸಿಗಿಂತ ಕಡಿಮೆ. ಆದುದರಿಂದಲೇ ಏನೋ ಗಂಡಸರು ಹೆಚ್ಚು ವಿಚಾರಪ್ರಿಯರು, ಹೆಂಗಸರು ಭಾವನಾಪ್ರಿಯರು ಎಂದು ಸಾಮಾನ್ಯವಾಗಿ ಹೇಳುವುದು. ಹೆಂಗರುಳು ಎನ್ನುವುದು ಹೆಂಗಸಿನ ಭಾವನಾಧಿಕ್ಯವನ್ನು ಸೂಚಿಸುತ್ತದೆ.

ಮಾನವರಲ್ಲಿ ಗಂಡು ಹೆಣ್ಣು ಎಂಬ ಭಿನ್ನತೆಯು ಸಾಕಷ್ಟು ಸ್ಪಷ್ಟವಾಗಿ ಕಂಡರೂ ಹೆಂಗಸಿನ ಸ್ವಭಾವವು ಗಂಡಸಿನಲ್ಲೂ ಸ್ವಲ್ಪಮಟ್ಟಿಗೆ ಕಾಣಬರುತ್ತದೆ. ಅದೇ ರೀತಿಯಲ್ಲಿ ಗಂಡಸಿನ ಸ್ವಭಾವವು ಹೆಂಗಸರಲ್ಲಿಯೂ ಸ್ವಲ್ಪಮಟ್ಟಿಗೆ ಇದ್ದೇ ಇರುತ್ತದೆ. ದೇಹದ ರಚನೆಯಲ್ಲೂ ಈ ಅಂಶವು ಕಾಣಿಸುತ್ತದೆ. 'ಸ್ವಲ್ಪಮಟ್ಟಿಗೆ' ಎಂದೆವಲ್ಲ ; ಅದು ಹೆಚ್ಚು ಕಡಿಮೆಯಾಗಬಹುದು. ಆದುದರಿಂದ ಹೆಣ್ಣಿಗ್ಸ್ ಎಂದು ಮೂದಲಿಸಲ್ಪಡುವ ಗಂಡಸರು ಇರುತ್ತಾರೆ. ಗಂಡುಬೀರಿಗಳು ಎಂದು ಮೆರೆಯುವ ಹೆಂಗಸರೂ ಇರುತ್ತಾರೆ. ಈ ವಿಷಯವನ್ನು ಸಮರ್ಥಿಸಲು ನಿದರ್ಶನಗಳು ಅಗತ್ಯ. ಮಾನವನ ಮನಸ್ಸನ್ನು ವಿಶ್ಲೇಷಿಸುವಾಗ, ಉಭಯ ಮಿಶ್ರವಾದ ಈ ಅಂಶವನ್ನು ಗಮನಿಸಬೇಕು. ಮನಸ್ಸಿನ ಚಟುವಟಿಕೆಗಳು ಮನುಷ್ಯನ ನಡವಳಿಕೆಗಳನ್ನು ನಿರ್ಧರಿಸುತ್ತವೆ. ಅಂದಮೇಲೆ ಅವನು ಹೀಗೇಕೆ ನಡೆದುಕೊಳ್ಳುತ್ತಾನೆ ! ಇವಳು ಹೀಗೇಕೆ ಪರದಾಡುತ್ತಾಳೆ, ಎನ್ನುವುದನ್ನು ಅರ್ಥಮಾಡಿಕೊಳ್ಳುವಾಗ, ನಮ್ಮನ್ನು ನಾವು ಅರ್ಥಮಾಡಿಕೊಳ್ಳುವುದೂ ಉಪಯುಕ್ತ. ಗಂಡು ಮತ್ತು ಹೆಣ್ಣಿನ ಮಿಶ್ರ ಸ್ವಭಾವದ ಮನಸ್ಸು ನಮ್ಮಲ್ಲೂ ಇದ್ದೇ ಇದೆಯಲ್ಲ. ಯಾವ ಪ್ರಮಾಣದಲ್ಲಿ ಮಿಶ್ರವಾಗಿದೆ ಎಂಬುದನ್ನು ಅರಿಯಬೇಕು.

* * * *

# ೩. ಮೆದುಳಿನ ಪ್ರಮುಖ ಭಾಗಗಳು

**ಮೆದುಳಿನ ಅವತಾರ**

ಎರೆಹುಳು ಅಥವಾ ಮಣ್ಣುಹುಳು, ಕಂಬಳಿಹುಳು, ಜಂತುಹುಳು ಮುಂತಾದ ಹುಳುಗಳಲ್ಲಿ ಬೆನ್ನುಮೂಳೆಯು ಇರುವುದಿಲ್ಲ. ಎಲುಬಿನ ಚಿಪ್ಪಿನಿಂದ ರಕ್ಷಿತವಾದ ತಲೆಯೂ ಇರುವುದಿಲ್ಲ. ಇವು ಜೀವಿಗಳು ಜಂಗಮ ಅಥವಾ ಸಂಚರಿಸುವ ಪ್ರಾಣಿಗಳು, ಇವುಗಳ ದೇಹದಲ್ಲಿ ಹಲವಾರು ಅಂಗಗಳು ಇರುತ್ತವೆ. ಅವುಗಳ ಕಾರ್ಯಗಳನ್ನು ಸಮನ್ವಯಗೊಳಿಸಿ, ಸುಸೂತ್ರವಾಗಿ ನಡಸಲು ಒಂದು ವ್ಯವಸ್ಥೆಯು ಇರಬೇಕು. ಅವುಗಳ ಬೆನ್ನಿನ ಭಾಗದ ಕೆಳಗೆ ತಲೆಯಿಂದ ಬಾಲದ ತನಕ ನರಗಳ ಸಮೂಹವೊಂದು ಉದ್ದಕ್ಕೂ ಹರಡಿದೆ. ಅದೇ ಸಮನ್ವಯ ವ್ಯವಸ್ಥೆ.

ಪ್ರಕೃತಿಯ ಪ್ರಗತಿಯಲ್ಲಿ, ಇದು ಸ್ಪೈನಲ್ ಕಾರ್ಡ್‌ಆಯಿತು. ಅದು ಮುಖ್ಯವಾದ ಅಂಗವಾದ್ದರಿಂದ,ಎಲುಬಿನ ರಕ್ಷಾ ಪಂಜರವನ್ನು ಪ್ರಕೃತಿಯು ರಚಿಸಿತು. ಪ್ರಗತಿಯು ಮುನ್ನಡೆದಾಗ, ಸ್ಪೈನಲ್ ಕಾರ್ಡ್ ಕೂಡ ಅಭಿವೃದ್ಧಿಯನ್ನು ತಲೆಯ ಕಡೆ ಸಾಧಿಸಿಕೊಂಡಿತು. ಆಗ ಮೆದುಳಿನ ಬುಡವು ಅವತರಿಸಿತು. ಇಲ್ಲಿ ಬಾಳಿಗೆ ಅಗತ್ಯವಾದ ಭಾವನಾ ಕೇಂದ್ರಗಳು ವ್ಯವಸ್ಥಿತವಾದವು. ಕೋಪವು ಉಕ್ಕಿದರೆ ತಾನೇ ವೈರಿಯನ್ನು ಸದೆಬಡಿಯಲು ಸಾಧ್ಯ. ಆಗ ವೀರರಂತೆ ಕಾದಾಡಬಹುದು. ಭಯಾನಕವಾಗಿ ಘರ್ಜಿಸಿ ಚದರಿಸಬಹುದು. ನಿದ್ರೆಯನ್ನು ವ್ಯವಸ್ಥೆಗೊಳಿಸುವ ಕೇಂದ್ರಗಳು ಮೆದುಳ ಬುಡದಲ್ಲಿವೆ, ಕಾಮೋದ್ರೇಕಿಸುವ, ನರಕೇಂದ್ರಗಳು ಆ ಮೆದುಳ ಬುಡದ ಬಳಿಯಲ್ಲಿವೆ. ಈ ಕೇಂದ್ರಗಳು ಕೆರಳಿದಾಗ ಹುಟ್ಟುಭಯವು ಇರದಾಗುತ್ತದೆ. ಕಾಮೋದ್ರೇಕಿತವಾದ ಕೋಣನು, ಅಡ್ಡಬಂದ ಚಿರತೆಯನ್ನು ಬಡಿದು ಕೊಲ್ಲಲು ತೊಡಗುತ್ತದೆ. ಕಾಮೋದ್ರೇಕವಿರದ ಸ್ಥಿತಿಯಲ್ಲಿ ಕೋಣನು ಓಡಿಹೋಗತೊಡಗುತ್ತದೆ. ಆದರೆ ಬೆದೆಗೆ ಬಂದ ಎಮ್ಮೆಯನ್ನು ಒಲಿಸಿಕೊಳ್ಳ ತೊಡಗಿದಾಗ, ಚಿರತೆಯು ಬಂದರೂ, ಅವರೊಡನೆ ಕಾದಾಡುತ್ತದೆ. ಪ್ರಾಣ ಭಯವೂ ಆಗ ಕೋಣನನ್ನು ತಡೆಯುವುದಿಲ್ಲ. ಇಂತಹ ಹಲವಾರು ಭಾವನಾ ಕೇಂದ್ರಗಳು, ಪ್ರಾಣಿಗಳಲ್ಲಿಯೂ ಇವೆ. ಮನುಷ್ಯ ಪ್ರಾಣಿಯಲ್ಲಿಯೂ ಇದೆ.

ಒಂದು ಮೂಲಭೂತ ವ್ಯತ್ಯಾಸವನ್ನು ಇಲ್ಲಿ ಗಮನಿಸಬಹುದು. ನಗು ಮತ್ತು ಅಳು, ಲಜ್ಜೆ ಮತ್ತು ನಾಚಿಕೆ ಇತ್ಯಾದಿ ಭಾವನಾ ಪ್ರದರ್ಶನಗಳು ಮನುಷ್ಯ ಪ್ರಾಣಿಯಲ್ಲಿ ಮಾತ್ರ ಕಂಡುಬರುತ್ತವೆ. ಇತರ ಯಾವ ಪ್ರಾಣಿಗಳಲ್ಲೂ ಇರುವುದಿಲ್ಲ. ಮನುಷ್ಯ ಪ್ರಾಣಿಯಲ್ಲಿ ಮೆದುಳಿನ ಕಾರ್ಟೆಕ್ಸ್ ಭಾಗವು ಹೊರವಾಗಿ ಬೆಳೆದಿದೆ. ವಿಚಾರಪರತೆಯು ಮತ್ತು ಸ್ಮರಣೆ; ಇವು ಹೊಸ ಪ್ರಭಾವವನ್ನು ಬೀರಿ ಭಾವನಾ ಕೇಂದ್ರಗಳಲ್ಲಿ ನೂತನವಾದ, ಮತ್ತು ನವ್ಯವಾದ ಭಾವನಾ ಪ್ರದರ್ಶನಗಳನ್ನು ಸೃಷ್ಟಿಸಿದೆ. ಶೋಕ, ಹಾಸ್ಯ, ಅದ್ಭುತ, ಇತ್ಯಾದಿ ರಸಾನುಭಾವವು ಮನುಷ್ಯ ಪ್ರಾಣಿಯಲ್ಲಿ ಮಾತ್ರ ಕಾಣಬರುತ್ತದೆ.

ಭಾವನಾ ಕೇಂದ್ರಗಳಲ್ಲದೆ, ಬಾಳಿಗೆ ಅತ್ಯಗತ್ಯವಾದ ಇತರ ಕೇಂದ್ರಗಳು, ಮೆದುಳಿನ ಬುಡದಲ್ಲಿವೆ. ಉಸಿರಾಡುವುದರ ಕಾರ್ಯವನ್ನು ದೇಹಕ್ಕೆ ಅಗತ್ಯವಾದ ರೀತಿಯಲ್ಲಿ ನಿಯಂತ್ರಿಸುವುದು; ಅದೇ ರೀತಿ, ದೇಹದ ಶಾಖವನ್ನು ಹದವಾಗಿರಿಸುವುದು; ರಕ್ತಸಂಚಾರವು ದೇಹದಲ್ಲಿ ಅತ್ಯಗತ್ಯ ಕಾರ್ಯಗಳಿಗೆ ಮೀಸಲಾದ ನರಕೇಂದ್ರಗಳು, ಮೆದುಳಿನ ಬುಡದಲ್ಲಿವೆ. ಪ್ರಾಣಿಗಳಲ್ಲಿಯೂ, ಮನುಷ್ಯ ಪ್ರಾಣಿಗಳಲ್ಲಿಯೂ, ಈ ವ್ಯವಸ್ಥೆಯು ಸುಮಾರು ಪಾಲು ಒಂದೇ ರೀತಿಯಲ್ಲಿದೆ.

ಲಕ್ಷಾಂತರ ವರ್ಷಗಳ ಪ್ರಗತಿಯು ಸಾಧಿಸಿದಾಗ, ಮೆದುಳಿನ ಕಾರ್ಟೆಕ್ಸ್ ಭಾಗವು, ನಾಯಿಕೊಡೆಯಂತೆ, ಬುಡದ ಸುತ್ತಲೂ ಮತ್ತು ಮೇಲುಗಡೆಯೂ ಹೊರವಾಗಿ ಹರಡತೊಡಗಿತು. ಮಾನವನ ವಿಚಾರಪರ ಮನಸ್ಸು ಈ ಭಾಗದಲ್ಲಿ ಅತಿ ಚುರುಕಾಗಿ ಕಾರ್ಯವನ್ನು ಮಾಡಲಾರಂಭಿಸಿತು. ಸ್ಮರಣೆಯ ನೆರವು ವಿಚಾರಕ್ಕೆ ಅಗತ್ಯವಾದುದರಿಂದ, ಸ್ಮರಣಾವಿಭಾಗವೂ ಅಭಿವೃದ್ಧಿಸಿತು. ಇವೆರಡಕ್ಕೂ ನಿಕಟ ಸಂಬಂಧವಿರುವುದರಿಂದ, ಪರಸ್ಪರವಾಗಿ ಎರಡೂ ಭಾಗಗಳು ಅಭಿವೃದ್ಧಿಯನ್ನು ಅಮೋಘವಾಗಿ ಸಾಧಿಸಿಕೊಂಡುವು. ಇದನ್ನು ಸೆರಿಬ್ರಂ ಎಂದು ಕರೆಯುತ್ತಾರೆ.

ತಲೆಯ ಹಿಂಭಾಗದಲ್ಲಿ ಮತ್ತೊಂದು ಭಾಗವಿದೆ. ಸೆರಿಬೆಲ್ಲಂ ಎಂದು ಇದರ ಹೆಸರು. ನಾಲ್ಕು ಕಾಲುಗಳ ಪ್ರಾಣಿಯು ದೇಹದ ತೂಕವನ್ನು ಭದ್ರವಾಗಿ ನಾಲ್ಕೂ ಪಾದಗಳ ಮೇಲೆ ಹಾಕುತ್ತದೆ. ನಾಲ್ಕು ಕಾಲುಗಳಿದ್ದ ಮೇಜಿನಂತೆ, ಸುಭದ್ರವಾಗಿರುತ್ತದೆ. ಆದರೆ ಎರಡು ಕಾಲುಗಳ ಮೇಲೆ ನಡೆಯತೊಡಗಿದಾಗ ದೇಹದ ತೂಕವನ್ನು ಸರಿಯಾಗಿ ಹಂಚಬೇಕು, ಕಾಲುಗಳ ಮೇಲೆ ಅಷ್ಟೇ ಅಲ್ಲದೆ ನಡೆಯುವಾಗ, ಓಡುವಾಗ ಮುಗ್ಗರಿಸಬಹುದು. ಆಗ ಸಮತೋಲನವನ್ನು

ಸಾಧಿಸಬೇಕು. ಇಲ್ಲದಿದ್ದರೆ ಬಿದ್ದು ಪೆಟ್ಟು ಮಾಡಿಕೊಳ್ಳಬೇಕು. ನರ್ತಕಿಯರು, ಮತ್ತು ಸರ್ಕಸ್ ಮಾಡುವವರು ದೇಹದ ಸಮತೋಲನವನ್ನು ಎಷ್ಟು ಅದ್ಭುತವಾಗಿ ಅಣಿ ಮಾಡಿಕೊಂಡಿದ್ದಾರೆ, ನೋಡಿ. ಹೇಗೆ ಎಷ್ಟು ಬಾಗಿದರೂ ಬೀಳುವುದಿಲ್ಲ. ಅತ್ಯಾಶ್ಚರ್ಯಕರವಾಗಿ ದೇಹದ ಸಮತೋಲನವನ್ನು ಸಾಧಿಸುವುದು, ಸೆರಿಬೆಲ್ಲಂ ಇನ ಕಾರ್ಯ. ದೊಂಬರಾಟವನ್ನು ನೋಡಿಲ್ಲವೇ? ನೆಟ್ಟಗೆ ನಿಲ್ಲಿಸಿದ ಬೊಂಬಿನ ತುದಿಯ ಮೇಲೆ ದೊಂಬರವನು ಮಲಗಿ ತಿರುಗುವುದಿಲ್ಲವೆ, ಬೊಂಬಿನ ಮೇಲೆ ಹೊಟ್ಟೆಯನ್ನು ಮಾತ್ರ ಇರಿಸಿಕೊಂಡು, ಆಶ್ಚರ್ಯವಾಗುವುದಿಲ್ಲವೇ ? ಸೆರಿಬೆಲ್ಲಂ ಇನ ಚಾಕಚಕ್ಯತೆಯಿಂದ ಇದು ಸಾಧ್ಯವಾಗಿದೆ.

ಪ್ರಮುಖವಾದ ಈ ಮೂರು ಭಾಗಗಳು ಒಂದರೊಂದಿಗೆ ಉಳಿದುವು ಸಮನ್ವಯಿಸಿಕೊಂಡು ಹೇಗೆ ಕೆಲಸವನ್ನು ಮಾಡುತ್ತದೆ ಎಂಬುದನ್ನು ನಿದರ್ಶನದೊಂದಿಗೆ ತಿಳಿಯುವುದು ಸುಲಭ.

ಪಕ್ಕದ ಮನೆಯ ಸೀಬೆ ಮರದಲ್ಲಿ ದೋರಗಾಯಿಯೊಂದು ಕಾಣಿಸುತ್ತದೆ. ಹುಡುಗನ ಕಣ್ಣು ಅದನ್ನು ನೋಡುತ್ತದೆ. ದೋರಗಾಯಿನ ಜತೆಗೆ ಉಪ್ಪು ಹಾಕಿಕೊಂಡು ಹಿಂದೊಮ್ಮೆ ಖುಷಿಯಿಂದ ತಿಂದದ್ದು ಸ್ಮರಣೆಗೆ ಬರುತ್ತದೆ. ಸೀಬೆಕಾಯಿಯನ್ನು ಕಂಡಾಗ, ಪಂಚೇಂದ್ರಿಯಗಳಲ್ಲಿ ಒಂದಾದ ಕಣ್ಣಿನ ಮೂಲಕ, ಸೆರಿಬ್ರಂ ಇನಲ್ಲಿರುವ ದೃಷ್ಟಿಯ ಕೇಂದ್ರಗಳಿಗೆ ಸುದ್ದಿಯು ಮುಟ್ಟುತ್ತದೆ. ಅಲ್ಲಿಂದ ಸ್ಮರಣಾ ಭಾಗಕ್ಕೆ ಈ ಸುದ್ದಿಯ ಒಂದು ಪ್ರತಿಯು ಹೋಗುತ್ತದೆ. ಹಿಂದೆ ಸೀಬೆಕಾಯಿಯನ್ನು ಉಪ್ಪಿನ ಜತೆಗೆ ತಿಂದು ಸುಖಪಟ್ಟಿದುದರ ಸ್ಮರಣೆಯು ಪ್ರಚೋದಿತವಾಗುತ್ತದೆ. ಪ್ರಚೋದಿತವಾದ ಸ್ಮರಣೆಯು, ತಿರುಗಿ ತಿನ್ನಬೇಕು ಎನ್ನುವ ಆಸೆಯನ್ನು ಹುಟ್ಟಿಸುತ್ತದೆ.

ಆಸೆಯು ಹುಡುಗನನ್ನು ಕೆರಳಿಸುತ್ತದೆ. ಅವನ ಸೆರಿಬ್ರಂ ಇನಲ್ಲಿರುವ ವಿಚಾರ ಪರ ಮನಸ್ಸು ಹೀಗೆ ಹೀಗೆ ಮಾಡಿದರೆ ದೋರಗಾಯಿ ಸಿಗಬಹುದು ಎಂದು ನಿರ್ಧರಿಸುತ್ತದೆ. ಕಾಪೌಂಡ್ ಗೋಡೆಯನ್ನು ಹತ್ತುತ್ತಾನೆ. ಹತ್ತುವಾಗ ಮತ್ತು ಹತ್ತಿ ಗೋಡೆಯ ಮೇಲೆ ನಿಂತುಕೊಂಡಾಗ ಅವನ ಸೆರಿಬೆಲ್ಲಂ ಬಹಳ ಚಾಕಚಕ್ಯತೆಯಿಂದ, ಕೆಳಕ್ಕೆ ಬೀಳದಂತೆ ಅವನನ್ನು ಕಾಪಾಡುತ್ತದೆ. ಗೋಡೆಯ ಅಂಚಿನಲ್ಲಿ ನಿಂತು, ಮರದ ಕೊಂಬೆಯತ್ತ ವಾಲಿಕೊಂಡು, ಅದನ್ನು ಬಗ್ಗಿಸಿ, ಕಾಯಿಯನ್ನು ಕೀಳುವಾಗ ಕೆಳಕ್ಕೆ ಬೀಳಲು, ಎಷ್ಟೆಲ್ಲಾ ಅವಕಾಶವಿರುತ್ತದೆ. ಸೆರಿಬೆಲ್ಲಂ ಇನ ಜಾಣತನದ ನಿರ್ವಹಣೆಯಿಂದ, ಹುಡುಗ ಕೆಳಕ್ಕೆ ಬೀಳುವುದಿಲ್ಲ. ದುಡುಕಿದರೆ ಗೊತ್ತೆ ಇದೆ, ದುಧುಂ ಎಂದು ಬಿದ್ದು ಮಂಡಿಯನ್ನು ತರಚಿಕೊಳ್ಳುತ್ತಾನೆ, ಅಥವಾ

ಕೈಯನ್ನೋ ಕಾಲನ್ನೋ ಮುರಿದುಕೊಳ್ಳುತ್ತಾನೆ.

ಪಂಚೇಂದ್ರಿಯಗಳಿಂದ ಸೆರಿಬ್ರಂ ಇಗೆ ಸುದ್ದಿಯು ತಲಪುವುದು. ಅಲ್ಲಿಂದ ಸ್ಮರಣಾ ವಿಭಾಗಕ್ಕೂ ವಿಚಾರಪರ ಮನಸ್ಸಿಗೂ ಸುದ್ದಿಯು ಸಾಗಿ, ಆಸೆಯು ಹುಟ್ಟುವುದು. ಆಸೆಯ ಪೂರೈಕೆಗೆ ಅಗತ್ಯವಾದ ಕಾರ್ಯಕ್ರಮವನ್ನು ಸೆರಿಬೆಲ್ಲಂ ಇನ ನೆರವಿನಿಂದ ಸೆರಿಬ್ರಂ ನಡೆಸುವುದು. ಇವೆಲ್ಲವೂ ಸುಸೂತ್ರವಾಗಿ ನಡೆಯುತ್ತವೆ.

ವಿವಿಧವಾದ ಈ ಭಾಗಗಳಲ್ಲಿ ಸುದ್ದಿ ಸಂಪರ್ಕವು ಅಣಿಯಾಗಿರಬೇಕು. ನಿಖರವಾದ ಸಂಪರ್ಕವನ್ನು ಆಗುಮಾಡಲು ನರಗಳು ವಿಪುಲವಾಗಿ, ಹತ್ತೂ ಕಡೆಗಳಿಗೂ, ಹರಡಿಕೊಂಡಿರುತ್ತವೆ. ದೇಹವನ್ನು ಡಿಸೆಕ್ಟ್ ಮಾಡುವಾಗ ಕಣ್ಣಿಗೆ ನರಗಳು ಕಾಣಿಸುತ್ತವೆ. ಇಂತಹ ಒಂದೊಂದು ನರದಲ್ಲೂ ಸೂಕ್ಷ್ಮವಾದ ಸಾವಿರಾರು ಎಳೆಗಳು ಇರುತ್ತವೆ. ಒಂದೊಂದು ಎಳೆಯೂ ಎರಡು ವಿಶಿಷ್ಟ ಕೇಂದ್ರಗಳಿಗೆ ಸಂಪರ್ಕವನ್ನು ಕಲ್ಪಿಸುತ್ತದೆ. ಅಂದರೆ ಕಣ್ಣಿಗೆ ಕಾಣಿಸುವ ನರಗಳೂ ಟೆಲಿಫೋನ್ ಕೇಬಲುಗಳಿದ್ದಂತೆ. ಒಂದೇ ಕೇಬಲಿನಂತೆ ಕಾಣಿಸಿದರೂ, ಹಲವಾರು ಬೇರೆ ಬೇರೆ ನಂಬರುಗಳಿಗೆ ಸಂಪರ್ಕವನ್ನು ಕಲ್ಪಿಸುವ ತಂತಿಗಳು ಇರುತ್ತವೆ. ಅದೇ ತರಹಾನೇ ನರಗಳೂ ಕೂಡ. ಕಾಣಿಸುವ ನರಕ್ಕೆ ಪೆಟ್ಟು ಬಿದ್ದರೆ, ಎಲ್ಲಾ ಎಳೆಗಳೂ ತುಂಡಾಗದೆ ಇರಬಹುದು. ಕೆಲವು ಎಳೆಗಳು ತುಂಡಾಗಿ, ಸಂಬಂಧಪಟ್ಟ ಕೇಂದ್ರಗಳು, ಕಾರ್ಯವನ್ನು ಮಾಡಲಾಗದೆ ಇರಬಹುದು. ಆದರೆ ಮತ್ತೆ ಕೆಲವು ಎಳೆಗಳು ಉಳಿದುಕೊಂಡೂ ಇರಬಹುದು. ಅವುಗಳಿಗೆ ಸಂಬಂಧಪಟ್ಟ ಕಾರ್ಯಗಳು ಮುಂದುವರೆಯುತ್ತವೆ.

ವಿಚಾರಪರ ಮನಸ್ಸಿರುವ ಸೆರಿಬ್ರಂ ಇಗೂ, ಸ್ಮರಣಾ ಕೇಂದ್ರಗಳಿಗೂ, ನಿಕಟಸಂಪರ್ಕವನ್ನು ಕಲ್ಪಿಸುವ ಕೋಟ್ಯಾಂತರ ಮಾರ್ಗಗಳಿರುತ್ತವೆ. ಆದರೆ ಮಾನವನ ಸಾಮಾನ್ಯ ಬಾಳಿನಲ್ಲಿ, ಲಕ್ಷಾಂತರ ಮಾರ್ಗಗಳು ಮಾತ್ರ ಉಪಯೋಗಿಸಲ್ಪಡುತ್ತವೆ. ಕಲಿಕೆಯಿಂದ, ಅಭ್ಯಾಸದಿಂದ, ಇಂತಹ ಮಾರ್ಗಗಳ ಸಂಖ್ಯೆಯನ್ನು ಬಹಳ ಪಾಲು ಹೆಚ್ಚಿಸಬಹುದು. ಅತಿ ಜಾಣರು, ಪ್ರಚಂಡರು, ಎನಿಸಿಕೊಂಡವರಲ್ಲಿ ಹೀಗೆ ಆಗಿರುತ್ತದೆ.

ಮನಸ್ಸು ಸಮರ್ಪಕವಾಗಿ ಕೆಲಸವನ್ನು ಮಾಡದೆ ಇದ್ದಾಗ, ಮೆದುಳಿನಲ್ಲಿ ಸಂಪರ್ಕಮಾರ್ಗಗಳು ತುಂಡಾಗಿರಬಹುದು ಎಂದು ಊಹಿಸಬಹುದಾದರೂ, ಮೆದುಳನ್ನು ಪರೀಕ್ಷಿಸಿದಾಗ ಯಾವ ವ್ಯತ್ಯಾಸವೂ ಕಾಣಿಸುವುದಿಲ್ಲ. ಅಂದರೆ ಈಗ ಬಳಕೆಯಲ್ಲಿರುವ ಅತಿ ಸೂಕ್ಷ್ಮದರ್ಶಿಗಳಿಂದಲೂ ಯಾವ ಎಳೆಗಳು ಒಂದು ಸಣ್ಣ ನರದಲ್ಲಿ ಕೆಟ್ಟಿವೆ ಎಂಬುದು ಗೋಚರವಾಗದೆ ಇರಬಹುದು.

ನರಗಳ ಎಳೆಗಳು ಸಂಪರ್ಕವನ್ನು ಸಾಧಿಸುತ್ತಿಲ್ಲ ಎಂದಾಗ, ಅವು ತುಂಡಾಗಿರಲೇಬೇಕು ಎಂದು ಹೇಳುವಂತಿಲ್ಲ. ಏಕೆಂದರೆ ಅವುಗಳ ರಾಸಾಯನಿಕ ಸ್ಥಿತಿಯು ಕ್ಷಣ ಕ್ಷಣಕ್ಕೂ, ಒಂದು ಇತಿಮಿತಿಯಲ್ಲಿ ವ್ಯತ್ಯಾಸವನ್ನು ಹೊಂದುತ್ತಿರುತ್ತದೆ. ನರಗಳಲ್ಲಿ ವಿದ್ಯುತ್ ಹರಿಯುವಾಗ ಹೀಗಾಗಬೇಕಾದುದು ಸಮಂಜಸ.

ಮೆದುಳಿನ ವಿವರಗಳನ್ನು ತಿಳಿದುಕೊಳ್ಳಲು, ಈ ರೀತಿ, ಕಣ್ಣಿಗೆ ಕಂಡ ಹಾಗೆ ಭಾಗಗಳನ್ನು ಮಾಡಿ ಅಧ್ಯಯನವನ್ನು ಮಾಡುತ್ತಾರೆ. ಆದರೆ ಮೆದುಳು ಕಾರ್ಯಗತವಾಗಿರುವಾಗ ಸಂಬಂಧಿಸಿದ ಎಲ್ಲಾ ಭಾಗಗಳ ಸುಸೂತ್ರ ಸಮನ್ವಯದಿಂದ. ಊಟಮಾಡುವವನಿಗೆ, ಅನ್ನ ಸಾರು, ಅನ್ನ ಹುಳಿ, ಮೊಸರನ್ನ, ಚಟ್ನಿ ಎಂಬುದೇ ಪ್ರಾಮುಖ್ಯವಾದುದು. ಆದರೆ ಅಡಿಗೆಯನ್ನು ಮಾಡುವವನಿಗೆ, ಅನ್ನವೇ ಬೇರೆ, ಅದರ ಅಡಿಗೆಯೇ ಒಂದು ರೀತಿ. ಸಾರು ಬೇರೆ, ಅದರ ಅಡಿಗೆಯು ಮತ್ತೊಂದು ರೀತಿ. ಹುಳಿ ಮತ್ತು ಅದರ ಅಡಿಗೆಯೇ ಬೇರೊಂದು ತರಹ. ಮನಸ್ಸನ್ನು ಉಪಯೋಗಿಸಿಕೊಳ್ಳುವಾಗ ಊಟವನ್ನು ಮಾಡಿದಂತೆ. ಮನಸ್ಸನ್ನು ವಿಶ್ಲೇಷಿಸಿ, ಅದರ ಕಾರ್ಯಕ್ರಮವನ್ನು ವಿವರವಾಗಿ ತಿಳಿಯುವಾಗ, ಅಡಿಗೆಯವನಂತಾಗಬೇಕು. ಈ ವ್ಯತ್ಯಾಸವನ್ನು ಗಮನಿಸಬೇಕು. ಇಷ್ಟು ಅನ್ನಕ್ಕೆ ಅಷ್ಟು ಸಾರನ್ನು ಹಾಕಿ ಕಲಸಿ ಕೊಳ್ಳಬೇಕು, ಎನ್ನುವುದು ಉಣ್ಣುವವನ ಅಭಿರುಚಿಗೆ ತಕ್ಕಂತೆ. ಇದರ ಕಲ್ಪನೆಯು ಕೂಡ ಅಡಿಗೆಯವನಿಗೆ ಇರುವುದಿಲ್ಲ. ಅದೇ ರೀತಿಯಲ್ಲಿ ಅಡಿಗೆಯನ್ನು ಮಾಡುವವನ ಕೆಲಸಗಳ ಕಲ್ಪನೆಯು ಉಣ್ಣುವವನಿಗೆ ಇರಬೇಕಾಗಿಲ್ಲ. ಮನಸ್ಸಿನ ಕೆಲಸವೂ ಹೀಗೆಯೇ. ಮನಸ್ಸನ್ನು ಉಪಯೋಗಿಸುವವನು ತನ್ನ ಅಭಿರುಚಿಗೆ ತಕ್ಕಂತೆ ಬಳಸಿಕೊಳ್ಳುತ್ತಾನೆ. ಆದರೆ ಮನಃಶಾಸ್ತ್ರಜ್ಞರು ಅಡಿಗೆಯವರಂತೆ. ಮನಸ್ಸನ್ನು ವಿಶ್ಲೇಷಿಸುವುದು ಮಾತ್ರವಲ್ಲದೆ, ಅಭಿರುಚಿಯನ್ನೂ ತಿಳಿದು ಅಳತೆಮಾಡಲೂ ಕೂಡ ಪ್ರಯತ್ನಿಸುತ್ತಾರೆ. Aptitude tests ಎನ್ನುವುದು, ಈ ರೀತಿಯವು. ಆದರೆ ಈ ವಿಷಯದಲ್ಲಿ, ಈಗಿನ ವೈಜ್ಞಾನಿಕ ಹಂತದಲ್ಲಿ ಊಹಾಪೋಹಗಳು ತಾಂಡವವಾಡುತ್ತಿವೆಯೇ ವಿನಹಾ, ನಿಖರವಾದ ಸಿದ್ಧಾಂತಗಳಲ್ಲ. ಆದರೂ ವ್ಯಕ್ತಿಯ ಅಭಿರುಚಿಯನ್ನು ಸಾಕಷ್ಟುಮಟ್ಟಿಗೆ ತಿಳಿಯಬಹುದು. ಉದಾಹರಣೆಗೆ :–

'ರಾಮಯ್ಯನವರು ಮನೆಯಲ್ಲಿದ್ದಾರೆಯೇ ನೋಡಿಕೊಂಡು ಬಾ' ಎಂದು ಯಜಮಾನರು ಜವರನಿಗೆ ಹೇಳಿದರು. ಜವರ ಹೋಗಿ ಬಂದ 'ಅಯ್ಯನವರು ಮನೆಯಾಗಿಲ್ಲ, ಬುದ್ಧೀ !' ಎಂದು ಹೇಳಿದ. ಎಂಟು ವರ್ಷದ ಮಗ ಕಿಟ್ಟುವನ್ನು ಕರೆದು 'ರಾಮಯ್ಯನವರು ಮನೇಲಿದ್ದಾರೆಯೆ ? ನೋಡಿಕೊಂಡು ಬಾ' ಎಂದರು.

ಕಿಟ್ಟು ಹೋಗಿ ಬಂದ. 'ರಾಮಯ್ಯನವರು ಭತ್ತ ತರುಕ್ಕೆ ಅಂತ ಮೂರುದಿನಗಳ ಹಿಂದೆ ಹಳ್ಳಿಗೆ ಹೋದರು, ಇನ್ನೊಂದು ವಾರದ ನಂತರ ಭತ್ತವನ್ನು ತೆಗೆದುಕೊಂಡು ಹಿಂತಿರುಗುವ ನಿರೀಕ್ಷೆಯಿದೆಯಂತೆ' ಎಂದು ವರದಿ ಒಪ್ಪಿಸಿದ.

ಜವರನ ಮನಸ್ಸು ಕೆಲಸ ಮಾಡುತ್ತಿತ್ತು. ರಾಮಯ್ಯನವರು, ಅವರಿರುವ ಮನೆ, ಇವೆರಡರ ಸ್ಮರಣೆಯು ಲಕ್ಷಣವಾಗಿತ್ತು. ಯಜಮಾನರು, ಹೇಳಿದ ಮಾತುಗಳೂ ಕೇಳಿಸಿತ್ತು, ತಿಳಿದಿತ್ತು. ರಾಮಯ್ಯನವರ ಮನೆಗೆ ಹೋದ. ಇದಾರೆಯೇ ಅಂತ ಕೇಳಿದ. ಇಲ್ಲ ಎಂದು ಉತ್ತರ ಬಂತು. ಹಿಂತಿರುಗಿದ.

ಕಿಟ್ಟುವಿಗೆ ಎಂಟೇ ವರ್ಷ ವಯಸ್ಸು. ಜವರನಿಗಿಂತ ಮೂವತ್ತು ವರ್ಷ ಚಿಕ್ಕವನು. ಅವನ ಮನಸ್ಸೂ ಕೆಲಸಮಾಡುತ್ತಿತ್ತು. ರಾಮಯ್ಯನವರು, ಅವರ ಮನೆ ಎರಡರ ಸ್ಮರಣೆಯು ಅವನಿಗೂ ಇತ್ತು. ತಂದೆಯು ಹೇಳಿದುದು ಅವನಿಗೂ ಕೇಳಿಸಿತ್ತು. ಅರ್ಥವೂ ಆಗಿತ್ತು. ರಾಮಯ್ಯನವರು ಮನೆಯಲ್ಲಿಲ್ಲ ಎಂದು ಮನೆಯವರು ಹೇಳಿದಾಗ ಅವನ ಮನಸ್ಸಿನಲ್ಲಿ ತುಸು ಕುತೂಹಲವು ಕೆರಳಿತು. ಎಲ್ಲಿಗೆ ಹೋಗಿದ್ದಾರೆ, ಊರಿನಲ್ಲಿದ್ದಾರೆಯೇ ? ಇಲ್ಲದಿದ್ದರೆ ಯಾವಾಗ ಬರುತ್ತಾರೆ, ಇವೆಲ್ಲ ಪ್ರಶ್ನೆಗಳನ್ನು ಕೇಳಿ ಉತ್ತರವನ್ನು ಪಡೆದಿದ್ದ. ರಾಮಯ್ಯನವರನ್ನು ಅಪ್ಪ ಕಾಣಬೇಕು. ಯಾವುದೋ ಮಾತನಾಡಬೇಕು, ಇಲ್ಲದೆ ಇದ್ದರೆ ಅವರಿದಾರೆಯೇ ನೋಡಿ ಕೊಂಡು ಬಾ ಎಂದು ಕಳುಹಿಸುತ್ತಿರಲಿಲ್ಲ. ಇಷ್ಟೆಲ್ಲಾ ಯೋಚನೆಗಳನ್ನು ಕಿಟ್ಟು ಮಾಡಿ ವಿವರವಾದ ಉತ್ತರವನ್ನು ಪಡೆದಿದ್ದ.

ಯೋಚಿಸುವ ಶಕ್ತಿಯು, ವಯಸ್ಸಿಗೆ ಅನುಗುಣವಾಗಿ ಬೆಳೆಯುವುದಿಲ್ಲ. ಜವರನಿಗೆ ಎಷ್ಟೇ ಹೇಳಿಕೊಟ್ಟರೂ ಸ್ವಂತವಾಗಿ ಆಲೋಚಿಸುವ ಯೋಗ್ಯತೆಯು ಬರುವುದೇ ಇಲ್ಲ. ಜವರನಿಗೆ ಕಲಿಸಹೋಗುವುದು ಗೋರ್ಕಲ್ಲಮೇಲೆ ಮಳೆಯು ಸುರಿದಂತೆ. ಹುಟ್ಟುವಾಗ, ತಾಯ್ತಂದೆಯರಿಂದ ವಂಶಾನುಗತವಾಗಿ ಬಂದಿರುವ ಒಂದು ಅಂಶವು ಯೋಚಿಸುವ ಪ್ರವೃತ್ತಿಗೆ ಮುಖ್ಯ ಕಾರಣವಾಗುತ್ತದೆ. ಈ ಅಂಶವನ್ನು ಅಭಿವೃದ್ಧಿಸುವುದು ವಿದ್ಯಾಭ್ಯಾಸದ ಧ್ಯೇಯ. ವಿದ್ಯಾಭ್ಯಾಸದ, ಅಥವಾ ಕಲಿಯುವಿಕೆಯ ಅವಕಾಶವು ಇರದಿದ್ದರೆ, ಈ ಅಂಶವು ಬೂದಿ ಮುಚ್ಚಿದ ಕೆಂಡದಂತೆ, ನಶಿಸುತ್ತಾ ಹೋಗಬಹುದು.

ಈ ಶತಮಾನದಲ್ಲಿ ಐನ್‌ಸ್ಟೈನ್ ಮಹಾಶಯನು ಪ್ರಪಂಚದ ಅತ್ಯುನ್ನತ ಕುಶಾಗ್ರಮತಿಯೆಂದು ಹೇಳಬಹುದು. ಇಡೀ ಮಾನವನ ಜ್ಞಾನ ಭಂಡಾರಕ್ಕೆ ಆತನು ಅರ್ಪಿಸಿದ ಕಾಣಿಕೆಯು ಅತ್ಯಮೂಲ್ಯವಾದುದು. ಪ್ರಚಂಡ ಬುದ್ಧಿಯಿಂದಾಗಿ ಆತ ಸಿದ್ಧಾಂತವನ್ನು ಪ್ರಕಟಿಸಿದ. ಭೌತಶಾಸ್ತ್ರದ ಇಂದಿನ ಪ್ರಗಲ್ಭವಾದ ಪ್ರಗತಿಗೆ

ಆತನ ಸಿದ್ಧಾಂತವು ಭದ್ರವಾದ ತಳಹದಿಯಾಯಿತು.

ಆದರೆ ಹಿಂದೆ ನಡೆದ ಹತ್ತನೆಯ ಶತಮಾನದಲ್ಲಿ, ಇಂತಹ ಪ್ರಚಂಡ ಬುದ್ಧಿ ಇದ್ದವರು ಇರಲೇ ಇಲ್ಲವೇ ? ಇದ್ದೇ ಇರಬೇಕು. ಆದರೆ ಭೌತಶಾಸ್ತ್ರದ ಪ್ರಗತಿಯು ಆ ಶತಮಾನದಲ್ಲಿ ಶೈಶವಾಸ್ಥೆಯಲ್ಲಿತ್ತು. ಆದಕಾರಣ ಅಂತಹ ಪ್ರಚಂಡನು ಇದ್ದಿದ್ದರೂ, ಅವನ ಚುರುಕು ಬುದ್ಧಿಯು ಅಮೋಘವಾಗಿ ವಿಕಸಿಸಲು ಸಾಧ್ಯವಾಗಲಿಲ್ಲ. ಆದರೆ ಈ ಶತಮಾನದ ವೇಳೆಗೆ ಭೌತಶಾಸ್ತ್ರದ ಜ್ಞಾನ ಭಂಡಾರವು ಸಾಕಷ್ಟು ಅಭಿವೃದ್ಧಿಯನ್ನು ಹೊಂದಿದ್ದಿತು. ಐನ್‌ಸ್ಟೈನನ ಮನಸ್ಸು ವಿಕಸಿಸಲು ಅವಕಾಶವು ಬಹಳಷ್ಟು ಇತ್ತು.

ಇಂದಿನವರೆವಿಗೂ ಪ್ರಪಂಚದಲ್ಲೆಲ್ಲಾ ಅತ್ಯಂತ ಮೇಧಾವಿಯಾಗಿದ್ದವನು, ಬಲು ಪ್ರಚಂಡನಾಗಿದ್ದವನು, ಎಂದರೆ ಲಿಯೋನಾಡೊ ಡ ವಿಂಚಿ. ಶಿಲ್ಪ ಕಲೆಯಲ್ಲಾಗಲೀ, ವರ್ಣಚಿತ್ರರಚನೆಯಲ್ಲಾಗಲೀ, ವಿಜ್ಞಾನದಲ್ಲಾಗಲೀ, ಆತ ಸಾಧಿಸಿದ ಔನ್ನತ್ಯವು, ಮಿಕ್ಕ ಯಾರಿಂದಲೂ ಆಗಿಲ್ಲ, ಎಂದು ಪ್ರಚಂಡರು ಎನಿಸಿಕೊಂಡ ಹಲವಾರು ಜನರು ನುಡಿದಿದ್ದಾರೆ. ಆದರೆ ಭೌತವಿಜ್ಞಾನದಲ್ಲಿ ಆತನಿಗೆ ತಿಳಿದುದಕ್ಕಿಂತ ಹೆಚ್ಚಾಗಿ, ಇಂದಿನ ಕಾಲೇಜುಗಳ ಭೌತ ವಿದ್ಯಾರ್ಥಿಗಳು ಕಲಿತುಕೊಂಡಿದ್ದಾರೆ.

ಏಳನೆಯ ಶತಮಾನದಲ್ಲಿ ಆದಿಶಂಕರಾಚಾರ್ಯರು ಬರೆದು ಪ್ರಚಾರಕ್ಕೆ ತಂದ ಸಿದ್ಧಾಂತವು ಇಂದೂ ಪ್ರಪಂಚದ ಹಲವಾರು ಬುದ್ಧಿ ಜೀವಿಗಳ ಮನ್ನಣೆಯನ್ನು ಪಡೆದಿದೆ. ಆದರೆ ಅವರು ಬಾಳಿದ ಕಾಲದಲ್ಲಿ, ನಮ್ಮ ರಾಷ್ಟ್ರದಲ್ಲಿ, ಆತ್ಮಜ್ಞಾನದ ಅರಿವು ಬುದ್ಧಿಜೀವಿಗಳ ಏಕೈಕ ಗುರಿಯಾಗಿತ್ತು. ಆದರೆ ಆದಿಶಂಕರರು ಈಗ ಬದುಕಿದ್ದಿದ್ದರೆ, ರಸಾಯನ ಅಥವಾ ಭೌತಶಾಸ್ತ್ರದ ಅಧ್ಯಯನವನ್ನು ಮಾಡಿದ್ದಿದ್ದರೆ ನೋಬೆಲ್ ಪಾರಿತೋಷಕವು ಹಲವಾರುಬಾರಿ ನಮ್ಮ ದೇಶಕ್ಕೆ ದೊರೆಯುತ್ತಿತ್ತು.

ಸಾರಾಂಶವೇನೆಂದರೆ ಪ್ರಚಂಡ ಬುದ್ಧಿ ಇದ್ದರೂ, ಅದು ವಿಕಸಿಸಿ ಫಲಪ್ರದವಾಗಬೇಕಾದರೆ, ಆ ಕಾಲದ ಜ್ಞಾನ ಭಂಡಾರವು ತಳಹದಿಯಾಗುತ್ತದೆ; ಅದನ್ನು ಅನ್ವಯಿಸಿಕೊಂಡು, ಅವರುಗಳು ನವ್ಯ ಸಿದ್ಧಾಂತಗಳನ್ನು ಕಟ್ಟಬೇಕು. ಇಂದಿಗೂ ಆಫ್ರಿಕಾದ ಹಿಂದುಳಿದ ಜನಾಂಗಗಳಲ್ಲಿ, ನ್ಯೂಟನ್, ಐನ್‌ಸ್ಟೈನ್‌ರಂತಹ ಪ್ರಚಂಡಮತಿಗಳಿರಬೇಕು. ಆದರೆ ಅವರ ಪ್ರಚಂಡ ಬುದ್ಧಿಯು, ಬಿಲ್ಲು ಬಾಣಗಳನ್ನು ನವೀನಗೊಳಿಸುವುದರಲ್ಲಿ ಮುಕ್ತಾಯಗೊಳ್ಳುತ್ತಿರಬಹುದು. ಆದರೆ ಮನಸ್ಸಿನಲ್ಲಿ ಆಲೋಚನಾ ಶಕ್ತಿಯು ಚುರುಕಾಗಿರಬೇಕಾದರೆ, ವಂಶಾನುಗತವಾಗಿ ನಡೆದುಬಂದ ಗುಣವು ಅಗತ್ಯ. ಅಷ್ಟೇ ಅಗತ್ಯವಾದುದು, ಆ ಕಾಲದ ಮಾನವನ ಜ್ಞಾನ

ಭಂಡಾರ.

ಮಾನವನ ಮಾನಸಿಕ ಆರೋಗ್ಯವನ್ನು ತಿಳಿದುಕೊಳ್ಳುವಾಗ, ಮನಸ್ಸಿನ ಈ ಗುಣವನ್ನು ಮರೆಯಬಾರದು. ಮನಸ್ಸಿನ ಅನಾರೋಗ್ಯಕ್ಕೂ, ಅದರ ಪರಿಹಾರ ಕ್ರಮಕ್ಕೂ, ಇಂತಹ ತಿಳಿವಳಿಕೆಯು ಅತ್ಯಗತ್ಯ.

ಮನಸ್ಸಿನ ಕಾರ್ಯಕ್ರಮವನ್ನು ತಿಳಿಯುವಾಗ, ಮನುಷ್ಯನ ಹಲವಾರು ಸ್ವಾಭಾವಿಕವಾದ ಅವಸ್ಥೆಗಳನ್ನೂ ಗಮನಿಸಬೇಕು. ಬಾಲ್ಯ, ಕೌಮಾರ, ಯೌವನ, ವಾರ್ಧಿಕ್ಯ ಎಂದು ನಾಲ್ಕು ಮುಖ್ಯವಾದ ಅವಸ್ಥೆಗಳನ್ನು ಮನುಷ್ಯನು ಸ್ವಾಭಾವಿಕವಾಗಿ, ಒಂದಾದ ಮೇಲೊಂದರಂತೆ ಅನುಭವಿಸಬೇಕು. ಆಕಸ್ಮಿಕಕ್ಕೆ ಗುರಿಯಾಗಿ ಸಾಯದೆ ಇದ್ದರೆ, ಮನಸ್ಸಿನ ಚಟುವಟಿಕೆಗಳು, ಈ ಅವಸ್ಥೆಗಳಿಗೆ ಅನ್ವಯವಾಗಿರುತ್ತವೆ. ಆದಕಾರಣ ಮನಸ್ಸನ್ನು ವಿಶ್ಲೇಷಿಸುವಾಗ, ಈ ವಿಂಗಡನೆಯನ್ನು ಬಳಸಿಕೊಳ್ಳುವುದು ಉಪಯುಕ್ತ.

* * * *

# ೪. ಬಾಲ್ಯ, ಆಗಿನ ಮನಸ್ಸು

ಕ್ಷೀರಸಾಗರದಲ್ಲಿ ವಟಪತ್ರದ ಮೇಲೆ ಮಲಗಿ, ಕಾಲಬೆರಳನ್ನು ಸುಖವಾಗಿ ಚೀಪುತ್ತ ಮಂದಸ್ಮಿತನಾಗಿ ಮಲಗಿರುವ ಮಗು, ಕೃಷ್ಣ, ನಮ್ಮಲ್ಲಿ ಬಹಳ ಜನರ ಆರಾಧ್ಯ ದೇವರು. ಯಾವ ಯೋಚನೆಯೂ ಇರದೆ, ನಿಶ್ಚಿಂತನಾಗಿ ಮಂದಸ್ಮಿತನಾದ ಬಾಲಕೃಷ್ಣನು, ಅಂತಸ್ಮಿತನೂ ಆಗಿದ್ದಾನೆ, ಎಂದು ಎಲ್ಲರ ನಂಬಿಕೆ. ಬಾಲಕೃಷ್ಣನಂತೆ ನಾವೂ ಬಾಳನ್ನು ನಡೆಸಿದರೆ ಬಲು ಚೆನ್ನ ಎಂದು ಆಸೆಯೂ ಆಗುತ್ತದೆ. ಆಳಮನಸ್ಸಿನ ಅಂತರಾಳದಲ್ಲಿರುವ ಇಂತಹ ಹಿರಿಯಾಸೆಯೇ ಪುರಾಣದ ಕತೆಗಳಾಗಿ, ಬಾಲಕೃಷ್ಣನ ರೂಪಿನಲ್ಲಿ ಪ್ರತೀಕವಾಗಿರಬಹುದು.

ಬೆರಳನ್ನು ಚೀಪುತ್ತ ಸಂತಸದಿಂದ ಮಲಗಿರುವ ಮಗುವಿನ ಹೊಟ್ಟೆಯು ತುಂಬಿರಬೇಕು, ಇಲ್ಲದಿದ್ದರೆ ಮಂದಸ್ಮಿತವಾಗಿರುವ ಬದಲು ರಚ್ಚೆ ಹಿಡಿದು ಲಬೋ ಲಬೋ ಮಾಡುತ್ತದೆ. ಹೊಟ್ಟೆಯು ಕಚ್ಚುತ್ತಲೂ ಇರಬಹುದು. ನೋವಾಗುತ್ತಿರಬಾರದು. ಸಾಫಾಗಿ, ಮಲ ಜಲಗಳ ವಿಸರ್ಜನೆಯೂ ಆಗಿರಬೇಕು. ಹಾಗಿರುವಾಗ, ಸಂತಸದಿಂದ ಬೆರಳನ್ನು ಚೀಪುತ್ತ ಮಂದಸ್ಮಿತವಾಗಿರುತ್ತದೆ.

ಮಗುವಿನ ಎದುರು ಅಪರಿಚಿತರು, ಅದರಲ್ಲೂ ವಿಚಿತ್ರ ಮುಖದವರು, ಹೋಗಿ ಗೊಗ್ಗರ ಧ್ವನಿಯಲ್ಲಿ ಮುದ್ದು–ಲಾಲಿ ಹಾಡ ಹೋದರೆ,ಮಗುವು ಅಳುತ್ತದೆ, ಕಿಠಾರಂತ ಕಿರುಚಿಕೊಂಡು ಅಳುತ್ತದೆ. ಆದರೆ ಪರಿಚಿತವಾದ ತಾಯಿ ಮುಖವನ್ನು ಕಂಡರೆ, ಮಾದಕ ನಗೆಯನ್ನು ಬೊಚ್ಚು ಬಾಯಿಯಲ್ಲಿ ಮೂಡಿಸುತ್ತದೆ. ಪುಟ್ಟ ಕೈಗಳೆರಡನ್ನೂ ಎತ್ತಿಕೋ ಎನ್ನುವಂತೆ ಚಾಚುತ್ತದೆ. ಎತ್ತಿಕೊಂಡ ತಾಯಿಯ ಕೊರಳಸುತ್ತ ತನ್ನ ಕೈಗಳನ್ನು ಬಳಸಿ ಹಿಡಿದುಕೊಳ್ಳುತ್ತದೆ.

ನಿಶ್ಚಿಂತರಾಗಿ ಬಾಲಕೃಷ್ಣನಂತೆ ಇರಬೇಕು, ಎಂದು ಆಸೆಪಡುವಾಗ ಮಗುವಿಗಿರುವ ನಿರ್ಮಲ ಮನಸ್ಸು ಇರಬೇಕು, ಎಂದು ಅರ್ಥವೇ ಹೊರತು, ಮಗುವಿನಂತೆ ತಾಯ ಆಸರೆಯನ್ನು ಸದಾಕಾಲವೂ ಪಡೆದಿರಬೇಕು ಎಂದಲ್ಲ. ಅಪರಿಚಿತರನ್ನು ಕಂಡರೆ ಬೆದರಿ ಬೊಬ್ಬೆ ಹಾಕಬೇಕು. ಎಂದಲ್ಲ. ಮಗುವು ಪರಾವಲಂಬಿ. ಹಸಿವಾದಾಗ ಅಳುವುದೊಂದೇ ಅದರ ಮನಸ್ಸು ಹೂಡುವ ಪ್ರತಿಕ್ರಿಯೆ. ತಾಯಿಯೋ ದಾದಿಯೋ ಆಗ ಬಂದು ಹಾಲನ್ನು ಕುಡಿಸುತ್ತಾಳೆ.

ಹೊಟ್ಟೆ ತುಂಬಿತು, ಮಗುವು ಮಂದಸ್ಮಿತ ಬಾಲಕೃಷ್ಣ. ಅದರ ಮನಸ್ಸು ಪ್ರತಿಕ್ರಿಯೆಯನ್ನು ಹೂಡುವುದು, ಎರಡೇ ಮಾರ್ಗಗಳಲ್ಲಿ. ಒಂದು ಅಳು ಮತ್ತು ರಂಪ. ಇನ್ನೊಂದು ನಗು ಮತ್ತು ಬಾಲಲೀಲೆ. ಇವೆರಡನ್ನು ಬಿಟ್ಟು ಸ್ವಯಂಪ್ರೇರಿತವಾಗಿ ಮತ್ತೇನನ್ನೂ ಮಾಡಲೂ ತಿಳಿಯದು.

ಎಳೆಯ ಮಗುವಿನ ಮನಸ್ಸು ಹೇಗಿರುತ್ತದೆ ಎಂಬುದನ್ನು ಅದರ ನಡವಳಿಕೆಯಿಂದ ನಾವು ಊಹಿಸಬೇಕೇ ವಿನಹಾ, ಯಾವ ಮಗುವೂ ತಾನೇ ಹೇಳುವುದಿಲ್ಲ. ಹಲವಾರು ಎಳೆಯ ಮಕ್ಕಳ ನಡವಳಿಕೆಯನ್ನು ಕಣ್ಣಲ್ಲಿ ಕಣ್ಣಿಟ್ಟುಕೊಂಡು ನೋಡಿ, ಅಭ್ಯಾಸವನ್ನು ಅಥವಾ ಅಧ್ಯಯನವನ್ನು ಮಾಡಿ ; ಹಲ ಕೆಲವು ಪರೀಕ್ಷಾರ್ಥ ಪ್ರಯೋಗಗಳನ್ನು ನಡೆಸಿ, ಅನಂತರ ಮನೋವಿಜ್ಞಾನಿಗಳು ಊಹಿಸಿ ನಿರ್ಧರಿಸಬೇಕು. ಊಹೆಯಿಂದ ನಿರ್ಧರಿಸುವಾಗ, ಇದೇ ಸತ್ಯವಾದುದು ಎಂದು ಖಡಾಖಂಡಿತವಾಗಿ ಹೇಳಬರುವುದಿಲ್ಲ. ಆದರೂ ಬಹಳ ಪಾಲು ಸರಿಯಾದುದು ಎಂದು ಒಪ್ಪಿಕೊಳ್ಳಬೇಕು. ಈ ಕುಂದುಗಳನ್ನು ಗಮನದಲ್ಲಿಟ್ಟುಕೊಂಡು ಎಳೆಯ ಮಗುವಿನ ಮನಸ್ಸು ಹೇಗಿರುತ್ತದೆ ? ಯಾವ ರೀತಿಯಲ್ಲಿ ಅಭಿವೃದ್ಧಿಯಾಗುತ್ತದೆ ಎಂಬುದನ್ನು ತಿಳಿಯೋಣ.

ಎಳೆಯ ಮಗುವಿನಲ್ಲಿ ಅಳು ಮತ್ತು ನಗು ಇವೆರಡನ್ನು ಮಾತ್ರ ಕಾಣುತ್ತೇವೆ. ಎಳೆಯ ಮಗು ಎಂದಾಗ ಸುಮಾರು ಆರೇಳು ತಿಂಗಳೊಳಗಿನ ಮಗು ಎಂದು ಸ್ಥೂಲವಾಗಿ ಹೇಳಬಹುದು. ಅಳುವು, ಮಗುವು ಹುಟ್ಟುವಾಗ ಪ್ರಾರಂಭವಾಗುತ್ತದೆ. ತಾಯ ಗರ್ಭದಲ್ಲಿದ್ದಾಗ ಮಗುವಿನ ಶ್ವಾಸಕೋಶಗಳು ಯಾವ ಉಸಿರಾಟವನ್ನೂ ಮಾಡಬೇಕಾಗಿಲ್ಲ. ಜನನವಾದ ಮೇಲೆ ಉಸಿರಾಡಬೇಕು. ಸುಪ್ತವಾಗಿದ್ದ ಮೊಗ್ಗಿನಂತೆ ಮುದುಡಿಕೊಂಡಿದ್ದ ಶ್ವಾಸಕೋಶಗಳನ್ನು ಅರಳಿಸಬೇಕು. ಅನಂತರ ಬದುಕಿಗೆ ಅತ್ಯಗತ್ಯವಾದ ಉಸಿರಾಡುವಿಕೆಯನ್ನು ನಡೆಸಲು ಸಾಧ್ಯ. ಹುಟ್ಟಿದ ಕೂಡಲೇ ಮಗುವು ಅಳುವುದು, ಶ್ವಾಸಕೋಶಗಳನ್ನು ಅರಳಿಸುವ, ಪ್ರಯತ್ನ. ಆನಂತರ ಅಳುವಿನ ಮೂಲಕವೇ ಮಗುವು, ತನ್ನ ಹಸಿವನ್ನಾಗಲೀ, ಇತರ ಬಾಧೆಗಳನ್ನಾಗಲೀ, ತಾಯಂದಿರಿಗೆ ತಿಳಿಸುವ ಭಾಷೆಯಾಗಿರುತ್ತದೆ. ಸುಮಾರು ಮೂರು ತಿಂಗಳು ಬೆಳೆದ ಬಳಿಕ ಎಳೆಯ ಮಗುವು ನಗಲಾರಂಭಿಸುತ್ತದೆ. ಮನ ಮೋಹಕವಾದ ನಗೆ. ಬಂಜೆಯನ್ನು ಕೂಡ ಬರಸೆಳೆವ ಮಾದಕ ನಗೆ.

ಅಳು ಮತ್ತು ನಗು, ಎರಡೂ ಭಾವನಾ ಪ್ರದರ್ಶನಗಳು. ಇವೆರಡರ ಕೇಂದ್ರಗಳು ಮೆದುಳಿನ ಬುಡದಲ್ಲಿ ಇರುತ್ತವೆ. ದೊಡ್ಡವರಲ್ಲಿಯೂ ಇದೇ ವ್ಯವಸ್ಥೆ ಇರುತ್ತದೆ. ಆದರೆ ಮೆದುಳು ಅಭಿವೃದ್ಧಿ ಹೊಂದಿದ ದೊಡ್ಡವರಲ್ಲಿ ಬಹಳಷ್ಟು

ವ್ಯತ್ಯಾಸವಿರುತ್ತದೆ, ಭಾವನಾಪ್ರದರ್ಶನದಲ್ಲಿ. ಅದನ್ನು ವಿವರವಾಗಿ ಮುಂದೆ ತಿಳಿಯೋಣ.

ಏಳೆಂಟು ತಿಂಗಳುಗಳಾದ ಮೇಲೆ ಮಗುವು ತೆವಳಲು ಹಾಗೂ ಅಂಬೆಗಾಲಿಟ್ಟು ನಡೆಯಲು ಕಲಿಯುತ್ತದೆ. ಈ ತನಕ ಒಂದು ರೀತಿಯಲ್ಲಿ 'ಸ್ಥಾವರ'ವಾಗಿದ್ದ ಮಗುವು ಈಗ 'ಜಂಗಮ' ವಾಗತೊಡಗುತ್ತದೆ. ಚಲಿಸಲು, ಒಂದೆಡೆಯಿಂದ ಇನ್ನೊಂದೆಡೆಗೆ ಹೋಗುವುದನ್ನು ಕಲಿಯುತ್ತದೆ. ಈ ಕಲಿಕೆಗೆ ಅನುಗುಣವಾಗಿ ಮಗುವಿನ ಮೆದುಳು ಬೆಳೆಯತೊಡಗುತ್ತದೆ. ಅಡಿಗೆಯ ಮನೆಯಲ್ಲಿ ಒಂದು ಕಡೆ ದಟ್ಟದ ಮೇಲೆ ಮಲಗಿ ನಿದ್ರಿಸುತ್ತಿದ್ದ ಮಗುವಿಗೆ ಎಚ್ಚರವಾಗುತ್ತದೆ. ಕಣ್ಣು ಬಿಟ್ಟು ನೋಡುತ್ತದೆ. ತಾಯಿಯು ಒಲೆಯ ಮುಂದೆ ಕುಳಿತಿರುವುದನ್ನು ಕಾಣುತ್ತದೆ. ಆಕೆಯ ಬಳಿಗೆ ತೆವಳಿಕೊಂಡು ಹೋಗುತ್ತದೆ. ತಾಯಿ ಎನ್ನುವ ಕಲ್ಪನೆಯು ಮಗುವಿಗೆ ಇರದಿದ್ದರೂ, ಪರಿಚಿತ ಮುಖ, ಹಾಲೂಡಿಸುವ ವ್ಯಕ್ತಿ ಎಂಬುದು, ಸ್ಮರಣೆಯಲ್ಲಿ ಅಚ್ಚಾಗಿರುತ್ತದೆ. ಎಂದರೆ ಮಗುವಿನ ಮೆದುಳಿನಲ್ಲಿ ಸಮರಣಾ ಕೇಂದ್ರಗಳು ಪ್ರಚೋದಿತವಾಗಿವೆ ; ಕೆಲಸ ಮಾಡಲು ಆರಂಭಿಸಿವೆ ಎಂದು ನಿರ್ಧರಿಸಬಹುದು.

ಸರ್ಪದಂತೆ ತೆವಳುವುದನ್ನು ನೋಡಿದಾಗ, ಚತುಷ್ಪಾದಿಯಂತೆ ಅಂಬೆಗಾಲಿಟ್ಟು ಮುಂದುವರೆಯುವಾಗ, ಈ ತೆರನ ಚಲನವನ್ನು ಆಗಮಾಡಿಕೊಡುವ ಮೆದುಳಿನ ಕಾರ್ಟೆಕ್ಸ್ ವಿಭಾಗವು, ವೃದ್ಧಿಯಾಗುತ್ತಿದೆ ಎನ್ನುವುದು ಸ್ಪಷ್ಟ. ಅಂತೆಯೇ ಪರಿಚಿತವಾದ ತಾಯಿಯ ಬಳಿಗೆ ಹೋಗಬೇಕು ಎಂದು ಆಲೋಚನೆಯೂ ಮಗುವಿನ ಮನಸ್ಸಿನಲ್ಲಿ ನಡೆದಿದೆ, ಎಂಬುದೂ ಸ್ಪಷ್ಟವಾಗಿದೆ. ಆದರೆ ಹುಟ್ಟಿದ ಒಂದು ವರ್ಷದಲ್ಲಿ ಮನಸ್ಸಿನ ಮೂರೂ ಪ್ರಮುಖವಾದ ಚಟುವಟಿಕೆಗಳನ್ನು ಗುರುತಿಸಬಹುದು.

ಎಳೆಯ ಮಗುವು ಬೆಳೆಯುತ್ತಾ ಬೆಳೆಯುತ್ತಾ, ಹನ್ನೆರಡು ಹದಿನಾಲ್ಕು ತಿಂಗಳ ವಯಸ್ಸಿನಲ್ಲಿ ಎರಡು ಕಾಲುಗಳ ಮೇಲೆ ನಿಂತು, ತಾರಾಡುತ್ತ ತೂರಾಡುತ್ತ ನಡೆಯಲಾರಂಭಿಸುತ್ತದೆ. ಇನ್ನು ಕೆಲವು ತಿಂಗಳುಗಳಲ್ಲಿ ಸಾಕಷ್ಟು ಲಕ್ಷಣವಾಗಿ ಪುಟ್ಟ ಪುಟ್ಟ ಹೆಜ್ಜೆಗಳನ್ನು ಹಾಕುತ್ತ, ಅಡ್ಡ ಕಂಡ ಹೊಸಿಲನ್ನು ದಾಟುತ್ತದೆ. ಅಂದರೆ ಮೆದುಳಿನ ಸೆರಿಬೆಲ್ಲಂ ಭಾಗವೂ ಸುಸೂತ್ರವಾಗಿ ಅಭಿವೃದ್ಧಿಯಾಗಿದೆ, ಆಗುತ್ತಿದೆ ಎಂದು ನಿರ್ಧರಿಸಬಹುದು.

ಈ ವೇಳೆಗಾಗಲೇ, ಅಮ್ಮ ಅಪ್ಪ ಎಂಬ ಮಾತುಗಳನ್ನಾಡಲೂ ತೊಡಗುತ್ತದೆ. ಮನೆಯಲ್ಲಿರುವ ಹಿರಿಯರು ಮಾತನಾಡುವುದನ್ನು ಕಂಡು, ಅನುಕರಿಸತೊಡಗುತ್ತದೆ.

ಮೊದಮೊದಲು ಮಾತುಗಳ ಅನುಕರಣೆಯು ಪುರಾತನ ಭಾಷೆಯಂತಿರುತ್ತದೆ. ಬೆಳೆಯುತ್ತಾ ಹೋದಂತೆಲ್ಲಾ ಪುರಾತನ ಭಾಷೆಯು ನೂತನ ಭಾಷೆಯಾಗುತ್ತದೆ.

ಅಮ್ಮ ಅಪ್ಪ, ಇವುಗಳು ಮಮ್ಮಿ ಡ್ಯಾಡಿಗಳಾಗತೊಡಗುತ್ತವೆ. ಎಳೆಯ ಮಗುವಾಗಿದ್ದಾಗ ತಾಯಿಯು 'ಆ ಅನ್ನು' ಎಂದು ಹೇಳಿ ಔಷಧಿಯನ್ನು ನೀರಿದಲ್ಲಿ ಕದರಿ ಕುಡಿಸುತ್ತಾಳೆ, ಅಗತ್ಯ ಬಿದ್ದಾಗ. ಮಗುವಿನ ಮನಸ್ಸಿನಲ್ಲಿ ಕೆಲಕಾಲ ಕುಡಿಯುವುದೆಲ್ಲವೂ 'ಆನು' ಎಂದು ಸ್ಥಿರವಾಗುತ್ತದೆ. ಪುರಾತನ ಭಾಷೆಯ ರೀತಿ ಇದು. ಆನಂತರ ನೀರನ್ನು ಕುಡಿಯಬೇಕಾದಾಗ ಮಗುವು 'ಆನು, ಆನು' ಎನ್ನುತ್ತದೆ. ನೀರನ್ನು ನೀಡಿದರೆ ನಗಲು ಆರಂಭಿಸುತ್ತದೆ. 'ಆ ಅನ್ನು' ಎನ್ನುವುದು ಮಗುವಿನ ಆ ವಯಸ್ಸಿನಲ್ಲಿ 'ಆನು' ಆಗಿರುತ್ತದೆ. ಕುಡಿಯುವ ಪದಾರ್ಥ ಎಂಬ ಅರ್ಥ, ಅದಕ್ಕೆ. ಇದೇ ರೀತಿಯಲ್ಲಿ ಹಿರಿಯರನ್ನು ಅನುಕರಣೆ ಮಾಡುತ್ತ ತನ್ನ ಜ್ಞಾನಭಂಡಾರವನ್ನು ಹೆಚ್ಚಿಸಿಕೊಳ್ಳುತ್ತದೆ. ಹಾಗೂ ಶಬ್ದ ಸಂಪತ್ತನ್ನು ಹೆಚ್ಚು ಮಾಡಿಕೊಳ್ಳುತ್ತದೆ.

ಮೂರನೆಯ ವರ್ಷದಿಂದ ಆರನೆಯ ವರ್ಷದವರೆಗೆ, ಕೇಳಿಸಿದುದನ್ನು ಆಡಲು ಕಲಿಯಲು ಮುಖ್ಯವಾದ ವಯಸ್ಸು. ಕೇಳಿಸಿದುದನ್ನು ಅರ್ಥಮಾಡಿಕೊಂಡು ಸ್ಮರಣೆಯಲ್ಲಿಟ್ಟುಕೊಳ್ಳುವುದು ; ಮತ್ತು ಅದರಂತೆಯೇ ಮಾತನಾಡುವುದು, ಈ ಕೆಲಸಗಳಿಗೆ ಮೆದುಳಿನ ಒಂದು ಭಾಗವು ಮೀಸಲಾಗಿರುತ್ತದೆ. Speech Brain ಎಂದು ಅನ್ವರ್ಥವಾಗಿ ಈ ಭಾಗವನ್ನು ಕರೆಯುತ್ತಾರೆ. ಕಂಡುದನ್ನು ತೋಚಿದಂತೆ ಬರೆಯ ತೊಡಗುವುದೂ ಮೆದುಳಿನ ಈ ಭಾಗದಿಂದ ನಿರ್ವಹಿಸಲ್ಪಡುತ್ತದೆ.

ಮೂರು ಅಥವಾ ನಾಲ್ಕು ವರ್ಷ ವಯಸ್ಸಿನ ಮಕ್ಕಳು ಚಿತ್ರ ಬರೆಯುವುದನ್ನು ನೋಡಿ ! ಮರಗಳ ಚಿತ್ರ, ಮನುಷ್ಯರ ಕಡ್ಡಿ ಚಿತ್ರ, ಹಕ್ಕಿಯ ಚಿತ್ರ, ಇತ್ಯಾದಿಗಳು ಹಿರಿಯರ ಕಣ್ಣಿಗೆ ನಗುವನ್ನು ಮೂಡಿಸಿದರೂ, ಬರೆದ ಮಕ್ಕಳ ಕಣ್ಣುಗಳಿಗೆ ಬಲು ಚೆಲುವಾಗಿರುತ್ತವೆ.

ಮಾನಸಿಕ ರೋಗಗಳು ತಗಲಿರುವ ಕೆಲವರು ಮಕ್ಕಳಂತೆಯೇ ಚಿತ್ರಗಳನ್ನು ಬರೆಯುತ್ತಾರೆ ; ಪ್ರಯೋಗಾ ಪರೀಕ್ಷೆಗಳನ್ನು ಮಾಡಿದಾಗ, ಬರೆದ ಚಿತ್ರಗಳ ಸ್ವರೂಪವನ್ನು ನೋಡಿ, ಮಾನಸಿಕ ಬೇನೆಯು ಯಾವ ತೆರನಾದುದು ಎಂಬುದನ್ನು ಊಹಿಸಬಹುದು.

ಆರು ವರ್ಷದ ವಯಸ್ಸು ಮುಗಿಯುವ ವೇಳೆಗೆ, ಮಗುವಿನ ಮೆದುಳಿನಲ್ಲಿ– ಈ ಭಾಗವು ಸಂಪೂರ್ಣವಾಗಿ ವೃದ್ಧಿಯಾಗಿರುತ್ತದೆ. ಅಂದರೆ ಮೆದುಳಿನ ಆ ಭಾಗವು ಸುಸೂತ್ರವಾಗಿ, ಒಂದಕ್ಕೊಂದನ್ನು ಅನ್ವಯಿಸಿಕೊಂಡು

ಕಾರ್ಯಮಾಡುವಂತಾಗುತ್ತದೆ. ಕಾರ್ಯವನ್ನು ಮಾಡುವ ಮನಸ್ಸಿನ ಈ ಯಂತ್ರವು ಅಣಿಯಾಯಿತು ಎನ್ನಬೇಕು. ಅನಂತರ ಆಜೀವ ಪರ್ಯಂತ ಎಂತೆಂತಹುದನ್ನೋ ಕೇಳಬೇಕು. ಅವುಗಳನ್ನೆಲ್ಲಾ ಅನುಕರಣೆ ಮಾಡಿ, ಅಥವಾ ತುಸು ಬದಲಾಯಿಸಿ ಆಡಬಹುದು. ಕಿವಿಗಳ ಮೂಲಕ ಜ್ಞಾನ ಭಂಡಾರವನ್ನು, ಮಗುವು, ಮತ್ತು ಬೆಳೆದ ವ್ಯಕ್ತಿಯೂ, ದಿನದಿನವೂ ಹೆಚ್ಚಿಸಿಕೊಳ್ಳುತ್ತದೆ. ಕಲಿತುದನ್ನು ಮಾತನಾಡಿ ಹೇಳಬಹುದು, ಅಥವಾ ಬರೆದು ತೋರಿಸಬಹುದು. ಅದೇ ರೀತಿಯಲ್ಲಿ ನೋಡಿ ಓಡಿ ಕಲಿತುದನ್ನು ಭಾಷಣ ಮಾಡಿ ಇತರರಿಗೆ ತಿಳಿಸಬಹುದು.

ಈ ಕಾರಣಗಳಿಂದ ಮೆದುಳಿನ Speech Brain ಭಾಗವು, ನೋಡುವುದು, ಬರೆಯುವುದು, ಕೇಳುವುದು, ಆಡುವುದು, ಇವೆಲ್ಲಾ ಕಾರ್ಯಗಳನ್ನು ಅನ್ವಯಿಸಿ ನಡೆಸಲು ಮೀಸಲಾಗಿದೆ.

ಈ ಅವಧಿಯಲ್ಲಿ ತಾನು, ತನ್ನ ಲಂಗ, ತನ್ನ ಷರ್ಟು, ತನ್ನ ಪೆಟ್ಟಿಗೆ, ತನ್ನ ಬೊಂಬೆ, ತನ್ನ ಪುಸ್ತಕ, ಇತ್ಯಾದಿ ಇತ್ಯಾದಿಯಾಗಿ ತನ್ನತನವನ್ನು, ಬೆಳೆಸಿ ಕೊಂಡಿರುತ್ತವೆ. ತನ್ನ ಆಹಾರವನ್ನು ತಾನೇ ಸಂಪಾದಿಸಿಕೊಳ್ಳಲು ಸಾಧ್ಯವಿರದಿದ್ದರೂ, ಅಡಿಗೆಯ ಮನೆಗೆ ಕಳ್ಳತನದಲ್ಲಿ ಹೋಗಿ ಕೋಡುಬಳೆ ಚಕ್ಕುಲಿಗಳನ್ನು ಗಿಟ್ಟಿಸಿಕೊಂಡು ತಿನ್ನುವಷ್ಟು ಸ್ವಾವಲಂಬಿಯಾಗಿರುತ್ತದೆ.

ಬಾಲಕೃಷ್ಣನು ಈಗ ಕಳ್ಳಕೃಷ್ಣನಾಗಿ, ಮೆರೆಯತೊಡಗುತ್ತಾನೆ. ಹಾಲನ್ನು ಕರೆದು ಹೆಪ್ಪಿಟ್ಟು, ಮೊಸರು ಮಾಡಿ, ಕಡೆದು ಬೆಣ್ಣೆಯನ್ನು ತೆಗೆಯುವ ವಯಸ್ಸಾಗಲೀ ಅನುಭವವಾಗಲೀ ಬಾಲಕೃಷ್ಣನಿಗೆ ಇರುವುದಿಲ್ಲ. ಆದರೆ ಹಾಲನ್ನು ಕರೆಯುತ್ತಿರುವ ಗೋಪಿಯರನ್ನು ಕಾಡಿಬೇಡಿ, ಕಣ್ಣು ಮರೆಸಿ ಹಾಲನ್ನು ಕುಡಿಯುತ್ತಾನೆ. ಮೊಸರನ್ನು ಕುಡಿಯುತ್ತಿರುವ, ಹಸಿರು ಪಟ್ಟೆಯನ್ನುಟ್ಟ ಗೋಪಿಯರನ್ನು ಗೋಳಾಡಿಸಿ ಬೆಣ್ಣೆಯನ್ನು ಗಿಟ್ಟಿಸಿಕೊಂಡು ಮೆಲ್ಲುತ್ತಾನೆ. ತಾಯಿ ಯಶೋದೆಯನ್ನನಕ ಮರುಳುಮಾಡಿ ಬೆಣ್ಣೆ ಹಾಲುಗಳನ್ನು ಲಪಟಾಯಿಸುತ್ತಾನೆ. ಭಾಗವತನ ಬಾಲ ಕೃಷ್ಣನ ಆಟವನ್ನು, ಬೆಳೆಯುತ್ತಿರುವ ಬಾಲಕರಲ್ಲಿಯೂ ಕಣ್ಣಾರ ಕಾಣಬಹುದು ಈಗಲೂ. ಕಂತೆ ಪುರಾಣ ಎನ್ನಿಸಿಕೊಂಡ ಕತೆಗಳಲ್ಲಿ ಇಂದಿನ ಜನರ ಸಂತೆ ಜೀವನದ ಸ್ಪಷ್ಟ ಚಿತ್ರಗಳನ್ನು ಕಾಣಬಹುದು.

'ತನ್ನ' ತನವನ್ನು, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಇತ್ಯಾದಿ ಮಿತ್ರ ಷಡ್ವರ್ಗದಿಂದ ಮಗುವು ಬೆಳೆಸಿಕೊಂಡು, ಮಗುವು ಬಾಲಕನಾಗುತ್ತಾನೆ. ಈ ವಯಸ್ಸಿಗೆ 'ನಾನು,' 'ನನ್ನದು' ಎನ್ನುವ ಕಲ್ಪನೆಯು ಬಾಲಕನ ಮನಸ್ಸಿನಲ್ಲಿ ಪ್ರತಿಷ್ಠಿತವಾಗಿರುತ್ತದೆ. Ego-Concept ಎಂದು ಈ ಮಾನಸಿಕ

ಕಲ್ಪನೆಯನ್ನು ಹೆಸರಿಸಿದ್ದಾರೆ.

ಬಾಲ್ಯದ ಈ ವಯಸ್ಸಿನಲ್ಲಿ, ಹಸಿವು ಬಾಯಾರಿಕೆಗಳು, ಶೈಶವದಲ್ಲಿದ್ದಂತೆಯೇ ಕಾಡುತ್ತವೆ. ಆದರೆ ಶೈಶವದಲ್ಲಿ ಇವುಗಳನ್ನು ತೀರಿಸಿಕೊಳ್ಳಲು ಅಳುವೊಂದೇ ಸಾಧನವಾಗಿತ್ತು. ಈಗ, ಕ್ರೋಧ ಪ್ರದರ್ಶನದಿಂದ, ಹಟಮಾಡಿ, ಚಂಡಿ ಹಿಡಿದು, ಸಿಕ್ಕಿದುದನ್ನೆಲ್ಲಾ ಒಡೆದು ಹರಿದು, ತನಗೆ ಇಷ್ಟವಾದ ಬಿಸ್ಕತ್ ಅಥವಾ ಸೀಬೇ ಕಾಯಿಗಳನ್ನು ಗಿಟ್ಟಿಸಿಕೊಳ್ಳುತ್ತಾನೆ. ಆಹಾರವು ಈಗ ಊಟ ತಿಂಡಿ ಎಂದು ಪರಿವರ್ತನೆಯಾಗತೊಡಗುತ್ತದೆ. ರುಚಿ, ಇಷ್ಟ, ಇವೆಲ್ಲವೂ ಅಗತ್ಯವಾದ ಆಹಾರದೊಂದಿಗೆ ಕೂಡಿಕೊಂಡರೆ, ಊಟ, ತಿಂಡಿಗಳಾಗುತ್ತವೆ. ತುಂಬಾ ಹಸಿವಾದಾಗ, ಬಡತನದಿಂದ, ಬಯಸಿದ್ದು ದೊರಕದೆ ಇದ್ದಾಗ, ಸಿಕ್ಕಿದುದನ್ನು ಮುಕ್ಕಿ ಬಾಲಕನು ತೃಪ್ತಿಗೊಳ್ಳುತ್ತಾನೆ. ಸ್ವಲ್ಪ ಮಟ್ಟಿಗೆ ಹಸಿವಾದಾಗ ಇಷ್ಟಪಟ್ಟ ರುಚಿಯಾದ ತಿಂಡಿಯು ದೊರಕುವಂತಿದ್ದರೆ, ಅದಕ್ಕಾಗಿ ಹಟ ಹಿಡಿಯುತ್ತಾನೆ, ತಾಯಿ ಕೊಟ್ಟಿದುದನ್ನು ತಿನ್ನುವುದೇ ಇಲ್ಲ. ತನಗೆ ಬೇಕಾದುದು, ತನಗೆ ಇಷ್ಟವಾದುದು, ಇವುಗಳನ್ನು ಪಟ್ಟು ಹಿಡಿದು ಗಮನಿಸುತ್ತಾನೆ. EGO ಈಗ ಸ್ಥಿರವಾಗತೊಡಗುತ್ತದೆ.

ಮನೆಯಲ್ಲಿ ಹಿರಿಯರ ನಡವಳಿಕೆಯನ್ನು ಬಾಲಕನು ನೋಡುತ್ತಿರುತ್ತಾನೆ. ಅದರಂತೆಯೇ ತಾನೂ ಆಡತೊಡಗುತ್ತಾನೆ. ಮಾಡತೊಡಗುತ್ತಾನೆ. 'ಇದು ಮಡಿ, ಮುಟ್ಟಬೇಡ' 'ಕೈಕಾಲುಗಳನ್ನು ತೊಳೆದುಕೊಂಡು ಊಟಕ್ಕೆ ಕುಳಿತುಕೋ' 'ಎಂಜಲ ಕೈಯಲ್ಲಿ ಏನನ್ನೂ ಮುಟ್ಟಬಾರದು' ಇತ್ಯಾದಿ ಶಿಕ್ಷಣವನ್ನು ಪಡೆಯುತ್ತಾನೆ. ಆಗ ಅವನ ಮನಸ್ಸಿನಲ್ಲಿ, ಅನುಭವದಿಂದ ಮೂಡಿ ಬಂದ, ನಿರ್ಧಾರವು ರೂಪುಗೊಳ್ಳುತ್ತದೆ. 'ಹೀಗೆ ಮಾಡಿದರೆ ತಪ್ಪು, ಹಿರಿಯರು ಶಿಕ್ಷಿಸುತ್ತಾರೆ, ರೇಗುತ್ತಾರೆ. ಬದಲು ಹಾಗೆ ನಡೆದುಕೊಂಡರೆ ಹಿರಿಯರು ಮೆಚ್ಚುತ್ತಾರೆ, ಆದರಿಸುತ್ತಾರೆ, ಹೊಗಳುತ್ತಾರೆ. ಇದು ಹಿರಿಯರಿಗೆ ಒಪ್ಪುವ ಮಾರ್ಗ' ಎಂದು ಬಾಲಕನು ಅರಿತುಕೊಳ್ಳುತ್ತಾನೆ. 'ತಪ್ಪು ಒಪ್ಪು ; ಪಾಪ ಪುಣ್ಯ ; ಒಳ್ಳೆಯದು ಕೆಟ್ಟದ್ದು ; ಸನ್ಮಾರ್ಗ ದುರ್ಮಾರ್ಗ ;' ಇಂತಹ ಕಲ್ಪನೆಗಳು ಬಾಲಕನ ಮನಸ್ಸಿನಲ್ಲಿ ಬೇರೂರಿ ಬೆಳೆಯುವುದನ್ನು Building the Super-EGO ಎಂದನ್ನುತ್ತಾರೆ.

ಬಾಲಕನ ದೇಹವು ಸಾಕಷ್ಟು ಹೊರವಾಗಿ ಬೆಳೆಯುತ್ತಿರುತ್ತದೆ. ದೇಹಕ್ಕೆ ಅಗತ್ಯವಾದ, ಹಾಗೂ ಮನಸ್ಸಿನಲ್ಲಿ ಆ ವೇಳೆಗೆ ಬೆಳೆದು ಬಂದ ರುಚಿಗೆ ಅನುಗುಣವಾಗಿ, ಊಟ ತಿಂಡಿಗಳನ್ನು, ಬಾಲಕನ ಮನಸ್ಸು ಸ್ವಾಭಾವಿಕವಾಗಿ ಬಯಸುತ್ತದೆ. 'ಉಳಿದ ಬಾಲಕರಿಗಿಂತ ಅಂದವಾದ ಉಡುಪನ್ನು ನಾನು ಧರಿಸಿ ಮೆರೆಯಬೇಕು ; ಆಟದಲ್ಲಾಗಲೀ ಪಾಠದಲ್ಲಾಗಲೀ ಸಹಪಾಠಿಗಳಿಗಿಂತ

ಮುಂದುವರೆಯಬೇಕು, ಅವರನ್ನು ಸೋಲಿಸಿ ಜಯಗಳಿಸಬೇಕು' ಎಂದು ಅವನ ಮನಸ್ಸು ಆಶಿಸುತ್ತದೆ. ಇವೆಲ್ಲಾ ಕಾಮ್ಯವಾದುವುಗಳು. ಆಜನ್ಮಸಿದ್ಧವಾಗಿ, ಜನ್ಮ ಜನ್ಮಾಂತರಗಳಿಂದ ದೊರೆತ ಪ್ರಕೃತಿಯ ಸ್ವಭಾವ. ತನಗೆ ರುಚಿ ಕಂಡ, ತನ್ನ ಇಷ್ಟಗಳನ್ನು ಈಡೇರಿಸುವ, ಯಾವುದನ್ನಾದರೂ ಪಡೆಯಲೇಬೇಕು ಎಂದು ಬಾಲಕನ ಮನಸ್ಸಿನಲ್ಲಿ ಹುಟ್ಟಾಸೆಯು ಇದ್ದೇ ಇರುತ್ತದೆ. ಇದನ್ನು ಎಂದು ID ಕರೆಯುತ್ತಾರೆ. ಪ್ರಾಣಿಗಳಲ್ಲಿ ಬಾಲಕನಲ್ಲಿದ್ದಂತೆಯೇ ID ಬಲಯುತವಾಗಿರುವ ಮನಸ್ಸಿನ ಒಂದು ಶಕ್ತಿ. ಸಾರಾಂಶವೇನೆಂದರೆ, ಬಾಲಕನ ಮನಸ್ಸಿನಲ್ಲಿ ; ID ಎಂಬ ಶಕ್ತಿಯು ಸ್ವಂತ ಕಾಮ್ಯಗಳನ್ನು ಈಡೇರಿಸು ಎಂದು ಜುಲುಂ ಮಾಡುವ, ಸಾಕಷ್ಟು ಪುರಾತನವಾದ, ಪ್ರೇರಕವಾಗಿದೆ.

ID ಇನ ಇಷ್ಟಗಳನ್ನು ಈಡೇರಿಸುವ ಶಕ್ತಿಯು, ಬಾಲಕನ ಮನಸ್ಸಿನಲ್ಲಿ 'ನಾನು' ; 'ನನ್ನ ಇಷ್ಟ' ಎಂಬ EGO ಕಲ್ಪನೆಯನ್ನು ತನ್ನತ್ತ ಸೆಳೆಯುತ್ತದೆ. EGO ಕಲ್ಪನೆಯು ID ಇನ ಅಹವಾಲುಗಳನ್ನು ಪೂರೈಸಿದರೆ, ತೃಪ್ತಿಗೊಂಡು ID ತೆಪ್ಪಗಾಗುತ್ತದೆ. ಆಗ EGO ವಿಗೂ ನೆಮ್ಮದಿಯಾಗುತ್ತದೆ.

ತನ್ನ ಇಷ್ಟದಂತೆ ನಡೆದುಕೊಂಡರೆ, ಹಿರಿಯರು ಬಾಲಕನು ತಪ್ಪು ಮಾಡಿದ ಎಂದು ಶಿಕ್ಷಿಸುತ್ತಾರೆ. ಅವರು ಒಪ್ಪುವಂತೆ ನಡೆದುಕೊಂಡರೆ ಹಿರಿಯರು ಮೆಚ್ಚುತ್ತಾರೆ; ಎನ್ನುವ Super-Ego ಕಲ್ಪನೆಯು ಬಾಲಕನ ಮನಸ್ಸಿನಲ್ಲಿ ಬೇರೂರತೊಡಗುತ್ತದೆ. ದೃಢವಾಗತೊಡಗುತ್ತದೆ. ತಾನಿರುವ ಪರಿಸರದ ಹಿತಕ್ಕಾಗಿ, ಹಾಗೂ ನೆಮ್ಮದಿಗಾಗಿ, 'ತನ್ನ' ಇಷ್ಟಗಳ ಈಡೇರಿಕೆಯನ್ನು ತಡೆಹಿಡಿಯುವುದು, ಅಥವಾ ಸದೆ ಬಡಿಯುವುದು, Super-Ego ವಿನ ಕಾರ್ಯ. ಮಾನವನ ಮನಸ್ಸಿನಲ್ಲಿ ಬೆಳೆದು ಬಂದ ಈ ಶಕ್ತಿಯನ್ನು ಸತ್–ಚೈತನ್ಯಾಂಶ ಎಂದೂ ಹೇಳಬಹುದು. Super-Ego ವನ್ನು ಸತ್–ಚೈತನ್ಯಾಂಶವೆಂದು ಕರೆದಾಗ, EGO ವನ್ನು ರಜೋ ಪ್ರಧಾನವಾದ ಕಾರ್ಯ ಪ್ರೇರಕ ಎಂದೂ ಹೇಳಬಹುದು. ಅದೇ ರೀತಿಯಲ್ಲಿ ID ಶಕ್ತಿಯನ್ನು ತಮಸ್ಸಿನ ಸೆಳೆತವೆಂದೂ ಹೇಳಬಹುದು.

ಮನಸ್ಸಿನ ಸತ್–ಚೈತನ್ಯಾಂಶವು 'ತನ್ನ' ತನವನ್ನು ಪರಿಸರದ ಹಿತಕ್ಕಾಗಿ ಬಲಿಕೊಡುವುದಕ್ಕೆ ಪ್ರಬಲವಾದ ಪ್ರೇರಕವಾಗಿರುತ್ತದೆ. 'ತನ್ನ' ತನವನ್ನು ಕರಗಿಸತೊಡಗುತ್ತದೆ.

ಈ ಲೋಕದ, ಈ ಜನ್ಮದ ಬಾಳಿಗೆ ಅಗತ್ಯವಾದ ಕಾರ್ಯಗಳನ್ನು ಮಾಡುವ ರಜೋ ಪ್ರಧಾನವಾದ ಮನಸ್ಸಿನ ಶಕ್ತಿಯನ್ನು Ego ಎಂದನ್ನಬಹುದು. ಇದರಿಂದಲೇ ಲೌಕಿಕ ಬಾಳು.

ಇದ್ದಂತೆ ಇದ್ದರೆ ಆಯಿತು ; ಮುಂದಿನ ಯೋಚನೆಯೇ ಬೇಡ ; ಇದ್ದರೂ ಆಯಿತು, ಹೋದರೂ ಆಯಿತು ಎಂದು ಯೋಚಿಸುವ ಗೋಜೂ ಇರದ, ಮನಸ್ಸಿನ ತಮಃಶಕ್ತಿಯನ್ನು ID ಎಂದನ್ನಬಹುದು. ದೇಹ ಮತ್ತು ಅದಕ್ಕೆ ನಿಕಟವಾದ ಸಂಬಂಧವನ್ನು ಪಡೆದ ಮನಸ್ಸಿನ ಅಂಶ, ಇವೆರಡರ ಒಕ್ಕೂಟವನ್ನು ID ಒತ್ತಾಯ ಪೂರ್ವಕವಾಗಿ ಪ್ರೇರಿಸುತ್ತದೆ.

IDನಲ್ಲಿ ಹುದುಗಿ ಸುಪ್ತವಾಗಿರುವ ಕಾಮ ಪ್ರವೃತ್ತನೆಯು ಬಾಲಕರಲ್ಲಿ ಕೂಡ ಅತ್ಯಂತ ಪ್ರಭಾವಯುತವಾಗಿರುತ್ತದೆ ಎಂದು ಫ್ರಾಯ್ಡ್ ಸಿದ್ಧಾಂತ ಮಾಡಿದ. ಆದರೆ ಬಹು ಮಂದಿ ಮನೋವಿಜ್ಞಾನಿಗಳು ಈ ಸಿದ್ಧಾಂತವನ್ನು ಸಂಪೂರ್ಣವಾಗಿ ಒಪ್ಪುವುದಿಲ್ಲ. ಭಾಗವತದ ಬಾಲಕೃಷ್ಣನ ಕಾಮ ಲೀಲೆಗಳು ಫ್ರಾಯ್ಡನ ಸಿದ್ಧಾಂತಕ್ಕೆ ಸ್ವಲ್ಪ ಮಟ್ಟಿಗೆ ಬೆಂಬಲವನ್ನು ನೀಡುತ್ತದೆಯೇನೋ? ಎನ್ನಿಸುತ್ತದೆ. ಕಾಮದಿಂದ ಪ್ರಚೋದಿತವಾದ ಬಾಲ ಲೀಲೆಗಳೇ ವಿನಹಾ ವಯಸ್ಕರ ಕಾಮ ಕೇಳಿಗಳಲ್ಲ ಎಂಬುದನ್ನು ಗಮನಿಸಬೇಕು.

ಬಾಲಕನಲ್ಲಿ ಮನಸ್ಸಿನ ಮೂರು ಅಂಶಗಳನ್ನು ಸ್ಪಷ್ಟವಾಗಿ ಗುರುತಿಸಬಹುದು.

೧. ID ಎಂಬ, ತಮೋಗುಣ ಪ್ರಧಾನವಾದ, ಹಾಗೂ ಪುರಾತನವಾದ ಒಂದು ಅಂಶ. ದೇಹ ಮತ್ತು ಅದಕ್ಕೆ ನಿಕಟವಾಗಿ ಸಂಬಂಧಿಸಿದ ಮನಸ್ಸಿನ ಅಂಶ, ಇವು ID ಇನ ಪ್ರಭಾವಕ್ಕೆ ತುತ್ತಾಗಿವೆ.

೨. EGO, 'ನಾನು' ಎಂದು ಮನಸ್ಸು ಕಲ್ಪಿಸಿಕೊಂಡ ಅಂಶ. ಈ ಅಂಶವೇ ಮನಸ್ಸಿನ ನೇತೃತ್ವದಲ್ಲಿ ದೇಹದಿಂದ ಕಾಮ್ಯ ಸಾಧನೆಗಳನ್ನು ನಡೆಸುವುದು Executive ಇದ್ದಂತೆ. ರಜೋಗುಣ ಪ್ರಧಾನವಾದುದು.

೩. Super-Egoಅಥವಾ ಮನಸ್ಸಿನ ಸತ್–ಚೈತನಾಂಶ. EGO, ಅಥವಾ 'ತನ್ನ'ತನವು ID ಇನ ಸ್ವೇಚ್ಛಾ ಪ್ರವೃತ್ತಿಯನ್ನು ತಹಬಂದಿಯಲ್ಲಿರುವ, ಮನಸ್ಸಿನಲ್ಲಿ ರೂಢಿತವಾದ ಶಕ್ತಿ ಅಥವಾ ಕಲ್ಪನೆ ; ಸುತ್ತಲಿನ ಸಮಾಜದ ಹಿತವನ್ನು ರಕ್ಷಿಸಿ, ಆ ಮೂಲಕ ಸಮಾಜವು ವ್ಯಕ್ತಿಗೆ ರಕ್ಷಣೆಯನ್ನು ನೀಡುವಂತೆ ಮಾಡುವ ಶಕ್ತಿ.

ಬಾಲಕರಲ್ಲಿ ಕಾಣಬರುವ ಮನಸ್ಸಿನ ಮುಖ್ಯವಾದ ಈ ಮೂರು ಕಾರ್ಯ ಕ್ರಮಗಳು ಪರಾವಲಂಬಿಯಾಗಿರುವಾಗ ಹೀಗಿರುತ್ತದೆ.

ಸ್ವಾವಲಂಬಿಯಾಗಿ, ಬಾಲಕನು ಪ್ರೌಢನಾದ ಮೇಲೆ ಮನಸ್ಸಿನ ಕಾರ್ಯ ಕ್ರಮಗಳು ಹೇಗೆ ಪರಿವರ್ತನೆಯನ್ನು ಹೊಂದುತ್ತವೆ?

**ಯೌವನ ಅಥವಾ ಪ್ರೌಢ ವಯಸ್ಸಿನವರಲ್ಲಿ ಮನಸ್ಸಿನ ಕಾರ್ಯಕ್ರಮ.**

ಯಾವುದಾದರೂ ಮದುವೆಯ ಮನೆಯಲ್ಲಿ ಹದಿಮೂರು ಹದಿನಾಲ್ಕು ವಯಸ್ಸಿನ ಹುಡುಗರೂ ಹುಡುಗಿಯರೂ ಬೇಕಾಬಿಟ್ಟಿಯಾಗಿ ಆಡಿಕೊಂಡಿರುತ್ತಾರೆ. ಅವರುಗಳ ಕಣ್ಣಿಗೆ ಇವನು ಗಡವಾ, ಇವನೊಂದಿಗೆ ಆಡುವುದಿಲ್ಲ, ಅವರೊಂದಿಗೆ ಆಡಲು ಇವನಿಗೂ ಇಷ್ಟವಿರುವುದಿಲ್ಲ. ಏಕೆಂದರೆ ನಾನು ಬೆಳೆದಿದ್ದೇನೆ. ಈಗ ದೊಡ್ಡವ ಎಂಬ ಭಾವನೆಯು ಉಂಟಾಗುತ್ತದೆ. ಚಡ್ಡಿಯ ಬದಲು ಪಂಚೆಯನ್ನೋ ಅಥವಾ ಪೈಜಾಮಗಳನ್ನೋ ಧರಿಸಲು ಶುರುಮಾಡಿರುತ್ತಾನೆ. ದೊಡ್ಡವರು ಕೂತಿರುವೆಡೆಗೆ ಹೋಗಿ, ತಾನೂ ಅವರ ಮಾತುಕತೆಗಳಲ್ಲಿ ತಲೆ ಹಾಕತೊಡಗುತ್ತಾನೆ. 'ಅಧಿಕ ಪ್ರಸಂಗಿ ; ದೊಡ್ಡವರ ಮಾತಿನಲ್ಲಿ ತಲೆ ಹಾಕಬೇಡ ; ಹುಡುಗರ ಜತೆಗೆ ಆಡಿಕೋ ಹೋಗು' ಎಂದು ಬೈಸಿಕೊಂಡು, ಮನಸ್ಸು ಚಿಕ್ಕದು ಮಾಡಿಕೊಂಡು, ಬೇರೆಡೆಗೆ ಸಾಗುತ್ತನೆ. ಸಮ ವಯಸ್ಕರು ಸಿಗದಿದ್ದರೆ ನಾಯಿಪಾಡೇ ಅವನದು. ಮದುವೆಯ ಗಿಜಿಗಿಜಿಯಲ್ಲಿ ಅವ ಒಂಟಿ.

ಈ ರೀತಿಯಲ್ಲಿ ಆರಂಭವಾಗುತ್ತದೆ ಯುವಕನ ವಯಸ್ಸು, ಪೌಗಂಡ ವಯಸ್ಸು. 'ತನ್ನ' ತನವು, EGO ವು ಸಾಕಷ್ಟು ಬೆಳೆದಿರುತ್ತದೆ. ದೇಹವೂ ಹೊರವಾಗಿರುತ್ತದೆ. ತಾಯ್ತಂದೆಯರು, ಮತ್ತು ಮನೆಯ ಇತರರು ಬಾಲ್ಯದಲ್ಲಿ, ಮುದ್ದು ಮಾಡುವಂತೆ, ಈಗ ಮಾಡುವುದಿಲ್ಲ. ದೊಡ್ಡವರು ಇವನನ್ನು ಗೌರವಿಸುವುದೂ ಇಲ್ಲ. ಮರ್ಯಾದೆಯಿಂದ ಇತರರನ್ನು ಮಾತನಾಡಿಸುವಂತೆ, ಮಾತನಾಡಿಸುವುದೂ ಇಲ್ಲ. ಹೀಗಾಗಿ ಬಾಲ್ಯದ ಆದರವೂ ತಪ್ಪಿತು ; ಬೆಳೆದವರ ಸದರವೂ ಸಿಗಲಿಲ್ಲ. ಯುವಕನ EGO ವಿಗೆ ಪೆಟ್ಟು ಬೀಳುತ್ತಲೇ ಇರುತ್ತದೆ.

ID ಇನ ಕಾಮ್ಯಗಳು ಈ ವಯಸ್ಸಿನಲ್ಲಿ, ಬಾಲ್ಯದಲ್ಲಿದ್ದಂತೆ ಸುಪ್ತವಾಗಿರುವುದಿಲ್ಲ. ಸ್ಪಷ್ಟವಾಗತೊಡಗುತ್ತವೆ. ಅವುಗಳನ್ನು ಈಡೇರಿಸಲು, EGO ವಿಗೆ ಸಾಕಷ್ಟು ಲೋಕಾನುಭವವಾಗಲೀ, ಅಗತ್ಯವಾದಷ್ಟು ಸ್ವಯಂಶಕ್ತಿಯಾಗಲೀ ಯುವಕನಲ್ಲಿರುವುದಿಲ್ಲ. ಪೆಟ್ಟುಗಳನ್ನು ಪರಿಸರದಿಂದ ಪಡೆಯುತ್ತಿರುವ EGO ವನ್ನು, ಅವನ ID ಈಗ ಕೆಣಕತೊಡಗುತ್ತದೆ. 'ಲೇ, EGO ! ಪುರಾತನವಾದ ನನ್ನ ಭುಜಗಳ ಮೇಲೆ ನೀನು ಕುಳಿತಿರುವೆ. ನಿನಗೆ ಸಾಕಷ್ಟು ಅವಮಾನವಾಗಿದೆ, ಗಾಯಗಳಾಗಿವೆ. ನನ್ನ ಮಾತನ್ನು ಕೇಳು. ನಿನ್ನ ಹಿರಿಮೆಯನ್ನು ಸಾಧಿಸಿಕೋ, ಬಂಡೆದ್ದು ಹೋರಾಡಿಯಾದರೂ ಎಲ್ಲರಿಗಿಂತಲೂ ತಲೆಯನ್ನು ಹೆಚ್ಚು ಎತ್ತರ ನಿಲ್ಲಿಸು. ಹಾಗೆ ನೀನು ಮಾಡದೆ ಇದ್ದರೆ, ಹೇಳ ಹೆಸರಿಲ್ಲದ ಹಾಗೆ, ನಿನ್ನನ್ನು ತುಳಿದುಬಿಡುತ್ತಾರೆ ; ತಲೆಯೆತ್ತಲು, ಸ್ವಾವಲಂಬಿಯಾಗಲು, ಮುದಿಯಾದರೂ

ಬಲಿತಿರುವ ಸಮಾಜದ ಗೃಧ್ರಗಳು ಅವಕಾಶವನ್ನು ಕೊಡುವುದಿಲ್ಲ ; ಎಂದು ಹುಷಾರು ಕೊಡುತ್ತಾ ಹೀಯಾಳಿಸುತ್ತದೆ. EGO ಈಗ ಉಳಿಯಬೇಕಾದರೆ ತಿರುಗಿಬೀಳಲೇ ಬೇಕು. ಬಂಡಾಯವೇಳಲೇಬೇಕು. ಯುವಕರ ಬಂಡಾಯವೇಳುವ ಪ್ರವೃತ್ತಿಯು ಈ ರೀತಿಯಲ್ಲಿ ಆರಂಭಿಸುತ್ತದೆ.

ಯುವಕನು ಈ ವೇಳೆಗೆ ಶಾಲೆಗಳಲ್ಲಿ ಹಲವಾರು ವರ್ಷಗಳು ವ್ಯಾಸಂಗವನ್ನು ಮಾಡಿರುತ್ತಾನೆ, ಹೈಸ್ಕೂಲಿನ ಹೊರ ಹೊಸಿಲನ್ನು ದಾಟುವಂತಾಗುತ್ತಿದ್ದಾನೆ. ಮೃಗಗಳನ್ನೂ, ಪಕ್ಷಿಗಳನ್ನೂ ಸಿನಿಮಾಗಳನ್ನೂ ನೋಡಿ, ಕೂತೂಹಲದಿಂದ ಬಾಳಿನ ಪಾಠಗಳನ್ನು ಅಲ್ಪ ಸ್ವಲ್ಪ ಅರಿತಿರುತ್ತಾನೆ. ಅಂದರೆ ಅವನ ಕಾಮ್ಯ ಪ್ರವೃತ್ತಿಗಳಿಗೆ ತಂಪೆರೆಯುವ ಕಾರ್ಯಕ್ರಮಗಳನ್ನು ತಿಳಿದಿರುತ್ತಾನೆ. ಬಾಲ್ಯದ ಕಾಮ ಲೀಲೆಗಳು, ಯುವಕನಲ್ಲಿ ಕಾಮ ಕೇಳಿಯಾಡಲು, ಸಿದ್ಧವಾಗತೊಡಗಿರುತ್ತವೆ.

ಯಶೋದೆಯು ಆಡಿಸಿದ ಬಾಲಕೃಷ್ಣನು, ಈಗ ಜಗವನ್ನು ಉದ್ಧರಿಸುವ, ಸಂತಾನದ ಪರಂಪರೆಯನ್ನು ಅವ್ಯಾಹತವಾಗಿ ಮುಂದುವರೆಸುವ, ಕಾಮಕೃಷ್ಣ ನಾಗುತ್ತಾನೆ, ಕಾಮಕೃಷ್ಣನಾಗಲು ಯತ್ನಿಸುತ್ತಾನೆ. ಅತ್ಯಂತ ಪ್ರಭಾವಿಯಾದ ಈ ಪ್ರೇರಣೆಯು ಯುವಕನನ್ನು ಜಗ್ಗಿ ಆಡಿ, ನಡೆಸುತ್ತದೆ ಚಿತ್ರ ವಿಚಿತ್ರ ರೀತಿಗಳಲ್ಲಿ.

ಪುರಾತನವಾದ ಈ ಪ್ರವೃತ್ತಿಯು ಬಾಳಿಗೆ ಅತ್ಯಗತ್ಯವಾಗಿದ್ದರೂ, ಸ್ವೇಚ್ಛಾ ವೃತ್ತಿಯಾದರೆ ಸಮಾಜದ ಭದ್ರತೆಯನ್ನು ಸಡಿಲಗೊಳಿಸುತ್ತದೆ. ಆದಕಾರಣ ಸಮಾಜದ ಅನುಭಾವೀ ಗೃಧ್ರಗಳು, ಯುವಕರನ್ನು ತಹಬಂದಿಯಲ್ಲಿಡಲು ಶತ ಪ್ರಯತ್ನವನ್ನು ಮಾಡುತ್ತಾರೆ. ಸರ್ವಪ್ರಯತ್ನವನ್ನೂ ಮಾಡುತ್ತಾರೆ.

ಕಿರಿಯರು ಮತ್ತು ಹಿರಿಯರು, ಇವರುಗಳ ನಡುವೆ ನಡೆಯುವ ಝುಂಝಾಟಕ್ಕೆ ವಿಭಿನ್ನವಾದ ದೃಷ್ಟಿಕೋನಗಳು ಕಾರಣ. ಕಿರಿಯರ ID ಹುಮ್ಮಸ್ಸಿನ ಪ್ರಭಾವ ಒಂದು ಕಡೆ. ಹಿರಿಯರ Super-Ego, ಪ್ರಭಾವ ಮತ್ತೊಂದು ಕಡೆ. ಹೀಗೆ ಪ್ರತಿ ವೃತ್ತಿಯಲ್ಲೂ ಕಂಡುಬರುವ ಜಗ್ಗಾಟವು ಸಮಾಜದಲ್ಲಿಯೂ ಕಾಣಬರುತ್ತದೆ.

ಸಮಾಜ ಎಂದರೆ ವ್ಯಕ್ತಿಯ ಸುತ್ತಲೂ ಇರುವ ಪರಿಸರ. ಮನೆಯಲ್ಲಿ ಪ್ರಾರಂಭವಾಗುತ್ತದೆ. ತಾಯಿಯ ರಕ್ಷಣೆ ತಂದೆಯ ಶಿಕ್ಷಣ, ಇವುಗಳಿಂದ ಬಾಲಕನ ಸಮಾಜವು ಶುರುವಾಗುತ್ತದೆ. ಶಾಲೆಗೆ ಸೇರಿದ ಬಾಲಕನಿಗೆ, ಕಲಿಸುವ ಮಾಸ್ತರು ತಂದೆಯ ಪ್ರತಿಬಿಂಬವಾಗುತ್ತಾರೆ. ಆನಂತರ ಬೆಳೆದ ಯುವಕನು ಸಮಾಜದ ಗಣ್ಯ ವ್ಯಕ್ತಿಗಳನ್ನು ತಂದೆಯ ಪ್ರತಿಬಿಂಬವನ್ನಾಗಿಸಿಕೊಳ್ಳುತ್ತಾನೆ. Father Image ಈ ರೀತಿ ಹರಡುತ್ತದೆ. ಸಮಾಜದ ಹತ್ತೂ ಮಂದಿಗೆ ಅನ್ವಯಿಸಿಕೊಳ್ಳುತ್ತದೆ.

ಇವರುಗಳಲ್ಲಿ ಯಾರಮೇಲಾದರೂ ಯುವಕನು ತಿರುಗಿ ಬೀಳುತ್ತಾನೆ.

ವನ್ಯ ಮೃಗಗಳಲ್ಲಿ ಯುವಕ ಮೃಗವು ಬಂಡೇಳುವುದನ್ನು ಪ್ರತ್ಯಕ್ಷವಾಗಿ ಕಾಣಬಹುದು. ಹಿಂಡಿನ ನಾಯಕನಾದ ಸಲಗನು ಮುಪ್ಪಾದರೆ. ಅದನ್ನು ಹಿಂಡಿನಲ್ಲಿರುವ ಹೋರಿ ಆನೆಯು ಬಡಿದುಹಾಕಿ, ತಾನೇ ಯಜಮಾನನಾಗುತ್ತದೆ. ಮುಪ್ಪಿಗರನ್ನು ಮೂಲೆಗೆ ಹಾಕಿ, ಬಂಡೆದ್ದು ಹೋರಾಡಿ ಯಾಜಮಾನ್ಯವನ್ನು ವಹಿಸಿಕೊಳ್ಳುವುದು ಯೌವನದ ಸ್ವಾಭಾವಿಕ ಪ್ರವೃತ್ತಿ.

ಪ್ರಕೃತಿ ಸಹಜವಾದ ಈ ನಡವಳಿಕೆಯು ಮನುಷ್ಯರಲ್ಲಿ ವನ್ಯಮೃಗಗಳಲ್ಲಿದ್ದಂತೆ ಕಾಣಬರುವುದಿಲ್ಲ. ಏಕೆಂದರೆ ಮನುಷ್ಯನ ಬೆಳವಣಿಗೆಯಲ್ಲಿ ದೇಹಕ್ಕಿಂತ ಮಿಗಿಲಾಗಿ ಮನಸ್ಸು ಅಭಿವೃದ್ಧಿಯಾಗಿರುತ್ತದೆ. ಮನಸ್ಸಿನಲ್ಲಿ ಸತ್–ಚೈತನ್ಯಾಂಶವು, ಬಾಲ್ಯದಿಂದಲೂ ಸಾಕಷ್ಟು ದೃಢವಾಗಿ ರೂಢಿಸಲ್ಪಟ್ಟಿರುತ್ತದೆ. Super-Ego ಪ್ರಬಲವಾದ ಶಕ್ತಿಯಾಗಿರುತ್ತದೆ.

ಬಾಲ್ಯದಲ್ಲಿ ಅಕ್ಷರಾಭ್ಯಾಸವನ್ನು ಮಾಡಿಸುವಾಗ, ಶ್ರೀಓನ್ನಾಮವನ್ನು ಕಲಿಸುವಾಗ ಏನೇನನ್ನೆಲ್ಲಾ ಕಲಿಸಿ ನನ್ನ ಬಾಳನ್ನು ಹಸನುಗೊಳಿಸುತ್ತಾರೆ. ಎಷ್ಟು ಆದರದಿಂದ ನನ್ನ ಭವಿಷ್ಯವನ್ನು ಸುಗಮ ಮಾಡಲು ಹಾತೊರೆಯುತ್ತಾರೆ ಎಂದು ಬಾಲಕನು ಅಂದುಕೊಳ್ಳುತ್ತಾನೆ. 'ಮಾತೃದೇವೋಭವ ; ಪಿತೃ ದೇವೋಭವ ; ಆಚಾರ್ಯ ದೇವೋಭವ' ಎಂಬ ಪಾಠಗಳನ್ನು ಕಲಿಸಿದಾಗ, ಶತಾಂಶ ಸತ್ಯ ಅವುಗಳು ಎಂದು ತಿಳಿಯುತ್ತಾನೆ. ನಿಸ್ಸಂದೇಹವಾಗಿ ನಂಬುತ್ತಾನೆ.

ಬಾಲಕನ ಮನಸ್ಸನ್ನು Brain-wash ಮಾಡಲು ಬಾಲ್ಯದ ಪಾಠಗಳು ನಾಂದಿಯಾಗುತ್ತವೆ. ಮಕ್ಕಳ ಶಾಲೆಗಳಲ್ಲಿ, ಮೆಚ್ಚಿ ನುಡಿದ ಮಾಸ್ತರ ಹೊಗಳಿಕೆಗಳು ಮಕ್ಕಳ ಅಹಂಕಾರವನ್ನು ಅಭಿವೃದ್ಧಿಸುವುದಲ್ಲದೇ, ಮಾಸ್ತರು ನನ್ನ ಹಿತ ಚಿಂತಕರು, ಅವರ ಆಶೀರ್ವಾದದಿಂದ ನನ್ನ ಬಾಳು ಹಿತಮಯವಾಗಬೇಕು ಎಂಬ ದೃಢ ನಂಬಿಕೆಯನ್ನೂ ಮೂಡಿಸುತ್ತದೆ. ಹಿರಿಯರ ಆಶೀರ್ವಾದವೇ ನನ್ನ ರಕ್ಷಾ ಕವಚ ಎಂದುಕೊಂಡ ಬಾಲಕನು. ಆನಂತರ ಎಷ್ಟೇ ವರ್ಷಗಳಾಗಲೀ, ಸಾಯುವ ತನಕ ಇದನ್ನು ನಂಬುತ್ತಾನೆ. ಬಾಳ ಅನುಭವದಲ್ಲಿ ವ್ಯತಿರಿಕ್ತವಾದ ಸಾಕ್ಷ್ಯಗಳು ಎಷ್ಟೇ ದೊರಕಿದರೂ ಬಾಲ್ಯದ ನಂಬಿಕೆಗಳನ್ನು, ಹಿರಿಯರ ಆಶೀರ್ವಾದದ ರಕ್ಷಾ ಗುಣವನ್ನು, ಅವ ಬಿಟ್ಟುಗೊಡುವುದಿಲ್ಲ. ಭದ್ರವಾಗಿ ಕಟ್ಟಿಕೊಂಡೇ ಇರುತ್ತಾನೆ, 'ತನ್ನ' ತನದೊಂದಿಗೆ.

ಬಾಲಕನು ಯುವಕನಾದಾಗ, ಮೃಗಗಳೆಲ್ಲದರಲ್ಲಿಯೂ ಇರುವಂತೆ, ಮುದಿ ಹಿರಿಯರ ವಿರುದ್ಧ ಬಂಡೇಳುವ ಪ್ರವೃತ್ತಿಯು ಹೆಡೆಯೆತ್ತುತ್ತದೆ. ಆದರೆ ಬಾಲ್ಯದಿಂದ

Brain-wash ಮಾಡಿಸಿಕೊಂಡು, ಆ ಮೂಲಕ Super-Ego ಅಥವಾ ಸತ್–ಚೈತನ್ಯಾಂಶವನ್ನು ಬೆಳೆಸಿಕೊಂಡ ಯುವಕನು, ಹೋರಿ ಆನೆಯಂತೆ ಮುದಿ ಸಲಗನನ್ನು ಹೊಡೆದು ಬಡೆದು ಕೋರೆ ಕೊಂಬುಗಳಿಂದ ತಿವಿದು ಓಡಿಸುವುದಿಲ್ಲ. ಆದರೆ ಮುದಿ ಸಲಗನಿಗೆ Sentimental ಆಗಿ ಆದರದಿಂದ, ದೈಹಿಕ ರಕ್ಷಣೆಯನ್ನು ನೀಡುತ್ತಾನೆ. ಮಾನಸಿಕವಾಗಿ, ಮುಪ್ಪಿನ ಹಿರಿಯರು ಅರಳುಮರುಳಿನಿಂದ ನೀಡಿದ ಸಲಹೆಗಳನ್ನು ಮತ್ತು ಉಪದೇಶಗಳನ್ನು ತೃಣೀಕರಿಸಿ, ಅವರುಗಳಿಗೆ ಮನೋಘಾತವನ್ನು, ಮಾನಸಿಕ ಗಾಯಗಳನ್ನೂ ಲಕ್ಷಣವಾಗಿ ಮಾಡುತ್ತಾನೆ ಮಾನಸಿಕ ಈ ಹೋರಾಟದಲ್ಲಿ ಹಿರಿಯ ಮುದುಕರು ಸೋತು ಮಾನಸಿಕವಾಗಿ ಮದುಡಿಕೊಳ್ಳುತ್ತಾರೆ. ಹರಿಯುತ್ತಿರುವ ಸಾವಿರಕಾಲನ್ನು ಹಂಚಿಕಡ್ಡಿಯಿಂದ ಚುಚ್ಚಿದರೆ, ಅದು ಸುರುಳು ಸುತ್ತಿಕೊಂಡು ಮುಂದೆ ಹೋಗದೆ ಹಿಂದಕ್ಕೂ ಸಾಗದೆ ಮುದುಡಿಕೊಳ್ಳುವುದಿಲ್ಲವೇ, ಹಾಗೆ ಹಿರಿಯ ಮುದುಕರ ಮನಸ್ಸು ಸುರುಳಿ ಸುತ್ತಿ ಮುದುಡಿಕೊಳ್ಳುತ್ತದೆ.

ಹೀಗೆ ಮಾಡುವಾಗ, ಯುವಕನಿಗೆ, ಮೊದಮೊದಲು ಸಾಕಷ್ಟು ಶಕ್ತಿಯಿರುವುದಿಲ್ಲ. ಆದರೆ ಅದೇ ಮನೋಧರ್ಮವಿರುವ, ಸಮ ವಯಸ್ಕರು, ಸುಮಾರು ಸಂಖ್ಯೆಯಲ್ಲಿ ಜತೆಗೂಡಿದಾಗ, 'ಸಂಘೇಶಕ್ತಿಃ ಕಲೌಯುಗೇ' ಆಗುತ್ತದೆ. ಸಂಘದ ಶಕ್ತಿಯು ; Co-operative ಪ್ರವೃತ್ತಿಯು ಪರಬಲವಾಗುತ್ತದೆ. ಆಗ ಜಂಗಮ ಜೀವಿಗಳ ಸ್ವಾಭಾವಿಕವಾದ ಮುನ್ನಡೆಗೆ ಅಗತ್ಯವಾದ, ಹಿರಿಯರ ವಿರುದ್ಧ ಬಂಡೇಳುವ ಸಾಹಸ ಪ್ರಯತ್ನವು ಯಶಸ್ವಿಯಾಗಲು ಸುಲಭ, ಸಾವಿರಾರು ಯುವಕರು ಜತೆಗೂಡಿ ಸಂಪ್ರದಾಯದ ಕಾನೂನು ಕಟ್ಟಲೆಗಳನ್ನು ಮುರಿಯುವಾಗ, ಗುಂಪಿನಲ್ಲಿ ಗೋವಿಂದ ಎಂತಾಗುತ್ತದೆ. ವ್ಯಕ್ತಿಯ Super Ego ಅಥವಾ ಸತ್–ಚೈತನ್ಯಾಂಶದ ಅಣತಿಯು, ಗುಂಪಿನಲ್ಲಿರುವಾಗ, ತುಂಬಾ ಕಡಿಮೆಯಾಗಿರುತ್ತದೆ. ಶಿಕ್ಷೆಯಿಂದ ತಪ್ಪಿಸಿಕೊಳ್ಳಲು ಗುಂಪಿನಲ್ಲಿದ್ದರೆ ಸುಲಭ. ಮನಸ್ಸೂ ಆಗ ಉದ್ವೇಗದ ಸ್ಥಿತಿಯಲ್ಲಿರುತ್ತದೆ. ಆಗುಹೋಗುಗಳನ್ನು ಸಾವಧಾನವಾಗಿ ಯೋಚಿಸಲು ವ್ಯವಧಾನವಿರುವುದಿಲ್ಲ. ಸಮಾಜಛಿದ್ರಕ ಕಾರ್ಯಗಳನ್ನು ಮಾಡುತ್ತಿದ್ದೇನೆ ಎನ್ನುವ ಯೋಚನೆಯೂ ಅವನ ಮನಸ್ಸಿನಲ್ಲಿ ಆಗ ಸುಳಿಯುವುದಿಲ್ಲ.

ಸಂಪ್ರದಾಯಸ್ಥರ ವಿರುದ್ಧ, ಈ ರೀತಿ ಬಂಡೇಳುವಾಗ, ಕೆಚ್ಚಿನಿಂದ ಹೋರಾಡುವಾಗ, ತಪ್ಪು ಮಾಡುತ್ತಿದ್ದೇವೆ ಎನ್ನುವ ಸಂಶಯವು ಉಂಟಾಗುವುದಿಲ್ಲ. ಆ ನಂತರ ಪಶ್ಚಾತ್ತಾಪವೂ ಇರುವುದಿಲ್ಲ. ಹಳೆಯ ನೀರನ್ನು ತೆಗೆದುಹಾಕಿದ ಮೇಲೆ ತಾನೇ ಹೊಸ ನೀರು ತುಂಬಿಕೊಳ್ಳಲು ಅವಕಾಶವಿರುವುದು. ಹೆಚ್ಚು

ಉತ್ಕೃಷ್ಟವಾದ, ನವ ಸಮಾಜವನ್ನು ಸೃಷ್ಟಿಸುತ್ತೇವೆ, ಸ್ವಾರ್ಥಿಸಂಪ್ರದಾಯಸ್ಥರನ್ನು ಮೂಲೆಗೆ ನೂಕಲೇ ಬೇಕು ಎನ್ನುವ ಹುಮ್ಮನಸ್ಸು ಪ್ರಬಲವಾಗಿರುತ್ತದೆ.

ಪ್ರಪಂಚದ ಎಲ್ಲಾ ಕಡೆಗಳಲ್ಲೂ ಕಾಣಬರುವ ಯುವಕ ಅಂದೋಳನಗಳು, ಪ್ರಕೃತಿ ಸಹಜವಾದ ಬಂಡೇಳುವ ಪ್ರವೃತ್ತಿ. The angry young men : The young turks : ಪ್ರಗತಿಶೀಲರು–ಕ್ರಾಂತಿಕಾರಿಗಳು–ಇವೆಲ್ಲವೂ ಸಂಪ್ರದಾಯಸ್ಥ ಸಮಾಜದ ವಿರುದ್ಧ ಬಂಡೇಳುವವರ ಗುಂಪುಗಳು. Father Image ಇನ ವಿರುದ್ಧ ಹೋರಾಡುವ ಈ ಹಲವಾರು ಹೆಸರಿನ ಗುಂಪಿನವರು Step-Father ವಿರುದ್ಧ ಹೋರಾಡುತ್ತಿದ್ದೇವೆ ಎಂದುಕೊಂಡಿರಲೂ ಬಹುದು.

ಸಂಪ್ರದಾಯಸ್ಥರ ವಿರುದ್ಧ ಬಂಡೇಳುವ ಪ್ರಕೃತಿ ಸಹಜವಾದ ಯುವಕ ಪ್ರವೃತ್ತಿಯು ಗುಂಪು ಕಟ್ಟಿಕೊಂಡಾಗ ಮಾತ್ರ ಸಾಧ್ಯ. ಕಾಡಿನಲ್ಲಿ ಹುಲಿಯು ಎರಡೋ ಮೂರೋ ಸೀಳುನಾಯಿಗಳು ಎದುರು ಸಿಕ್ಕಾಗ ಸುಲಭವಾಗಿ ಅವನ್ನು ಸದೆ ಬಡಿದು ಕೊಲ್ಲುತ್ತದೆ. ಆದರೆ ಸೀಳುನಾಯಿಗಳ ಹಿಂಡಿಗೆ ಹುಲಿಯು ಸಿಕ್ಕಿಬಿದ್ದರೆ ಹುಲಿಯನ್ನು ಛಿದ್ರಛಿದ್ರ ಮಾಡುತ್ತದೆ, ಕಲಿಯುಗದಲ್ಲಿ ಶಕ್ತಿಯು ಸಂಘಗಳಲ್ಲಿ ಮಾತ್ರ ಪ್ರಬಲವಾಗಿರಲು ಸಾಧ್ಯ, ತಾತ್ಕಾಲಿಕವಾಗಿ.

ಸಂಘಗಳನ್ನು ಕಟ್ಟಲಾಗದಿದ್ದಾಗ, ಯುವಕನು ಯಾವ ರೀತಿಯಲ್ಲಿ ಬಂಡೇಳಲು ಸಾಧ್ಯ? ಒಂಟಿಯಾಗಿ ಏನು ಮಾಡುತ್ತಾನೆ?

ಬಾಲಕನಾಗಿದ್ದಾಗ, ಮನೆಯಲ್ಲಿ ಮತ್ತು ಶಾಲೆಯಲ್ಲಿ Super-Egoವು– ಅಂದರೆ ಮನಸ್ಸಿನಲ್ಲಿ ರೂಢಿಸಿ ಬೆಳೆಸಲ್ಪಟ್ಟ ಸತ್–ಚೈತನ್ಯಾಂಶವು ದೃಢವಾಗಿದ್ದರೆ, ಆಗ ಯುವಕನು ಧ್ಯೇಯವಾದಿಯಾಗುತ್ತಾನೆ. ತನ್ನ Id ಇನ ಕಾಮ್ಯ ಪ್ರೇರಣೆಗಳನ್ನು ಬದಿಗಿರಿಸಿ, ತನ್ನ ಸುಖವನ್ನು ಮತ್ತು ಲೌಕಿಕ ಭವಿಷ್ಯವನ್ನೂ ಅಲ್ಲಗಳೆಯುತ್ತಾನೆ. ಸಮಾಜದ ದೀನದಲಿತರ ನೆರವಿಗೆ ಹಿಂದು ಮುಂದು ನೋಡದೆ ನುಗ್ಗುತ್ತಾನೆ. ಧ್ಯೇಯ ಸಾಧನೆಯು, ಮತ್ತು ಆ ದಿಸೆಯಲ್ಲಿ ನಡಸುವ ಸ್ವಪ್ರಯತ್ನಗಳು, ಅವನ Ego ವಿಗೆ ತಂಪೆರೆಯುತ್ತವೆ, ಸಂತಸವನ್ನು ನೀಡುತ್ತವೆ.

Super-Ego ವು ಸಾಕಷ್ಟು ದೃಢವಾಗಿ ಬೆಳೆಯದೆ ಇದ್ದರೆ, ಆಗ ಯುವಕನ Ego ವು Id ಇನ ಪ್ರಭಾವಕ್ಕೆ ತಲೆಬಾಗುತ್ತದೆ. ಕಾಮ್ಯವಸ್ತುಗಳನ್ನು ಪಡೆಯಲು ಯತ್ನಿಸುತ್ತಾನೆ. ಯೌವನದಲ್ಲಿ ಲೋಕಾನುಭವವು ಸಾಲದುದರಿಂದ, ನಡಸಿದ ಪ್ರಯತ್ನಗಳು ಕಾಮ್ಯಗಳನ್ನು ದೊರಕಿಸಿ ಕೊಡದೆ ಇರಬಹುದು. ಆಗ ಯುವಕನ Ego ವಿಗೆ ಕಸವಿಸಿಯು ಹೆಚ್ಚಾಗುತ್ತದೆ. ಇದನ್ನು ಸಮಾಧಾನ ಪಡಿಸಲು ಅವನು ಕಳ್ಳತನದಿಂದ ಕಾಮ್ಯಗಳನ್ನು ಪಡೆಯಲು ಯತ್ನಿಸುತ್ತಾನೆ. ಅಪರಾಧಗಳನ್ನು

ಮಾಡತೊಡಗುತ್ತಾನೆ. ಹಲವಾರು ಯುವಕರಲ್ಲಿ ಅಪರಾಧಗಳನ್ನು ಗುಪ್ತವಾಗಿ ಮಾಡುವುದು ಅಭ್ಯಾಸವಾಗಿ ಬಿಡುತ್ತದೆ. Habitual offenders ಇವರುಗಳು. ಸಮಾಜದ ಕಟ್ಟಲೆ ಕಾನೂನುಗಳನ್ನು ಕಳ್ಳತನದಲ್ಲಿ ವಿರೋಧಿಸುವುದೂ, ಬಂಡೇಳುವ ಪ್ರವೃತ್ತಿಯ ಒಂದು ಮುಖ.

Super-Ego ಸಾಕಷ್ಟು ದೃಢವಾಗಿ ಬೆಳೆದಿದೆ, ಅನ್ನಿ. ಧ್ಯೇಯವಾದಿಯಾಗು ಎಂದು ಸತ್–ಚೈತನ್ಯಾಂಶವು ಪ್ರೇರಿಸುತ್ತದೆ. ಆದರೆ ಸಮಸಮವಾಗಿ Id ಇನ ತಮಃ–ಪ್ರಭಾವವು ಕೂಡ Ego ವನ್ನು ಮೈಚಾಚಿ ಕರೆಯುತ್ತಿದೆ, ಅನ್ನಿ. ಯುವಕನ ಮನಸ್ಸು ಇತ್ತ ಅತ್ತ ಜಗ್ಗಾಡಲ್ಪಡುತ್ತದೆ. ಲೋಕದ ವಾಸ್ತವಿಕತೆಯ ಅರಿವು ಯುವಕರಲ್ಲಿ ಅಗತ್ಯವಾದಷ್ಟು ಇರುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಮನಸ್ಸು ಜಗ್ಗಾಟವನ್ನು ತಡೆಯಲಾರದೆ, ತನ್ನದೇ ಆದ ಅವಾಸ್ತವಿಕ ಪ್ರಪಂಚವೊಂದನ್ನು ಸೃಷ್ಟಿಸಿಕೊಂಡು, ಆ ಲೋಕದಲ್ಲಿ ನೆಮ್ಮದಿಯಿಂದಿರುತ್ತದೆ. ಹೀಗಾದಾಗ ಹುಚ್ಚು ಹಿಡಿಯುತ್ತಿದೆ, Insight into Reality ಶೂನ್ಯವಾಗಿದೆ, ಎಂದನ್ನುತ್ತಾರೆ. ಇಂತಹ ನತದೃಷ್ಟ ಯುವಕರ ಮನಸ್ಸು ಛಿದ್ರವಾಗಿರುತ್ತದೆ. ಒಂದು ಭಾಗವು ಅವಾಸ್ತವಿಕ ಪ್ರಪಂಚದಲ್ಲಿ ವಿಹರಿಸುತ್ತದೆ. ಇನ್ನೊಂದು ಭಾಗವು ವಾಸ್ತವಿಕವಾದ ಪ್ರಪಂಚದಲ್ಲಿ ಬಾಲಂಗೋಚಿ ಇಲ್ಲದ ಗಾಳಿಪಟದಂತೆ ಸ್ವೇಚ್ಛೆಯಾಗಿ ಲಾಗ ಹಾಕುತ್ತಿರುತ್ತದೆ. Schizo-Phrenia, ಎಂದನ್ನುತ್ತಾರೆ, ಹೀಗಾದಾಗ, Schizoಎಂದರೆ ಛಿದ್ರವಾದುದು Phrenia ಎಂದರೆ ಮನಸ್ಸು.

ಹೈಸ್ಕೂಲುಗಳಲ್ಲಿ ಅತ್ಯಂತ ಯಶಸ್ವಿಯಾಗಿ ಪ್ಯಾಸು ಮಾಡಿರುತ್ತಾರೆ. ಹೇಳಿ ಕೊಟ್ಟ ಪಾಠಗಳನ್ನು ಲಕ್ಷಣವಾಗಿ ಅರ್ಥಮಾಡಿಕೊಂಡು, ಪರೀಕ್ಷೆಯಲ್ಲಿ ಒಪ್ಪಿಸಿದರೆ, ಹೈಸ್ಕೂಲಿನಲ್ಲಿ ಯಶಸ್ವಿಯಾಗಿ ಪಾಸಾಗಬಹುದು. ಸ್ವಂತವಾಗಿ ಯೋಚಿಸಲು ಹೆಚ್ಚು ಅಗತ್ಯವಿರುವುದಿಲ್ಲ. ಬಾಲಕನು ಯುವಕನಾಗಿ ಕಾಲೇಜಿಗೆ ಬಂದರೆ, ಅಲ್ಲಿನ ವಿದ್ಯಾಭ್ಯಾಸದ ರೀತಿಯೇ ಬೇರೆ. ಕಾಲೇಜುಗಳಲ್ಲೂ ಪಾಠವನ್ನು ಕಲಿಸುತ್ತಾರೆ. ಆದರೆ ಅದಕ್ಕಿಂತಲೂ ಮುಖ್ಯವಾದುದು, ವಿದ್ಯಾರ್ಥಿಯು ಸ್ವಂತವಾಗಿ ಆಲೋಚಿಸುವುದನ್ನು ಪ್ರೇರೇಪಿಸುವುದು, 'ಧೀಯೋ ಯೋನಃ ಪ್ರಚೋದಯಾತ್', ಧೀಃ ಶಕ್ತಿಯನ್ನು ವಿಚಾರಪರ ಮನಸ್ಸನ್ನು, ಪ್ರಚೋದಿಸುವುದು, ಕಾಲೇಜಿನ ಹಂತದ ಶಿಕ್ಷಣದ ತಿರುಳು.

ಸ್ವಂತವಾಗಿ ಆಲೋಚಿಸುವಾಗ, ತನ್ನಲ್ಲಿರುವ ಕುಂದುಗಳು ಮತ್ತು ಲೋಪಗಳು ಕಾಣಬರುತ್ತವೆ. ಎಸ್. ಎಸ್. ಎಲ್. ಸಿ. ಯಲ್ಲಿ ರ್‍ಯಾಂಕ್ ಪಡೆದೆ, ಇಲ್ಲಿ ಸೆಕೆಂಡ್ ಕ್ಲಾಸ್‌ಕೂಡ ಬರಲಿಲ್ಲ. ಎಂದೆನ್ನುವ ಕೊರಗು ಕಾಣತೊಡಗುತ್ತದೆ.

ಇದು ವಿಪರೀತವಾದಾಗ ಮನಸ್ಸು ಛಿದ್ರವಾಗುತ್ತದೆ.

ಕಾಲೇಜಿನ ಹಂತದಲ್ಲಿ ಹೀಗಾಗಬಹುದು. ಅದಕ್ಕಿಂತಲೂ ಹೆಚ್ಚಾಗಿ, ಪ್ರೌಢ ವಿದ್ಯಾಭ್ಯಾಸಕ್ಕೆ, ಎಂ.ಎಸ್‌ಸಿ ; ಪಿಎಚ್.ಡಿ. ಗಳಿಗೆ ಸೇರಿದಾಗ ಆಗಬಹುದು.

ಎಷ್ಟು ಜಾಣ ಹುಡುಗ, ಎಂತಹ ಬುದ್ಧಿವಂತ, ಅವನಿಗೆ ಹುಚ್ಚು ಹಿಡಿಯುವುದು ಹೇಗೆ ಸಾಧ್ಯ? ಎಂದು ಕಂಡವರು ಅಚ್ಚರಿ ಪಡುತ್ತಾರೆ. ಆಲೋಚನೆಯನ್ನು ಸ್ವಂತವಾಗಿ ಮಾಡುವುದಕ್ಕೆ ವಿಚಾರಪರ ಮನಸ್ಸು ಇನ್ನೂ ಪಕ್ವವಾಗಿರುವುದಿಲ್ಲ. ಅಪಕ್ವವಾದ ಮನಸ್ಸು ಸುಲಭವಾಗಿ ಪಲ್ಲಟವಾಗುತ್ತದೆ. ಆದುದರಿಂದ ಶಿಕ್ಷಣತಜ್ಞರು, ಇಂತಹ ವಯಸ್ಸು ಮುಗಿದ ಮೇಲೆ ಮಾತ್ರ ಇಂತಹ ಪರೀಕ್ಷೆಗೆ ಕೂಡಬಹುದು ಎಂದು ನಿರ್ಧರಿಸುವುದು. ಯಾವನೋ ಒಬ್ಬ ಪ್ರಚಂಡ, ಹದಿನೈದನೇ ವಯಸ್ಸಿನಲ್ಲಿ ಆರು ಚಿನ್ನದ ಪದಕಗಳನ್ನು ಪಡೆದು, ಬಿ. ಎಸ್‌ಸಿ. ಆನರ್ಸ್ ಪ್ಯಾಸು ಮಾಡಿದ, ಆದುದರಿಂದ ವಯಸ್ಸಿನ ಇತಿಮಿತಿಯನ್ನು ಹಾಕಿ, ಜಾಣ ಹುಡುಗರನ್ನು ಮುಂದಿನ ಪರೀಕ್ಷೆಗೆ ಕೂಡಲು ಅವಕಾಶವನ್ನು ತಪ್ಪಿಸಬಾರದು ಎಂದು ಜನರು ಅನ್ನುವುದುಂಟು. ಒಬ್ಬ ಪ್ರಚಂಡನು ಮಾಡಿದುದನ್ನು ನೋಡಿದವರು, ಮಾನಸಿಕ ಆಸ್ಪತ್ರೆಗಳಿಗೆ ಹೋಗಿ ಜಾಣ ಯುವಕರ, ಯಶಸ್ವಿಯಾಗಿ ಎಳೆ ವಯಸ್ಸಿನ ಇತಿಮಿತಿಯನ್ನು ಹಾಕಿ, ಜಾಣ ಹುಡುಗರನ್ನು ಮುಂದಿನ ಪರೀಕ್ಷೆಗೆ ಕೂಡಲು ಅವಕಾಶವನ್ನು ತಪ್ಪಿಸಬಾರದು ಎಂದು ಜನರು ಅನ್ನುವುದುಂಟು. ಒಬ್ಬ ಪ್ರಚಂಡನು ಮಾಡಿದುದನ್ನು ನೋಡಿದವರು, ಮಾನಸಿಕ ಆಸ್ಪತ್ರೆಗಳಿಗೆ ಹೋಗಿ ಜಾಣ ಯುವಕರ, ಯಶಸ್ವಿಯಾಗಿ ಎಳೆ ವಯಸ್ಸಿನಲ್ಲಿ ಪ್ಯಾಸು ಮಾಡಿ, ತದನಂತರ ಅಪಕ್ವಮನಸ್ಸಿನಿಂದಾಗಿ, ಆಸ್ಪತ್ರೆಗೆ ಸೇರಿರುವುದನ್ನು ಕಣ್ಣಾರ ಕಾಣಬೇಕು !

ಕಾಲೇಜಿಗೆ ಹೋಗಿ ಓದುವ ಜವ್ವನದ ತರುಣಿಯರಲ್ಲಿ ಇದೇ ಪರಿಸ್ಥಿತಿಯು ಇರುತ್ತದೆ. ಕಾಲೇಜಿನ ಡಿಗ್ರಿ ಪಡೆದು ಮದುವೆಯಾಗಿ ಗಂಡನ ಮನೆಗೆ ಹೋದಾಗ, ಅಪಕ್ವ ಮನಸ್ಸಿದ್ದವರು ; Immature Minds – ಮಾನಸಿಕ ಅಲ್ಪಸ್ವಲ್ಪ ಪಲ್ಲಟಕ್ಕೆ ತುತ್ತಾಗುತ್ತಾರೆ. ಅತ್ತೆಯ ಕಾಟ ಎಂದು ಹಿಂದೆ ಹೇಳುತ್ತಿದ್ದುದು. ಅಪಕ್ವ ಮನಸ್ಸಿನ ಸೊಸೆಯು ಮನೆಗೆ ಬಂದುದರಿಂದ ಅಪಕ್ವವಾದ ಮನಸ್ಸಿದ್ದರೆ, ಸ್ವಾಭಿಮಾನವೂ, ನಾನು ಓದಿದವಳು ಎನ್ನುವ ಹೆಮ್ಮೆಯೂ ಬಲವಾಗಿರುತ್ತದೆ. ಆದುದರಿಂದ ಇತರರು ಹೇಳಿದಂತೆ ಕೇಳುವುದಿಲ್ಲ. ಆದರೆ ತಾವೇ ಯೋಚಿಸಿ ವಿಹಿತವಾಗಿ ಕೆಲಸವನ್ನು ಮಾಡಲೂ ಆಗುವುದಿಲ್ಲ. ಆಗ ಮಾನಸಿಕ ಪಲ್ಲಟವು ಅಲ್ಪ ಹಂತದಲ್ಲಿ ಅಥವಾ ಹೆಚ್ಚು ಹಂತದಲ್ಲಿ ಕಾಣಿಸಿಕೊಳ್ಳುತ್ತದೆ. ಸೂಕ್ತ ಚಿಕಿತ್ಸೆಯನ್ನು ಮೊದಲ

ಹಂತದಲ್ಲಿ ನೀಡಿದರೆ ಮಾನಸಿಕ ನೆಮ್ಮದಿಯು ದೊರೆಯುತ್ತದೆ. ಆದರೆ ಅತ್ತೆ ಮಾವನಾಗಲೀ, ಗಂಡನಾಗಲೀ, ಅಂಕೆ ಶಿಕ್ಷೆಗೆ ಒಳಪಡಿಸಿದರೆ ಸರಿಹೋಗುತ್ತಾಳೆ, ಇದಕ್ಕೆಲ್ಲಾ ಹುಚ್ಚಾಸ್ಪತ್ರೆಗೆ ಹೋಗಿ ಮನೆಯ ಮಾನವನ್ನು ಕಳೆದುಕೊಳ್ಳುವುದೇ? ಎಂದುಕೊಳ್ಳುತ್ತಾರೆ. ಮಾನಸಿಕ ಪಲ್ಲಟವು ಅನಂತರ ವಿಪರೀತವಾಗಬಹುದು. ಚಿಕಿತ್ಸೆಗೆ ಬಗ್ಗುವ ಮಟ್ಟವನ್ನು ಮೀರಬಹುದು.

ಅಪಕ್ವ ಮನಸ್ಸು ಎಂದು ಯುವಕನಿಗಾಗಲೀ, ಯುವತಿಗಾಗಲೀ ಹೇಳಿದರೆ, ಅವರು ಒಪ್ಪುತ್ತಾರೆಯೇ? ಬಂಡೇಳುತ್ತಾರೆ. ಬಂಡೇಳುವುದೂ ಅಪಕ್ವ ಮನಸ್ಸಿನ ಒಂದು ಚಿಹ್ನೆ; ಈ ದೃಷ್ಟಿಯಿಂದ ಯೌವನದಲ್ಲಿ ಅಪಕ್ವ ಮನಸ್ಸು ಹೆಚ್ಚಾಗಿ ಕಾಣಬರುತ್ತದೆ. ಆದರೆ ವಯಸ್ಸು ಮೂಡಿದಂತೆಲ್ಲಾ ಮನಸ್ಸೂ ಪಕ್ವವಾಗುತ್ತದೆ ಎಂದುಕೊಳ್ಳಬಾರದು. ಪಂಚಾಂಗದ ಪ್ರಕಾರ ವಯಸ್ಸಿಗೂ, ಮನಸ್ಸಿನ ಪರಿಪಕ್ವತೆಯ ಗತಿಗೂ, ಬಹಳಷ್ಟು ಜನರಲ್ಲಿ ಅನ್ವಯವು ಇರುವುದಿಲ್ಲ. ಆದಕಾರಣ, ಯುವಕರಲ್ಲಿ ಕಾಣಸಿಗುವ ಮಾನಸಿಕ ಪಲ್ಲಟಗಳು, ಬೆಳೆದ ವಯಸ್ಸಿನವರಲ್ಲಿ ಕೂಡ ಇರುತ್ತದೆ. ಆದರೆ ಪ್ರಚೋದಿಸುವ ಕಾರಣಗಳು ಬೇರೆ ಬೇರೆಯಾಗಿರುತ್ತವೆ. ವಾಸ್ತವಿಕತೆಯ ಅರಿವನ್ನು ಮೂಡಿಸುವ ಸಂಸಾರ ಮತ್ತು ಸಮಾಜದ ಹಲವಾರು ಕಟ್ಟುನಿಟ್ಟುಗಳು ಇರುವುದರಿಂದ ಮಾನಸಿಕ ಪಲ್ಲಟಗಳು ಯುವಕರಲ್ಲಿದ್ದಂತೆ ವಿಪರೀತವಾಗುವುದಿಲ್ಲ. ವಯಸ್ಕರಲ್ಲಿ ಮನಸ್ಸಿನ ಕಾರ್ಯಕ್ರಮಗಳು ಹೇಗೆ ಇರುತ್ತವೆಂಬುದನ್ನು ಮುಂದೆ ತಿಳಿಯೋಣ.

**ವಯಸ್ಕರಲ್ಲಿ ಮನಸ್ಸಿನ ಕಾರ್ಯಕ್ರಮ**

ರಾಮನಾಥಯ್ಯ ಎಂಬ ಸ್ನೇಹಿತನಿದ್ದಾನೆ. ತುಂಬಾ ಚೂಟಿ, ನಾಲಿಗೆಯೂ ಹರಿತ. ಯೋಚನೆಗಳು ಮಿಂಚಿನ ಬಳ್ಳಿಯಂತೆ ಮೂಡುತ್ತವೆ. ಅವುಗಳನ್ನು ಮಿರುಗುವ ಮಾತುಗಳಲ್ಲಿ ಕೇಳುವವರಿಗೆ ನಾಟುವಂತೆ ತಡಬಡವಿಲ್ಲದೆ ಆಡುತ್ತಾನೆ. ಅವನೊಂದಿಗೆ ಮಾತನಾಡುವುದೆಂದರೆ ನನಗೆ ಬಲು ಮೋಜು. ತಾಸು ತಾಸುಗಳನ್ನು ಹರಟೆಯಲ್ಲಿ ಕಳೆಯುತ್ತಿದ್ದೆವು. ಎಂಟ್ರೆನ್ಸ್ ಪರೀಕ್ಷೆಯಲ್ಲಿ ಯಶಸ್ವಿಯಾಗಿ ಅವ ಪಾಸಾದ. ನಾನೂ ಪಾಸಾದೆ, ಎನ್ನುವುದಕ್ಕಿಂತ ನಪಾಸಾಗಲಿಲ್ಲ ಎಂದರೆ ಸರಿಯಾದೀತು. ಅವನ ತಂದೆಯು, ಅದೇನು ಅವಸರವೋ, ಆಗ ಸತ್ತುಹೋದ. ತಮ್ಮಂದಿರು ತಂಗಿಯರು ಮತ್ತು ತಾಯಿಯನ್ನು ಸಾಕುವ ಹೊಣೆಗಾರಿಕೆಯು ರಾಮನಾಥಯ್ಯನ ಮೇಲೆ ಹದಿನಾರನೇ ವಯಸ್ಸಿನಲ್ಲಿ ಬಿತ್ತು. ಆದಕಾರಣ ಓದನ್ನು ಮುಂದುವರೆಸಲಿಲ್ಲ. ಸರ್ಕಾರಿ ಕಚೇರಿಯಲ್ಲಿ ಕ್ಲಾರ್ಕ್ ಆಗಿ ಕೆಲಸಕ್ಕೆ ಸೇರಿಕೊಂಡ.

ಕಾಲೇಜಿನಲ್ಲಿ ಓದನ್ನು ಮುಂದುವರೆಸುವ ಅವಕಾಶವು ನನಗೆ ದೊರೆಯಿತು. ನಂತರ ಮೆಡಿಕಲ್ ಓದುವುದೂ ಸಾಧ್ಯವಾಯಿತು. ಕಾಲೇಜು, ಓದು, ಈ ತಕರಾರುಗಳಲ್ಲಿ ರಾಮನಾಥಯ್ಯನ ಸಂಪರ್ಕವು ಬಹಳ ಕಡಿಮೆಯಾಯಿತು.

ಹಲವಾರು ವರ್ಷಗಳಾದ ಮೇಲೆ, ಕಾರಿನಲ್ಲಿ ಹೋಗುತ್ತಿದ್ದಾಗ, ಹಾದಿಯ ಬಳಿಯಲ್ಲಿ ಅವ ನಿಂತಿದ್ದುದು ಕಾಣಿಸಿತು. ಅವನ ಬಳಿ ಕಾರನ್ನು ನಿಲ್ಲಿಸಿದೆ. ಎಲ್ಲಿಗೆ ಹೋಗಬೇಕೋ, ಹೇಳು ಅಲ್ಲಿಗೆ ಕರೆದುಕೊಂಡು ಹೋಗಿ ತಲಪಿಸುತ್ತೇನೆ. ಬಸ್ಸಿಗೆ ಕೊಡುವ ಛಾರ್ಜನ್ನು ನನಗೆ ಕೊಡು ಎಂದು ಕೇಳುವುದಿಲ್ಲ. ಧೈರ್ಯವಾಗಿ ಬಂದು ಕೂತುಕೋ ಎಂದನ್ನುತ್ತಾ ಬಾಗಿಲನ್ನು ತೆಗೆದೆ. ಕಾರಿನೊಳಗೆ ಕೂತುಕೊಂಡ. 'ಆಸ್ಪತ್ರೆಗೆ ನೀನು ಹೋಗುತ್ತಾ ಇರಬಹುದು. ಎದುರಿನಲ್ಲೇ ಮಾರ್ಕೆಟ್, ಅಲ್ಲಿಗೆ ಹೋಗ್ತಾ ಇದ್ದೀನಿ. ಅಂದರೆ ನಿನಗೆ ಹೆಚ್ಚು ತೊಂದರೆಯಾಗುವುದಿಲ್ಲ. ಬಸ್ ಛಾರ್ಜ್ ನೀನು ಕೇಳುವಂತಿಲ್ಲ. ಏಕೆಂದರೆ ಪೋಲೀಸ್ ಇಂತಹ ಕಾನೂನಿನ ಪ್ರಕಾರ ಲೈಸೆನ್ಸ್ ಪಡೆಯದೆ, ಬಾಡಿಗೆಗೆ ಕಾರನ್ನು ಉಪಯೋಗಿಸಿದರೆ, ನಿನಗೆ ಶಿಕ್ಷೆ ಆಗುತ್ತೆ, ಎಂದ.'

'ನಲವತ್ತರ ಮುಪ್ಪಲ್ಲೋ ನಿನಗೆ, ಆದರೂ ನಾಲಿಗೆಯ ಹುಳಿ ಮಾತಿಗೆ, ಮುಪ್ಪೇ ಬಂದಿಲ್ಲವಲ್ಲೋ' ಎಂದೆ. ನಂತರ ಯೋಗಕ್ಷೇಮವನ್ನು ವಿಚಾರಿಸಿದೆ. ತಮ್ಮಂದಿರು ತಂಗಿಯರು, ಅವರನ್ನು ಒಂದು ರೀತಿಯಲ್ಲಿ ಸೆಟಲ್ ಮಾಡಿದ್ದಾಯಿತು. ಕಚೇರಿಯ ಸರ್ಕಾರೀ ಪರೀಕ್ಷೆಗಳನ್ನು ಪ್ಯಾಸುಮಾಡಿ ಈಗ ಸೂಪರಿಂಟೆಂಡೆಂಟ್, ಆಗಿದ್ದೇನೆ. ನನ್ನ ಕೈ ಕೆಳಗೆ ಆರು ಗ್ರಾಜುಯೇಟುಗಳು ಕ್ಲಾರ್ಕ್‌ಗಳಾಗಿದ್ದಾರೆ. ಅದೇ ನನಗೆ ಸಂತೋಷ' ಎಂದ. 'ಅಷ್ಟೇನೇ ಸಂತೋಷ ! ಹೆಂಡತಿ ಮಕ್ಕಳು ಇತ್ಯಾದಿ ಸಂತೋಷಗಳು ? ಎಂದೆ. ಅವೆಲ್ಲಾ ಸಂತೋಷವನ್ನು ನೀಡುವಂತಹುದಲ್ಲ. ನನಗೆ. ಮಾಡಬೇಕಾದ ಕರ್ತವ್ಯ, ಅನುಭವಿಸಲೇಬೇಕಾದ ಪ್ರಾರಬ್ಧ ಎಂದ. 'ಇದೇನೋ ಹೀಗಂತಿ : ರಸಿಕಾಗ್ರೇಸರ ನೀನು. ಹೈಸ್ಕೂಲು ಕಾಂಪೌಂಡಿನಲ್ಲಿ ರಾಸಕ್ರೀಡೆಯನ್ನು ಆಡುತ್ತಿದ್ದ ರಾಸಭಗಳನ್ನು ಕುರಿತು ಭಾವಗೀತೆಯನ್ನು ಬರೆದವನಲ್ಲವೇನೋ?' ಇಷ್ಟರಲ್ಲೇ ಏನು ಬಂತೋ ವೇದಾಂತ, ಪ್ರಾರಬ್ಧ, ಇತ್ಯಾದಿ : ಈಗ ಸೂಪರಿಂಟೆಂಡೆಂಟ್, ಅಂದಮೇಲೆ ಕೈ ತುಂಬಾ ಸಂಬಳ ಬರುತ್ತಿರಬೇಕು. ಈ ವಯಸ್ಸಿನಲ್ಲೇ ಮಜಾ ಮಾಡಬೇಕು, ಅತಿಯಾದ ಉದ್ವೇಗವಿಲ್ಲದೆ' ಎಂದೆ. 'ನನ್ನ ಹೆಂಡತಿಗೆ ಮೂರು ವರ್ಷಗಳಿಂದಲೂ ಕ್ಷಯ. ಸ್ಯಾನಿಟೇರಿಯಂನಲ್ಲಿ ಸೇರಿಸಿದ್ದೇನೆ. ಬಂದ ಸಂಬಳ ಬರಬಹುದಾದ ಇನ್ಕ್ರಿಮೆಂಟ್ ಇವೆಲ್ಲವೂ ಔಷಧಿ ಪಥ್ಯಕ್ಕೆ ಸಾಲುವುದಿಲ್ಲ' ಎಂದ.

ಮಾರ್ಕೆಟ್ ಬಳಿಗೆ ಬಂದಿದ್ದೆವು. 'ಇಲ್ಲಿ ಇಳಿಸಿ ಬಿಡಪ್ಪಾ, ನೆಟ್ಟಗೆ ನೀನು ಆಸ್ಪತ್ರೆಗೆ ಹೋಗಬಹುದು, ಬಡ ಸ್ನೇಹಿತನನ್ನು ಮರೆಯದೆ ಇದ್ದುದ್ದಕ್ಕಾಗಿ ವಂದನೆಗಳು ಕಣೋ' ಎಂದ.

* * *

ವಯಸ್ಕರಿಗೆ ರಾಮನಾಥಯ್ಯನಿಗೆ ಆದಂತೆ, ಲೋಕದ ಕಠಿಣ ಪಾಠಗಳು ವಾಸ್ತವಿಕ ಅರಿವನ್ನು ಮರೆಯದಂತೆ ಮಾಡಿಕೊಡುತ್ತವೆ. ಒಂದಲ್ಲ ಒಂದು ರೀತಿಯಲ್ಲಿ ಹೊಣೆಗಾರಿಕೆಯು ಹೆಚ್ಚಾಗುತ್ತದೆ. ಇವನ್ನು ಪೂರೈಸಲು ಸುಳ್ಳನ್ನು ಹೇಳಬೇಕಾಗುತ್ತದೆ. ನಾನು, ನನ್ನ ಸಂಸಾರ, ಇವೆಲ್ಲಾ ನನ್ನ ಜವಾಬ್ದಾರಿ ; ಎಂದು ವಯಸ್ಕನ Ego ಭದ್ರವಾದ ಕೋಟೆಯನ್ನು ಕಟ್ಟಿರುತ್ತದೆ. ತನಗೆ ಕಾಮ್ಯವಾದ ವಸ್ತುಗಳು, ತನ್ನ ಜವಾಬ್ದಾರಿಗೆ ಒಳಪಟ್ಟ ಎಲ್ಲರಿಗೂ ದೊರಕಿಸಿಕೊಡಬೇಕು ಎಂದು ಅಂದುಕೊಳ್ಳುತ್ತಾನೆ. ಇವೆಲ್ಲವೂ ತಮೋಗುಣ ಪ್ರಧಾನವಾದ Id ಇನ ಪ್ರಭಾವೀ ಸೆಳೆತಗಳು. ಇವುಗಳನ್ನು ಈಡೇರಿಸುವುದು ತನ್ನ ಕರ್ತವ್ಯ ಎಂದು ಕೊಳ್ಳುವಾಗ,. ಅವನ Super-Ego, ಅಥವಾ ಮನಸ್ಸಿನ ಸತ್–ಚೈತನ್ಯಾಂಶವು, ಪ್ರೇರಕವಾಗಿರುತ್ತದೆ. ತಾನು ಎನ್ನುವುದು ಈಗ ತನ್ನ ಸಂಸಾರ, ಬಳಗ, ಎಂದು ವಿಶಾಲಗೊಳ್ಳತೊಡಗುತ್ತದೆ. ಮುಂದೆ ವಿಶ್ವ–ಕುಟುಂಬ ಎನ್ನುವ ಧ್ಯೇಯದತ್ತ ಇದು ಮೊದಲ ಹೆಜ್ಜೆ ಎಂದರೆ ತಪ್ಪಲ್ಲ.

ಬಾಲ್ಯದಲ್ಲಿ ಕಲಿತ ಆದರ್ಶಗಳನ್ನು, ಮತ್ತು ಯುವಕನಾಗಿದ್ದಾಗ ಆದರ್ಶಗಳನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನಗಳನ್ನು, ವಯಸ್ಕರ ವಾಸ್ತವಿಕ ಅರಿವು ತುಂಡುಮಾಡುತ್ತದೆ. ಬಾಲ್ಯ ಮತ್ತು ಯೌವನದ ಧ್ಯೇಯಗಳು ಕೇವಲ ಗಗನ ಕುಸುಮಗಳು. ಮರ್ತ್ಯ ಲೋಕದಲ್ಲಿ ಮಜವಾಗಿ ಬಾಳಬೇಕಾದರೆ, ಮೋಸವೇ ಗಾಂಡೀವ ; ಸುಳ್ಳೇ ಪಾಶುಪತಾಸ್ತ್ರ ; ನಂಬಿಸಿ ನುಣ್ಣಗೆ ಮಾಡುವುದು ಭಾರ್ಗವಾಸ್ತ್ರ; ಎಂದು ತಿಳಿಯುತ್ತಾನೆ. ಪತ್ತೆಯಾಗದಂತೆ ಇವೆಲ್ಲವನ್ನೂ ಮಾಡುವುದು, ವಯಸ್ಕರ ವಿಚಾರಪರ ಮನಸ್ಸಿನ ಕುಶಲತೆ. ಲೋಕಾನುಭವವು, ಅಂದರೆ ಅನುಭವಗಳಿಂದ ಪಾಠವನ್ನು ಕಲಿತಾಗ ವಿಚಾರಪರ ಮನಸ್ಸಿನ ಕುಶಲತೆಯನ್ನು ಅಭಿವೃದ್ಧಿಸುತ್ತದೆ.

ಲೌಕಿಕ ಜೀವನದ ವಾಸ್ತವಿಕತೆಯನ್ನು ವಯಸ್ಕನು ಪೂರ್ಣವಾಗಿ ಅರಿತ ಮೇಲೆ, ಭಾವನಾಪರವಾಗಿ, ವಿಚಾರವನ್ನು ಸಾಕಷ್ಟು ಮಾಡದೆ, ಯಾವುದಕ್ಕೂ ಮುನ್ನುಗ್ಗುವುದಿಲ್ಲ. ಯೌವನದಲ್ಲಿ ದೇಹವು Elasticity ಯನ್ನು ಪಡೆದಿರುತ್ತದೆ. ಆದಕಾರಣ ಸಾಹಸದ ಕೆಲಸಗಳನ್ನು ಮಾಡಲು ಶಕ್ತನಾಗಿರುತ್ತಾನೆ. ಕ್ರೀಡಾಪಟುಗಳೂ ಜಗತ್ತಿನ ಚಾಂಪಿಯನ್ನರಾಗುವುದು ಈ ವಯಸ್ಸಿನಲ್ಲಿಯೇ. ದೇಹದಂತೆ ಮನಸ್ಸೂ

ಯುವಕರಲ್ಲಿ ಅತ್ಯುತ್ಸಾಹದಿಂದ ತುಂಬಿರುತ್ತದೆ. ಉದಾತ್ತ ಧ್ಯೇಯಗಳಿಂದಲೂ ಪ್ರೇರೇಪಿಸಲ್ಪಡುತ್ತದೆ. ಆಗುಹೋಗುಗಳನ್ನು ಸಾಕಷ್ಟು ವಿಚಾರ ಮಾಡದೆ ಹರೆಯದ ಹೋರಿಯಂತೆ ಮುನ್ನುಗ್ಗುತ್ತಾರೆ. ಮಹಾಭಾರತದ ಅಭಿಮನ್ಯುವು ಉತ್ತಮ ನಿದರ್ಶನ. ಸಮರವಿದ್ಯೆಯನ್ನು ಲಕ್ಷಣವಾಗಿ ಕಲಿತಿದ್ದ. ಉತ್ಸಾಹವಿತ್ತು, ದೇಹಕ್ಕೆ ಹುಮ್ಮಸ್ಸೂ ಇತ್ತು. ಅಪ್ಪ, ಚಿಕ್ಕಪ್ಪ, ದೊಡ್ಡಪ್ಪ ಯಾರೂ ಇರದಿದ್ದಾಗ, ತಾನೇ ಶತ್ರುವಿನ ಚಕ್ರವ್ಯೂಹವನ್ನು ಭೇದಿಸಿ ಒಳ ನುಗ್ಗಿದ. ಒಳಕ್ಕೆ ಹೋದವನು ಸುರಕ್ಷಿತವಾಗಿ ಹಿಂದಕ್ಕೆ ಬರಲು ಸಾಧ್ಯವೇ ? ಸಾಧ್ಯವಾದರೆ ಯಾವ ರೀತಿಯನ್ನು ಅನುಸರಿಸಬೇಕು, ಎಂದವನಿಗೆ ವಿಚಾರ ಮಾಡುವಷ್ಟು ತಾಳ್ಮೆಯಿರಲಿಲ್ಲ, ಮುನ್ನುಗ್ಗಿದ. ಸಿಕ್ಕಿಹಾಕಿಕೊಂಡ, ಅಸುವನ್ನು ಬಲಿಕೊಟ್ಟ.

ವಯಸ್ಕರಾದರೋ, ಯಾವುದನ್ನು ಮಾಡಬೇಕಾದರೂ, ತಮ್ಮ ಯೋಗ್ಯತೆಗೆ, ಮತ್ತು ಕಲಿಕೆಗೆ ತಕ್ಕಂತೆ, ವಿಚಾರವನ್ನು ಮಾಡುತ್ತಾರೆ. ಮುಂದೆ ಹೀಗಾಗಬಹುದೋ ಹಾಗಾಗಬಹುದೋ ಎಂದು ಯೋಚಿಸುತ್ತಾರೆ. ಅನಂತರ ನಿರ್ಧಾರವನ್ನು ಮಾಡಿ ಕಾರ್ಯೋನ್ಮುಖರಾಗುತ್ತಾರೆ. ಭಾವನಾಪರವಶತೆಯು, ವಿಚಾರಪರತೆಯು ಹೆಚ್ಚಾದಂತೆಲ್ಲಾ ಮನಸ್ಸಿನಲ್ಲಿ ಕ್ಷೀಣವಾಗುತ್ತದೆ. Sentiment is in inverse proportion to Reasoning ; in its pull on the mind ; ಎನ್ನಬಹುದು.

'ಅಪ್ಪ ಅಳೆದೂ ಸುರಿದೂ ನೋಡುತ್ತಾರೆ. ಮಗ ಅಂತಃಕರಣದಿಂದ ಜಟ್ಟಂತ ಮಾಡುತ್ತಾನೆ' ಎಂದು ಮನೆಯಾಕೆಯು ಗಂಡನನ್ನು ಶ್ಲಾಘಿಸಿದರೂ, ಯುವಕ ಮಗನನ್ನು ಮೆಚ್ಚುತ್ತಾಳೆ. ಹೆಂಗರುಳು ವಿಚಾರಪರತೆಗೆ ಸೊಪ್ಪು ಹಾಕುವುದಿಲ್ಲ. ಪ್ರಕೃತಿನಿಯಮದಲ್ಲಿ ಹೆಣ್ಣು ಭಾವನಾ ಪ್ರೇರಿತೆ ; Emotional. ಗಂಡು ವಿಚಾರ ಪ್ರೇರಿತ, Rationally Motional. ಆದುದರಿಂದ ತಾಯಿಯು ಯುವಕ ಮಗನನ್ನು ಹೆಚ್ಚು ಮೆಚ್ಚುವುದು. ಇಬ್ಬರಿಗೂ ವಯಸ್ಸಿನ ಅಂತರವಿದ್ದರೂ, Sentiment ಮತ್ತು Emotion ಇವುಗಳಲ್ಲಿ ಇಬ್ಬರಿಗೂ ಸಮಾನ ಧರ್ಮವಿರುತ್ತದೆ. ತಾದಾತ್ಮ್ಯವಿರುತ್ತದೆ. ಫ್ರಾಯ್ಡಿನ ಈಡಿಪಸ್ ಕಾಂಪ್ಲೆಕ್ಸನ್ನು ಗಣನೆಗೆ ತೆಗೆದುಕೊಳ್ಳದೇ ಇದ್ದರೂ, ತಾಯಿ ಮಗನ ಪರಸ್ಪರ ಮೆಚ್ಚುಗೆಯನ್ನು ಅರ್ಥಮಾಡಿಕೊಳ್ಳಬಹುದು. ಇದು ವಯಸ್ಸಿನೊಡನೆ ಅನ್ವಯಿಸಿರುತ್ತದೆ, ಎಂಬುದನ್ನು ಮರೆಯಬಾರದು. ಯುವಕ ಮಗನು ವಯಸ್ಕನಾದ ಮೇಲೆ, ಭಾವನಾ ಪ್ರೇರಣೆಯು ಕಡಿಮೆಯಾಗತೊಡಗಿದಂತೆ, ತಾಯಿಯ ತಾದಾತ್ಮ್ಯದ ಅಚ್ಚುಮೆಚ್ಚು ಕಡಿಮೆಯಾಗುತ್ತದೆ. ಆ ವಯಸ್ಸಿನಲ್ಲಿ ವಯಸ್ಕ ಮಗನು ತನ್ನ ಜೀವನಕ್ಕೆ ಅಗತ್ಯವಾದುದರಿಂದ, ಅಚ್ಚುಮೆಚ್ಚು ಹೋಗಿ, ಕೃತಜ್ಞತಾಪೂರ್ವಕ ಆದರವು ಬಹಳಷ್ಟು

ಕಾಣಿಸಿಕೊಳ್ಳುತ್ತದೆ. ಮುದಿತಾಯಿಯು ವಯಸ್ಕ ಮಗನನ್ನು ಆದರಕ್ಕಿಂತ ಹೆಚ್ಚಾಗಿ ಗೌರವಿಸುತ್ತಾಳೆ. ಸಮವಯಸ್ಕರೊಂದಿಗೆ ಮಗನ ಬಗ್ಗೆ ಹೆಮ್ಮೆಯಿಂದ ಬಡಾಯಿ ಕೊಚ್ಚುತ್ತಾಳೆ. ಆದರೆ Emotional Attachment ಅಥವಾ ಭಾವನಾ ಬಂಧನವು ಸಡಿಲಗೊಳ್ಳುತ್ತದೆ.

ವಾಸ್ತವಿಕ ಅರಿವು, ವಯಸ್ಕನಲ್ಲಿ ಸ್ಪಷ್ಟವಾದಾಗ, Reality Principal ಅನ್ನು ಅವ ತಿಳಿದುಕೊಂಡಿದ್ದಾನೆ, ಎನ್ನಬಹುದು. ಅದಕ್ಕೆ ಮುಂಚೆ ಕೇವಲ Pleasure Principle ಅನ್ನು ಅವ ಅನುಭವಿಸುತ್ತಿದ್ದ. ಬಾಲ್ಯದಲ್ಲಿ ಹಾಗೂ ಯೌವನದಲ್ಲಿ, Pleasure Principle, ಅಥವಾ ಸುಖದ ಅನ್ವೇಷಣೆಯು ಪ್ರಮುಖವಾಗಿರುತ್ತದೆ. ಸುಖವು, ತಮೋಪ್ರಧಾನವಾದ Id ಇನ ಬೇಡಿಕೆಗಳನ್ನು ಪೂರೈಸುವುದರಿಂದ ದೊರೆಯಬಹುದು. ಹಾಗೂ ಸತ್–ಚೈತನ್ಯ ಪ್ರಧಾನವಾದ Super - Ego ವಿಗೆ, ತೃಪ್ತಿಯನ್ನೀಯುವ, ಧ್ಯೇಯ ಪ್ರಯತ್ನವೂ ಆಗಿರಬಹುದು. ಆದರ್ಶ ಸಾಧನೆಯ ಯೋಚನೆಯು ಮತ್ತು, ಪ್ರಯತ್ನವೂ ಆಗಿರಬಹುದು. ಇವೆರಡೂ ವಾಸ್ತವಿಕ ಲೋಕದಲ್ಲಿ ಇದ್ದೇ ಇರುತ್ತವೆ. ಆದರೆ Super Ego ಅಥವಾ ಸತ್–ಚೈತನ್ಯಾಂಶವು, ಕನಸಿನಂತೆ ಸಿನಿಮೀಯವಾಗಿರುತ್ತದೆ.

ಈ ವ್ಯತ್ಯಾಸವನ್ನು ವಯಸ್ಕನು ಹಂತ ಹಂತವಾಗಿ ತಿಳಿದುಕೊಳ್ಳುತ್ತಾನೆ Pleasure Principle ಅಥವಾ ಸುಖದ ಪ್ರೇರಣೆಯು ಬಲು ಚೆನ್ನ, ಬಹಳ ಹಿತ ಎಂದುಕೊಂಡಿದ್ದವನು, ಲೌಕಿಕ ಜೀವನದ ವಾಸ್ತವಿಕವಾದ ಕಠೋರ ಸತ್ಯವನ್ನು ಅರಿಯುತ್ತಾನೆ. ಕಷ್ಟ ನಷ್ಟ ; ನೋವು ಸಂಕಟ ; ಮಾನ ಅವಮಾನ ; ಇವೆಲ್ಲವನ್ನೂ ಅನುಭವಿಸುತ್ತಾನೆ. ಆಗ Super - Ego ಅಥವಾ ಸತ್–ಚೈತನ್ಯಾಂಶವು ಬರಿಯ ಕನಸು ಎಂದಂದುಕೊಳ್ಳುತ್ತಾನೆ. ಅದನ್ನು ಮನಸ್ಸಿನ ಮೂಲೆಗೆ ತಳ್ಳಿ ಹಾಕುತ್ತಾನೆ.

Reality Principle, ಅಥವಾ ವಾಸ್ತವಿಕವಾದ ಲೌಕಿಕ ಪ್ರೇರಣೆಯು ಬಾಳಿಗೆ ಅತ್ಯಗತ್ಯವಾದುದು. ಇದೇ ಸತ್ಯ; ಇದೇ ಹಿತ, ಎಂದು ಅಂದುಕೊಳ್ಳುತ್ತಾನೆ.

ಮಾನಸಿಕ ಕಾರ್ಯಕ್ರಮಗಳನ್ನು ವಿಶ್ಲೇಷಿಸತೊಡಗಿದ, ಚಾರ್ವಾಕರು ಈ ನಿರ್ಧಾರವನ್ನು ಮಾಡಿದರು. ಮುಂದುವರೆಯಲು ಅವರಿಗೆ ಆಗ ಯೋಗ್ಯತೆಯು ಇರಲಿಲ್ಲ. 'ಋಣಂ ಕೃತ್ವಾ ಘೃತಂ ಪಿಬೇತ್' ಎಂದರು. ಸಾಲವನ್ನು ಮಾಡಿಯಾದರೂ, ಅದನ್ನು ಮುಂದೆ ತೀರಿಸುವ ಬಗೆ ಹೇಗೆ, ಎಂದು ಯೋಚನೆಯನ್ನು ಮಾಡದೆ, ಘಮಘಮಿಸುವ ತುಪ್ಪವನ್ನು ಗಿಟ್ಟಿಸಿಕೊಳ್ಳಿ ; ತಿನ್ನಿ; ಸುಖಪಡಿ ಇದೇ ಹಿತದ ಬಾಳಿನ ಮರ್ಮ ಎಂದು ತೀರ್ಮಾನಿಸಿದರು. ಭವಿಷ್ಯದ

ಯಾವ ಕಾಳಜಿಯೂ ಅವರನ್ನು ಕಾಡಲಿಲ್ಲ.

ಸಾಲವನ್ನು ಮಾಡಿ ತುಪ್ಪವನ್ನು ಮೆಲ್ಲುವುದು ಹಿತವಾಗಿರಬಹುದು. ಅನಂತರ ಸಾಲ ಕೊಟ್ಟವನು ಬಂದು ಕಾಡತೊಡಗಿದಾಗ, ತುಪ್ಪವನ್ನು ಜತೆಗೆ ರಕ್ತವನ್ನೂ ಕೂಡ ಕಕ್ಕಬೇಕಾಗುತ್ತದೆ. ಲೌಕಿಕ ಜೀವನದಲ್ಲಿ ಇಂತಹ ಅನುಭವಗಳು ಸಾಮಾನ್ಯ. ಸಮಾಜದ ಭದ್ರತೆಗಾಗಲೀ, ವ್ಯಕ್ತಿಯ ನೆಮ್ಮದಿಗಾಗಲೀ, ಚಾರ್ವಾಕರ ಉಪದೇಶವು ವಿರೋಧವಾಗುತ್ತದೆ, ಆಭಾಸವನ್ನುಂಟುಮಾಡುತ್ತದೆ.

Reality Principle ಎಂಬುದು ತಾತ್ಕಾಲಿಕವಾದುದು ಎಂದರ್ಥ ಮಾಡಬಾರದು. ಲೌಕಿಕದ ಬಾಳನ್ನು ಸಂಪೂರ್ಣವಾಗಿ ಗಮನಿಸಬೇಕು. ಈ ವಿಷಯವನ್ನು ಏಕೆ ಉಲ್ಲೇಖಿಸಿದೆ ಎಂದರೆ, ಹಿರಿಯ ಮನನಿಗರು ಹಲವರು, ಮನಸ್ಸಿನ ನೆಮ್ಮದಿಯನ್ನು ಪಡೆಯಲು, ನಿನ್ನೆಯದೆಲ್ಲವನ್ನೂ ಮರೆತು ಬಿಡಬೇಕು; ನಾಳೆಯದರ ಚಿಂತೆಯನ್ನೂ ಮಾಡಬಾರದು. ಇಂದಿನ ಯೋಚನೆಯು ಮಾತ್ರ ಇಂದಿಗಿರಬೇಕು ಎಂದು ಉಪದೇಶಿಸಿದ್ದಾರೆ. ಪರಂಪರಾನುಗತವಾಗಿ ಬೆಳೆದು ಬಂದಿರುವ ಅನುಭವಗಳಿಂದ ಪಾಠಗಳನ್ನು ಕಲಿತು ಪ್ರವೃದ್ಧಿಸಿರುವ, ಮಾನವನ ಮನಸ್ಸು ಹಿಂದಿನದೆಲ್ಲವನ್ನೂ ಮರೆತುಬಿಡಬೇಕು ; ದಿನ ಬೆಳಿಗ್ಗೆ ನಿದ್ರೆಯಿಂದ ಎದ್ದಾಗ, ಈಗ ತಾನೆ ಹುಟ್ಟಿದೆ ಎಂದುಕೊಳ್ಳಬೇಕು ಎಂದರೆ, ಇದು ಸಾಧ್ಯವೇ ? ಎಂದು ಸಂದೇಹವುಂಟಾಗುತ್ತದೆ. ಇಂತಹ ಹಿರಿಯ ಮನನಿಗರು ನುಡಿದ ಉಪದೇಶದಲ್ಲಿ ಅಂತರ್ಗರ್ಭಿತವಾದ ಮತ್ತೆ ಯಾವುದೋ ಗೂಡಾರ್ಥವಿರಬೇಕು!

ವಯಸ್ಕರ ಮನಸ್ಸಿನಲ್ಲಿ Pleasure Principle, ಸುಖಾನ್ವೇಷಣೆಯ ಸೆಳೆತವು, Reality Principle, ವಾಸ್ತವಿಕ ಅರಿವಿನಿಂದ, ತಹಬಂದಿಯಲ್ಲಿರುತ್ತದೆ. Super-Ego ಅಥವಾ ಸತ್–ಚೈತನ್ಯಾಂಶವು ವಾಸ್ತವಿಕ ಅರಿವಿನಿಂದ, ಬಲಹೀನವಾಗುತ್ತದೆ. ನನ್ನ ಗೋಳು, ನನ್ನ ಬಾಳು. ನನಗೇ ಸಾಕಷ್ಟು ಸಂಕಟವನ್ನೀಯುತ್ತಿರುವುದರಿಂದ, ನೆರೆಹೊರೆಯವರ ಅಥವಾ ಸಮಾಜದ ಗೋಳುಕರೆಗೆ ಅಥವಾ ಉದ್ಧಾರಕ್ಕೆ ನಾನೇಕೆ ಒದ್ದಾಡಲಿ, ಎಂಬ ಮನೋಭಾವವು ಬೆಳೆಯುತ್ತದೆ. ಸಮಾಜವನ್ನು ಅಥವಾ ಲೋಕವನ್ನು ಉತ್ತಮಗೊಳಿಸುತ್ತೇನೆ ಎಂಬ ಧ್ಯೇಯವು ಯೌವನದಲ್ಲಿ ಬರಸೆಳೆಯುತ್ತದೆ. ಆದರೆ ವಯಸ್ಕರಲ್ಲಿ ನನ್ನ ಪಾಡನ್ನು ಉತ್ತಮಪಡಿಸಿಕೊಂಡರೆ, ಅಥವಾ ಈಗಿರುವ ಮಟ್ಟದಲ್ಲಿಯಾದರೂ ಕಾಪಾಡಿಕೊಂಡರೆ ಸಾಕು ಎನ್ನುವಂತಾಗುತ್ತದೆ. ಲೋಕವನ್ನು ಅಥವಾ ಸಮಾಜವನ್ನು ಉದ್ಧರಿಸತೊಡಗುವ ತೆವಲು ಹಿಡಿದವರು ಏನನ್ನು ಬೇಕಾದರೂ ಮಾಡಿಕೊಳ್ಳಲಿ. ಅವರವರ ಹುಚ್ಚು ಅವರಿಗೆ ಆನಂದ ; ಎಂದು ತೆಪ್ಪಗಿರುತ್ತಾರೆ.

ವಾಸ್ತವಿಕ ಅರಿವಿನ ದೆಸೆಯಿಂದ, ತನ್ನ ಸಂಸಾರದ ಜವಾಬ್ದಾರಿಯಿಂದಾಗಿ, ವಯಸ್ಕರು, ತಮ್ಮ ದೇಹಾರೋಗ್ಯದ ಬಗೆಗೆ ಕಾತರರಾಗಿರುತ್ತಾರೆ. ನಡುವಯಸ್ಸಿನಲ್ಲಿ ಗೊಟಕ್ ಎಂದರೆ, ಹೆಂಡತಿ ಮಕ್ಕಳು ಬೀದಿಪಾಲಾಗುತ್ತಾರಲ್ಲ ಎಂಬ ಆತಂಕವು ಹಿರಿದಾಗಿ ಕಾಡುತ್ತದೆ. ಹೆಂಗಸರಲ್ಲನಕ, ನಮ್ಮ ಸಂಸ್ಕೃತಿಯಲ್ಲಿ, ನನ್ನ ಮಕ್ಕಳು ಬಲತಾಯಿಯ ಕಾಟವನ್ನು ಅನುಭವಿಸಬೇಕಾಗುತ್ತದಲ್ಲ ಎಂದು ಆತಂಕಪಡುತ್ತಾರೆ. ತಾಕಿದ ಬೇನೆಯು ಮನಸ್ಸಿನ ಈ ಆತಂಕದಿಂದ, ಉಲ್ಬಣಗೊಳ್ಳುತ್ತದೆ. ದೇಹವು ತುಸು ಅನಾರೋಗ್ಯವಾದರೆ ಆತಂಕವು ಪ್ರಾರಂಭವಾಗಿ, ಭಯದಲ್ಲಿ ಪರ್ಯವಸಾನವಾಗಬಹುದು. ಭಯವು ಮನಸ್ಸಿನ ಕಾರ್ಯಗಳನ್ನು ಪಲ್ಲಟಗೊಳಿಸುತ್ತದೆ. ಧೈರ್ಯವು ಕುಗ್ಗುತ್ತದೆ, ಯಾವುದಾದರೂ ಹೊಸ ಉದ್ಯಮವನ್ನು ಅಥವಾ ಕೆಲಸವನ್ನು ಮಾಡಬೇಕಾದರೆ ಧೈರ್ಯವು ಅಗತ್ಯ. ಮಸಲಾ ನಷ್ಟವಾದರೂ ಮುಂದೆ ಸರಿಪಡಿಸಿಕೊಳ್ಳಬಹುದು ಎನ್ನುವ ಕೆಚ್ಚು ಇದ್ದರೆ, ಹೊಸ ಕೆಲಸವನ್ನು ಮಾಡಲು ಯತ್ನಿಸಬಹುದು. ಒಳಗೆ ಸಂದೇಹದ ಪುಕ್ಕಲು ಇದ್ದರೂ, ಆಸೆಯಿಂದ ಉದ್ರೇಕಿತನಾಗಿ ವಯಸ್ಕನು ಹೊಸ ಜಾಡನ್ನು ಹಿಡಿದರೆ, ಯಶಸ್ವಿಯಾಗುವುದೂ ಕಷ್ಟ, ಅನುಮಾನವೇ ಕುತ್ತಾಗುತ್ತದೆ. ಈ ಕಾರಣದಿಂದಾಗಿ, ಯುವಕರು ಧೈರ್ಯದಿಂದ ಮುನ್ನುಗ್ಗುವ ಪ್ರವೃತ್ತಿಯು, ವಯಸ್ಕರಲ್ಲಿ ಬಲು ಪಾಲು ಕಾಣಬರುವುದಿಲ್ಲ. Generation gap ಎನ್ನುವುದಕ್ಕೆ ಈ ವಿಷಯವು ಪುಷ್ಟಿಯನ್ನು ಕೊಡುತ್ತದೆ.

ವಯಸ್ಕರು ಎಂದಾಗ ಪಂಚಾಂಗದ ಪ್ರಕಾರ ಇಷ್ಟು ವಯಸ್ಸಾದವರು ಎಂದು ಸಾಮಾನ್ಯವಾಗಿ ಹೇಳುವುದಾದರೂ ಮಾನಸಿಕವಾಗಿ ಎಷ್ಟು ಬೆಳೆದಿದ್ದಾರೆ ಎನ್ನುವುದು ಮುಖ್ಯ. ಅರವತ್ತು ವಯಸ್ಸಿನ ಮುದಿಯ ಹದಿನೆಂಟರ ಹೋರಿಯಂತೆ ನಡೆದುಕೊಳ್ಳುವುದೂ ಉಂಟು. ಈ ನಗೆಪಾಟಲ ದೃಶ್ಯವನ್ನು ಸಮಾಜದಲ್ಲಿ ಕಾಣುತ್ತೇವೆ, ಅಲ್ಲವೇ?

ಒಟ್ಟಿನಲ್ಲಿ ವಯಸ್ಕರ ಮನಸ್ಸು, ಸ್ವಾವಲಂಬಿಗಳಾದುದರಿಂದ, ಸ್ವಾರ್ಥವೂ ಆಗಿರುತ್ತದೆ. ಸಹಜವಾದ ಅನುಕಂಪವು ಸ್ವಾರ್ಥದಿಂದ ಬಹಳಷ್ಟು ಮರೆಯಾಗಿರುತ್ತದೆ.

ಈ ರೀತಿ ವಯಸ್ಕರಲ್ಲಿ Id ಅಥವಾ ತಮೋಗುಣಪ್ರಧಾನವಾದ ಕಾಮ್ಯಗಳು ಪ್ರಬಲವಾಗಿದ್ದರೂ, ಯುವಕರಲ್ಲಿದ್ದಂತೆ ಉನ್ಮಾದಾವಸ್ಥೆಗೆ ಹೋಗುವುದಿಲ್ಲ. Ego, ನಾನು ಎಂದುಕೊಳ್ಳುವ ಮನಸ್ಸಿನ ಕಲ್ಪನೆಯನ್ನು ಅತಿ ಹುಚ್ಚಾಗಿ ಚಲ್ಲಾಡಿಸುವುದಿಲ್ಲ. ಆಹಾರ, ನಿದ್ರಾ, ಭಯ, ಕಾಮ ಎಲ್ಲವೂ ವಯಸ್ಕರಲ್ಲಿ ರಸಿಕತೆಯ ಮೆರಗನ್ನು

ಮೂಡಿಸಿ, ಕಾಡುತ್ತವೆ. ಇಂತಹ ಊಟವೇ ಬೇಕು. ಈ ರೀತಿಯಲ್ಲಿ ಬಡಿಸಬೇಕು, ಎಂದು ವಯಸ್ಕನು ಹಾತೊರೆಯುತ್ತಾನೆ. ಸ್ವಾವಲಂಬಿಯಾಗಿರುತ್ತಾನೆ, ಸಂಪಾದಿಸುತ್ತಾನೆ. ಅಂದ ಮೇಲೆ ಸ್ವಾರ್ಥವೂ ಅಧಿಕವಾಗಿರುತ್ತದೆ. ಇದೇ ಆಗಬೇಕು ಎನ್ನುವ ಹಟ ಹೆಚ್ಚಾಗುತ್ತದೆ. ನಿದ್ರೆ ಮಾಡುವಾಗಲೂ ಹಾಗೆಯೆ, ಹಾಸಿಗೆಯು ಹೀಗಿರಬೇಕು, ದಿಂಬು ಇಷ್ಟು ಎತ್ತರವಿರಬೇಕು ಎಂದು ಆಶಿಸುತ್ತಾನೆ. ಕ್ಯಾಂಪಿನಲ್ಲಿ ಯುವಕರು ಜಮಖಾನದ ಮೇಲೆ ಮಲಗಿ ಸುಖವಾಗಿ ನಿದ್ರಿಸುವಂತೆ ವಯಸ್ಕರು ಮಾಡಲಾರರು. ಭಯದ ವಿಷಯವನ್ನು ಆಗಲೇ ಪ್ರಸ್ತಾಪಿಸಲಾಗಿದೆ. ಕಾಮದ ವಿಷಯದಲ್ಲಿಯೂ ವಯಸ್ಕರ ರಸಿಕತೆಯೇ ಬೇರೆ. ಯುವಕರ ಅವಸರವೇ ಬೇರೆ.

Ego ಅಥವಾ ನಾನು ಎಂದುಕೊಳ್ಳುವ ಮನಸ್ಸಿನ ಅಂಶವು ಪ್ರಬಲವಾಗಿರುತ್ತದೆ. ಅನುಕಂಪದಿಂದ ಹರಡಿದ ಧ್ಯೇಯವಾದಿ ಆದರ್ಶಗಳು, ಯುವಕರನ್ನು ಪ್ರೇರಿಸುವಂತೆ, ವಯಸ್ಕರನ್ನು ಸೆಳೆದು ನಡಸುವುದಿಲ್ಲ 'ನಾನು' ಎಂದುಕೊಳ್ಳುವ ಮಮಕಾರದ ಕೋಟೆಯು ವಯಸ್ಕರಲ್ಲಿ ಸದೃಢವಾಗುತ್ತದೆ. ಆದಕಾರಣ ಸ್ವಾರ್ಥವು ವಯಸ್ಕರಲ್ಲಿ ಅತಿಯಾಗಿರುತ್ತದೆ. ಲೋಕಾನುಭವವು ಹೆಚ್ಚಾಗಿರುವುದರಿಂದ, ಸ್ವಾರ್ಥಕ್ಕಾಗಿ ಮಾಡುವ ಕೆಲಸ ಕಾರ್ಯಗಳಿಗೆ, ಪರಾರ್ಥಕ್ಕಾಗಿ ಮಾಡುತ್ತಿದ್ದಾರೆ, ಎನ್ನುವ ನಂಬಿಕೆಯನ್ನು ಇತರರಲ್ಲಿ ಮೂಡಿಸುತ್ತಾರೆ. ಮಮಕಾರದ ಕೋಟೆಯು ಭದ್ರವಾಗತೊಡಗುವುದರಿಂದ, ಹೊನ್ನು, ಹೆಣ್ಣು, ಮಣ್ಣು ; ಇವುಗಳಿಗಿಂತ ಸಮಾಜದಲ್ಲಿ ಮನ್ನಣೆಯನ್ನು ಪಡೆಯಬೇಕು ; ಗಣ್ಯ ಎಂದೆನಿಸಿಕೊಳ್ಳಬೇಕು. ಎನ್ನುವ ಹಂಬಲವು ಅತಿಯಾಗಿರುತ್ತದೆ, ಸಾರ್ವಜನಿಕ ಸಭೆಯಲ್ಲಿ ಅಗ್ರಪಂಜ್ತಿಯಲ್ಲಿ ತನ್ನನ್ನು ಕೂರಿಸಲಿಲ್ಲ ಎನ್ನುವ ಕೊರಗು ವಯಸ್ಕರನ್ನು ಕಾಡುವಂತೆ ಯುವಕರನ್ನು ಕಾಡುವುದಿಲ್ಲ. ಆದುದರಿಂದ ಡಿ.ವಿ.ಜಿ. ಯವರು 'ಅನ್ನದಾತುರಕಿಂತ ಚಿನ್ನದಾತುರ ತೀಕ್ಷ್ಣ ; ಚಿನ್ನದಾತುರಕಿಂತ ಹೆಣ್ಣು ಗಂಡೊಲವು; ಮನ್ನಣೆಯದಾಹವೀಯೆಲ್ಲಕಂ ತೀಕ್ಷ್ಣತಮ ; ತಿನ್ನುವುದದಾತ್ಮವನೆ ಮಂಕು ತಿಮ್ಮ' ಎಂದು ನುಡಿದರು. ಮನ್ನಣೆಯ ದಾಹವು ತೀಕ್ಷ್ಣ ತಮವಾಗಿ, ಆತ್ಮವನು ಎಂದರೆ ಸತ್–ಚೈತನ್ಯಾಂಶವಾದ Super-Egoವನ್ನು ಮರೆಮಾಚಿ ಬಿಡುವುದು. ಇದು ವಯಸ್ಕರಲ್ಲಿ ಕಾಣಬರುವ ಪ್ರವೃತ್ತಿ. ಎಲ್ಲ ನಾಲ್ಕು ಆತುರಗಳು ಎಲ್ಲರಲ್ಲಿಯೂ ಕಂಡುಬಂದರೂ, ಬಾಲ್ಯದಲ್ಲಿ ಅನ್ನದಾತುರವು ಹೆಚ್ಚು. ಯೌವನದಲ್ಲಿ ಹೆಣ್ಣು–ಗಂಡೊಲವು ವಯಸ್ಕರಲ್ಲಿ, ಚಿನ್ನ ಅದಕ್ಕೂ ಮಿಗಿಲಾಗಿ ಮನ್ನಣೆಯ ಆತುರವು ಹೆಚ್ಚು.

Super-Ego ಅಥವಾ ಸತ್–ಚೈತನ್ಯಾಂಶವು ವಯಸ್ಕರಲ್ಲಿ ಅತಿ ಮಂದವಾಗಿರುತ್ತದೆ. ಆದರೂ ಇದ್ದೇ ಇರುತ್ತದೆ. 'ನಾನು' ಎಂದುಕೊಳ್ಳುವ Egoವನ್ನು ಚುಚ್ಚುತ್ತಲೇ ಇರುತ್ತದೆ. ಸ್ವಾರ್ಥಕ್ಕಾಗಿ, ಸ್ಪರ್ಧಾ ಸಮಾಜದಲ್ಲಿ ಅಗತ್ಯವಾಗಿ ನಡೆಸಬೇಕಾದ, ಮೋಸ. ತಟವಟ, ಸುಳ್ಳು, ಚಾಡಿ ; ಇತ್ಯಾದಿಗಳನ್ನು ಮಾಡಿರುತ್ತಾನೆ. ಆ ರೀತಿ Ego ವನ್ನು ಹಿತವಾಗಿಸುತ್ತಾನೆ. ಆದರೆ ಹಾಗೆ ಮಾಡಿದ್ದು ವಿಹಿತವಲ್ಲ ಎನ್ನುವ ಅಪರಾಧ ಮನೋಭಾವವು ಕುಕ್ಕುತ್ತಲೇ ಇರುತ್ತದೆ. ಒಳಗೇ ಕುಕ್ಕುತ್ತಿರುವ ಈ ಕಾಟವನ್ನು ತಪ್ಪಿಸಿಕೊಳ್ಳಲು ವಯಸ್ಕರು, ದೇವರು ದಿಂಡರು ; ಭಕ್ತಿಭಜನೆ; ತೀರ್ಥಯಾತ್ರೆ ; ದಾನ ಧರ್ಮ ; ಇತ್ಯಾದಿಗಳಲ್ಲಿ ನಿರತರಾಗುತ್ತಾರೆ. ಸ್ವಲ್ಪ ಸಮಾಧಾನವನ್ನು ಪಡೆಯುತ್ತಾರೆ. ಉಲ್ಬಣವಾದ ಬೇನೆಯು ಮನೆಯಲ್ಲಿ ಕಾಣಿಸಿಕೊಂಡ ಕೂಡಲೇ ಮನೆದೇವರಿಗೆ ಮುಡುಪು ಕಟ್ಟಿಡುತ್ತಾರೆ. ಈ ಕಿರುಲಂಚದಿಂದ ಮನೆದೇವರು ತೃಪ್ತನಾಗಿ ಬೇನೆಯನ್ನು ವಾಸಿಮಾಡುತ್ತಾನೆ ಎಂದೇನಲ್ಲ. ಹಾಗೆ ಮುಡುಪನ್ನು ಕಟ್ಟಿಟ್ಟರೆ, ವಯಸ್ಕರ ಮತ್ತು ಮನೆಯ ಮುದುಕರ ಮನಸ್ಸಿನ ಆತಂಕವು ಸ್ವಲ್ಪ ಶಮನವಾಗುತ್ತದೆ. ಈ ಕಾರಣದಿಂದ, ಮುಡುಪು ಕಟ್ಟಿಡುವುದನ್ನು ಕಂಡು ಅನುಭಾವೀ ವೈದ್ಯರುಗಳು ಮೂದಲಿಸುವುದಿಲ್ಲ. ಮನೆಯವರ ಮನಸ್ಸಿಗೆ ನೆಮ್ಮದಿಯು ದೊರೆಯುವಂತಾಗುವುದು ಮುಖ್ಯ. ಮನೆ ದೇವರಿಗೆ ಮುಡುಪು ಕಟ್ಟಿಡುವುದರಿಂದ ನೆಮ್ಮದಿಯು ಉಂಟಾಗುವುದಾದರೆ, ನಿರುಪದ್ರವಿಯಾದ ಆ ಕಾರ್ಯವನ್ನು ಏಕೆ ಮಾಡಬಾರದು ?

ಮನಸ್ಸಿಗೆ ಆತಂಕವು ಹೆಚ್ಚಿದಾಗ, ತುಸು ನೆಮ್ಮದಿಯನ್ನು ಕೆಲವರಿಗೆ ನೀಡುವ ಇಂತಹ ಆಚರಣೆಯನ್ನು ಮೂಢನಂಬಿಕೆ ಎಂದು ಇತರರು ಹೀಯಾಳಿಸಬಹುದು. ಹೀಗೆ ಹೀಯಾಳಿಸುವವರು ಮೂಢರೋ ಏನೋ ಎಂಬ ಸಂಶಯವು ಬಂದರೆ ಆಶ್ಚರ್ಯವಲ್ಲ. ಇಂತಹ ಆಚರಣೆಗಳನ್ನು ಬಾಲ್ಯದಲ್ಲಿ ಕಂಡಿರುತ್ತೇವೆ. ಯೌವನದ ಉತ್ಸಾಹದಲ್ಲಿ ಪ್ರಾಮುಖ್ಯತೆಯನ್ನು ಕೊಡುವುದಿಲ್ಲ. ವಯಸ್ಕರಾದಾಗ ಬಾಳಿನ ಝುಂಝೂಟದಲ್ಲಿ ಮೈಮನಗಳನ್ನು ತರಚಿಕೊಂಡಾಗ, ಬಾಲ್ಯದಲ್ಲಿ ಕಂಡಿದ್ದ, ಆಚರಣೆಗಳನ್ನು ನಡಸುತ್ತೇವೆ. ಆತಂಕವು ಮೂಡಿದಾಗ ಮನಸ್ಸಿನ ವಿಚಾರಪರ ಅಂಶವು ತೆಪ್ಪಗಾಗುತ್ತದೆ.

Super-Ego ಅಥವಾ ಸತ್–ಚೈತನ್ಯಾಂಶ ಪ್ರಭಾವದಿಂದ, ಭಕ್ತಿ ಮತ್ತು ಮೂಢನಂಬಿಕೆಗಳು ಉಂಟಾಗಬಹುದು ಎನಿಸುತ್ತದೆ. ಏಕೆಂದರೆ ಆಗ ವಿಚಾರಪರ ಮನಸ್ಸಿನ ಅಂಶವು, 'ನಾನು' ಸೋತೆ. ಕಲಿತಿರುವ ಜ್ಞಾನದಿಂದ, ಮುಂದೆ ಏನನ್ನೂ ಮಾಡಲಾರೆ. ಮುಂದೆ ಆಗಬಹುದಾದುದನ್ನು ಅನುಭವಿಸಲೇ ಬೇಕು. ಆದರೆ

ಸತ್–ಚೈತನ್ಯಾಂಶದ ಆದಿಮೂಲವು ನನ್ನ ನೆರವಿಗೆ ಬಂದು, ಆಗಬಹುದಾದ ದುಃಖವನ್ನು ತಪ್ಪಿಸಬಹುದು. ಈ ರೀತಿ ವಿಚಾರಮಾಡಿ, ವಿಚಾರಪರ ಮನಸ್ಸಿನ ಅಂಶವು. ತನ್ನನ್ನು ತಾನೇ ಸ್ತಬ್ಧಗೊಳಿಸುತ್ತದೆ. ಮನಸ್ಸಿನ ವಿಚಾರಪರ ಅಂಶವು ತಾನಾಗಿಯೇ 'ಬಲಿ'ಯಾಗುತ್ತದೆ. ಚಿತ್ತವೃತ್ತಿ ನಿರೋಧಃ ಎಂದು ಪತಂಜಲಿ ಮಹರ್ಷಿಗಳೂ ಯೋಗವನ್ನು ವಿವರಿಸುವಾಗ ಹೇಳಿದುದು, ಈ ದೃಷ್ಟಾಂತದಿಂದಲೂ ಸಮರ್ಥನೀಯವಾಗಿದೆ. ಆದರೆ ಮತ್ತೂ ಹೆಚ್ಚಿನ ವಿಶಾಲ ಅರ್ಥವುಳ್ಳ ಆ ವಾಕ್ಯವನ್ನು ಮುಂದೆ ಅಭ್ಯಾಸ ಮಾಡೋಣ. ಅರಿಯಲು ಪ್ರಯತ್ನಿಸೋಣ.

ವಯಸ್ಕರ ಮನಸ್ಸಿನಲ್ಲಿ ಕಾರ್ಯಕ್ರಮಗಳು ಹೇಗೆ ನಡೆಯುತ್ತವೆ ಎಂಬುದನ್ನು ಸ್ಥೂಲವಾಗಿ ತಿಳಿದೆವು. ಇವಕ್ಕೆಲ್ಲಾ ಸ್ವಾರ್ಥವು ಪ್ರಮುಖವಾದ ಪ್ರೇರಣೆಯೆಂಬುದನ್ನೂ ಅರಿತೆವು. ಬಾಳ ಅನುಭವವು, ವಿಚಾರಪರ ಮನಸ್ಸಿನ ಅಂಶದಿಂದ ನೆರವು ಪಡೆದು, 'ನಿನ್ನ ನೀ ಕಾಪಾಡಿಕೊ ಇತರರನ್ನು ಭಗವಂತ ರಕ್ಷಿಸುತ್ತಾನೆ' ಎಂಬ ಪಾಠವನ್ನು ಚಚ್ಚಿ ಬಡಿದು ಕಲಿಸಿರುತ್ತದೆ. ಸ್ವಂತ ಸಂರಕ್ಷಣೆಯನ್ನು ಸಮಾಜದಲ್ಲಿದ್ದುಕೊಂಡೇ, ಮಾಡಿಕೊಳ್ಳುವಾಗ, ವಯಸ್ಕರಲ್ಲಿ ಹಲವಾರು ವಿಚಿತ್ರ ನಡವಳಿಕೆಗಳು ಕಾಣಬರುತ್ತವೆ.

ಒಂದು–ನಾನು, ನಾನಿದ್ದರೆ, ತಾನೇ ಈ ಬಾಳು, ಈ ಲೋಕ, ಈ ಸಮಾಜ, ಈ ಸಂಸಾರ. ಅಂತಹ ನನ್ನನ್ನು, ನಾನೇ, ನನಗಿರುವ ವಿಚಾರ ಮಾಡುವ ಮನಸ್ಸಿನಿಂದ ಸಾಧಿಸಲೇಬೇಕು. ನನಗೆ ಯಾರೂ ನೆರವಾಗುವುದಿಲ್ಲ. ಈ ಯೋಚನೆಯಿಂದ ಯಾರನ್ನೂ ನಂಬದೆ, ಬಾಳುವವರು ಕೆಲವರು.

ಎರಡು–ನಾನು ಇರಬೇಕಾದರೆ, ಸಮಾಜ ಮತ್ತು ಸಂಸಾರವು ನೆರವಾಗಲೇ ಬೇಕು. ಬಾಲ್ಯದಲ್ಲಿ ತಾಯ್ತಂದೆಯರು, ಅಥವಾ ಪೋಷಕರು ಹೀಗೆ ನೆರವಾದರು, ಮುಂದೆಯೂ ಹೀಗೆಯೇ ಆಗಬೇಕು. ಆದಕಾರಣ, ಸ್ವಾರ್ಥಕ್ಕಾಗಿಯಾದರೂ ಪರಾರ್ಥ ಹಿತವನ್ನು ಆಗ ಮಾಡಬೇಕು ; ಎನ್ನುವವರು ಕೆಲವರು.

ಮೂರು–ನಾನು ಮತ್ತು ನನ್ನ ಸುಖವನ್ನು ಹಾಗೂ ಹಿತವನ್ನು ನಡಸಿಕೊಡಬೇಕಾದರೆ, ಲೌಕಿಕವಾದ ಸಮಾಜ ಮತ್ತು ಸಂಸಾರವು ಹೆಚ್ಚು ಪ್ರಯೋಜಕವಾಗುವುದಿಲ್ಲ. ಆದಕಾರಣ, ಬ್ರಹ್ಮಾಂಡವನ್ನು ನಡಸುವ ಅವ್ಯಕ್ತವಾದ ಆದಿ ಮೂಲಕ್ಕೆ ಶರಣಾಗುವುದು ಲೇಸು. ಅದು ನನ್ನನ್ನು ರಕ್ಷಿಸುತ್ತದೆ ಎಂದು ನಿರ್ಧರಿಸಿ, ಅದರಂತೆ ನಡೆಯುವವರು ಹಲವಾರು ಮಂದಿ. ಶರಣಾಗತರು, ಶರಣರು.

ನಾಲ್ಕು–ನಾನು ಮತ್ತು ನನ್ನ ವಿಹಿತವನ್ನು ನಾನೇ ಸಾಧಿಸಿಕೊಳ್ಳಬೇಕು. ಯಾವ ಹೊರಗಿನದೂ, ನನ್ನ ನೆರವಿಗೆ ಬರುವುದಿಲ್ಲ. ಆದಕಾರಣ ನನ್ನನ್ನು ನಾನು ನಿಸ್ಸಂಶಯವಾಗಿ ನಂಬಬೇಕು. ಹೀಗೆ ನಂಬಬೇಕಾದರೆ 'ನಾನು' ಎನ್ನುವುದು ಯಾವುದು? ಅದರ ಸ್ವರೂಪವೇನು ? ಲಕ್ಷಣಗಳೇನು ? ಎಂಬುದನ್ನು ವಿಚಾರಪರ ಮನಸ್ಸಿನಿಂದ ಅರಿತುಕೊಳ್ಳಬೇಕು, ಹೀಗೆ ವಿಚಾರಪರ ಮನಸ್ಸನ್ನು ಅತ್ಯದ್ಭುತವಾಗಿ ಬಳಸಿ, **'ಅದೇ ನಾನು'** ಎಂದು ನಿರ್ಧರಿಸುವ ಅಲ್ಪಸಂಖ್ಯಾತರು ಕೆಲವರು. **ಅದು** ಮತ್ತು **ನಾನು** ಎಂಬ ಭೇದವನ್ನು ಅಳಿಸುವವರು.

ಐದು–ನಾನು ನನ್ನ ಹಿತಕ್ಕಾಗಿ ಯತ್ನಿಸುತ್ತೇನೆ. ಅದೂ ನನ್ನ ಹಿತವನ್ನು ಕರುಣಿಸುತ್ತದೆ. ನನಗೂ 'ಅದ'ಕ್ಕೂ ನಿಕಟವಾದ ಗಂಟು ಮತ್ತು ನೆಂಟು ಇದೆ. ಆದರೆ ನಾನು **'ಅದು'** ಆಗಲಸಾಧ್ಯ. ಆದಕಾರಣ **'ಅದು'** ವನ್ನು ಎಂದೆಂದಿಗೂ ನಂಬಿ ಈ ಜನ್ಮದ ಬಾಳನ್ನು ಆದಷ್ಟು ಹಿತವಾಗಿ ನಡಸಿಕೊಳ್ಳಬೇಕು ; ಎಂದು ತೀರ್ಮಾನಿಸುವವರು ಕೆಲವರು.

ವಯಸ್ಕರ ಮನಸ್ಸಿನ ಕಾರ್ಯಕ್ರಮದಲ್ಲಿ ಏನೆಲ್ಲಾ ವೈವಿಧ್ಯ !

**ಮುಪ್ಪಿನಲ್ಲಿ ಮನಸ್ಸಿನ ಕಾರ್ಯಕ್ರಮ**

ಮುಪ್ಪಿನಲ್ಲಿ ದೇಹದಾರ್ಢ್ಯವು ಇಳಿಮುಖವಾಗಿರುತ್ತದೆ. ತಿನ್ನಬೇಕು ಎನ್ನುವ ಚಪಲವು ಉಳಿದಿದ್ದರೂ, ತಿಂದ ಮೇಲೆ ಜೀರ್ಣವಾಗದೆ ನರಳಬೇಕಾಗುತ್ತದಲ್ಲ ಎನ್ನುವ ಭಯವು ತಡೆಯುತ್ತದೆ. ಇದರಂತೆಯೇ ಇತರ ಕಾಮ್ಯಗಳು. ದೇಹವು ಶಕ್ತಿಯನ್ನು ಕಳೆದುಕೊಳ್ಳುವಂತೆ, ಮನಸ್ಸೂ ಚುರುಕನ್ನು ಸಾಮಾನ್ಯವಾಗಿ ಕಳೆದುಕೊಳ್ಳುತ್ತದೆ. ತುಂಬಾ ವಿರಳವಾಗಿ ಕೆಲವರ ಮನಸ್ಸು ಮುಪ್ಪಿನಲ್ಲಿ ಕೂಡ ಚುರುಕಾಗಿರುವುದುಂಟು.

Id ಇನ ಕಾಮ್ಯಗಳ ಸೆಳೆತವು, ದೇಹದ ನಿರ್ಬಲತೆಯಿಂದಾಗಿ, ಕಡಿಮೆಯಾಗುತ್ತ ಹೋಗುತ್ತದೆ. ಆದರೆ ಯೌವನ ಮತ್ತು ವಯಸ್ಕನಾಗಿದ್ದಾಗ ಅನುಭವಿಸಿದ ಕಾಮ್ಯ ಕಾರ್ಯಗಳ ನೆನಪು ಹಸಿರಾಗಿ ಉಳಿದಿರುತ್ತದೆ. ಅವುಗಳ ಸ್ಮರಣೆಯು ಮುಪ್ಪಿನಲ್ಲಿ ತುಂಬಾ ಸುಖವನ್ನು ನೀಡುತ್ತದೆ. ತುರುಬು ನೆನಸಿಕೊಳ್ಳುವುದಕ್ಕಿಂತ ಇತರ ಯಾವುದು ತಾನೇ ಹೆಚ್ಚು ಹಿತವಾಗಿರುತ್ತದೆ ! ಮುಪ್ಪಿನಲ್ಲಿ.

ಕೆಲವು ಮುಪ್ಪಿಗರಲ್ಲಿ Id ಇನ ಕಾಮ್ಯ ಪ್ರೇರಕಗಳು ಸ್ಮರಣೆಯಿಂದ ತೃಪ್ತಿಗೊಳ್ಳುವುದಿಲ್ಲ. ಆದರೆ ನಿರ್ಬಲವಾದ ದೇಹವು ಆಶಿಸಿದಂತೆ ಆಡಲು

ಸಮರ್ಥವಾಗಿರುವುದಿಲ್ಲ. ಜತೆಗೆ ಸಮಾಜದಲ್ಲಿ ಸ್ವಲ್ಪಮಟ್ಟಿಗೆ ಮನ್ನಣೆಯನ್ನೂ ಪಡೆದಿರುತ್ತಾನೆ. ಆದಕಾರಣ, ಮನ್ನಣೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಯಾವುದನ್ನು Id ಇನ ಪ್ರೇರಣೆಯಿಂದ ಮಾಡಿದರೂ, ಗುಪ್ತವಾಗಿ ಮಾಡುತ್ತಾನೆ.

ರಸ್ತೆಯಂಚಿನಲ್ಲಿ, ಚರಂಡಿಯ ಪಕ್ಕದಲ್ಲಿ, ಸಂಜೆಯ ಹೊತ್ತಿನ ವೇಳೆಗೆ ಬೋಂಡಾ ಮತ್ತು ವಡೆಗಳನ್ನು ಕರಿಯುವ ಅಂಗಡಿಗಳಿರುವುದಿಲ್ಲವೆ ? ಅವುಗಳ ಘಮಘಮವು ರಸ್ತೆಯಲ್ಲಿ ಪಸರಿಸುತ್ತದೆ. ಆದರೆ ತುಸು ಮನ್ನಣೆಯನ್ನು ಸಮಾಜದಲ್ಲಿ ಗಳಿಸಿಕೊಂಡ, ವಿಶ್ರಾಂತಿವೇತನವನ್ನು ಪಡೆದ ಬಡ ಶಾಲಾ ಮಾಸ್ತರು ಅಂತಹ ಅಂಗಡಿಗಳ ಬಳಿಯಲ್ಲಿ ನಿಂತು, ಬೋಂಡಾವನ್ನು ಕೊಂಡು ತಿನ್ನಲು ಹಿಂತೆಗೆಯುತ್ತಾನೆ. ಆದರೆ ಆಸೆಯು ಬಿಡದು. ಮೊಮ್ಮಕ್ಕಳ ನೆಪವನ್ನು ಹೂಡಿ, ಅವರಿಗೋಸ್ಕರ ಎಂದು ಹೇಳಿಕೊಂಡು, ಕೊಳ್ಳುತ್ತಾನೆ. 'ತುಂಬಾ ಖಾರ ಇಲ್ಲವಲ್ಲಪ್ಪಾ! ಮೊಮ್ಮಗು ಕೇಳಿತು,' ಎಂದು ಅಂಗಡಿಯವನಿಗೆ ಹೇಳುತ್ತಾನೆ. ಅಂಗಡಿಯವರು ನಂಬುವುದಿಲ್ಲ ಎಂದು ಮಾಸ್ತರಿಗೂ ಗೊತ್ತು. ಆದರೂ ತನಗೆ ತಾನೇ ಮೋಸ ಮಾಡಿಕೊಂಡು, ಪೊಟ್ಟಣವನ್ನು ಕಟ್ಟಿಸಿಕೊಂಡು, ಪಾರ್ಕಿನ ನಿರ್ಜನ ಮೂಲೆಯಲ್ಲಿ ತಿನ್ನುತ್ತಾನೆ. ಕಟ್ಟಿದ ಕಾಗದದಲ್ಲಿ ಬಾಯೊರೆಸಿಕೊಂಡು, ಕಣ್ಣು ಮುಚ್ಚಿಕೊಂಡು ಹಾಲು ಕುಡಿದ ಬೆಕ್ಕಿನಂತೆ ಮನೆಗೆ ಹಿಂತಿರುತ್ತಾನೆ.

ಕಾಮದ ವಿಷಯದಲ್ಲನಕ ಅವನ ನಡವಳಿಕೆಯು ಅತಿ ವಿಚಿತ್ರವಾಗಿರುತ್ತದೆ. ಭಗವದ್ಗೀತೆಯ ಪುಸ್ತಕದ ರಟ್ಟಿನಲ್ಲಿ ವಾತ್ಸಾಯನನ ಚಿತ್ರಗಳನ್ನು ಮರೆಮಾಚಿಟ್ಟುಕೊಂಡು ಕಳ್ಳತನದಲ್ಲಿ ನೋಡುತ್ತಾನೆ. ಹೆಂಗಸರು ಸ್ನಾನ ಮಾಡುವ ಕೆರೆಯ ಪಕ್ಕದ ತುಳಸಿವನದಲ್ಲಿ ಕುಳಿತು, ಜಪ ಮಾಡಲು ಕುಳಿತಿರುತ್ತಾನೆ. ಅರೆಮುಚ್ಚಿದ ಕಣ್ಣು, ಸ್ನಾನ ಮಾಡುವವರ ಮೇಲೆ ಹರಿದಿರುತ್ತದೆ. ಮೂರನೆಯ ಮಹಡಿಯಲ್ಲಿರುವ ಷಹರಿನ ಮುದುಕ, ಎದುರು ಮನೆಯ ಎರಡನೆಯ ಮಹಡಿಯ ಕಿಟಕಿಯನ್ನು ವೀಕ್ಷಿಸುತ್ತಾನೆ. ಆ ಕಿಟಕಿಯಲ್ಲಿ ಕಂಡುದುದು ಅವನ Id ಅನ್ನು, ಯಾವ ತೆರನ ದೇಹದ ಪ್ರಯಾಸವೂ ಇರದೆ, ಶಮನಗೊಳಿಸುತ್ತದೆ. Voyuerism ಎನ್ನುವ ಇಂತಹ ನಡವಳಿಕೆಗಳು ಮುಪ್ಪಿಗರಲ್ಲಿ ಹೆಚ್ಚಾಗಿರುತ್ತದೆ. ಅಂದರೆ ಇತರ ಯುವಕರಲ್ಲಿ ಅಥವಾ ವಯಸ್ಕರಲ್ಲಿ ಇರುವುದಿಲ್ಲ ಎಂದೇನೂ ಅಲ್ಲ. ಆದರೆ ಮುದುಕರಲ್ಲಿ ಇಂತಹವರ ಸಂಖ್ಯೆಯು ಬಹಳಷ್ಟು ಹೆಚ್ಚಾಗಿರುತ್ತದೆ. 'ಎಳೆಯ ಬಾಲಕಿಯರ ಮೇಲೆ ಅತ್ಯಾಚಾರ' ಎಂಬ ಶಿರೋನಾಮೆಯಲ್ಲಿ ಪ್ರಕಟವಾಗುವ ಪತ್ರಿಕಾ ಸುದ್ದಿಗಳಲ್ಲಿ ಮುಪ್ಪಿಗರು ಹೆಚ್ಚು ಪಾತ್ರವನ್ನು ವಹಿಸಿರುತ್ತಾರೆ.

ಅಂದರೆ, ಮುಪ್ಪಿನಲ್ಲಿ Id ಇನ ಪ್ರಭಾವವು, ದೇಹದ ಶಿಥಿಲತೆಯಿಂದ

ಕಡಿಮೆಯಾಗಿದ್ದರೂ. ನಾಶವಾಗಿರುವುದಿಲ್ಲ. ಸಾಮಾನ್ಯವಾಗಿ ಹಳೆಯ ಸುಖದಾಯಕ ನೆನಪುಗಳನ್ನು ಮೆಲಕುಹಾಕುತ್ತ Id ಸಮಾಧಾನವನ್ನು ಹೊಂದುತ್ತದೆ. ಆದರೆ ಮತ್ತೆ ಕೆಲವರಲ್ಲಿ, ವಿಚಿತ್ರವಾದ ಮತ್ತು ಅಸಹ್ಯವೂ ಆದ ನಡವಳಿಕೆಗಳನ್ನು ಪ್ರೇರಿಸುತ್ತದೆ. ಇಂತಹ ಮುದುಕರಲ್ಲಿ ಮನಸ್ಸಿನ ಸತ್–ಚೈತನ್ಯಾಂಶವು, Super-Ego ವು ಬಹಳ ಮಂದವಾಗಿರುತ್ತದೆ, ಸಡಿಲವಾಗಿಯೂ ಇರುತ್ತದೆ. ಆದುದರಿಂದ ಅವರುಗಳ ಮನಸ್ಸು ಯದ್ವಾತದ್ವಾ ನಡೆಯುತ್ತದೆ. ಮಾನಸಿಕ ಪಲ್ಲಟವು ಇಂತಹುದೇ. ಸಮಾಜ ವಿಚ್ಛಿದ್ರಕ ಕಾರ್ಯಗಳನ್ನು ಮಾನಸಿಕ ಪಲ್ಲಟವಾದವರು ನಡೆಸುತ್ತಾರೆ. ಮುಪ್ಪು ಅಡರಿರುವ ಅಪರಾಧಿಗಳನ್ನು ಕಂಡಾಗ, ಅವರುಗಳ ಮನಸ್ಸಿನಲ್ಲಿರುವ ಭೂತಗಳು ರೀತಿ ಚೇಷ್ಟೆಯನ್ನು ಮಾಡಿಸುತ್ತವೆ ಎಂಬುದನ್ನು ಮರೆಯಬಾರದು.

ಮಾನವನ ಪ್ರಗತಿ ಹೊಂದಿದ ಮನಸ್ಸಿನಲ್ಲಿ Id ಎಂಬುದು ಅತ್ಯಗತ್ಯವಾದ ಅದ್ಭುತವಾದ ಭೂತ, ಪಿಶಾಚಿ, ಬ್ರಹ್ಮರಾಕ್ಷಸ, ಹಾಗೂ ಮೋಹಿನಿ ದೆವ್ವ. ಅವು ಆಡಿಸಿದಂತೆ ಮಾನವನು ಚೆಲ್ಲಾಡುತ್ತಾನೆ. ರಕ್ಷಣೆಯಿತ್ತ ಸಮಾಜವನ್ನು ಹುಚ್ಚನಂತೆ, ತುಂಡರಿಸಲು ಯತ್ನಿಸುತ್ತಾನೆ. ಪ್ರಗತಿ ಹೊಂದುತ್ತಿರುವ ಮಾನವನ ಮನಸ್ಸಿನಲ್ಲಿ ಸತ್–ಚೈತನ್ಯಾಂಶವೂ Super-Ego ವೂ ವೃದ್ಧಿಸುತ್ತವೆ. ಅಭಿವೃದ್ಧಿಸುತ್ತವೆ. ಇವನ್ನು ದೇವತೆಗಳು, ಸುರರು, ಅ–ಮೃತರು, ಎನ್ನಬಹುದು. ಈ ಶಕ್ತಿಗಳೂ ಅತ್ಯಗತ್ಯ, ಉದ್ಧಾರಕ್ಕೆ. ಇವೂ ಅದ್ಭುತ. ಇವಕ್ಕೆ ಸಮಾಜದ ಹಿತ ವಿಹಿತ ಸಾಧನೆಯೇ ಧ್ಯೇಯ ಮತ್ತು ಆಶಯ.

ಈ ಸುರರು, ಸಾಕಷ್ಟು ಪ್ರಬಲವಾಗಿ, ಮಾನವನ ಮನಸ್ಸಿನಲ್ಲಿ, ಹುಟ್ಟಿದಂದಿನಿಂದಲೂ ರೂಢಿಸಲ್ಪಡದಿದ್ದರೆ, ಬೆಳೆಯದೆ ಇದ್ದರೆ, ಆಗ Id ಇನ, ತಮೋಗುಣದ ಪ್ರಭಾವವು ಹೆಡೆಯೆತ್ತುತ್ತದೆ. Ego ವನ್ನು ಪಿಶಾಚಿಗಳಂತೆ ಜಗ್ಗಾಡಿಸುತ್ತವೆ. Egoವಿಗೆ ದೇಹವೇ ಉತ್ಸವ ವಿಗ್ರಹ. ಮೂಲವಿಗ್ರಹವು, ಗರ್ಭಗುಡಿಯಲ್ಲಿ ಸುರಕ್ಷಿತವಾಗಿರಲಿ, ದೇಹದಿಂದಲೇ, ಅದನ್ನು ನಡಸುವ ಮನಸ್ಸಿನಿಂದಲೇ, ತಾನು ಸಮಾಜದಲ್ಲಿ ಪ್ರತಿಷ್ಠಿತನಾಗುವುದು, ಎಂದು Ego ಅಂಶವು, –ಮಮಕಾರವು–ನಿರ್ಧರಿಸುತ್ತದೆ. ದೇಹವು ಕ್ಷೀಣವಾದಾಗ, Super-Ego ಬೆಳೆಯದೆ ಇದ್ದಾಗ, Id ಇನ ತಮೋಪ್ರಧಾನವಾದ ದೆವ್ವಗಳು, ಪಿಶಾಚಿಗಳು. ಬ್ರಹ್ಮರಾಕ್ಷಸರು, ಕಾಡಿ ಕೆಡವುತ್ತಾರೆ. ಮದವೇರಿದ ಸಲಗನು ತನ್ನ ತಲೆಯ ಮೇಲೆ ಮಣ್ಣನ್ನು ಎರಚಿಕೊಳ್ಳುವಂತೆ, ತನ್ನ ನಾಶವನ್ನು ತಾನೇ ಮಾಡಿಕೊಳ್ಳುವಂತೆ Super-Egoವು ಲಕ್ಷಣವಾಗಿ ಬೆಳೆಯದೇ ಇದ್ದವರು, ದೇಹವು ಶಿಥಿಲಗೊಂಡು Ego ವು ಧೃತಿಗೆಟ್ಟಾಗ ತಮ್ಮ ನಾಶವನ್ನು ತಾವೇ ಮಾಡಿಕೊಳ್ಳುತ್ತಾರೆ, ತಾವು

ಮರೆಯಬೇಕೆಂದಿರುವ ಸಮಾಜದಲ್ಲಿ ಅವಮಾನಿತರಾಗಿ ಕಂಗೆಡುತ್ತಾರೆ.

ಮುಪ್ಪಿನಲ್ಲಿ Ego ವಿನ ಮೆರೆಯುವಿಕೆಯು ವಯಸ್ಕರಲ್ಲಿದ್ದಂತೆ ಪ್ರಬಲವಾಗಿರುವುದಿಲ್ಲ. ಏಕೆಂದರೆ Ego ಮೆರೆಯಬೇಕಾದರೆ ದೇಹವು ದೃಢವಾಗಿರಬೇಕು. ವಿಚಾರಪರ ಮನಸ್ಸು ಅತಿ ಚುರುಕಾಗಿರಬೇಕು. ಸ್ಮರಣೆಯೂ ಅಚ್ಚಳಿಯದೆ ಉಳಿದು ಅಗತ್ಯವಾದಾಗ ಜಟ್ಟಂತ ನೆನಪಾಗಬೇಕು. ಮುಪ್ಪಿನಲ್ಲಿ ದೇಹವು ಶಿಥಿಲವಾಗುತ್ತದೆ. ತಲೆಯ ಕೂದಲುಗಳು ನರೆಯತೊಡಗಿ, ಕಡೆಗೆ ಅವಾದರೂ ಇದ್ದರೆ ಸಾಕು. ಭಟ್ಟ ತಲೆಯಾಗದಿದ್ದರೆ ಸಾಕಪ್ಪ ; ಎನ್ನುವಂತಾಗಿರುತ್ತದೆ. ಕಣ್ಣುಗಳು ತುಸು ಮಂದವಾಗತೊಡಗುತ್ತವೆ. 'ಆ್ಞ ! ಏನಂದೆ' ಎಂದು ಪುನಃ ಕೇಳುವಷ್ಟು ಕಿವುಡು ಶುರುವಾಗುತ್ತದೆ. ನುಣುಪಾಗಿದ್ದ ಕಾಂತಿಯುತವಾಗಿದ್ದ ಚರ್ಮವು ಕಾಂತಿಹೀನವಾಗಿ ಸುಕ್ಕುಸುಕ್ಕಾಗತೊಡಗುತ್ತದೆ. ನಾಲಿಗೆಯು ಚಪಲದಿಂದ ಉದ್ರೇಕಿತವಾದರೂ, ಆ ವಯಸ್ಸಿನಲ್ಲಿ ಹಲ್ಲುಗಳು ತ್ರಾಸವನ್ನು ಕೊಡಲಾರಂಭಿಸಿರುವುದರಿಂದ, ಅಗಿದು ರುಚಿ ನೋಡಿ ಸುಖ ಪಡುವಂತಿರುವುದಿಲ್ಲ. ಅಜೀರ್ಣದ ಭಯದಿಂದ ನಿಶ್ಚಿಂತೆಯಿಂದ ತೃಪ್ತಿಯಾಗುವಂತೆ ತಿನ್ನಲೂ ಆಗುವುದಿಲ್ಲ. ಪಂಚೇಂದ್ರಿಯಗಳು ಕ್ಷೀಣವಾಗುತ್ತಹೋದರೆ, ಮೆದುಳೂ ಶಿಥಿಲವಾಗುತ್ತದೆ. ವಿಚಾರಪರ ಮನಸ್ಸಿನ ಚುರುಕು ಕಡಿಮೆಯಾಗುತ್ತದೆ. ಸ್ಮರಣೆಯೂ ಬೇಕೆನಿಸಿದಾಗ ಮರುಕಳಿಸುವುದಿಲ್ಲ. ಹೀಗಾಗಿ Ego ವು ತನ್ನ ಪ್ರದರ್ಶನವನ್ನು ಮಾಡಿಕೊಳ್ಳಲು ಅವಕಾಶವು ಕಡಿಮೆಯಾಗುತ್ತದೆ.

ಈ ವಯಸ್ಸಿನಲ್ಲಿ, ಬಾಳಿನಲ್ಲಿ ಹೇಗೆಲ್ಲಾ ಮುಂದುವರೆಯಬಹುದಾಗಿತ್ತು. ಆದರೆ ಯಾವುಯಾವುದೋ ಕಾರಣಗಳಿಂದ, ಇನ್ನೇನು ಫಲಿಸಿಯೇ ಬಿಡುತ್ತದೆ ಎನ್ನುವಾಗ, ಠೋಕರ್ ತಿಂದುದರ ಕಹಿ ಸ್ಮರಣೆಗಳು ಕಾಡುತ್ತವೆ. ವಿಧಿಲಿಖಿತ ; ನನ್ನ ದುರದೃಷ್ಟ ; ಪೂರ್ವಜನ್ಮದ ಕರ್ಮ ; ಎಂದೆಲ್ಲಾ ಹೇಳಿಕೊಂಡು ಸಮಾಧಾನವನ್ನು ಮಾಡಿಕೊಳ್ಳುತ್ತಾನೆ. ವಯಸ್ಕನಾಗಿದ್ದಾಗ, ನಾನು ಕಡಿದು ಕಟ್ಟಿ ಹಾಕುತ್ತೇನೆ ಎನ್ನುವ ಕೆಚ್ಚು Ego ವಿಗಿರುತ್ತದೆ. ಆದರೆ ಮುಪ್ಪಿನಲ್ಲಿ Ego ವಿಗೆ ಅಂತಹ ಕೆಚ್ಚು ಇರುವುದಿಲ್ಲ. ಇತರ ಅವ್ಯಕ್ತವಾದ ಶಕ್ತಿಗಳು Ego ದ ಪ್ರಯತ್ನಗಳನ್ನು ಕುಂಠಿಸುತ್ತವೆ. 'ನಾನು' ತಲೆ ಚಚ್ಚಿಕೊಂಡರೂ ಬಯಸಿದಂತೆ ಬಾಳಲು ಸಾಧ್ಯವಾಗುವುದಿಲ್ಲ ಎನ್ನುವ ಅರಿವು ಮೂಡಿರುತ್ತದೆ.

ಇದರ ಜತೆಗೆ, ಮುಪ್ಪಿನಲ್ಲಿ ರೋಗಗಳು ಕಾಣಿಸಿಕೊಂಡಿರುತ್ತವೆ. ರಕ್ತದ ಒತ್ತಡ; ಸಕ್ಕರೆ ಬೇನೆ, ಕೀಲುಗಳ ನೋವು : ಇತ್ಯಾದಿ ಇತ್ಯಾದಿಗಳು ಪ್ರಾರಂಭವಾಗಿರುತ್ತವೆ. ಬಂದಿರುವ ರೋಗಗಳಿಗಿಂತ, ಬರಬಹುದಾದ ರೋಗಗಳ

ಭಯವು ಕಾಡುತ್ತದೆ. ಆ ಸ್ನೇಹಿತನು ಅರ್ಬುದ ರೋಗದಿಂದ ತುಂಬ ನರಳಿ ಸತ್ತ, ಆ ಗೆಳೆಯನಿಗೆ ಲಕ್ವಾ ಬಡಿದು, ನಾಯಿಪಾಡನ್ನು ಅನುಭವಿಸುತ್ತಿದ್ದಾನೆ. ಪಾಪ, ನನ್ನ ಸ್ನೇಹಿತನ ಕಣ್ಣುಗಳೆರಡೂ ಆಪರೇಷನ್ ಆದನಂತರ, ಇಂಗಿಯೇ ಹೋದುವಂತೆ ; ಹೀಗೆ ಸುತ್ತಲೂ ನಡೆದ ಘಟನೆಗಳನ್ನು ಕಂಡು, ನನಗೂ ಹಾಗೆ ಆಗುತ್ತೇನೋ ಎನ್ನುವ ಭಯವು ಮುತ್ತುತ್ತದೆ, ಕಾಡುತ್ತದೆ. ನರಳಿ ಸಾಯುವ ಕಾಲವು ಹತ್ತಿರ ಹತ್ತಿರವಾಗುತ್ತಿದೆ ಎನ್ನುವ ವಾಸ್ತವಿಕತೆಯು ಸ್ಪಷ್ಟವಾಗತೊಡಗುತ್ತದೆ. ಬಯಸಿದಂತೆ ಬಾಳಲು ಹೇಗೆ ಸಾಧ್ಯವಿಲ್ಲವೋ, ಬಯಸಿದಂತೆ ಸಾಯುವುದೂ ಸಾಧ್ಯವಿಲ್ಲ ಎಂಬುದೂ ತಿಳಿದಿರುತ್ತದೆ.

ಇವೆಲ್ಲಾ ಕಾರಣಗಳಿಂದ Ego ಎಂಬ ಕಲ್ಪನೆಯು ಸ್ವಲ್ಪ ಸ್ವಲ್ಪವಾಗಿ ಕರಗತೊಡಗುತ್ತದೆ. ಆದರೂ ಜೀವವಿರುವ ತನಕ ಅದೂ ಇರಬೇಕಲ್ಲ, ಇರುತ್ತದೆ. ಆದರೆ ಭವಿಷ್ಯದ ಕನಸುಗಳನ್ನು ಕಟ್ಟುತ್ತಾ ಮೆರೆಯುವುದಿಲ್ಲ.

Ego ಅಥವಾ ಮಮಕಾರವು ಕರಗುತ್ತ ಅಥವಾ ಕಡಿಮೆಯಾಗುತ್ತ ಹೋಗುವುದರಿಂದ ದೇಹದ ವಿಷಯದಲ್ಲಿ ಮನಸ್ಸು ಸ್ವಲ್ಪ ಉದಾಸೀನವಾಗ ತೊಡಗುತ್ತದೆ.

ಮೂವತ್ತರ ಯೌವನದಲ್ಲಿ ಕಣ್ಣಿಗೆ ತುಸು ಬೇನೆಯಾದರೆ, ದೃಷ್ಟಿಯು ಎಲ್ಲಿ ಇಂಗಿ ಹೋಗುತ್ತೋ ಎಂದು ಕಾತರನಾಗುತ್ತಾನೆ. ಹತ್ತೂ ವೈದ್ಯರ ಬಳಿಗೆ ಹೋಗಿ ಚಿಕಿತ್ಸೆಯನ್ನು ಪಡೆಯುತ್ತಾನೆ. ಆದರೆ ಆರೇಳು ದಶಕಗಳು ಮೀರಿದ ಮುದುಕನಿಗೆ ದೃಷ್ಟಿಯು ಕಣ್ಣ ಪೊರೆಯಿಂದ ಮಂದವಾದರೆ, ತತ್‌ಕ್ಷಣ ಚಿಕಿತ್ಸೆಗೆ ಹೋಗುವುದಿಲ್ಲ. ಆಗ ಸ್ವಂತ ಅಗತ್ಯಗಳಿಗೆ ಸಾಕಾದಷ್ಟು ದೃಷ್ಟಿಯು ಇನ್ನೂ ಇದೆಯಲ್ಲ ; ಸಿನಿಮಾಕ್ಕೆ ಹೋಗುವುದು ಸಾಧ್ಯವಿಲ್ಲ ; ಬೇಡವೇ ಬೇಡ ; ನಾಟಕಗಳನ್ನು ನೋಡಲು ಆಗುವುದಿಲ್ಲ ; ನೋಡದೆ ಇದ್ದರೆ ಕಳೆದುಕೊಂಡಿದ್ದೇನು? ಈ ರೀತಿ ಮನಸ್ಸು ನಡೆಯ ತೊಡಗುತ್ತದೆ. ಕಡೆಗೊಮ್ಮೆ ಆಪರೇಷನ್ ಮಾಡಿಸಲು ನಿರ್ಧರಿಸಿದಾಗ, ಶಸ್ತ್ರ ಚಿಕಿತ್ಸೆಯ ಭಯವು ವಯಸ್ಕರಲ್ಲಿದ್ದಂತೆ ಅತಿಯಾಗಿರುವುದಿಲ್ಲ. ಈಗಲೂ ಕಣ್ಣು ಕುರುಡು ; ಮಸಲಾ ಆಪರೇಷನ್ ಸಫಲವಾಗದೆ ಇದ್ದರೆ, ಮೊದಲಿದ್ದ ಕುರುಡು ಮುಂದುವರೆಯುತ್ತದೆ. ಕಳೆದು ಕೊಳ್ಳುವುದಾದರೂ ಏನನ್ನು? ದೃಷ್ಟಿಯು ಪುನಃ ಬರಬಹುದು ಎಂಬ ಆಸೆಯನ್ನು, ಅಷ್ಟೇ ತಾನೆ ? ಎನ್ನುವ ಉದಾಸೀನ ಭಾವನೆಯು ಉಂಟಾಗುತ್ತದೆ. ವಯಸ್ಕರಲ್ಲಿ ಕಂಡುಬರುವ ಬೇನೆಯ ಕಾತರಗಳು, ಮುಪ್ಪಿನಲ್ಲಿ ಕಡಿಮೆಯಾಗಿರುತ್ತವೆ. ಬೇನೆಯ ಫಲವಾಗಿ ಮುಂದೆ ಬೃಹನ್ನಳೆಯಾಗಬಹುದು ಎಂದು ವಯಸ್ಕನಿಗೆ ತಿಳಿದರೆ, ಆತಂಕವು ಅತಿ ಹೆಚ್ಚಾಗಿ

ಅವ ಆತ್ಮಹತ್ಯೆಯನ್ನೂ ಮಾಡಿಕೊಳ್ಳಬಹುದು. ಆದರೆ ಮುದುಕರಲ್ಲಿ ಹೀಗಾದರೆ, ಕಾತರಕ್ಕೆ ಅವಕಾಶವೇ ಇರುವುದಿಲ್ಲ. ಅಗತ್ಯವೂ ಇರುವುದಿಲ್ಲ.

ಬಾಲಕರಲ್ಲಿ Ego ವನ್ನು ಪ್ರಚೋದಿಸುವ ಉತ್ಕಟಾಕಾಂಕ್ಷೆಯು ಸಮಾಜದಲ್ಲಿ ತಾನು ಸ್ವಾವಲಂಬಿಯಾಗಬೇಕು ಎನ್ನುವ ಆಸೆ. ಯೌವನದಲ್ಲಿ ಹಾಗೂ ವಯಸ್ಕರಲ್ಲಿ, ಕಾಮ ಮತ್ತು ಇತರ ಹೆಬ್ಬಯಕೆಗಳು Ego ವನ್ನು ಒದ್ದು ಜಗ್ಗಿ ನಡೆಸುತ್ತವೆ, ಮುದುಕರಲ್ಲಿ ಉದಾಸೀನತೆಯೂ, ಬೇಸರವೂ, Egoವನ್ನು ನಡಸುತ್ತದೆ. ಹೆಬ್ಬಯಕೆಗಳು ಮುದುಕರಲ್ಲಿ ಇರವುದಿಲ್ಲ ಎಂದಲ್ಲ. ಆದರೆ ನಮ್ಮ ಕಾಲ ಮುಗಿಯಿತು; ನಮ್ಮ ಮಕ್ಕಳ ಬಾಳಿನಲ್ಲಿ, ನಮ್ಮ ಇಷ್ಟಾರ್ಥಗಳ ಸಾಫಲ್ಯವನ್ನು ಕಂಡು ಸುಖಪಡೋಣ ಎಂಬ ಹೆಬ್ಬಯಕೆಗಳು ಇರುತ್ತವೆ. ಅಂದರೆ Ambition ಅಥವಾ ಹೆಬ್ಬಯಕೆಗಳು, ತಮ್ಮ ಸ್ವಂತ ಬಾಳಿಗೆ ಅನ್ವಯಿಸುತ್ತವೆ. ಸ್ವಾರ್ಥವು, ಸ್ವಲ್ಪಮಟ್ಟಿಗಾದರೂ ಈ ರೀತಿಯಲ್ಲಿ ಪರಾರ್ಥಕ್ಕೆ ಹರಡುತ್ತದೆ ಎನ್ನಬಹುದು.

ಮುದುಕರಲ್ಲಿ Ego ವು ಹುಡಿಯಾಗತೊಡಗುತ್ತದೆ, ದೃಢವಾಗಿ ಉಳದಿರುವುದಿಲ್ಲ, ಎನ್ನುವುದಕ್ಕೆ ಮುದುಕರ ಮತ್ತೊಂದು ಸಾಮಾನ್ಯ ನಡವಳಿಕೆಯ ಸಾಕ್ಷ್ಯ ನೀಡುತ್ತದೆ. ವಯಸ್ಕರಲ್ಲಿ ವಿಚಾರಪರ ಮನಸ್ಸು ಯಶಸ್ವಿಯಾಗಿ ಕಾರ್ಯವನ್ನು ಮಾಡುತ್ತದೆ. ಆದರೆ ಭಾವನಾ ಪ್ರದರ್ಶನಗಳನ್ನು ಅವರು ಕಾಣಿಸುವುದಿಲ್ಲ. ಸದೃಢವಾದ ಅವರ Ego ಕೋಟೆಯು, ಭಾವನಾ ಪ್ರದರ್ಶನಗಳು ಬಹಿರಂಗವಾಗಿ ಆಗದಂತೆ ತಡೆ ಹಿಡಿಯುತ್ತದೆ. ಮುಪ್ಪಿನಲ್ಲಿಯಾದರೆ, ಹೃದಯಸ್ಪರ್ಶಿಯಾದ ಕೃತಜ್ಞತೆಯ ಒಂದು ಮಾತನ್ನು ಮಗನೋ, ಶಿಷ್ಯನೋ, ತಂದೆಗೋ, ಗುರುವಿಗೋ, ಹೇಳಿದರೆ ಮುದುಕರು ಬಹಿರಂಗವಾಗಿ, ಯಾವ ಅಡೆ ತಡೆಯೂ ಇಲ್ಲದೆ ಕಣ್ಣೀರು ಹಾಕುತ್ತಾರೆ. ಬಾಲಕರು ಗೋವಿನ ಕತೆಯನ್ನು ಕೇಳಿದಾಗ ಸಹಜವಾದ ಅನುಕಂಪದಿಂದ ಅಳುವಂತೆ, ಮುದುಕರೂ ವಿಶ್ವಾಸದ ಮಾತುಗಳನ್ನು ಕೇಳಿದರೆ ಆನಂದಬಾಷ್ಪವನ್ನು ಸುಲಭವಾಗಿ ಸುರಿಸುತ್ತಾರೆ. ದುಃಖವಾದ ಸುದ್ದಿಯನ್ನು ಕೇಳಿದರೆ ಅತ್ತುಬಿಡುತ್ತಾರೆ, ಮುಪ್ಪಿಗೂ ಮಗುತನಕ್ಕೂ ಬಹಳಷ್ಟು ಹೋಲಿಕೆಗಳಿರುತ್ತವೆ. ಆದುದರಿಂದ ಮುಪ್ಪನ್ನು ಎರಡನೆಯ ಬಾಲ್ಯ ಅಥವಾ ಮಗುತನ ಎನ್ನುವುದು. ತಂದೆ ತಾಯಿಯರಿಗಿಂತ, ಅಜ್ಜ ಅಜ್ಜಿಯರನ್ನು, ಮೊಮ್ಮಕ್ಕಳು ಸದರದಿಂದ ತಬ್ಬಿಕೊಳ್ಳುತ್ತವೆ. ಕಾರಣ, ಸಮಾನವಾದ ಮನೋಧರ್ಮ ಬೆಳೆಯುತ್ತಿರುವ ಬಾಲಕರ ಮನಸ್ಸು ; ಇಳಿಯುತ್ತಿರುವ ಮುದುಕರ ಮನಸ್ಸು, ಒಂದು ಹಂತದಲ್ಲಿ ಸಮಾನವಾಗಿರುತ್ತದೆ ಎನ್ನಬಹುದು.

ಮುದುಕರಲ್ಲಿ Ego ವು ಹುಡಿಯಾಗತೊಡಗುವುದರಿಂದ, ಉದಾಸೀನತೆಯು,

ಮತ್ತು ಬೇಸರವು ಹೆಚ್ಚಾಗುತ್ತದೆ. ಯಾವುದರಲ್ಲಿ ಉದಾಸೀನತೆ ? ಯಾವ ವಿಷಯದಲ್ಲಿ ಬೇಸರವು ? ಲೌಕಿಕವಾದ, ಈ ಬಾಳಿನ ವಿಷಯಗಳಲ್ಲಿ ಉದಾಸೀನತೆ, ಮತ್ತು ಬೇಸರ. ಆದರೆ Ego ವು ಕೃಶವಾಗುವಾಗ ಈ ಲೋಕದ ಹೊರಗಿರುವ, ಇರಬಹುದಾದ ವಿಷಯಗಳಲ್ಲಿ ಆಸಕ್ತಿಯು ಪ್ರಬಲವಾಗುತ್ತದೆ. ಭಜನೆ, ಹರಿಕತೆ, ತೀರ್ಥಯಾತ್ರೆ, ದೇವಸ್ಥಾನ, ಪ್ರವಚನ, ಮತ ಸಂಬಂಧವಾದ ಪುಸ್ತಕಗಳು, ಇವೆಲ್ಲವೂ ಮುದುಕನ ಆಸಕ್ತಿಯನ್ನು ಸೆರೆಹಿಡಿಯುತ್ತವೆ. ಇದು ಏಕೆ ಮತ್ತು ಹೇಗೆ?

ಮುಪ್ಪಿನಲ್ಲಿ Super-Ego ಯಾವ ರೀತಿಯ ಪ್ರಭಾವನ್ನು ಬೀರುತ್ತದೆ, ಎಂಬುದನ್ನು ಅರಿಯುವ ಶೈಶವದಿಂದ ಪ್ರಾರಂಭವಾಗಿ ಬಾಲ್ಯ ಮತ್ತು ಕೌಮಾರ ವಯಸ್ಸುಗಳಲ್ಲಿ Super-Ego ಅಥವಾ ಮನಸ್ಸಿನ ಸತ್–ಚೈತನ್ಯಾಂಶವು ರೂಢಿಸಲ್ಪಡುತ್ತದೆ ದೃಢವಾಗತೊಡಗುತ್ತದೆ ಎಂಬುದನ್ನು ತಿಳಿದೆವು. ಹುಟ್ಟಿದ ಮನೆಯಲ್ಲಿ, ಕಲಿತ ಶಾಲೆಯಲ್ಲಿ ; ಜೀವಿಸುತ್ತಿರುವ ಸಮಾಜದಲ್ಲಿ ; Super-Ego ವನ್ನು ಬೆಳಸುವ ಪಾಠಗಳನ್ನು ಕಲಿಯುತ್ತಾನೆ. ಹಿರಿಯರ ಅನುಕರಣೆಯಿಂದ; ದೊಡ್ಡವರ ಮೆಚ್ಚುಗೆಯನ್ನು ಪಡೆಯಬೇಕೆಂಬ ಸಹಜ ಹಂಬಲದಿಂದ, ಹಾಗೂ, ಶಿಕ್ಷೆಯನ್ನು ತಪ್ಪಿಸಿಕೊಳ್ಳಬೇಕು ಎಂಬ ಸಹಜ ಪ್ರವೃತ್ತಿಯಿಂದ, ಶಿಕ್ಷಣವನ್ನು ಪಡೆಯುತ್ತಾನೆ. ತಾನು ಬದುಕಿ ಬಾಳಬೇಕಾದ ಸಮಾಜವು ಬಿಗಿಯಾಗಿಯೂ ದೃಢವಾಗಿಯೂ ಇದ್ದರೆ, ಆಗ ಅದು ತನಗೆ ರಕ್ಷಣೆಯನ್ನು ನೀಡುತ್ತದೆ ಎಂಬುದನ್ನು ತಿಳಿಯುತ್ತಾನೆ. ಸಮಾಜವು ದೃಢವಾಗಿರಬೇಕಾದರೆ, ತನ್ನ ಪಾತ್ರವನ್ನು ಹೊಣೆಗಾರಿಕೆಯಿಂದ ನಿರ್ವಹಿಸಬೇಕು ಎಂಬುದನ್ನು ಅರಿಯುತ್ತಾನೆ. ವ್ಯಕ್ತಿಯ ಮನಸ್ಸು, ಇದನ್ನು ಅರಿತಾಗ ಅದರಂತೆ ಅವ ನಡೆದುಕೊಂಡಾಗ Super-Ego ಅಥವಾ ಮನಸ್ಸಿನ ಸತ್–ಚೈತನ್ಯಾಂಶವು ಪ್ರಬಲವಾಗಿದೆ ಎಂದನ್ನಬಹುದು.

ವ್ಯಕ್ತಿಯ Id ಮತ್ತು Ego ಅಥವಾ ತಮೋ ಮತ್ತು ರಜೋಗುಣಗಳ ಮೇಲೆ ಶಿಕ್ಷಿಸುವ ಶಕ್ತಿಯನ್ನು ಹತೋಟಿಯಲ್ಲಿಟ್ಟುಕೊಳ್ಳುವ ಸಾಮರ್ಥ್ಯವನ್ನೂ. Super-Ego ಸಂಪಾದಿಸಿಕೊಳ್ಳುತ್ತದೆ. ಹಾಗಾದಾಗ ಸಮಾಜ ವಿಚ್ಛಿದ್ರಕವಾದ, ಹಾಗೂ ಕೇವಲ ಸ್ವಾರ್ಥಿಯಾದ Id-Ego ಒಕ್ಕೂಟದ ಸ್ವೇಚ್ಛಾ ಪ್ರವೃತ್ತಿಯನ್ನು ಕಟ್ಟು ನಿಟ್ಟಿನಲ್ಲಿಡಬಹುದು. ಆದುದರಿಂದ Super-Ego ವನ್ನು ಮನಸ್ಸಿನ ಸತ್–ಚೈತನ್ಯಾಂಶ ಎಂದು ಕರೆಯುವುದು. ಸಮಾಜದ ಭದ್ರತೆಯನ್ನು ರಕ್ಷಿಸುವುದೇ ಇದರ ಧ್ಯೇಯ.

ಮುಪ್ಪಿನಲ್ಲಿ ದೇಹವು ಶಿಥಿಲವಾಗಿರುತ್ತದೆ. ಆದಕಾರಣ Id-Ego ಒಕ್ಕೂಟದ,

ಸ್ವಾರ್ಥವಾಗಿರುವ, ಸ್ವೇಚ್ಛಾ ಪ್ರವೃತ್ತಿಯು, ಸಾಕಷ್ಟು ಕಡಿಮೆಯಾಗಿರುತ್ತದೆ. ಇದರ ಪರಿಣಾಮವಾಗಿ Super-Ego ಪ್ರಭಾವವು ಹೆಚ್ಚಾಗುತ್ತದೆ. Ego ಎಂಬ ಮಮಕಾರದ ಆವರಣವು, ಅಥವಾ ಕೋಟೆಯು ಶಿಥಿಲವಾಗುವುದರಿಂದ Super-Ego ಕಾರ್ಯವು ಹೆಚ್ಚು ಸುಗಮವಾಗುತ್ತದೆ. ಸುಲಭವಾಗುತ್ತದೆ.

ಈ ಬಾಳಿನಲ್ಲಿ, ಈ ಜನ್ಮದಲ್ಲಿ, ಈಡೇರಿಸಲಾಗದ ಇಷ್ಟಾರ್ಥಗಳನ್ನು, ಮಕ್ಕಳ ಅಥವಾ ಶಿಷ್ಯರ ಬಾಳಿನಲ್ಲಿ ಪೂರೈಸಲು ಹಂಬಲಿಸುವ ಮುದುಕರ ನಡವಳಿಕೆಯನ್ನು ಕಂಡಿದ್ದೇವೆ. ಪುಣ್ಯಗಳನ್ನು ನಾವೇನಾದರೂ ಗಳಿಸಿದರೆ, ಅದರ ಪ್ರತಿಫಲವು ನಮಗೆ ಬೇಡ. ಅಂತಹ ಪ್ರತಿಫಲವು ದೊರಕುವುದಾದರೆ, ಅದು ನಮ್ಮ ಚಿರಂಜೀವಿಗಳ ಬಾಳ ರಕ್ಷೆಯಾಗಲಿ, ಎಂದು ಆಶೀರ್ವದಿಸುವ ಮುಪ್ಪಿನ ಮುದುಕರು ಸ್ವಾರ್ಥಿಗಳೇ? ಚಿರಂಜೀವಿಗಳ ಬಾಳಿನಲ್ಲಿ ಅವರು ಅಲೌಕಿಕವಾಗಿ, ಅವ್ಯಕ್ತವಾಗಿ ಪಾಲು ವಹಿಸುವುದೇ ಮುದುಕರ ಆರ್ಶೀವಾದದ ಅಂತರಂತರಾರ್ಥ.

ಆದರೆ ಲೌಕಿಕ ದೃಷ್ಟಿಯಿಂದ, ಕಾಲಮಾನದ ಪ್ರಕಾರ, ಅವರುಗಳು, ಪ್ರತ್ಯಕ್ಷವಾಗಿ ಇರುವುದೇ ಇಲ್ಲ. ಅಪ್ರತ್ಯಕ್ಷವಾಗಿ ಇರುತ್ತಾರೋ ಇಲ್ಲವೋ ಯಾರಿಗೆ ಗೊತ್ತು? ಅವರ, ಸ್ವಾರ್ಥೀ ಹಾಗೂ ನಿಸ್ವಾರ್ಥಿಯಾದ ಆಶೀರ್ವಾದವು, ಚಿರಂಜೀವಿಗಳ ಅಂದರೆ ಯುವಕರ ಬಾಳಿಗೆ ರಕ್ಷಾಕವಚವಾಗುತ್ತದೆಯೇ?

ಆಗುತ್ತದೆ ಎಂದು ಚಿರಂಜೀವಿಗಳು ದೃಢವಾಗಿ ನಂಬಿದ್ದರೆ, ಅವರುಗಳ ಮನಸ್ಸಿನ ಸತ್–ಚೈತನ್ಯಾಂಶವು ಅಥವಾ Super-Ego ವು ಭದ್ರವಾದ ಅಡಿಗಲ್ಲನ್ನು ಹೊಂದಿದ್ದರೆ ಹಿರಿಯರ ಆಶೀರ್ವಾದವು ರಕ್ಷೆಯಾಗುತ್ತದೆ.

ಆಗುತ್ತದೆಯೋ ಇಲ್ಲವೋ, ಮುದುಕರು ಅರಳು–ಮರಳಿನಲ್ಲಿ ಆಡಿದ ಮಾತುಗಳಿಗೆ, ನಿಜವಾದ, ಸತ್ಯವಾದ ಮೌಲ್ಯವು ಇದೆಯೋ ಇಲ್ಲವೋ, ಎಂದು ಸಂದೇಹ ಪಡುವ ಯುವಕರಿಗೆ=ಚಿರಂಜೀವಿಗಳಿಗೆ=ಮಿಶ್ರ ಫಲವನ್ನು ನೀಡುತ್ತದೆ. ಏಕೆಂದರೆ ಅವರುಗಳ Super-Ego ಇನ್ನೂ ದೃಢವಾಗಿರುವುದಿಲ್ಲ. ಸಂಶಯದ ಸಾಗರದಲ್ಲಿ ಅವರ ಮನಸ್ಸು ತೇಲಾಡುತ್ತಿರುತ್ತದೆ, ತೊಳಲಾಡುತ್ತಿರುತ್ತದೆ.

ಮುದುಕರ ಆಶೀರ್ವಾದವು, ಸಾಂಪ್ರದಾಯಕವಾಗಿ, ಸಮಾಜದಲ್ಲಿ ರೂಢಿಸಿ ಕೊಂಡು ಬಂದ, ಒಂದು ನಿರ್ವೀರ್ಯ ಚಟ. ಇದನ್ನು ನಂಬಿದರೆ, ಬಾಳು ಹಾಳು, ಎಂದೆನ್ನುವ ಚಿರಂಜೀವಿಗಳಲ್ಲಿ, ಯುವಕರಲ್ಲಿ, ಸಂದೇಹವೂ ಇಲ್ಲ, ನಂಬಿಕೆಯೂ ಇರುವುದಿಲ್ಲ. ಅಂತಹವರು ಕ್ರಾಂತಿಕಾರರು, ಸಂಪೂರ್ಣವಾಗಿ ಸ್ವಾವಲಂಬಿಗಳು. ರಜೋಗುಣ ಪ್ರಧಾನರು. ಆದರೂ Id ಇನ ತಮೋಗುಣಕ್ಕೆ ಬಲಿಯಾಗದವರು. ಇಂತಹ ವಿರಳರನ್ನು ಸತ್–ಚೈತನ್ಯಾಂಶವೇ ನಡಸುವುದು.

ಅಗೋಚರವಾಗಿ, ಅವ್ಯಕ್ತವಾಗಿ ಹೀಗಾಗುತ್ತಿದೆ ಎನ್ನುವುದನ್ನು ಅವರು ಅರಿಯರು. ಕಾರಣ ಕ್ರಾಂತಿಕಾರಕ ಕಾರ್ಯಗಳಿಂದ, ಸಮಾಜ ವಿಚ್ಛಿದ್ರಕ ಚಟುವಟಿಕೆಗಳಿಂದ, ಸ್ವರ್ಗವನ್ನು ಸೃಷ್ಟಿಸುತ್ತೇವೆ ಎಂದು ದೃಢವಾಗಿ ನಂಬಿರುವವರು, ಅವರುಗಳಿಗೆ ಮನಸ್ಸಿನಲ್ಲಿ ಎಂದೂ ನೆಮ್ಮದಿಯೇ ಇಲ್ಲ. ಉತ್ಸಾಹವು ಮಾತ್ರ ಅಪರಿಮಿತ. ಉತ್–ಸಾಹಸವೇ ಅವರುಗಳ ಬೆಂಗಾವಲು. ತ್ರಿಶಂಕು ನರಕವನ್ನು ಸೃಷ್ಟಿಸುತ್ತದೆಯೋ, ತ್ರಿಶಂಕು ಸ್ವರ್ಗವನ್ನೇ ಸಾಧಿಸುತ್ತದೆಯೋ, ಕಾಲ–ಭೈರವನೇ ನಿರ್ಣಯಿಸಬೇಕು !

ಚಿರಂಜೀವಿಗಳ ಮೇಲೆ ಮುದುಕರ ಆಶೀರ್ವಾದವು ಹೇಗೆಯೇ ಪ್ರಭಾವವನ್ನು ಬೀರಲಿ ; ಮುದುಕರಿಗನಕ ನೆಮ್ಮದಿಯನ್ನು ನೀಡುತ್ತದೆ. ಸತ್–ಚೈತನ್ಯಾಂಶದತ್ತ ನಡೆಸುತ್ತದೆ.

Super-Ego ಅಥವಾ ಮನಸ್ಸಿನಲ್ಲಿ ಹುದುಗಿರುವ ಸತ್–ಚೈತನ್ಯಾಂಶವು, ಮುಪ್ಪಿನಲ್ಲಿ ಹೆಚ್ಚು ಪ್ರಭಾವವನ್ನು ಬೀರಲು, ಸುಲಭವಾಗಿರುತ್ತದೆ. ಏಕೆಂದರೆ, ದೇಹವು ಶಿಥಲವಾಗತೊಡಗಿ Id ಇನ, ಕಾಮ್ಯಗಳ ತಮೋಪ್ರಧಾನವಾದ ಸೆಳೆತವು, ಬಲುಮಟ್ಟಿಗೆ ಕಡಿಮೆಯಾಗಿರುತ್ತದೆ. Ego ಕೂಡ Id ಇನ ಇಳಿದ ಸೆಳೆತಕ್ಕೆ ಬಗ್ಗಬೇಕಾಗುವುದಿಲ್ಲ. ಆದುದರಿಂದ ಕ್ಷಯಿಸುತ್ತಿರುವ Ego, ಸಲೀಸಾಗಿ Super-Ego ವಿನ ಎಳೆತಕ್ಕೆ ಸಿಕ್ಕಿಬೀಳುತ್ತದೆ. ಹಾಗಾಗುವಾಗ ಹಿತವನ್ನೂ ಅನುಭವಿಸುತ್ತದೆ.

ಅಲ್ಲದೆ ಮುಪ್ಪಿನಲ್ಲಿ ಲೌಕಿಕವಾದ ವಿಷಯಗಳಲ್ಲಿ ಸ್ವಲ್ಪ ಮಟ್ಟಿನ ಉದಾಸೀನತೆಯೂ, ಮತ್ತು ಬೇಸರವೂ ಉಂಟಾಗುತ್ತದೆ. ಯೌವನದಲ್ಲಿ ಮತ್ತು ವಯಸ್ಕರಾದಾಗ ಅನುಭವಿಸಿದ ಕಷ್ಟನಷ್ಟಗಳು ಲೋಕದ ರೀತಿಯೇ ಇಷ್ಟು, ಎಂಬ ಅರಿವನ್ನು ಮೂಡಿಸಿರುತ್ತದೆ. ಅಲೌಕಿಕವಾದ ವಿಷಯಗಳಲ್ಲಿ ಆಸಕ್ತಿಯು ಮೂಡುತ್ತದೆ. ದೇಹ ಮತ್ತು ಅದನ್ನು ನಡಸುವ ಮನಸ್ಸಿನ ಅಂಶಗಳು, ದುರ್ಬಲವಾಗತೊಡಗಿದಾಗ, ಸತ್–ಚೈತನ್ಯಾಂಶದ ಪ್ರಭಾವವು ಹೆಚ್ಚಾಗುತ್ತದೆ. ಸಮಾಜದ ಭದ್ರತೆಯನ್ನು ಬಲಪಡಿಸುವ ದೇಹ ಅಥವಾ ಮನಸ್ಸಿನ ಸಾಮರ್ಥ್ಯವು ಕಡಿಮೆಯಾಗಿರುತ್ತದೆ. ಆದಕಾರಣ ಸಾರ್ವಜನಿಕ ಕಾರ್ಯಗಳಲ್ಲಿ ಪ್ರಭಾವೀ ಪಾತ್ರವನ್ನು ವಹಿಸಲು ಕಷ್ಟ. ಕೇವಲ ಮಾರ್ಗದರ್ಶಕರಾಗಿ, ಬುದ್ಧಿವಾದವನ್ನು ಹೇಳುವಷ್ಟು ಮಾತ್ರ ಸಾಧ್ಯವಾಗಿರುತ್ತದೆ. ಬುದ್ಧಿವಾದವನ್ನು ಕಾರ್ಯರೂಪಕ್ಕೆ ತರುವುದು ವಯಸ್ಕರ ಹೊಣೆಯಾಗಿರುತ್ತದೆ. ಸಮಾಜವನ್ನು ಸುರಕ್ಷಿತವಾಗಿಡುವ, ಸತ್–ಚೈತನ್ಯಾಂಶದ ಒಂದು ಕೆಲಸವು ಈ ರೀತಿ ಮಾರ್ಪಡಿಸಿದರೆ, ಇನ್ನೊಂದು ಕೆಲಸವು ತನಗೆ ಏಕೆ ಕಷ್ಟ ಸಂಕಟಗಳು ಬಂದವು? ಎಲ್ಲರಿಗೂ ಒಳ್ಳೆಯದನ್ನೇ

ಬಯಸಿ ದುಡಿದ ನನಗೆ ಹೀಗೇಕಾಯಿತು? ಎನ್ನುವ ಪ್ರಶ್ನೆಗೆ ಉತ್ತರವನ್ನು ಹುಡುಕತೊಡಗುತ್ತದೆ. ಮನಸ್ಸಿನಲ್ಲಿ 'ನಾನು' ಎಂದು ದೃಢವಾಗಿ ಬೇರೂರಿರುವ ಕಲ್ಪನೆಯ ವಿವರಗಳನ್ನು ಅರಿಯತೊಡಗುತ್ತದೆ. ಇಂತಹ ಪ್ರಶ್ನೆಗಳು ಮನಸ್ಸಿನಲ್ಲಿ ಮೂಡುವುದು; ಅವುಗಳ ಜಿಜ್ಞಾಸೆಯನ್ನು ವಿಚಾರಪರ ಮನಸ್ಸು ಮಾಡುವುದು, ಇವೆಲ್ಲವೂ ಸತ್-ಚೈತನ್ಯಾಂಶದ ಪ್ರಭಾವದಿಂದಲೇ. ವಯಸ್ಸಿನಲ್ಲಿ ರಂಗು ರಂಗಿನ ಬಾಳನ್ನು ಅನಂಗನ ಹೆಸರಿನಲ್ಲಿ ಆಡಿ ಕುಣಿದು ನಡೆಸಿದವರು, ಮುಪ್ಪಿನಲ್ಲಿ ತುಳಸೀದಳವನ್ನು ಕಿವಿಗೆ ಸಿಕ್ಕಿಸಿಕೊಂಡು, ಪುರಾಣ ಪುಣ್ಯ ಕತೆಗಳನ್ನು ಕೇಳ ಹೋಗುತ್ತಾರಲ್ಲ ; ಅದು ಸತ್-ಚೈತನ್ಯಾಂಶದ ಪ್ರಭಾವದಿಂದ. ಅಂತಹವರನ್ನು ಕಂಡು ಹೀಯಾಳಿಸುವುದು ಮತ್ತು ಗೇಲಿ ಮಾಡುವುದು, ಯುವಕರ ಸ್ವಭಾವ ಇಂತಹ ಮುದುಕರು ಕಪಟವಾಡುತ್ತಾರೆ ಎಂದು ಯುವಕರ ಅಭಿಪ್ರಾಯ. ಆದರೆ ನಿಜವಾಗಿಯೂ ಮುದುಕರು ಕಪಟವಾಡುತ್ತಿರುವುದಿಲ್ಲ. ಸೋಗು ಹಾಕುತ್ತಿರುವುದಿಲ್ಲ. ವೃದ್ಧ ನಾರಿಯು ಮಾನಸಿಕವಾಗಿಯೂ ಪತಿವ್ರತೆಯಾಗಲು ಹಂಬಲಿಸುತ್ತಾಳೆ. ಮನಸ್ಸಿನ ಸತ್-ಚೈತ್ಯನ್ಯಾಂಶವು ಪ್ರಭಾವವನ್ನು ಮುಪ್ಪಿನಲ್ಲಿ ಹೆಚ್ಚಾಗಿ ಬೀರುವುದರಿಂದ, ಈ ತೆರನ ಆಧ್ಯಾತ್ಮಿಕ ಪ್ರವೃತ್ತಿಯು ಕಾಣಿಸಿಕೊಳ್ಳುತ್ತದೆ.

ಮುಪ್ಪಿನಲ್ಲಿ ಬಹುಪಾಲು ಮಂದಿಗೆ ಹೀಗಾಗುತ್ತದೆ. ಅವರಲ್ಲಿ ಕೆಲವರಿಗೆ ವಿಚಾರಪರ ಮನಸ್ಸು ಸಾಕಷ್ಟು ಚುರುಕಾಗಿ ಉಳಿದಿರುತ್ತದೆ. ಲೌಕಿಕದಲ್ಲಿ ಉದಾಸೀನತೆಯು ಮೂಡಿರುವುದರಿಂದ ಅಲೌಕಿಕದ ವಿಷಯಗಳಲ್ಲಿ ವಿಚಾರಪರ ಮನಸ್ಸು ಆಸಕ್ತವಾಗುತ್ತದೆ. ಆತ್ಮ ಜಿಜ್ಞಾಸೆಯನ್ನು ಮಾಡುವ ಯೋಗ್ಯತೆಯೂ ಶಕ್ತಿಯೂ ಇರುತ್ತದೆ. ಪ್ರಾಯಶಃ ಅಂತಹವರು, ಬ್ರಹ್ಮಾಂಡದ ಆದಿಮೂಲವು ಒಂದೇ ಅದ್ವಿತೀಯವಾದುದು. ಆದುದರಿಂದ ಅದ್ವೈತವೇ ಸಿದ್ಧಾಂತ ಎಂದು ಅನ್ನುವ Theosophy, ರಾಮಕೃಷ್ಣ ಪಂಥ, ಇತ್ಯಾದಿ ಸಂಘಗಳನ್ನು ಕಟ್ಟಿಕೊಳ್ಳುತ್ತಾರೆ.

ಮತ್ತೆ ಕೆಲವರಿಗೆ ವಿಚಾರಪರ ಮನಸ್ಸು ಚುರುಕನ್ನು ಉಳಿಸಿಕೊಂಡಿರಲಿ, ಆದರೂ ಅದು ಮನಸ್ಸಿನ ಅಂಶವೇ ಆಗಿದೆ. ಆದಿಮೂಲವನ್ನು ಅರಿಯಬೇಕಾದರೆ, ಮನಸ್ಸು ನೆರವನ್ನು ನೀಡಬಹುದು. ಆದರೆ ಅದು ನಿರ್ಮೂಲವಾದ ಹೊರತು ಆದಿಮೂಲವು ಸಾಕ್ಷಾತ್ಕಾರವಾಗುವುದಿಲ್ಲ ಎಂದು ನಿರ್ಣಯಿಸುತ್ತಾರೆ. ಆದಿಮೂಲವು ಕೃಪೆದೋರಿ, ಕೈಚಾಚಿ ಎಳೆದುಕೊಂಡರೆ; ಆಗ ಅದರ ಸಾಕ್ಷಾತ್ ದರ್ಶನವು ಸಾಧ್ಯ ಎನ್ನುತ್ತಾರೆ. ಆದಿಮೂಲವು ಕೃಪೆತೋರಬೇಕಾದರೆ, ಅದಕ್ಕೆ ಸಂಪೂರ್ಣವಾಗಿ ಶರಣಾಗಬೇಕು. ಶರಣಾಗತರಾಗಬೇಕು, ಎಂದು ಹೇಳುತ್ತಾರೆ. ಆದಿ ಮೂಲವು ಅದ್ವಿತೀಯವೇ ಸರಿ. ಆದರೆ ವಿಶಿಷ್ಟವಾದ ಅದ್ವೈತವದು,

ಎಂದು ನಿರ್ಧರಿಸುತ್ತಾರೆ. ಭಕ್ತಿಗೆ ಪ್ರಾಧಾನ್ಯತೆಯು ಇವರಲ್ಲಿ ಹೆಚ್ಚು.

ಇನ್ನೂ ಕೆಲವರು, ಆದಿಮೂಲವು ನಮ್ಮನ್ನು ನಡೆಸುತ್ತದೆ. ಅದು ಸ್ವತಂತ್ರವಾದುದು. ಆದರೆ ಅದು ನಡೆಸಿದಂತೆ ನಡೆಯುವ ನಾವು ಅಸ್ವತಂತ್ರರು. ಇವೆರಡೂ ಎಂದೂ ಒಂದಾಗಲು ಸಾಧ್ಯವಿಲ್ಲ ಎಂದು ನುಡಿಯುತ್ತಾರೆ, ದ್ವೈತಿಗಳು. ಭಕ್ತಿಯು ಇವರುಗಳಲ್ಲಿಯೂ ಪ್ರಮುಖವಾದುದು. ಇವರೆಲ್ಲರನ್ನೂ ಆಯಾ ರೀತಿಯಲ್ಲಿ ನಡಸುವುದು, ಮನಸ್ಸಿನ–ಸತ್ ಚೈತನ್ಯಾಂಶದ ಆದಿಚೇತನ, ಆದಿಮೂಲ. ಮನಸ್ಸು ಸತ್–ಚೈತನ್ಯಾಂಶವನ್ನು ಅರಿಯತೊಡಗಿದಾಗ, ವಿಧ ವಿಧ ಮಾರ್ಗಗಳನ್ನು ಅನುಸರಿಸುತ್ತದೆ. ಆದುದರಿಂದಲೇ ಮತ ಭೇದಗಳು ಕಾಣಿಸಿಕೊಳ್ಳುತ್ತವೆ ಎನ್ನಬಹುದು.

ರೂಢಿಸಿಕೊಂಡು ಬಂದ ಒಂದು ಮತದವರು, ಆ ನಂಬಿಕೆಯನ್ನು, ವಿಚಾರ ಸರಣಿಯನ್ನು ಬಿಟ್ಟರೆ, ಮತ್ತೊಂದನ್ನು ರೂಢಿಸಿಕೊಳ್ಳಲು ವ್ಯವಧಾನವಿರುವುದಿಲ್ಲ. ಆಯಸ್ಸು ಸಾಕಷ್ಟು ಉಳಿದಿರುವುದಿಲ್ಲ. ಆದ ಕಾರಣ, ದೃಢವಾಗಿ ನಡಸುವ ನಡೆ ಗೋಲನ್ನು ಎಸೆದು, ತಾನೇ ನಡೆಯಲೆತ್ನಿಸುವ ಕುಂಟನಂತೆ, ಅಂತಹ ಮುದುಕರ ಮನಸ್ಸು ಪಲ್ಲಟವಾಗುತ್ತದೆ. ಕಾಕ ನಡಿಗೆಯನ್ನು ಮರೆತುಬಿಟ್ಟ ; ಹಂಸ ನಡಿಗೆಯನ್ನು ಕಲಿಯಲಿಲ್ಲ ಎಂದಂತಾಗುತ್ತದೆ. ಹಿರಿಯ ಅನುಭಾವೀ ಮನನಿಗರು ಅದುದರಿಂದಲೇ 'ಸ್ವಧರ್ಮವನ್ನು ಬಿಡಬಾರದು ; ಮನಸ್ಸಿಗೆ ನೆಮ್ಮದಿಯು ಅದರಿಂದಲೇ' ಎಂದು ನುಡಿದುದು.

Super-Ego ಈ ರೀತಿಯಲ್ಲಿ ಆಧ್ಯಾತ್ಮಿಕನಾದ, ಅಲೌಕಿಕವಾದ ವಿಷಯಗಳತ್ತ ಮುದುಕರನ್ನು ನಡೆಸುತ್ತದೆ. ಸಾವಿರ ಮುದುಕರಿದ್ದರೆ, ಒಂಭೈನೂರ ತೊಂಬತ್ತು ಜನರು ವಿಚಾರವನ್ನು ಸ್ವಂತವಾಗಿ ಮಾಡಲಾರರು. ಸ್ವಧರ್ಮದಲ್ಲಿ ನಂಬಿಕೆ ಮತ್ತು ಭಕ್ತಿ, ಇವುಗಳೇ ಅವರ ಮನಸ್ಸಿನಲ್ಲಿ ನೆಮ್ಮದಿಯನ್ನು ಮೂಡಿಸುವುದು, ಸ್ವಧರ್ಮವು, ಮಾರಿ, ಕರಾಳಿ, ಕಾಳಿಯನ್ನು ಆರಾಧಿಸಬಹುದು. ಬ್ರಹ್ಮ ವಿಷ್ಣು ಶಿವನನ್ನು ಆರಾಧಿಸಬಹುದು. ಯಾವುದಾದರೂ ಆಯಿತು, ಅದರಲ್ಲಿ ಪೂರ್ಣ ನಂಬಿಕೆ ಮತ್ತು ಭಕ್ತಿ ಇದ್ದರೆ ಸಾಕು. ಮುಪ್ಪಿನಲ್ಲಿಯೂ ಮನಸ್ಸಿಗೆ ಸಮಾಧಾನವನ್ನು ನೀಡುತ್ತದೆ.

ಬಾಲ್ಯದಿಂದಲೂ Super-Ego ದೃಢವಾಗಿ ರೂಢಿತವಾಗದಿದ್ದರೆ, ಮುಪ್ಪಿನಲ್ಲಿ ಸಂಶಯವು ಉಳಿದುಕೊಳ್ಳುತ್ತದೆ. Ego ಕೃಶವಾಗುತ್ತಿರುತ್ತದೆ. ದೇಹದೊಡನೆ Id ಕೂಡ ನಿರ್ಬಲವಾಗಿರುತ್ತದೆ. ಸಂಶಯಾತ್ಮಾ ವಿನಶ್ಯತಿ ಎಂದನ್ನುವುದು, ಇಂತಹವರನ್ನು ಕುರಿತು. ಇಂತಹ ಮುದುಕರು ಮಾನಸಿಕ ಬೇನೆಗಳಿಗೆ

ಬಲಿಯಾಗುವುದು ಹೆಚ್ಚು.

ಶೈಶವದಿಂದಲೇ Super-Ego ಬೆಳೆಯಲು ಪ್ರಾರಂಭವಾಗುವುದರಿಂದ, ಮಕ್ಕಳ 'ಇಸ್ಕೂಲು ಮನೆಯಲ್ಲಿಯೇ' ಪ್ರಾರಂಭವಾಗಬೇಕು. ನಂತರ ಶಾಲೆಯಲ್ಲಿ ಅಭಿವೃದ್ಧಿಯಾಗಬೇಕು. ಹಾಗೂ ಸಮಾಜದಿಂದ ಪ್ರವೃದ್ಧಮಾನವಾಗಬೇಕು. ವಿದ್ಯಾಭ್ಯಾಸದ ಹಿರಿಯ ಗುರಿಗಳಲ್ಲಿ, Super-Ego ಅಥವಾ ಸತ್–ಚೈತನ್ಯಾಂಶವನ್ನು ಸದೃಢವಾಗಿಸುವುದು, ಮುಖ್ಯವಾದುದು, ಮಾನಸಿಕ ಬೇನೆಗಳನ್ನು ಮುದುಕರಲ್ಲಿ ತಡಗಟ್ಟಬೇಕಾದರೆ, ಇದನ್ನು ಮೊದಲಿನಿಂದಲೂ ಸಾಧಿಸಲು ಸಮಾಜವು ಯತ್ನಿಸಬೇಕು.

ಮತ–ಧರ್ಮಗಳು ; ಸತ್–ಚೈತನ್ಯಾಂಶದ ಬೆಳವಣಿಗೆಯು; ಮಾನಸಿಕ ನೆಮ್ಮದಿಯೂ, ಒಂದಕ್ಕೊಂದು ಹೇಗೆ ನಿಕಟ ಸಂಬಂಧವನ್ನು ಹೊಂದಿದೆ ಎನ್ನುವುದು ಈಗ ಸ್ಪಷ್ಟವಾಗಿದೆ. ಮಾನಸಿಕ ನೆಮ್ಮದಿಯು ಇರದಿದ್ದರೆ, ಮಾನಸಿಕ ತಳಮಳ ಮತ್ತು ಬೇನೆಗಳು ಉಂಟಾಗುವುವು. ಮಾನಸಿಕ ಬೇನೆಗಳಿಗೆ ಔಷಧಿಗಳ ಮತ್ತು ಶಸ್ತ್ರ ಚಿಕಿತ್ಸೆಯು, ಅಗತ್ಯ. ಆದರೆ ಅಂತಹ ಬೇನೆಗಳು ಸಮಾಜದಲ್ಲಿ ಬಾರದಂತೆ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳುವುದು ಜಾಣತನ. ಸಮಾಜವೇ ಇದನ್ನು ಅರಿತು ಸಾಧಿಸಬೇಕು. ಅಂತಹ ಅತ್ಯಗತ್ಯವಾದ ಮುಂಜಾಗ್ರತಾ ಕ್ರಮವು Super-Ego ಅಥವಾ ಸತ್–ಚೈತನ್ಯಾಂಶವನ್ನು ಶೈಶವದಿಂದಲೂ ಬೆಳೆಸಿ ಅಭಿವೃದ್ಧಿಸುವುದು, ಸಮಾಜದ ಅರಿತ ಹಿರಿಯರು ಮಾಡಲೇಬೇಕಾದ ಕರ್ತವ್ಯ.

ವಿದ್ಯಾಭ್ಯಾಸದ ತಳಹದಿಯೇ ಇದು, ಇದಿಲ್ಲದ ವಿದ್ಯಾಭ್ಯಾಸವು, ವಿದ್ಯೆಯ ಆಭಾಸವಾಗುತ್ತದೆ.

* * * *

# ೫. ಮನಸ್ಸಿನ ಚಟುವಟಿಕೆಗಳು

ಮನಸ್ಸಿನ ಚಟುವಟಿಕೆಗಳು ಯಾವ ರೀತಿಯಲ್ಲಿ ನಡೆಯುತ್ತವೆ ಎಂಬುದನ್ನು ಒಂದು ನಿದರ್ಶನದೊಂದಿಗೆ ತಿಳಿಯೋಣ. ಸ್ವಂತ ಅನುಭವದ ನಿದರ್ಶನವಾದರೆ ಓದುಗರಿಗೆ ನೇರವಾಗಿ ತಟ್ಟಬಹುದು.

ಆ ಅಧ್ಯಾಯವನ್ನು ಬರೆದು ಸಂಜೆಯ ಹೊತ್ತಿಗೆ ಪೂರೈಸಬೇಕು ಎಂದು ಬೆಳಿಗ್ಗೆ ಎದ್ದಾಗ ನಿರ್ಧರಿಸಿದೆ. ಡಿಟೆಕ್ಟಿವ್ ನಾವೆಲ್ಲನ್ನು ಹಿಂದಿನ ರಾತ್ರಿ ಓದಿ ಮುಗಿಸಿದ್ದೆ. ಹೊಸದು ಇನ್ನೂ ಸಿಕ್ಕಿರಲಿಲ್ಲ. ಹಾಗೂ ಈ ದಿನ ಪೂರ್ತಿ ರಜಾ. ಅಂದ ಮೇಲೆ ಬರೆದು ಮುಗಿಸಬೇಕು ಎನ್ನುವ ನಿರ್ಧಾರವನ್ನು ಮಾಡಿತು, ನನ್ನ ಮನಸ್ಸು.

ಬೆಳಗ್ಗೆ ಎದ್ದ ಮೇಲೆ, ಪ್ರಾತರ್ವಿಧಿಗಳನ್ನು ಮುಗಿಸಿದ ನಂತರ ತಿಂಡಿಯನ್ನು ಬೇಕಾದಷ್ಟು ತಿಂದು, ಕಾಫಿಯನ್ನು ಕುಡಿಯುವ ಅಭ್ಯಾಸ. ಬೇಕಾದ ತಿಂಡಿಯು ಸಿಗದೆ ಇರುವವರು, ಸಿಕ್ಕ ತಿಂಡಿಯನ್ನು ಬೇಕಾದಷ್ಟು ಮುಕ್ಕುತ್ತಾರೆ. ಆ ಗುಂಪಿನವ ನಾನು. ಆದರೆ ಈ ಬೆಳಗ್ಗೆ ಹೊಟ್ಟೆ ತುಂಬಾ ತಿಂದರೆ, ನಿದ್ರೆಯು ಬರುತ್ತದೆಯೇ ಹೊರತು, ಬರೆಯಲಾಗುವುದಿಲ್ಲ ಎಂದು ಅನುಭವದ ವಾಣಿ ಎಚ್ಚರಿಸಿತು. ಆದಕಾರಣ ಎರಡೇ ಪುಟ್ಟ ಇಡ್ಲಿಗಳನ್ನು ತಿಂದು ಕಾಫಿಯನ್ನು ಕುಡಿದು, ಮೇಜಿನ ಮುಂದೆ ಬರೆಯಲು ಕುಳಿತೆ.

ಈ ಅಧ್ಯಾಯದಲ್ಲಿ ಬರೆಯಬೇಕಾದ ವಿಷಯಗಳನ್ನು 'ಮನೋ–ನಂದನ'ದಲ್ಲಿ ಬರೆದಾಗಿದೆಯೇ? ಹಾಗಾಗಿದ್ದರೆ ಪುನಃ ಬರೆಯುವುದು ಪೆಚ್ಚುತನ ಎಂದೆನಿಸಿತು. 'ಮನೋನಂದನ'ದಲ್ಲಿ ಈ ವಿಷಯವನ್ನು ಕುರಿತು ಏನು ಬರೆದಿದ್ದೆನೋ, ಅದು ಭಗವಂತನಿಗೇ ಗೊತ್ತು. ನನಗನಕ ಅದರ ನೆನಪು ಇರಲಿಲ್ಲ. ಆದುದರಿಂದ ಆ ಪುಸ್ತಕವನ್ನು ಹುಡುಕಿ ತೆಗೆದು ಓದೋಣ ಎಂದುಕೊಂಡೆ. ಕುರ್ಚಿಯಿಂದ ಎದ್ದೆ. ಪುಸ್ತಕಗಳ ಕಪಾಟುಗಳ ಬಳಿಗೆ ಹೋದೆ; ಎಷ್ಟು ಹುಡುಕಿದರೂ ಆ ಹಾಳು ಪುಸ್ತಕದ ಪ್ರತಿಯು ಸಿಗಲೇ ಇಲ್ಲ. ಒಂದು ಪ್ರತಿಯನ್ನು ಹುಷಾರಾಗಿ ಮುಚ್ಚಿಟ್ಟಿದ್ದ ನೆನಪು ಸ್ಪಷ್ಟವಾಗಿತ್ತು. ಆದರೆ ಎಲ್ಲಿ ಮುಚ್ಚಿಟ್ಟಿದ್ದೆ ಎನ್ನುವುದು ಸ್ಮರಣೆಗೆ ಬರಲೇ ಇಲ್ಲ. ಉಳಿದ ಒಂದೇ ಪ್ರತಿಯನ್ನು ಯಾರಿಗೆ

ಕೊಟ್ಟೆ? ಎಂದು ಸುಮಾರು ಎರಡು ಸಿಗರೇಟುಗಳ ಕಾಲ ಯೋಚಿಸಿದೆ. ಯಾರಿಗೂ ಕೊಟ್ಟ ನೆನಪಾಗಲಿಲ್ಲ. ಇಂತಹ ಪ್ರತಿಯನ್ನು ಯಾರಿಗೂ ಆಪ್ತರಿಗೂ ಕೂಡ, ಕೊಡಲು ಮನಸ್ಸು ಒಪ್ಪುವುದೇ ಇಲ್ಲ. ಕೆಲವು ಪುಸ್ತಕಗಳ ವಿಷಯದಲ್ಲಿ; ಅದೂ ನನ್ನ ಪುಸ್ತಕಗಳಾಗಿದ್ದರೆ, ನಾನು ಅತ್ಯಂತ ಲೋಭಿ, ಜಿಪುಣ. ಮತ್ತೆ ಆ ಪ್ರತಿಯೇನಾಯಿತು?

ಯಾಕೋ? ಬರೆಯಲು ಕುಳಿತರೆ, ಇವತ್ತು ಶಕುನವು ಸರಿಯಾಗಲಿಲ್ಲ. ಇವತ್ತು ಬರೆಯುವುದು ಬೇಡ. ಬೆಳಿಗ್ಗೆ ದೈನಂದಿನ ಪತ್ರಿಕೆಯಲ್ಲಿ ಕಂಡ ಚಕ್ರಬಂಧ ಸ್ಪರ್ಧೆಯ ಸಮಸ್ಯೆಯನ್ನು ಮುಗಿಸೋಣ ಎಂದುಕೊಂಡೆ. ಕಾಲವನ್ನು ಹಾಗೂ ತನ್ನನ್ನು ಖೂನಿ ಮಾಡಲು ಇದ್ದಕ್ಕಿಂತ ಪವಿತ್ರವಾದ ಹವ್ಯಾಸವುಂಟೇ? ಇಂತಹ ಪವಿತ್ರ ಕಾರ್ಯವನ್ನು ಪ್ರಾರಂಭಿಸುವ ಮೊದಲು, ಒಂದು ತಟ್ಟೆ ಹುರಿಗಾಳನ್ನು ಪಕ್ಕದಲ್ಲಿಟ್ಟುಕೊಂಡರೆ ವೈನ ಎಂದನಿಸಿತು. ಹುರಿಗಾಳಿನ ಡಬ್ಬವನ್ನು ಪುಸ್ತಕದ ಕಪಾಟಿನಲ್ಲಿ ಸುರಕ್ಷಿತವಾಗಿಡುವುದು ನನ್ನದೊಂದು ಒಳ್ಳೆಯ ಗುಣ. ಅದನ್ನೆಂದೂ ಮರೆಯುವುದಿಲ್ಲ. ತಟ್ಟೆಯನ್ನು ಹಿಡಿದುಕೊಂಡು ಹುರಿಗಾಳಿನ ಡಬ್ಬವಿದ್ದ ಪುಸ್ತಕದ ಕಪಾಟಿನ ಬಳಿಗೆ ಹೋದೆ ಡಬ್ಬವನ್ನು ಹೊರ ತೆಗೆದೆ. ಅದರ ಹಿಂದೆಯೇ ಮನೋನಂದನದ ಪ್ರತಿಯು ಕಾಣಿಸಿತು. ಅದನ್ನು ಕಂಡ ಮೇಲೆ, ಶಕುನವು ಸರಿಹೋಯಿತು. ಇವತ್ತು ಈ ಅಧ್ಯಾಯವನ್ನು ಬರೆದು ಮುಗಿಸೋಣ ಎಂದು ಪುನಃ, ಮೇಜಿನ ಬಳಿಗೆ ಬಂದೆ. ಪುಸ್ತಕವನ್ನು ಹಿಡಿದುಕೊಂಡು, ಹುರಿಗಾಳಿನ ಡಬ್ಬ ಮತ್ತು ತಟ್ಟೆಯನ್ನು ಡಬ್ಬದ ಮೇಲಿರಿಸಿದೆ.

ಮನೋನಂದನವನ್ನು, ಒದ್ದು ಬೈದು, ಬೇಡಿ ಕಾಡಿ, ಬರೆಸಿದ ಜಿ. ಪಿ. ಯವರ ನೆನಪಾಯಿತು. ಅವರಿಗೆ 'ಥ್ಯಾಂಕ್ಯೂ' ಅನ್ನಬೇಕು ಎನಿಸಿತು. ಅವರೆದುರಿಗೆ ಹಾಗೆ ಹೇಳಿದರೆ, ಅವರು ಸಂತಸಗೊಂಡಾರು ; ತೃಪ್ತಿಪಡಬಹುದು ಎಂದೂ ಅನ್ನಿಸಿತು. ಆದರೆ ಅದರ ಹಿಂದೆಯೇ 'ಎಷ್ಟೆಲ್ಲಾ ಕಾಡಿ ಕೆಡವಿದ ; ಸುಖ ವಸ್ತುವಾದ ನನ್ನನ್ನು' ಎಂಬ ಯೋಚನೆಯೂ ನೆನಪಾಯಿತು. ಎದುರಿಗೆ 'ಥ್ಯಾಂಕ್ಯೂ' ಎಂದರೂ ನನ್ನ ಮನಸ್ಸಿನಲ್ಲಿ ವಂದನಾ ಭಾವನೆಯೂ ಇರಲಿಲ್ಲ, ಇದೆಂತಹ ಮೋಸ! ನನಗೆ ನಾನೇ ಮಾಡಿಕೊಳ್ಳುವ ಮನಸ್ಸಿನ ತಟವಟ, ಎಂದೂ ತೋರಿತು.

ನಂತರ ಆ ಪುಸ್ತಕದ ಹಾಳೆಗಳನ್ನು ಮನಸ್ಸಿನ ಚಟುವಟಿಕೆಗಳು ಎಂಬ ಅಧ್ಯಾಯದ ಪುಟಗಳನ್ನು ತಿರುವು ಹಾಕಿದೆ. ಅರೆ! ಅಲ್ಲಿ ಬರೆದಿರುವುದನ್ನೇ ಇಲ್ಲೂ ಬರೆಯಬೇಕಾಗುತ್ತದಲ್ಲ! ಇದೇನೂ ಅಷ್ಟು ಚೆನ್ನಲ್ಲ ಎನ್ನಿಸಿತು. ಹೇಳಿದ್ದನ್ನೇ ಹೇಳುವ ಕಿಸಬಾಯಿದಾಸನಾಗಬೇಕೇ ಎನ್ನಿಸಿತು. ಆದಕಾರಣ ಅಲ್ಲಿ ಬರೆದಂತೆಯೇ

ಒಂದೊಂದು ಚಟುವಟಿಕೆಯನ್ನೂ ವಿವರವಾಗಿ ಬರೆಯುವುದು ಬೇಡ. ಬೇರೆಯ ತರಹಾ ಇನ್ನೂ ಸ್ಪಷ್ಟವಾಗಿ ಬರೆಯಬೇಕು. ವಿಷಯವು ಚೆನ್ನಾಗಿ ತಿಳಿದಿದ್ದರೆ, ಬರವಣಿಗೆಯು ಸರಳವೂ ಸುಲಭವೂ ಆಗಿರುತ್ತದೆ. ಆದಕಾರಣ ವಿಷಯವನ್ನು ಮೆಲುಕು ಹಾಕೋಣ ಎನಿಸಿತು.

ಮೇಜಿನ ಮುಂದೆ ಕುರ್ಚಿಯ ಮೇಲೆ ಕುಳಿತು ಮೆಲುಕು ಹಾಕತೊಡಗಿದೆ. 'ಮನಸ್ಸಿನ ಚಟುವಟಿಕೆಗಳು' ಈ ವಿಷಯವು ನನ್ನ ಮನಸ್ಸನ್ನು ಕಚ್ಚಿಕೊಳ್ಳಲಿಲ್ಲ. ನನ್ನ ಮನಸ್ಸು ಅಡ್ಡದಾರಿಯನ್ನು ಹಿಡಿಯಿತು. ಸಿಗರೇಟು ಉರಿಯತೊಡಗಿತು.

'ಈ ಪುಸ್ತಕವನ್ನು ಅತ್ಯುತ್ತಮ ರೀತಿಯಲ್ಲಿ ಬರೆಯುತ್ತೇನೆ. ಕನ್ನಡವನ್ನು ಕಲಿಯುತ್ತಿರುವ ಹಿಪ್ಪಿ ತರುಣಿಯೊಬ್ಬಳು ಅಕಸ್ಮಾತ್ ಇದನ್ನು ನೋಡುತ್ತಾಳೆ, ಓದುತ್ತಾಳೆ. ಡಂಗ್ ಆಗಿ ಬಿಡುತ್ತಾಳೆ. ಬಂದು ನನ್ನನ್ನು ಕಂಡು 'ಘನ ವಿದ್ವಾಂಸರೇ! ನಿಮ್ಮ ಪುಸ್ತಕವನ್ನು ಇಂಗ್ಲೀಷಿಗೆ ತರ್ಜುಮೆಮಾಡಿ ಅಮೆರಿಕಾದಲ್ಲಿ ಪ್ರಕಟಪಡಿಸುತ್ತೇನೆ. ನನ್ನ ಜತೆಯಲ್ಲಿ ಅಮೆರಿಕಾಕ್ಕೆ ಬನ್ನಿ. ತರ್ಜುಮೆ ಮಾಡಲು ನೆರವಾಗಿ ರಾಜಾತಿಥ್ಯವನ್ನು ನಿಮಗೆ ನೀಡುತ್ತೇನೆ. ಒಂದು ಲಕ್ಷ ಡಾಲರನ್ನು ಗೌರವ ಧನವನ್ನಾಗಿ ಕೊಡುತ್ತೇನೆ. ನನ್ನ ತಂದೆಯ ಹೆಸರನ್ನು ನೀವು ಕೇಳದೇ ಇರಬಹುದು. ರಾಕ್‌ಫೆಲ್ಲರಿನ ಮೊಮ್ಮಗ ಆತ. ನಾನೊಬ್ಬಳೇ ಮಗಳು' ಎಂದನ್ನುತ್ತಾಳೆ. 'ಇಷ್ಟು ವಿಶ್ವಾಸದಿಂದ ಕರೆಯುತ್ತಾ ಇದಿ, ಆದರೆ ಹಣ್ಣು ಹಣ್ಣು ಮುದುಕ ನಾನು, ಅಮೆರಿಕಾದ ಆತಿಥ್ಯವನ್ನು ಸವಿಯುವ ಆಯಸ್ಸು ಮಿಂಚಿ ಹೋಗಿದೆಯಲ್ಲೇ! ಆದರೂ ನೀನೂ ಬಾ ಅಂತ ಬಾಯಿ ಬಿಟ್ಟರೆ, ನನ್ನ ಬಾಯಲ್ಲೂ ಜೊಲ್ಲು ಸುರಿಯುತ್ತೆ. ಇಲ್ಲಿ ಒಂದಿಷ್ಟು ಚಿಲ್ಲರೆ ಸಾಲಗಳಿವೆ. ಮುಂಗಡವಾಗಿ ಸ್ವಲ್ಪ ಹಣ ಕೊಟ್ಟರೆ, ಒಂದಿಷ್ಟು ಅಗತ್ಯವಾದ ಬಟ್ಟೆಗಳನ್ನು ಹೊಲಿಸಿಕೊಳ್ಳುತ್ತೀನಿ. ಮತ್ತು ಸಾಲಗಳನ್ನು ತೀರಿಸುತ್ತೀನಿ. ನಂತರ ನಿನ್ನೊಡನೆ ಎಲ್ಲಿಗಂದರೆ ಅಲ್ಲಿಗೆ ಬರ್ತೀನಿ' ಎನ್ನುತ್ತೇನೆ. ಅವಳು ತತ್‌ಕ್ಷಣ, ಐವತ್ತುಸಾವಿರ ಡಾಲರುಗಳ ಚೆಕ್ಕನ್ನು ಬರೆದು ಕೊಡುತ್ತಾಳೆ. 'ಇನ್ನೆಂಟು ದಿನಗಳಲ್ಲಿ ನಿಮ್ಮ ಪ್ರವಾಸ ಪತ್ರಗಳನ್ನು ಅಣಿ ಮಾಡಿಸುತ್ತೇನೆ. ನಂತರ ಹೊರಡೋಣ' ಎನ್ನುತ್ತಾಳೆ. ಆಮೇಲೆ ಕೇಳಬೇಕೆ? ಅಮೆರಿಕಾದಲ್ಲಿ ಪ್ರಕಟಣೆ ಸ್ಟಾಕ್ ಹೊಂನಲ್ಲಿ ನೊಬೆಲ್ ಪಾರಿತೋಷಕ ಅಂದಮೇಲೆ ದಿಳ್ಳಿಯಲ್ಲಿ ಹಿಂತಿರುಗುವಾಗ ಎಂತದಾದರೂ ಒಂದು 'ಪದ್ಮ' ಬೆಂಗಳೂರಿಗೆ ಬಂದ ಮೇಲೆ, ನಮ್ಮ ಕೇರಿಯ ಕನ್ನಡಿಗರು, ಅದು ಯಾವುದೋ ನಿಮ್ಮ ಪುಸ್ತಕಕ್ಕೆ ಯಾರೋ ಕೊಳ್ಳೆ ಹಣ ಕೊಟ್ಟರಂತೆ. ಆದ್ದರಿಂದ ನಿಮ್ಮನ್ನು ನಾವೂ ಸನ್ಮಾನಿಸುತ್ತೇವೆ, ಎನ್ನುತ್ತಾರೆ.

ಸಿಗರೇಟ್ ಮುಗಿದು ಹೋಯಿತು, ಬರೆಯುವುದಕ್ಕೆ ಇನ್ನೂ ಪ್ರಾರಂಭಿಸಿಯೇ ಇಲ್ಲ.ಆಗಲೇ ತಿರುಕನ ಕನಸನ್ನು ಕಾಣಲು ಶುರು ಹಚ್ಚಿದ್ದೇನಲ್ಲಾ ! ಹಗಲು ಗನಸಿನ ಮೋಜಿಗೆ ಒಳಬಿದ್ದೆನಲ್ಲಾ, ಎಂಬ ಕೊರಗು ಅರೆಕ್ಷಣ ಕಾಡಿತು. ಹೀಗೆ ಕಾಲದ ಅಪವ್ಯಯವನ್ನು ಮಾಡಬಾರದು. ಧಿಮ್ಮಂತ ಕೂತು ಬರೆಯಬೇಕು ಎಂದು ನಿರ್ಧರಿಸಿದೆ.

ಟೆಲಿಫೋನ್ ಬಾರಿಸಿತು, ಟ್ರಿಂಗ್, ಟ್ರಿಂಗ್ ಅಂತ. ಶಪಿಸುತ್ತಾ ರಿಸೀವರನ್ನು ಎತ್ತಿದೆ. 'ರಾಮು ಮಗಳ ಮದುವೆಗೆ ಯಾಕೆ ನೀ ಬರಲಿಲ್ಲ. ಉಳಿದಿರುವವರು ನಾವು ನಾಲ್ಕು ಜನ ಹಳಬರು. ನೀನು ಯಾಕೆ ಬರಲಿಲ್ಲ ? ಆರೋಗ್ಯವಾಗಿದ್ದರೆ ಬರದೆ ತಪ್ಪಿಸಿಕೊಳ್ಳುವವನಲ್ಲ. ಆದ್ದರಿಂದ ಧಾರೆ ಮಂಟಪದಿಂದ ಹಿಂತಿರುಗಿ ಬಂದ ಮೇಲೆ ನಿನಗೆ ರಿಂಗ್ ಮಾಡಿದೆ' ಎಂದು ಶಾಮು ಕೇಳುತ್ತಿದ್ದ. 'ನಿನಗೆ ಗೊತ್ತಲ್ಲಾ ನನ್ನ ಸೊಂಟದ ಕಾಯಿಲೆಯ ವಿಚಾರ. ಜಟ್ಟಂತ ಬಿಗಿದುಕೊಂಡು ಬಿಡುತ್ತೆ, ಅಳ್ಳಾಡಲೂ ಆಗುವುದಿಲ್ಲ' ಎಂದು ಸುಳ್ಳು ಸಬೂಬನ್ನು ಸಲೀಸಾಗಿ ಹೇಳಿದೆ. ಆದರೆ ರಾಮುವಿನ ಮಗಳನ್ನು ಹುಟ್ಟಿದಂದಿನಿಂದ ನೋಡುತ್ತಿದ್ದೆ, ಮುದ್ದಿಸುತ್ತಿದ್ದೆ. ರಾಮು ನಾನೂ ಅಷ್ಟು ಗಳಸ್ಯ–ಕಂಠಸ್ಯ. ಅಗತ್ಯವಾಗಿ ಹೋಗಬೇಕಾಗಿತ್ತು. ತಪ್ಪು ಮಾಡಿದೆ, ರಾಮುವಿನ ಮಗಳು ಮಾಮಾ ಬರಲೇ ಇಲ್ಲ ಎಂದು ನೊಂದುಕೊಳ್ಳುತ್ತಾಳೇನೋ ಎನ್ನುವ ಅಪರಾಧ ಮನೋಭಾವವು ಕಾಡತೊಡಗಿತು. ಮನಸ್ಸಿಗೆ ತುಂಬಾ ನೋವಾಯಿತು. ಆಗ ಅನ್ನಿಸಿತು, 'ಮದುವೆಯ ಗಲಾಟೆ, ಗಂಡನನ್ನು ಕದ್ದು ಕದ್ದು ನೋಡುವ ಸಡಗರದಲ್ಲಿರುತ್ತಾಳೆ. ಮುಂದಿನ ಬಾಳಿನ ಹೊಂಗನಸುಗಳನ್ನು ಕಾಣುತ್ತಿರುತ್ತಾಳೆ. ಅವಳ ಜತೆಗಾರ್ತಿಯರು ಛೇಡಿಸುವುದನ್ನು ಯಾವ ರೀತಿ ಉತ್ತರಿಸಬೇಕು, ಎಂದು ಹವಣಿಸುತ್ತಿರುತ್ತಾಳೆ. ನನ್ನ ನೆನಪು ಯಾಕಾದರೂ ಬಂದೀತು?' ಹೀಗೆಲ್ಲಾ ಮನಸ್ಸು ಯೋಚಿಸಿದಾಗ ತುಸು ಸಮಾಧಾನವಾಯಿತು. ಅಪರಾಧವನ್ನು ಮಾಡಿದೆ ಎನ್ನುವ ಕೊರಗು ಕರಗುತ್ತ ಹೋಯಿತು. ಮಾಡಿದ ತಪ್ಪಿಗೆ ಕೊರಗುವುದನ್ನು, ನನ್ನ ಮನಸ್ಸು ತಾನೇ ಹಲವಾರು ಸಬೂಬುಗಳನ್ನು ಹೂಡಿ, ತಪ್ಪಿಸಿಕೊಂಡಿತು.

ಅಂದರೆ ಈ ತನಕ ತನ್ನ ಮನಸ್ಸಿನ ಚಟುವಟಿಕಗಳು ಮೂರು ತೆರನಾದುವು. ೧. ಬರೆಯತೊಡಗಿದ್ದು. ಅದಕ್ಕೆ ಅಗತ್ಯವಾದ ಇತರ ಚಟುವಟಿಕೆಗಳು. ೨. ಹಗಲುಗನಸುಗಳನ್ನು ಕಾಣುವುದು. ೩. ಅಪರಾಧ ಮನೋಭಾವವು ಉಂಟಾದಾಗ ಸಮಾಧಾನವನ್ನು ಮಾಡಿಕೊಳ್ಳುವುದು.

ಮೂರೂ ತೆರನ ಚಟುವಟಿಕೆಗಳು ಸ್ವಾರ್ಥೀ ಚಟುವಟಿಕೆಗಳು ನನಗಾಗಿ

ನನ್ನ ತೃಪ್ತಿಗಾಗಿ ಮಾಡಿಕೊಳ್ಳುವ ಚಟುವಟಿಕೆಗಳು.

ಆದರೆ ಈ ಪುಸ್ತಕವನ್ನು ಬರೆಯಬೇಕು ಎನ್ನುವ ತೆವಲು ಏಕೆ ಹಿಡಿಯಿತು? ಎಚ್ಚರವಾಗಿರುವ ಹೊತ್ತಿನಲ್ಲೆಲ್ಲಾ ನನ್ನ ಕಸುಬನ್ನು ಮಾಡುವಷ್ಟು ಕೆಲಸವಿದೆ. ಸ್ವಲ್ಪ ಹೊತ್ತು ವಿರಾಮವು ದೊರಕಿದರೆ ಮನಸ್ಸಿಗೆ ತ್ರಾಸು ಕೊಡದೆ ಓದಬಹುದಾದ ಅಸಂಖ್ಯಾತ ಪುಸ್ತಕಗಳಿವೆ. ಸುಖವಾಗಿ ಹೀಗೆ ಇರುವುದರ ಬದಲು, ಈ ಪುಸ್ತಕವನ್ನು ಬರೆಯಲು ಏನೆಲ್ಲಾ ಕಷ್ಟ ಪಡಬೇಕು? ಏಕೆ ಕಷ್ಟ ಪಡುತ್ತಿದ್ದೇನೆ? ವಿಶ್ಲೇಷಣೆಯನ್ನು ಮಾಡಿದೆ.

ಮನಸ್ಸನ್ನು ತಾವೇ ಗೋಜು ಮಾಡಿಕೊಂಡು ವಿನಾಕಾರಣ ನರಳುವ ರೋಗಿಗಳನ್ನು ಕಂಡಾಗ ತುಂಬಾ ಮರುಕವುಂಟಾಗುತ್ತಿತ್ತು. ಮನಸ್ಸು ಗೋಜು ಮಾಡಿಕೊಂಡು ತಳಮಳ ಪಡಲು ಆರಂಭಿಸಿದಾಗ, ಕೂಡಲೇ ವೈದ್ಯರಲ್ಲಿಗೆ ಹೋಗಿದ್ದರೆ, ಅವನ ಸಲಹೆಯನ್ನು ಪಡೆದು, ಚಿಕಿತ್ಸೆಯನ್ನು ಮಾಡಿಕೊಂಡು, ಬಹಳ ಸುಲಭವಾಗಿ ಗೋಜನ್ನು ಬಿಡಿಸಿಕೊಳ್ಳಬಹುದಾಗಿತ್ತು. ಮನಸ್ಸು ತಳಮಳಗೊಳ್ಳುತ್ತಿದೆ ಎಂದು ಇತರರಲ್ಲಿ ಹೇಳಿಕೊಳ್ಳಲು, ನಮ್ಮ ಸಮಾಜದಲ್ಲಿ ತುಂಬಾ ವಾಮಾನಿಕೆ, ಆದಕಾರಣ ತಳಮಳವನ್ನು ಅನುಭವಿಸುತ್ತಾ ಮನಸ್ಸಿನ ಗೋಜನ್ನು ವಿಪರೀತವನ್ನಾಗಿ ಮಾಡಿಕೊಳ್ಳುವ ರೋಗಿಗಳನ್ನು ಕಂಡು ಅನುಕಂಪ. ಇವರುಗಳಿಗೆ ಮನಸ್ಸು ಹೇಗೆ ಗೋಜಾಗುತ್ತೆ ಎಂಬುದನ್ನು ತಿಳಿಸಬೇಕು. ಮನೆಮನೆಯಲ್ಲಿಯೂ ಈ ರೀತಿ ತಳಮಳವನ್ನು ಅನುಭವಿಸುವವರು ಬಹಳಷ್ಟು ಮಂದಿ ಇದ್ದಾರೆ ; ಹೊರ ನೋಟಕ್ಕೆ ನೆಮ್ಮದಿಯಿಂದ ಇದ್ದಂತೆಯೇ ಕಾಣಿಸುತ್ತದೆ. ಆದರೂ ಅವರುಗಳು ನನ್ನಂತೆಯೇ ಒಳ ಒಳಗೇ ನರಳುತ್ತಿದ್ದಾರೆ ; ಈ ವಿಷಯವು ತಿಳಿದರೆ, ಆಗ ರೋಗಿಗಳ ಮನಸ್ಸಿನಲ್ಲಿ ನನ್ನೊಬ್ಬನಿಗೇ ಈ ಬೇನೆ ಬಂದಿದೆ, ನನ್ನ ದುರದೃಷ್ಟ ; ಎನ್ನುವ ಕೀಳು ಮನೋಭಾವವು ಕಡಿಮೆಯಾಗುತ್ತದೆ. Group Therapy ಎನ್ನುವ ಚಿಕಿತ್ಸಾ ಕ್ರಮವು ಮನೋವೈದ್ಯರುಗಳಿಂದ ಆಚರಿಸಲ್ಪಡುವುದು, ಈ ಕಾರಣದಿಂದಲೇ. ಅನುಕಂಪದಿಂದ ಪ್ರೇರಿತವಾದಾಗ, ನನಗೆ ಮತ್ತು ನನ್ನ ಬಾಳಿಗೆ ಅತ್ಯಗತ್ಯವಲ್ಲದಿದ್ದರೂ, ಮನಸ್ಸು ಈ ತೆವಲನ್ನು ಹಚ್ಚಿಕೊಂಡಿತು.

ಹಾಗೂ ಮನೋವಿಜ್ಞಾನದಲ್ಲಿ ಈ ಐದಾರು ದಶಕಗಳಲ್ಲಿ ನಡೆದಿರುವ ಪ್ರಗತಿಯು ಅಮೋಘವಾಗಿದೆ. ಇದನ್ನು ತಿಳಿದುಕೊಳ್ಳಬೇಕು ಎಂಬ ಕುತೂಹಲವು ಕೆರಳಿದೆ. ತೆಪ್ಪನಿರಲು ಬಿಡುವುದಿಲ್ಲ. ಅಲ್ಲದೆ ನಮ್ಮ ನಾಡಿನ ಪುರಾತನ ಮನನಿಗರು ಮನಸ್ಸನ್ನು ಅರಿಯತೊಡಗಿದ್ದರು. ಅದೊಂದೇ ಜ್ಞಾನವನ್ನು ಪಡೆಯಲು

ಅವರುಗಳು ನಿರತರಾಗಿದ್ದರು. ಅವರುಗಳು ಯೋಗ ಸೂತ್ರಗಳಲ್ಲಿ ; ಪುರಾಣಗಳಲ್ಲಿ; ಮತ್ತು ಉಪನಿಷತ್ತುಗಳಲ್ಲಿ ನುಡಿದ ವಿಶ್ಲೇಷಣೆಯು, ಮನೋವೈಜ್ಞಾನಿಕರು ಇಂದು ಸಾಧಿಸಿರುವ ಮಟ್ಟಕ್ಕಿಂತಲೂ ಏರಿದೆಯೇನೋ ಎನ್ನುವ ಯೋಚನೆಯು ಮೂಡಿತು. ಪಕ್ಕ ಪಕ್ಕದಲ್ಲಿವನ್ನು ಇಟ್ಟುಕೊಂಡು ವ್ಯಾಸಂಗವನ್ನು ಮಾಡಿದರೆ, ಅರಿವಿಗೆ ಅನುಕೂಲವಾಗಬಹುದು ಎಂದೆನಿಸಿತು. ಇವೆಲ್ಲವೂ ಕುತೂಹಲವನ್ನು ನನ್ನ ಮನಸ್ಸಿನಲ್ಲಿ ಕೆರಳಿಸಿದುವು.

ನನ್ನ ಜೀವನಕ್ಕೆ ಅತ್ಯಗತ್ಯವಾಗದೆ ಇರುವ ಜ್ಞಾನಾರ್ಜನೆಯು ಮತ್ತು ಕಲಿತ ಜ್ಞಾನವನ್ನು ಪ್ರಸಾರ ಮಾಡುವುದು ; ಇವೆರಡೂ ಒಂದು ರೀತಿಯಲ್ಲಿ ನಿಸ್ವಾರ್ಥಿ ಚಟುವಟಿಕೆಗಳು. ಜ್ಞಾನಾರ್ಜನೆಯನ್ನು ಕುತೂಹಲವು ನನ್ನ ಮನಸ್ಸಿನಲ್ಲಿ ಪ್ರಚೋದಿಸಿತು. ಅನುಕಂಪವು ಜ್ಞಾನಪ್ರಸಾರವನ್ನು ಮಾಡುವಂತೆ ನನ್ನ ಮನಸ್ಸನ್ನು ಪ್ರೇರೇಪಿಸಿತು.

ಅಂದರೆ ಪುಸ್ತಕವನ್ನು ಬರೆಯಬೇಕೆಂಬ ತೆವಲು ಹಿಡಿದುದಕ್ಕೆ, ನಿಸ್ವಾರ್ಥಿಯಾದ ಮನಸ್ಸಿನ ಎರಡು ಪ್ರೇರಕಗಳೂ ಕಾರಣವಾದುವು. ಕುತೂಹಲದಿಂದ ಪ್ರಚೋದಿತವಾದ ಮನಸ್ಸು, ಜ್ಞಾನಾರ್ಜನೆಯನ್ನು ಪ್ರಪಂಚದ ಎಲ್ಲೆಡೆಗಳಿಂದಲೂ ದೊರೆತ ಪುಸ್ತಕ ಮತ್ತು ಲೇಖನಗಳಿಂದ ಸಾಧಿಸಿಕೊಂಡಿತು. ಅನುಕಂಪದಿಂದ ಪ್ರೇರಿತವಾದ ಮನಸ್ಸು ಕಲಿತುದುದನ್ನು, ನಮ್ಮ ಸುತ್ತುಮುತ್ತಲಿನ ಕನ್ನಡವನ್ನಾಡುವ ಸಾಮಾನ್ಯ ಮಂದಿಗೆ, ಸುಲಭವಾಗಿ ತಿಳಿಯುವಂತೆ, ಸರಳವಾಗಿ ಬರೆಯಲು ಪ್ರೇರೇಪಿಸಿತು.

ಕುತೂಹಲದಿಂದ ಮಾನವನ ಮನಸ್ಸು ಪ್ರಚೋದಿತವಾದರೆ, ವಿಜ್ಞಾನದ ಸಹಸ್ರಾರು ಶಾಖೆಗಳಲ್ಲಿ ಪ್ರಗತಿಯುಂಟಾಗುತ್ತದೆ. ಹಾಗೂ Inter-disciplinary Contacts ಇಂದ ಹಿರಿದಾಗುತ್ತದೆ.

ಅನುಕಂಪವು ಮಾನವನ ಮನಸ್ಸನ್ನು ಪ್ರೇರೇಪಿಸಿದರೆ, ಕಲಾ ಪ್ರಕಾರಗಳು ಉಂಟಾಗುತ್ತವೆ. ಸಾಹಿತ್ಯ, ಚಿತ್ರಕಲೆ, ಶಿಲ್ಪ, ಸಂಗೀತ ಮುಂತಾದವುಗಳು ಸೃಷ್ಟಿಯಾಗುತ್ತವೆ.

ವಿಜ್ಞಾನವು ಹೆಚ್ಚಿದಂತೆಲ್ಲಾ ಸಮಸ್ಯೆಗಳೂ ವಿಪರಿಮಿತವಾಗುತ್ತವೆ. ಅವನ್ನು ಬಿಡಿಸುವ ಕುತೂಹಲವು ಮತ್ತೂ ಹೆಚ್ಚಾಗುತ್ತದೆ. ಇದರಿಂದ ಅತ್ಯಂತ ಖುಷಿಯಾಗಬಹುದು. ಆದರೆ ನೆಮ್ಮದಿಯು ಅಸಾಧ್ಯ.

ಕಲೆಗಳು ಎಲ್ಲ ಕಾಲದಲ್ಲೂ ಯಾವ ಹಂತದಲ್ಲೂ ಮನಸ್ಸಿಗೆ ನೆಮ್ಮದಿಯನ್ನು ನೀಡುತ್ತವೆ. ಮಾನವನ ಮನಸ್ಸು ನೆಮ್ಮದಿಯಿಂದಿರಬೇಕಾದರೆ, ನಿಸ್ವಾರ್ಥಿಯಾದ

ಎರಡೂ ಚಟುವಟಿಕೆಗಳು ಸಮನ್ವಯಗೊಳ್ಳಬೇಕು. ಇಲ್ಲದೆ ಇದ್ದರೆ, ವಿಜ್ಞಾನದಲ್ಲಿಯೇ ಮುಳುಗಿದವರು ಮನಸ್ವಾಸ್ಥ್ಯವನ್ನು ಕಳೆದುಕೊಳ್ಳಬಹುದು. ಆದುದರಿಂದಲೋ ಏನೋ Absent-minded professor ಎನ್ನುವುದು.

ಮನಸ್ಸಿನ ಕಾರ್ಯಕ್ರಮಗಳು ; ಚಟುವಟಿಕೆಗಳು ; ಅವನ್ನು ಪ್ರೇರೇಪಿಸುವ ಕಾರಕಗಳು ; ಇವುಗಳನ್ನು ಸ್ಥೂಲವಾಗಿ ಅರಿತೆವು. ಮನೋವೈಜ್ಞಾನಿಕರ ಭಾಷೆಯನ್ನು, ನಮ್ಮ ಋಷಿಗಳು ನುಡಿದ ಭಾಷೆಯೊಂದಿಗೆ ಸಮನ್ವಯಿಸಲಾಯಿತು. ಸಂಪೂರ್ಣವಾಗಿ ಸ್ವಾರ್ಥಿಯಾದ, ಮತ್ತು ತುಸುಮಟ್ಟಿಗೆ ಮಾತ್ರ ಸ್ವಾರ್ಥಿಯಾದ, ಆದರೆ ಬಹಳಷ್ಟು ಮಟ್ಟಿಗೆ ನಿಸ್ವಾರ್ಥಿಯಾದ ಮನಸ್ಸಿನ ಚಟುವಟಿಕೆಗಳನ್ನು ತಿಳಿದೆವು. ಬಹಳಷ್ಟು ನಿಸ್ವಾರ್ಥಿಯಾದ ಚಟುವಟಿಕೆಗಳಿಗೆ ; ಕುತೂಹಲ ಮತ್ತು ಅನುಕಂಪಗಳು ಪ್ರೇರಕಗಳು : ಕುತೂಹಲದ ಕೆರಳುವಿಕೆಯಿಂದ ವಿಜ್ಞಾನ ; ಅನುಕಂಪದಿಂದ ಕಲಾ ರೂಪಗಳು, ಹೊರಸೂಸುತ್ತವೆ ಎಂಬುದನ್ನು ಅರಿತೆವು.

ಮನೋವೈಜ್ಞಾನಿಕ ಭಾಷೆಯಲ್ಲಿ ; ಮುಖ್ಯವಾದ ಮೂರು ಅಂಶಗಳಿರುತ್ತವೆ. ಸನಾತನವಾದ, ಹಾಗೂ ಪುರಾತನವಾದ Id ಎಂಬ ಅಂಶವು ಎಲ್ಲ ಜೀವಂತ ಪ್ರಾಣಿಗಳಲ್ಲಿಯೂ ಇರುತ್ತದೆ. ಅತ್ಯಂತ ಪ್ರಬಲವಾದ ಈ ಶಕ್ತಿಯು, ಮನಸ್ಸು ಗೂಡು ಮಾಡಿಕೊಂಡಿರುವ ದೇಹದ ಅಸ್ತಿತ್ವನ್ನು ಸ್ಥಿರವನ್ನಾಗಿ ಮಾಡಲು, ಶಾಶ್ವತವನ್ನಾಗಿ ಮಾಡಲು, ಸದಾ ಪ್ರಯತ್ನಿಸುತ್ತಿರುತ್ತದೆ. ಇಂತಹ ದೇಹ ರಕ್ಷಕವಾದ ಮನಸ್ಸಿನ ಅಂಶವು ಇಂತಹ ಪ್ರಯತ್ನಗಳಿಂದ ಸಂತೋಷವನ್ನು ಸುಖವನ್ನು ಪಡೆಯುತ್ತದೆ. ದೇಹವು ಸಂತೋಷವನ್ನು ಅನುಭವಿಸುವುದು, ಅದನ್ನು ನಡಸುವ ಮನಸ್ಸಿನ ಅಂಶದಿಂದ ತಾನೇ? ಆದುದರಿಂದಲೇ ದೇಹ ಮತ್ತು ಅದಕ್ಕೆ ಅನ್ವಯವಾಗುವ ಮನಸ್ಸಿನ ಅಂಶವನ್ನೂ ಕೂಡಿಸಿ, ದೇಹ ಮನಸ್ಸಿನಾಂಶದ ಒಕ್ಕೂಟ ಎನ್ನುವುದು.

ವೈಜ್ಞಾನಿಕ ಭಾಷೆಯಲ್ಲಿ Ego-ನಾನು ಎಂಬುದು ಮನಸ್ಸಿನಲ್ಲಿ ಅಂಕುರಿಸಿ, ಬೇರೂರಿ ದೃಢಮರವಾಗುತ್ತದೆ. ಇದೇ ಲೌಕಿಕ ಬಾಳಿನಲ್ಲಿ ತಲೆಯೆತ್ತಿ ನಿಂತು ನಡೆಯಲು ಉಪಯುಕ್ತ ಸಾಧನವಾಗುತ್ತದೆ. ಸ್ವತಂತ್ರವಾಗಲು, ಸ್ವಾವಲಂಬಿಯಾಗಲು, ನೆರವಾಗುತ್ತದೆ. ಜೀವನದುದ್ದಕ್ಕೂ ಇದರ ಬೆಳವಣಿಗೆಯನ್ನು ಪ್ರತ್ಯಕ್ಷವಾಗಿ ಕಾಣಬಹುದು. ಬಾಲ್ಯದಲ್ಲಿ ಪರಾವಲಂಬಿ. ತಾಯ್ತಂದೆಯರು ಅಥವಾ ಅವರ ಪ್ರತಿರೂಪಗಳು ಬೆಂಬಲವಾಗಿದ್ದರೆ, ಬಾಳಿ ಜೀವನವನ್ನು ಮುಂದುವರಿಸಲು ಸಾಧ್ಯ. ಹಾಗಾಗದಿದ್ದರೆ ಅನಾಥಾಲಯ. ಯೌವನದಲ್ಲಿ ಸ್ವಾವಲಂಬಿಯಾಗಲು Ego ಪ್ರಯತ್ನವನ್ನು ಪಡುತ್ತದೆ. ಲೋಕಾನುಭವವನ್ನೂ ಲೋಕದ ಜ್ಞಾನವನ್ನೂ

ಪಡೆದುಕೊಳ್ಳಲು ಆಸಕ್ತಿಯನ್ನು ಹೊಂದುತ್ತದೆ. ಇಂತಹ ಸ್ಥಿತಿಯಲ್ಲಿ ಸ್ವಲ್ಪ ಮಟ್ಟಿಗೆ ಪರಾವಲಂಬಿಯಾಗಿರಬೇಕು. ವಯಸ್ಕರಾಗುವ ವೇಳೆಗೆ ತಮ್ಮ ಅಗತ್ಯಗಳನ್ನು ತಾವೇ ಪೂರೈಸಿಕೊಳ್ಳತೊಡಗಿದಾಗ ಸಂಪೂರ್ಣವಾಗಿ Ego ಸ್ವಾವಲಂಬಿಯಾಗಿರುತ್ತದೆ. ಈ ವಯಸ್ಸಿನಲ್ಲಿ Ego 'ತಾನು' ಎಂದುಕೊಳ್ಳುವ ಕೋಟೆಯನ್ನು ಭದ್ರಮಾಡಿಕೊಳ್ಳತ್ತದೆ. ಮುಪ್ಪಿನಲ್ಲಿ Ego ಕಲ್ಪನೆಯು ಸ್ವಲ್ಪ ಮಟ್ಟಿಗೆ ಸಡಿಲವಾಗತೊಡಗುತ್ತದೆ. ಈ ಕಲ್ಪನೆಯಿಂದಲೇ ಬಾಳಿನಲ್ಲಿ ಕಷ್ಟನಷ್ಟಗಳನ್ನು ಅನುಭವಿಸಿದೆನೇನೋ ಎನ್ನುವ ಯೋಚನೆಯು ಕಾಡಹತ್ತುತ್ತದೆ.

ಮನಸ್ಸಿನಲ್ಲಿ Super-Ego ಎಂಬ ಕಲ್ಪನೆಯು ಬಾಲ್ಯದಿಂದಲೂ ರೂಢಿಸಲ್ಪಡತ್ತದೆ. ಇದು ಸುದೃಢವಾಗಿದ್ದರೆ, ಸಮಾಜದೊಂದಿಗೆ ಸಹಕರಿಸಿ ಸಾಕಷ್ಟು ಲಕ್ಷಣವಾದ ಬಾಳನ್ನು ನಡೆಸುತ್ತಾನೆ. ಸುದೃಢವಾಗದೆ ಇದ್ದರೆ, ಸಮಾಜ ವಿಚ್ಛಿದ್ರಕ ಕಾರ್ಯಗಳನ್ನು ಮಾಡಿಯಾದರೂ ತನ್ನ ಸ್ವೇಚ್ಛೆಗಳನ್ನು ಪೂರೈಸಿಕೊಳ್ಳುತ್ತಾನೆ.

Id ಮತ್ತು Super-Egoಗಳು ಪರಸ್ಪರ ವಿರೋಧ ಭಾವವನ್ನು ಹೊಂದಿರುತ್ತವೆ. ID ದೇಹದ ಕಾಮ್ಯಗಳತ್ತ Ego ವನ್ನು ಬರಸೆಳೆದು, ನಿನ್ನ ಸುಖವನ್ನು ನೀನು ಸಾಧಿಸಿಕೋ, ಸಮಾಜಕ್ಕೆ ಗೊತ್ತಾಗದಂತೆ ಸಾಧಿಸಿಕೊಂಡರೂ ಆಯಿತು. ಸಮಾಜವನ್ನು ಬಡಿದು ನಿನ್ನ ಸುಖವನ್ನು ಭದ್ರ ಮಾಡಿದರೂ ಆಯಿತು ಎಂದು ಪ್ರಬಲವಾಗಿ ಕಾಡುತ್ತದೆ.

Super-Ego ಅದರ ವಿರುದ್ಧ, ನಿನ್ನ ಸುಖವನ್ನು ಒತ್ತಟ್ಟಿಗಿಡು : ಸಮಾಜದ ನೆರವಿಗೆ ಭುಜ ಕೊಟ್ಟು ಪ್ರಯತ್ನಿಸು. ಅದರಿಂದ ಹೆಚ್ಚು ಸುಖ ದೊರೆಯುತ್ತದೆ ಎಂದು ಪ್ರಬಲವಾಗಿ ಪ್ರಚೋದಿಸುತ್ತದೆ.

ಪ್ರಬಲವಾದ ಈ ಎರಡೂ ಶಕ್ತಿಗಳು Ego ವನ್ನು ಅತ್ತಿತ್ತ ಸೆಳೆಯುತ್ತವೆ. ಎರಡರಲ್ಲಿ ಯಾವ ಶಕ್ತಿಗೆ ಮಣಿದರೂ, ಆ ಶಕ್ತಿಗೆ ತೃಪ್ತಿಯಾಗುತ್ತದೆ. ಮತ್ತೊಂದು ಕುಕ್ಕತೊಡಗುತ್ತದೆ. ಇವೆರಡೂ ಶಕ್ತಿಗಳನ್ನು ಇತಿ–ಮಿತಿಯಲ್ಲಿ Ego ಸಮತೋಲನ ಮಾಡಿದರೆ, ಆಗ ತಕ್ಕಮಟ್ಟಿಗೆ ಸಮಾಧಾನವಿರುತ್ತದೆ. Ego ಗೆ ನೆಮ್ಮದಿ ಇರುತ್ತದೆ.

ಮನಸ್ಸನ್ನು ನಡಸುವ ಈ ಮೂರು ಶಕ್ತಿಗಳನ್ನು, Id-Ego, Super-Ego ಗಳನ್ನು ನಮ್ಮ ಪೂರ್ವಿಕರು ತಮೋಗುಣ, ರಜೋಗುಣ, ಸತ್ವಗುಣ ಎಂದು ವರ್ಣಿಸುತ್ತಿದ್ದರು. ಸತ್ವಗುಣವು ಒಳ್ಳೆಯದು, ಉತ್ತಮವಾದುದು. ಅದೊಂದೇ ಇದ್ದರೆ, ಮಿಕ್ಕೆರಡೂ ನಾಶವಾದರೆ ಚೆನ್ನು ಎಂದೆನಿಸಬಹುದು. ಆದರೆ ಉಳಿದ ಎರಡೂ ಗುಣಗಳು ಇರದಿದ್ದರೆ, ಸತ್ವಗುಣದ ಪ್ರಭಾವವು ಯಾತರ ಮೇಲೆ ಬೀರಬೇಕು? ಸತ್ವಗುಣವಿರುವುದಾದರೂ ತಿಳಿಯುವುದು ಹೇಗೆ ? ಆದುದರಿಂದ

ಮೂರು ಗುಣಗಳು ಇರಲೇಬೇಕು. ಆದರೆ ಸಮತೋಲನವಾಗಿರಬೇಕು. ಆಗ ಬಾಳು ಹಸನಾಗುತ್ತದೆ.

ವಿಶಾಲಬುದ್ಧಿಯ ವ್ಯಾಸರು ಗೀತೆಯಲ್ಲಿ ಇದನ್ನು ಹೀಗೆ ವಿವರಿಸಿದರು :

**ಸತ್ವ ರಜಸ್ ತಮ ಇತಿ ಗುಣಾಃ ಪ್ರಕೃತಿಸಂಭವಾ ಃ**
**ನಿಬಂಧಂತಿ ಮಹಾಬಾಹೋ ದೇಹೀ ದೇಹಿನಮವ್ಯಯಂ** (೧೪-೬)

ಸತ್ವ ರಜಸ್ ತಮೋ ಗುಣಗಳು ಅವಿನಾಶಿಯಾದ, ಅವ್ಯಯವಾದುದನ್ನು ದೇಹದಲ್ಲಿ ಬಂಧಿಸುತ್ತವೆ. ನಂತರವೇ ಮನುಷ್ಯನ ಬಾಳು ಮತ್ತು ಗೋಳು.

Id ಇನಿಂದ ಮನುಷ್ಯನ ಕಾಮನೆಗಳು ಹೊರ ಹೊಮ್ಮುವುವು. Id ಇನ ಮೇಲೆ ಮನಸ್ಸು ಹಿಡಿತವನ್ನು ಒಂದು ಪ್ರಮಾಣದಲ್ಲಿ ಸಾಧಿಸಬಹುದು. ಆದರೆ ಅದನ್ನು ಸಂಪೂರ್ಣವಾಗಿ ನಾಶಮಾಡಲು ಅಶಕ್ಯ. Id ಅನ್ನು ನಾಶಮಾಡಬೇಕು ಎಂದು ಹಂಬಲಿಸುವವರು ಹುಟ್ಟಲೇಬಾರದು. ಆಗ ಅವರ ಆಶಯವು ನೆರವೇರುತ್ತದೆ.

ಈ ಅರ್ಥದಲ್ಲಿ ನಮ್ಮ ಪೂರ್ವೀಕರು, ಜನನ-ಮರಣದ ವಿಷಚಕ್ರದಿಂದ ಪಾರಾಗುವುದೇ ಮೋಕ್ಷ. ಆಗ ತ್ರಿಗುಣಾತೀತರಾಗಬಹುದು. ಇದೇ ಬಾಳಿನ ಹಿರಿಯ ಗುರಿ; ಎಂದರು.

Ego ಸಾಕಷ್ಟು ದೃಢವಾಗಿರದಿದ್ದರೆ, ರಜೋಗುಣವು ನಿರ್ಬಲವಾಗಿರುತ್ತದೆ. ಸಮಾಜದಲ್ಲಿ ಸ್ಪರ್ಧೆಯನ್ನೆದುರಿಸಿ, ತಲೆಯನ್ನು ಎತ್ತಿ ನಿಲ್ಲಬೇಕಾದರೆ, ರಜೋಗುಣವು ಪ್ರಬಲವಾಗಿರಬೇಕು. Ego-Drive ಎಂಬ ಈ ಪ್ರೇರಕವು ಬಲವಾಗಿದ್ದರೆ, ಬಾಳಿನಲ್ಲಿ ಲೌಕಿಕ ಜಯವನ್ನು ಗಳಿಸಬಹುದು. ಇದು ನಿರ್ಬಲವಾಗಿದ್ದರೆ. ಗಾಣದ ಎತ್ತುಗಳಂತೆ, ಸುತ್ತಿ ಸುತ್ತಿ ನಡೆಯಬೇಕು, ಗೊತ್ತಿಲ್ಲ, ಗುರಿಯಿಲ್ಲ. ಸಾವಿರಕಾಲುಗಳಂತೆ ಹರಿದಾಡಬೇಕು. ತಲೆಯನ್ನೆತ್ತುವಂತೆಯೇ ಇಲ್ಲ.

Ego-Drive Id ಇನ ಸೆಳೆತಕ್ಕೆ ಒಲಿದರೆ, ಸ್ವೇಚ್ಛಾಚಾರಿಯಾಗುವುದರಲ್ಲಿ ಅವ ಯಶಸ್ವಿಯಾಗುತ್ತಾನೆ. ಪುಂಡು ಪೋಕರಿಯಾದರೂ ಪ್ರಖ್ಯಾತನಾಗುತ್ತಾನೆ. ಕಾಲಕ್ಕೆ ತಕ್ಕಂತೆ ಡಕಾಯಿತನೋ, ಅಧಿಕಾರ-ಶಾಹೀ ರಾಜಕಾರಣಿಯೋ ಆಗುತ್ತಾನೆ.

Ego-Drive Super-Ego ವಿನ ಪ್ರಭಾವಕ್ಕೆ ಒಳಗಾದರೆ, ಆಗ ಮನನದಲ್ಲಿ ಹಾಗೂ ಚಿಂತನದಲ್ಲಿ ಆಸಕ್ತನಾಗುತ್ತಾನೆ. Ego, ನಾನು ಎಂದರೆ ಏನು ಎಂಬ ಜಿಜ್ಞಾಸೆಯನ್ನು ಮಾಡತೊಡಗುತ್ತಾನೆ. ಮನಸ್ಸಿನಲ್ಲಿ ನೆಮ್ಮದಿಯು ಇರಬೇಕಾದರೆ, Ego ವನ್ನು ಕರಗಿಸಬೇಕು. ಆಗ Id ಮತ್ತು Super-Ego ಗಳು ಸೆಳೆತವನ್ನು ಯಾತರ ಮೇಲೆ ಪ್ರಯೋಗಿಸಲು ಸಾಧ್ಯ ? ಅವುಗಳ ಝುಂಝಾಟವಿರದಿದ್ದರೆ

ಮನಸ್ಸಿನಲ್ಲಿ ನೆಮ್ಮದಿಯು ಸುಲಭ ಸಾಧ್ಯ. Ego ವನ್ನು ಕರಗಿಸಬೇಕಾದರೆ, ನಾನು ಮಾಡುತ್ತೇನೆ, ನಾನು ಸಾಧಿಸುತ್ತೇನೆ ಎನ್ನುವ ಮಮಕಾರವು ಹೋಗಿ 'ಅದು' ಮಾಡಿಸುತ್ತದೆ' ; 'ಅದು ಸಾಧಿಸುತ್ತದೆ'; 'ಅದಕ್ಕೆ ನಿಮಿತ್ತ ಮಾತ್ರ ನಾನು' ಎನ್ನುವ ಮನೋಭಾವನೆಯು ಭದ್ರವಾಗಬೇಕು. ಆಗ Ego ವಿನ ಹೊಣೆಯೇ ಇಲ್ಲ. ಹೊಣೆಯಲ್ಲವೂ 'ಅದ'ರದು 'ಅದಕ್ಕೆ' ಶರಣಾಗುವುದು, ಪ್ರಪತ್ತಿ ; ಇದರಿಂದ Ego ಕರಗುತ್ತದೆ. ಇದನ್ನು ಮನಸ್ಸಿನಲ್ಲಿ ರೂಢಸಿಕೊಳ್ಳಬೇಕಾದರೂ Ego-drive ಪುಷ್ಟಿಯಾಗಿರಬೇಕು.

Super-Ego ಅಥವಾ ಮನಸ್ಸಿನ ಸತ್ವಗುಣ ಪ್ರಧಾನವಾದ ಸತ್–ಚೈತನ್ಯಾಂಶವು ಪ್ರಬಲವಾಗಿದ್ದರೆ, ಅವ ಸಮಾಜದ ದೃಢತೆಗೆ ಬೆಂಬಲವಾಗುತ್ತಾನೆ. ಇಂತಹವರಲ್ಲಿ Ego-drive ಪುಷ್ಟಿಯಾಗಿರುತ್ತದೆ. ಅಂತಹ ಶಕ್ತಿಯು ಮಾನವೀಯತೆಯನ್ನು ಮನಸ್ಸಿನಲ್ಲಿ ತುಂಬುತ್ತದೆ. ನಂತರ ಸಕಾಲದಲ್ಲಿ ಸತ್–ಚೈತನ್ಯಾಂಶವು ಅರಳತೊಡಗಿದಾಗ, ಹರಡತೊಡಗಿದಾಗ ಮಾನವೀಯತೆಯು ದೈವೀಯುತವಾಗುತ್ತದೆ. ಇದಾದಾಗ ತ್ರಿಗುಣಾತೀತನಾಗಲು ಸಾಧನೆಯು ನಡೆಯುತ್ತದೆ. ಈ ಸಾಧನೆಯು ಜಯಗಳಿಸಿದರೆ, ಈ ದೇಹದಲ್ಲಿದ್ದುಕೊಂಡು, ಲೌಕಿಕ ಬಾಳನ್ನು ಎಲ್ಲರಂತೆ ನಡೆಸಬಹುದು. ಆದರೆ ಮನಸ್ಸು ಯಾವುದಕ್ಕೂ ಅಂಟಿಕೊಂಡು ಗಂಟು ಹಾಕಿಕೊಳ್ಳದೆ ನಿರ್ಮಲವಾಗಿರುತ್ತದೆ. ತಳಮಳಗಳಿರುವುದಿಲ್ಲ. ರಾಗ ವಿಕಾರಗಳಿರುವುದಿಲ್ಲ. ಇಂತಹ ಸಾಧನೆಯಲ್ಲಿ ಜಯಗಳಿಸಿದವರನ್ನು ಜೀವನ್ಮುಕ್ತರು ಎಂದು ಕರೆಯುತ್ತಾರೆ. ಸ್ಥಿತಪ್ರಜ್ಞರು ಎಂದೂ ಅನ್ನುತ್ತಾರೆ.

* * * *

# ೬. ಆಸೆ–ಮೂಲ ಪ್ರೇರಕ

Ego ವಿನ ಸ್ಥಿತಿಯನ್ನು 'ಅಕ್ಕಿಯಮೇಲೆ ಆಸೆ ; ನೆಂಟರ ಮೇಲೆ ಪ್ರೀತಿ' ಎಂಬ ನಾಣ್ಣುಡಿಯು ಲಕ್ಷಣವಾಗಿ ವರ್ಣಿಸುತ್ತದೆ. Id ಇನ ಕಾಮನೆಗಳ ಮೇಲೆ ಆಸೆಯು ಪ್ರಬಲವಾಗಿರುತ್ತದೆ. ಜತೆಜತೆಗೂ ನೆಂಟರ ಮೇಲೆ ಪ್ರೀತಿಯೂ ಇರುತ್ತದೆ. ನಾನು ಸುಖವನ್ನು ಅನುಭವಿಸುವಾಗ ಅವರೂ ಪಾಲ್ಗೊಳ್ಳಲಿ ಎಂಬ ಆಸೆಯೂ ಇರುತ್ತದೆ. ಆದರೆ ಈ ಡೋಲಾಯಮಾನ ಸ್ಥಿತಿಯಲ್ಲಿ ಮನಸ್ಸು ತನ್ನ ಸುಖಕ್ಕೆ, ತನ್ನ ಹಕ್ಕಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಸ್ವಾಭಾವಿಕವಾಗಿ ನೀಡುತ್ತದೆ.

ತನ್ನ ಸುಖ ಎಂದರೇನು? ಹಸಿವು ಬಾಯಾರಿಕೆಗಳನ್ನು ತನ್ನ ಮನಸ್ಸಿಗೆ ತೃಪ್ತಿಯಾಗುವಂತೆ ಯಥಾ–ಇಚ್ಛವಾಗಿ ತೃಪ್ತಿಗೊಳಿಸುವುದು. ಮುಂದೆ ದುಡಿದು ಸಂಪಾದಿಸದೆ ಇದ್ದರೂ, ತನಗೂ, ತನ್ನ ಮಕ್ಕಳಿಗೂ, ಮೊಮ್ಮಕ್ಕಳಿಗೂ ಸಾಕಷ್ಟು ಹಣವು ದೊರೆಯುವಂತೆ, ಇಂದೇ ಅಪಾರ ಹಣವನ್ನು ಶೇಖರಿಸಿಡುವುದು. ಹೆಣ್ಣು ಗಂಡೊಲವು ; ಅಥವಾ ಕಾಮವು ದೇಹ ಮನಸ್ಸಿನ ಒಕ್ಕೂಟದ ಪ್ರಮುಖ ಪ್ರೇರಕಗಳಲ್ಲೊಂದು. ಕಾಮ ತೃಪ್ತಿಗೆ ಚಿತ್ರ ವಿಚಿತ್ರ ಮಾರ್ಗಗಳುಂಟು. ವಿಧವಿಧವಾದ ಸೌಂದರ್ಯ–ಕಲ್ಪನೆಗಳುಂಟು. ಪ್ರತಿಯೊಂದು ವ್ಯಕ್ತಿಗೂ ಒಂದೊಂದು ತರಹ ಅಭೀಷ್ಟ. ಮಾನವನ ಕಾಮದ ಚಟುವಟಿಕೆಗಳಲ್ಲಿ ಸಂತಾನೋತ್ಪಾದನೆಯು ಅತ್ಯಲ್ಪ ಅಂಶ ; ಅತ್ಯಂತ ಸಣ್ಣ ಪ್ರಚೋದನೆ.

ಇವುಗಳಿಗೆಲ್ಲಕ್ಕಿಂತಲೂ ಸಮಾಜದಲ್ಲಿ ಗಣ್ಯನಾಗಬೇಕು, ; ಮನ್ನಣೆಯನ್ನು ಗಳಿಸಬೇಕು, ಎನ್ನುವ ಹಿರಿ ಹಂಬಲವು, ಅತ್ಯಾಸೆಯು, Ego-drive ಇದ್ದವರಲ್ಲಿ ಅತಿಯಾಗಿರುತ್ತದೆ. ಮನ್ನಣೆಯನ್ನು ಗಳಿಸಲೋಸುಗ ಸುಂದರ ಹೆಂಡತಿಯನ್ನು ಹಂಚಿಕೊಂಡವರೂ ಇದ್ದಾರೆ. ಅಂದರೆ ಮನ್ನಣೆಯ ತೀಕ್ಷ್ಣತೆಯು ಎಷ್ಟು ಹರಿತ, ಎಷ್ಟು ಪ್ರಬಲ, ಎನ್ನುವುದು ಸ್ಪಷ್ಟವಾಗುತ್ತದೆ.

ಭಗವಾನ್ ಬುದ್ಧನು ಜೀವನ ಚಕ್ರದೊಂದಿಗೆ ಆಸೆಯೂ ಹುಟ್ಟುತ್ತದೆ ಎಂದನು. ಮನೋವೈಜ್ಞಾನಿಕರಿಗೆ. ಬಹಳ ಗಂಭೀರವಾದ, ಅರ್ಥಗರ್ಭಿತವಾದ ವ್ಯಾಕ್ಯವಿದು.

ಆಸೆಯು ಈಡೇರಬೇಕಾದರೆ, ಸುತ್ತಲಿರುವ ಪರಿಸರವು, ತಾನಿರುವ ಸಮಾಜವು ನೆರವಾಗಬೇಕು. ಈ ತೆರನ ನೆರವು ಬಯಸಿದಂತೆ ದೊರೆಯುವುದಿಲ್ಲ. ಅಂದಮೇಲೆ ನಿರಾಶೆಯು, ಆಸೆಯ ನೆರಳು. ನಮ್ಮ ನೆರಳಿನಿಂದ ಹೊರ ಜಿಗಿಯಲು ನಮಗೆ ಹೇಗೆ ಸಾಧ್ಯವಾಗುವುದಿಲ್ಲವೋ, ಹಾಗೆಯೇ, ನಿರಾಸೆಯ ನೆರಳಿನಿಂದ ಆಸೆಯೂ ಜಿಗಿದು ಹೋಗಲು ಸಾಧ್ಯವಿಲ್ಲ. ಆದುದರಿಂದಲೇ ಭಗವಾನ್ ಬುದ್ಧನು ಆಸೆಯ ಹಿಂದೆಯೇ ದುಃಖವೂ ಹಿಂಬಾಲಿಸುತ್ತದೆ ಎಂದು ನುಡಿದುದು.

ಮನಸ್ಸಿನ ವಿವಿಧ ಚಟುವಟಿಕೆಗಳಿಗೆ ಮೂಲ ಪ್ರೇರಕವಾದ ಆಸೆಯು, ಮನುಷ್ಯರಲ್ಲಿ ವಿಧವಿಧವಾಗಿರುತ್ತವೆ.

Ego-drive ನಿರ್ಬಲವಾಗಿದ್ದವರು, 'ಸಿಕ್ಕಿದ್ದನ್ನು ಬಿಡುವುದಿಲ್ಲ ; ತಂಟೆಗೆ ಸಿಗುವುದಿಲ್ಲ' ಎಂಬ ನಾಣ್ಣುಡಿಗೆ, ನಿದರ್ಶನ. ಸ್ವಲ್ಪಮಟ್ಟಿಗೆ ತಮೋಗುಣ ಪ್ರಧಾನರು ಇವರು. ಮಾನಸಿಕ ತಳಮಳವು ಇಂತಹವರಲ್ಲಿ Depression ಅಥವಾ, ಬೆಪ್ಪು, ಮಂಕು, ಜಡತೆ, ಈ ರೀತಿ ಕಾಣಿಸಿಕೊಳ್ಳುತ್ತದೆ.

Ego-drive ಸಾಕಷ್ಟು ಪ್ರಬಲವಾಗಿದ್ದವರಲ್ಲಿ, 'ಅಟ್ಟಿಸಿಕೊಂಡು ಹೋಗಿ ಗಿಟ್ಟಿಸಿಕೊಳ್ಳಲೇಬೇಕು' ಎನ್ನುವ ಹೆಬ್ಬಯಕೆಯು ಇರುತ್ತದೆ. ಆಸೆಯು ಇವರಲ್ಲಿ ಹೊರವಾಗಿದ್ದು Ambition ಎನಿಸಿಕೊಳ್ಳುತ್ತದೆ. ಫಸ್ಟ್‌ರ್‍ಯಾಂಕ್ ಪಡೆಯುತ್ತೇನೆ, ಟೆನ್ನಿಸ್ ಚಾಂಪಿಯನ್ ಆಗುತ್ತೇನೆ, ನಟಸಾರ್ವಭೌಮನಾಗುತ್ತೇನೆ, ಜನನಾಯಕನಾಗುತ್ತೇನೆ; ಎನ್ನುವ ಉನ್ಮಾದದಂತಹ ಆಸೆಯು ಇವರನ್ನು ಪಿಶಾಚಿಯಂತೆ ಹಿಡಿಯುತ್ತದೆ. ಆದರೆ ಆಸೆಯನ್ನು ಈಡೇರಿಸುವ ಸಾಮರ್ಥ್ಯವು, ಇರುವುದಿಲ್ಲ. ಸಾಧನೆಯನ್ನೂ ಏಕಾಗ್ರ ಚಿತ್ತತೆಯಿಂದ ಮಾಡುವ ಸಂಯಮವೂ ಇರುವುದಿಲ್ಲ ಇಂತಹವರ ಮನಸ್ಸು Immature, ಅಥವಾ ಶೈಶವಾವಸ್ಥೆಯಲ್ಲಿರುತ್ತದೆ. ಪಂಚಾಂಗದ ಪ್ರಕಾರದ ಅವರ ವಯಸ್ಸಿಗೂ, ಮಾನಸಿಕ ಬೆಳವಣಿಗೆಯ ಹಂತಕ್ಕೂ ಸಮನ್ವಯವೇ ಇರುವುದಿಲ್ಲ. ಹಾಗಾಗಿ ಇವರುಗಳ ಮನಸ್ಸಿನ ತಳಮಳವು, ಮನಸ್ಸನ್ನು ಛಿದ್ರಗೊಳಿಸುತ್ತದೆ. ಆಸೆಯ ಲೋಕದಲ್ಲಿ ಬಹಳಷ್ಟು ವಿಹರಿಸುತ್ತಾರೆ, ವಾಸ್ತವಿಕ ಲೋಕದ ಅರಿವು ಮಸುಕಾಗತೊಡಗುತ್ತದೆ. Schizo-Phrenia, ಅಥವಾ ಹುಚ್ಚಿನ ಬೇನೆಗಳಿಂದ ಇವರುಗಳು ನರಳುವುದು ಹೆಚ್ಚು. ಇದರಲ್ಲಿಯೂ ಹಲವಾರು ವಿಧಗಳಿರುತ್ತವೆ. ಎಲ್ಲರೂ ನನ್ನ ಶತ್ರುಗಳು ಎನ್ನುವ ಪ್ಯಾರನ್ಯಾಯ್ಡ್ ಪಿಶಾಚಿಯು ಕೆಲವರನ್ನು ಕಾಡುತ್ತದೆ. ದೇಹವನ್ನು ವಕ್ರವಕ್ರವಾಗಿ ಜಗ್ಗಿಸಿ ನಿಲ್ಲಿಸುವ ಕ್ಯಾಟಟೋನಿಕ್ ದೆವ್ವಗಳು ಕೆಲವರನ್ನು ಅಮರಿಕೊಳ್ಳುತ್ತವೆ. ಸಾಮಾನ್ಯವಾಗಿ ಹೆಬಿಫ್ರೆನಿಕ್ ಭೂತವು ಹಲವರಲ್ಲಿ ಚೇಷ್ಟೆಯಾಡುತ್ತದೆ. ಮತ್ತೂ ಕೆಲವು ಬ್ರಹ್ಮ ರಾಕ್ಷಸಗಳು

ಸ್ಕೀಜೋಫ್ರೇನಿಯಾದ ಅವತಾರಗಳಾಗುತ್ತವೆ.

Ego-drive ಇದ್ದವರಲ್ಲಿ, ಆಸೆಯು ಅಪರಿಮಿತವಾಗಿದ್ದು, ವಾಸ್ತವಿಕ ಅರಿವು ಸಾಕಷ್ಟು ವಿಶಾಲವಾಗಿರದಿದ್ದರೆ, ಅಂದರೆ ಮನಸ್ಸಿನ ಬೆಳವಣಿಗೆಯು ಬಾಲ್ಯಾವಸ್ಥೆಯಲ್ಲಿದ್ದರೆ, ಅಂತಹವರ ಮನಸ್ಸು ಆಘಾತಗಳಿಗೆ ಸಿಕ್ಕಿದಾಗ ಛಿದ್ರವಾಗಬಹುದು. ಹೀಗಂದ ಮಾತ್ರಕ್ಕೆ ಅವರ ವಿಚಾರಪರ ಮನಸ್ಸು ಮಿಕ್ಕಮಿಕ್ಕ ವಿಷಯಗಳಲ್ಲಿ ಮಂದವಾಗಿರುತ್ತದೆ ಎಂದೇನೂ ಅಲ್ಲ. ಎಷ್ಟೋ ಬಾರಿ, ಬಲು ಚುರುಕಾಗಿ ಕೆಲಸ ಮಾಡುತ್ತದೆ. ಮತ್ತೆ ಕೆಲವು ಕಾಲ ಏರುಪೇರಾಗಿರುತ್ತದೆ ; ಇವನ್ನು Lucid intervals ಎಂದು ಕರೆಯುತ್ತಾರೆ. ಪಲ್ಲಟವಾಗಿದ್ದ ಮನಸ್ಸು, ತನ್ನಂ ತಾನಾಗಿಯೇ ಸರಿಮಾಡಿಕೊಂಡು ಸ್ವಾಸ್ಥ್ಯವನ್ನು ಸ್ವಲ್ಪ ಕಾಲವಾದರೂ ಪಡೆಯುತ್ತದೆ. ಅನಂತರ ಬಾಳಿನಲ್ಲಿ ಆಗಲೇಬೇಕಾದ ಇತರ ಮಾನಸಿಕ ಆಘಾತಗಳಿಂದ, ಏರುಪೇರು ಮರುಕಳಿಸುತ್ತದೆ. ರಕ್ಷಣಾ ವ್ಯವಸ್ಥೆಗಳು ದೇಹವನ್ನು ಬೇನೆಗಳಿಂದ ಪಾರುಮಾಡುವಂತೆ, ಮನಸ್ಸಿನಲ್ಲಿಯೂ ಸ್ವಾಸ್ಥ್ಯವನ್ನು ನೀಡುವ ವ್ಯವಸ್ಥೆಗಳು ಇವೆ ಎಂಬುದು ಸ್ಪಷ್ಟವಾಗಿದೆ. ಅಂತಹ ಸ್ವಯಂ-ಸ್ವಾಸ್ಥ್ಯವನ್ನು ಸಾಧಿಸುವ ಮಾನಸಿಕ ವ್ಯವಸ್ಥೆಗಳು ಯಾವುವು ಎಂಬುದನ್ನು ಪತ್ತೆ ಹಚ್ಚಿದರೆ ಅಂತಹ ವ್ಯವಸ್ಥೆಗಳಿಗೆ ಬೆಂಬಲವನ್ನು ಮನೋವಿಜ್ಞಾನಿಗಳು ನೀಡಲು ಸುಲಭವಾಗುತ್ತದೆ. ಆದರೆ ಅಂತಹ ಮನಸ್ಸಿನ ಸ್ವಯಂ-ರಕ್ಷಣಾ ವ್ಯವಸ್ಥೆಗಳ ವಿವರವಾದ ಅರಿವು ಇನ್ನೂ ಸಿದ್ಧಾಂತವಾಗಿಲ್ಲ. ಆದಕಾರಣ ಮನಸ್ಸಿನ ವಿಷಯದಲ್ಲಿ ಮನನಿಗರು, ಋಷಿಗಳು, ಪ್ರಪಂಚದ ಎಲ್ಲೆಡೆಯಲ್ಲೇ ಇದ್ದಿರಲಿ, ಅವರುಗಳು ನುಡಿದುದನ್ನು ಅಧ್ಯಯನ ಮಾಡುವುದು, ಮನೋ ವಿಜ್ಞಾನಶಾಸ್ತ್ರಕ್ಕೆ ಅಗತ್ಯ ಮತ್ತು ಶ್ರೇಯಸ್ಕರ. ಆದಕಾರಣ ಪತಂಜಲಿಗಳ ಯೋಗ ಸೂತ್ರಗಳನ್ನು ಇಂದಿನ ವಿಜ್ಞಾನಕ್ಕೆ ಅನ್ವಯಿಸಿಕೊಂಡು, ಅವುಗಳಿಂದ ಮುಂದಿನ ಪ್ರಗತಿಯನ್ನು ಸಾಧಿಸಬಹುದು ಎಂಬ ನಂಬಿಕೆಯಿಂದ, ಆ ಅಧ್ಯಾಯವನ್ನು ಸೇರಿಸಿದ್ದೇನೆ, ಈ ಪುಸ್ತಕದಲ್ಲಿ.

ಮುಪ್ಪಿನಲ್ಲಿ ದೇಹವು ಶಿಥಿಲವಾದಂತೆ, Ego-drive ಕೂಡ ದುರ್ಬಲವಾಗುತ್ತದೆ. ಆಗ ಆಸೆಯು ಕಡಿಮೆಯಾಗಲೇಬೇಕು. ಏಕೆಂದರೆ ಆಸೆಯನ್ನು ತೀರಿಸಿಕೊಳ್ಳುವ ಸಾಮರ್ಥ್ಯವು ಇರುವುದಿಲ್ಲ. ಆದರೆ ಪ್ರಾಯದಲ್ಲಿ ತಾನು ಬಯಸಿ ಸಫಲವಾಗದೆ ಇರುವ ಆಸೆಗಳು ಉಳಿದುಕೊಂಡಿರುತ್ತವೆ. ಅವನ್ನು ವಯಸ್ಸಿಗೆ ಬಂದ ಮಕ್ಕಳ ಜೀವನದಲ್ಲಿ ಈಡೇರಿಸ ಬಯಸುತ್ತಾನೆ. 'ಹೀಗೆ ಓದಿ, ಹೀಗೆ ಮಾಡಿ, ಇಂತಹ ಫಲವು ದೊರೆಯುತ್ತೆ.' ಎಂದು ಮಕ್ಕಳನ್ನು ಒತ್ತಾಯ ಪಡಿಸುತ್ತಾನೆ.

ಆದರೆ ಕಾಲವು ತೀವ್ರವಾಗಿ ಬದಲಾಯಿಸಿರುತ್ತದೆ. ಅದರೊಂದಿಗೆ ಜೀವನದ ಮೌಲ್ಯಗಳೂ ಬದಲಾಯಿಸುತ್ತವೆ. ಹಿರಿಯರು ಅತ್ಯಮೂಲ್ಯ ಎಂದುಕೊಂಡಿದ್ದುವು, ಕಿರಿಯರ ಸಮಾಜದಲ್ಲಿ ನಿಕೃಷ್ಟವಾಗಿ ಕಾಣಿಸಬಹುದು. ಆದಕಾರಣ ಹಿರಿಯರು ಹೇಳಿದುದನ್ನು ಕಿರಿಯರು ಸೌಜನ್ಯದಿಂದ ಕಿವಿಗೆ ಹಾಕಿಕೊಳ್ಳುತ್ತಾರೆಯೇ ವಿನಹಾ, ಒಪ್ಪುವುದೂ ಇಲ್ಲ. ಕಾರ್ಯರೂಪಕ್ಕೆ ತರುವುದೂ ಇಲ್ಲ. ಇದರಿಂದಾಗಿ ಹಿರಿಯರ ಮನಸ್ಸಿಗೆ ನಿರಾಶೆಯಾಗುತ್ತದೆ. ಸಲ್ಲದ ಮಾತುಗಳನ್ನು ಕಿರಿಯರಿಗೆ ಅನ್ನುತ್ತಾರೆ. ಎದುರು ಮಾತನ್ನು ಆಡಿ ನೇರವಾಗಿ ವಿರೋಧಿಸದೆ ಇದ್ದರೂ, ಹಿರಿಯರಾಡಿದ ಮಾತುಗಳು ಕಿರಿಯರ ಮನಸ್ಸಿನಲ್ಲಿ ಅಸಮಾಧಾನವನ್ನು ಮೂಡಿಸುತ್ತದೆ. ಅಸಮಾಧಾನವು ಆತಂಕವಾಗುವುದು ಬಲು ಸುಲಭ:– ಹಿರಿಯರಿಂದ ಆಸ್ತಿಯನ್ನು ಪಡೆಯುವಂತಿದ್ದರೆ – ಹಿರಿಯರ ಮನಸ್ಸಿನಲ್ಲಿಯೂ ನಿರಾಸೆಯಿಂದ, ಬೇಸರವು ಮೂಡುತ್ತದೆ.

ಮುದುಕರಲ್ಲಿ ಮಾನಸಿಕ ತಳಮಳವು, ಈ ಕಾರಣದಿಂದಲೂ ಉಂಟಾಗುತ್ತದೆ ಏರುಪೇರು ವ್ಯವಹಾರಗಳನ್ನು ಮುದುಕರು ಕೆಲವರು ಮಾಡುವುದು, ಇಂತಹ ನಿರಾಸೆಯಿಂದ. ಮಾನಸಿಕ ಏರುಪೇರು, ಹೇಳಿದಂತೆ ಕೇಳದಿದ್ದ ಕಿರಿಯರ ಮೇಲೆ ಅವ್ಯಕ್ತವಾಗಿ ಸೇಡು ತೀರಿಸಿಕೊಳ್ಳುವ ಮಾರ್ಗ.

ಕಿರಿಯರು ಕೂಡ ಆತಂಕದಿಂದ ನರಳುತ್ತಾರೆ. ಹಿರಿಯರನ್ನು ಮೆಚ್ಚಿಸಬೇಕು ಎನ್ನುವ ಆಸೆ. ಆದರೆ ಬಾಳಿನಲ್ಲಿ ಹಾಗೆ ಮಾಡಿದರೆ ಕಷ್ಟನಷ್ಟ. ಪರಿಹರಿಸಲು ದುಸ್ಸಾಧ್ಯವಾದ ಈ ಸಮಸ್ಯೆಯಿಂದ ಕಿರಿಯರು ಮಾನಸಿಕ ಬೇನೆಗಳಿಗೆ ತುತ್ತಾಗುತ್ತಾರೆ.

ಇದೇ ರೀತಿಯಲ್ಲಿ ಈಡೇರಿಸಲಾಗದ ಸುಪ್ತ ಆಸೆಗಳು, ಸಂಸಾರದಲ್ಲಿನ ಒಬ್ಬರಲ್ಲ, ಇನ್ನೊಬ್ಬರಲ್ಲಿ ಮಾನಸಿಕ ಬೇನೆಗಳನ್ನು ಉಂಟು ಮಾಡುತ್ತದೆ.

ಮೂಡಿ ಬಂದ ಆಸೆಗಳನ್ನೆಲ್ಲಾ ಯಥಾರ್ಥವಾಗಿ ಪೂರೈಸಲು ಯಾರಿಗೂ ಸಾಧ್ಯವಿಲ್ಲ. ಅಂದರೆ ಇತರ ವಿಧಾನಗಳಲ್ಲಿ ಆಸೆಗಳನ್ನು ಪೂರೈಸಲು ಸಾಧ್ಯವೇ? ಸಾಧ್ಯವಾದರೆ ಅವುಗಳಾವುವು ಎಂಬುದನ್ನು ಸ್ಥೂಲವಾಗಿ ತಿಳಿಯೋಣ.

**ಆಸೆಗಳ ಪೂರೈಕೆ**

ಸುಂದರ ಸ್ತ್ರೀಯನ್ನು, ಚಿತ್ರದಲ್ಲಿ ನೋಡಿ ಮೆಚ್ಚಿಗೊಂಡು, ಆಕೆಯನ್ನು ಮದುವೆಯಾಗಬೇಕು ಎಂದು ಆಸೆಪಡುತ್ತಾನೆ. ತೀವ್ರವಾದ ಆಸೆ ಎಂದಿಟ್ಟುಕೊಳ್ಳೋಣ. ಆಗ ಅವ ಏನು ಮಾಡುತ್ತಾನೆ ?

೧. ಚಿತ್ರದ ಮೂಲ ವ್ಯಕ್ತಿಯಾರು ಎಂಬುದನ್ನು ಪತ್ತೆ ಹಚ್ಚಿ ; ನಂತರ

ಹಿರಿಯರ ಮತ್ತು ಗೆಳೆಯರ ನೆರವನ್ನು ಪಡೆದು ಆಕೆಯ ಹಿರಿಯರ ಒಪ್ಪಿಗೆಯನ್ನು ಗಿಟ್ಟಿಸಿ ಆಕೆಯನ್ನು ಒಲಿಸಿಕೊಂಡು ವಿಧಿವತ್ತಾಗಿ ಮದುವೆಯಾಗಬಹುದು. ವಾಸ್ತವಿಕವಾಗಿ ಆಸೆಯು ಈಡೇರುವ ನೇರ ಮಾರ್ಗವಿದು.

೨. ಚಿತ್ರದ ಮೂಲ ವ್ಯಕ್ತಿಯು ಸಿನಿಮಾತಾರೆ. ಐದು ಅಂಕಿಗಳ ಲೆಕ್ಕದಲ್ಲಿ ಸಂಪಾದಿಸುವ ಪಾಂಚಾಲಿ ಆಕೆ. ಇದು ತಿಳಿದಾಗ ಆಕೆಯನ್ನು ಮದುವೆಯಾಗುವುದು ಹಾಗಿರಲಿ, ಹತ್ತು ಮಾರು ದೂರದಲ್ಲಿ ಪ್ರತ್ಯಕ್ಷವಾಗಿ ನೋಡುವ ಅವಕಾಶವೂ ಇರುವುದಿಲ್ಲ ಎಂಬ ವಾಸ್ತವಿಕತೆಯನ್ನು ತರುಣನು ಮನಗಾಣುತ್ತಾನೆ. ಆದರೆ ಆಸೆಯು ಹೆಡೆಯಾಡಿಸುತ್ತಲೇ ಇರುತ್ತದೆ. ಇಂತಹವರು ಸಿನಿಮಾ ತಾರೆಯನ್ನು ಲಪಟಾಯಿಸಿಕೊಂಡು ಹೋಗಿ ಅದ್ದೂರಿಯ ವಿವಾಹ ಜೀವನವನ್ನು ಮಾಡಿದಂತೆ, ಕನಸು ಕಾಣಬಹುದು. ಅತ್ಯುಗ್ರವಾದ ಆಸೆಗಳು ವಾಸ್ತವಿಕವಾಗಿ ಸಾಧ್ಯವಿರದಿದ್ದಾಗ, ಕನಸಿನಲ್ಲಿ ಈಡೇರಬಹುದು. 'ಅಷ್ಟು ಕಂಡರಾ! ಕೃಷ್ಣಂ ಭಟ್ಟರಾ!' ಎಂಬ ಗಾದೆಯಂತೆ ಇವರು ಸ್ವಲ್ಪಮಟ್ಟಿಗೆ ಆಸೆಯನ್ನು ಪೂರೈಸಿಕೊಳ್ಳಬಹುದು.

೩. ಚಿತ್ರದ ಮೂಲ ವ್ಯಕ್ತಿಯು ಸಿನಿಮಾ ತಾರೆಯಾದರೂ ಹಂಬಲಿಸುವ ತರುಣನು ವಿಶ್ವವಿಖ್ಯಾತ ಸಂಗೀತಗಾರನೋ, ಕ್ರೀಡಾಪಟುವೊ ಆಗಿದ್ದರೆ, ಅಥವಾ ಕೊಬ್ಬಿದ ಶ್ರೀಮಂತನಾಗಿದ್ದರೆ, ಆಗ ಆಕೆಯ ಪರಿಚಯವನ್ನು ಆಕೆಯ ಗೆಳೆಯರ ಮೂಲಕ ಮಾಡಿಕೊಳ್ಳಬಹುದು. ಬುಟ್ಟಿಗೆ ಹಾಕಿಕೊಳ್ಳಲೋಸುಗ, ಉಡುಗೊರೆಗಳನ್ನು ಕೊಟ್ಟು ಒಡವೆ ವಸ್ತುಗಳನ್ನು ಇತ್ತು ಸಂತೋಷ ಕೂಟಗಳನ್ನು ಏರ್ಪಡಿಸಬಹುದು. ಇನ್ನೇನು ಮೀನು ಬುಟ್ಟಿಗೆ ಬಿತ್ತು ಎಂದು ತರುಣ ಶ್ರೀಮಂತನು ಅಂದು ಕೊಳ್ಳಬಹುದು. ಪತ್ರಿಕೆಗಳಲ್ಲಿ ಮದುವೆಯ ಸುದ್ದಿಯು ಪ್ರಕಟವಾಗಬಹುದು. ಆದರೆ ಕೊನೆಗಳಿಗೆಯಲ್ಲಿ, ಯಾವುದಾದರೂ ಒಂದು ಕಾರಣದಿಂದ ಮದುವೆಯ ಮಾತು ತುಂಡು ಮುರಿದು ಬೀಳುವ ತನಕ. ಮದುವೆಯ ನಿರೀಕ್ಷೆಯು ತರುಣನಿಗೆ ತೃಪ್ತಿಯನ್ನು ನೀಡಿರುತ್ತದೆ. ಅವನ ಆಸೆಯನ್ನು ಒಂದು ಹಂತದ ಮುಟ್ಟಿಗೆ ಪೂರೈಸಿರುತ್ತದೆ. ಆಸೆಯ ಈಡೇರಿಕೆಗೆ ಪ್ರಯತ್ನ ಪಡುವುದೂ ಒಂದು ಮಾರ್ಗ.

೪. ಅಥವಾ ಆಕೆಯ ಚಿತ್ರಗಳನ್ನು ಪುನಃ ಪುನಃ ನೋಡುತ್ತಾ ; ಆಕೆಯ ಬಂಗಲೆಯ ಹೊರಗಿನ ಕಸದ ತೊಟ್ಟಿಯಲ್ಲಿ ಬೆಳಿಗ್ಗೆ ಬಿದ್ದಿರುವ ಬಾಡಿದ ಹೂಗಳನ್ನು ನಿರ್ಮಾಲ್ಯ ಎಂದು ಶೇಖರಿಸಿಟ್ಟುಕೊಳ್ಳಬಹುದು. ಪತ್ರಿಕೆಗಳಲ್ಲಿ ಪ್ರಕಟವಾಗುವ ಆಕೆಯ ಚಿತ್ರಗಳನ್ನು ಮತ್ತು ಸುದ್ದಿಗಳನ್ನು ಓದುತ್ತಾ, ನೋಡುತ್ತಾ ಖುಷಿಯನ್ನು ಪಡೆಯಬಹುದು. ವಯೂರಿಸಂ (Voyeurism) ಇನ ಹಲವಾರು ರೂಪಗಳಲ್ಲಿ

ಅವ ತುಸು ತೃಪ್ತಿಯನ್ನು ಅನುಭವಿಸಬಹುದು.

೫. ಹಸ್ತ ಸಾಮುದ್ರಿಕನ ಬಳಿಗೆ ಹೋಗಿ ಅಂಗೈ ರೇಖೆಗಳನ್ನು ತೋರಿಸಿ ಇನ್ನೂ ಆರು ತಿಂಗಳುಗಳಾದ ಮೇಲೆ ಸಿನಿಮಾ ತಾರೆಯನ್ನೋ ರಾಜನ ಮಗಳನ್ನೋ ಸಂಗೀತ ವಿದುಷಿಯನ್ನೋ ಮದುವೆಯಾಗುವ ಯೋಗವು ಇದೆ' ಎಂದು ಅವ ಭವಿಷ್ಯವನ್ನು ಹೇಳಿದರೆ, ಹುದುಗಿದ್ದ ಆಸೆಯು ತುಸು ಸಾಂತ್ವನಗೊಳ್ಳುತ್ತದೆ. ಜಾತಕವನ್ನು ನೋಡುವವರನಕ 'ಇನ್ನೊಂದು ಎಂಟು ತಿಂಗಳಲ್ಲಿ ಗುರು ಉಚ್ಚನಾಗುತ್ತಾನೆ. ಶುಕ್ರ ಸ್ವಸ್ಥಾನಕ್ಕೆ ಬರುತ್ತಾನೆ. ಅನಿರೀಕ್ಷಿತವಾಗಿ ನಿಮಗೆ ಅಪ್ಸರೆಯೇ ದೊರೆಯುತ್ತಾಳೆ. ಮೇಲೆ ಬಿದ್ದುಗೊಂಡು ಬಂದು ಮದುವೆಯಾಗುತ್ತಾಳೆ' ಎಂದು ಹೇಳಿದರು, ಅನ್ನಿ. ಇದನ್ನು ಸಂಪೂರ್ಣವಾಗಿ ನಮ್ಮ ತರುಣ ನಂಬದೆ ಇದ್ದರೂ, ಗ್ರಹಗತಿಯು ಚೆನ್ನಾಗಿದ್ದರೆ ಬಯಸಿದ್ದೆಲ್ಲಾ ನನಸಾಗಬಹುದು ಎಂದು ಕಿಂಚಿತ್ತಾದರೂ ಸುಖಪಡುತ್ತಾನೆ. ಅಷ್ಟರ ಮಟ್ಟಿಗೆ ಅವನ ಆಸೆಯು ಪೂರೈಸಿರುತ್ತದೆ. ಎಂಟು ತಿಂಗಳ ಕಾಲ ಸ್ವಲ್ಪ ಹುಮ್ಮಸ್ಸಿನಿಂದಲೇ ಇರುತ್ತಾನೆ. ಅಷ್ಟು ಕಾಲವಾದರೂ ಆಸೆಯು ಈಡೇರಬಹುದು ಎಂದು ಭುಜ ಹಾರಿಸುತ್ತಾನೆ.

೬. ಕಲಾಕಾರನಾಗಿದ್ದರೆ, ಆ ತರುಣ ಸಿನಿಮಾ ತಾರೆಯನ್ನು ಕುರಿತು ಪ್ರೇಮ ಗೀತೆಗಳನ್ನು ಬರೆದು ಆಸೆಯನ್ನು ಆರೀತಿ ಪರಿವರ್ತಿಸಿ ಪೂರೈಸಬಹುದು. ವರ್ಣಚಿತ್ರಕಾರನಾಗಿದ್ದರೆ, ತಾರೆಯ ವರ್ಣಚಿತ್ರವನ್ನು ಬರೆದು ತೃಪ್ತಿಪಡಬಹುದು. ಶಿಲ್ಪಿಯಾಗಿದ್ದರೆ, ಆಕೆಯ ಪ್ರತಿಮೆಯನ್ನು ರಚಿಸಿ, ಆ ಮೂಲಕ ತನ್ನ ಆಸೆಯನ್ನು ಪೂರೈಸಿಕೊಳ್ಳಬಹುದು. ಆಸೆಯನ್ನು ವಾಸ್ತವಿಕವಾಗಿ ಪೂರೈಸಲಾಗದಿದ್ದಾಗ, ಅದು ಕಲೆಯಲ್ಲಿ ಹೊರಹೊಮ್ಮಿ. ಸಂತಸವನ್ನು ನೀಡುತ್ತದೆ ; ಕಲಾಪ್ರವೃತ್ತಿಯು ಇದ್ದವರಲ್ಲಿ.

ಆಸೆಗಳ ಪೂರೈಕೆಯು ಈ ರೀತಿ ಹಲವಾರು ಚಿತ್ರ ವಿಚಿತ್ರ ಮಾರ್ಗಗಳಲ್ಲಿ ಅಷ್ಟು ಇಷ್ಟು ಆಗಬಹುದು. ವ್ಯಕ್ತಿಯ ಸಂಸ್ಕೃತಿ, ಹುಟ್ಟುಗುಣ ; ಇವು ಮಾರ್ಗಗಳನ್ನು ಆಯ್ಕೆ ಮಾಡುವುವು. ಒಬ್ಬರಿಗೆ ಸರಿ ಎನಿಸಿದ ವಿಧಾನವು ಇನ್ನೊಬ್ಬರಿಗೆ ಬೇಸರವನ್ನುಂಟು ಮಾಡಬಹುದು. ಪದ್ಯವನ್ನು ಬರೆದು ಪ್ರೀತಿಯ ಛಟವನ್ನು ತೀರಿಸಿ ಕೊಳ್ಳುತ್ತಾನೆ, ಮಂಕ, ಎಂದು ತಮೋಗುಣ ಪ್ರಧಾನವಾದವರು ನಗಬಹುದು, ಮೂದಲಿಸಬಹುದು ವಯೂರಿಸಂ ಅಂತ, ಹೇಡಿಗಳ ಹೆಗ್ಗುರುತು, ಎಂದು ರಜೋ ಗುಣ ಪ್ರಧಾನವಾದರೂ ಜುಗುಪ್ಸೆ ಪಡಬಹುದು, ಮೂರೂ ಗುಣಗಳಿಗೆ ತಕ್ಕಂತೆ ಆಸೆಗಳ ಈಡೇರಿಕೆಯು ನಡೆಯುತ್ತದೆ.

# ೭. ಆಸೆಯು ನಿರಾಸೆಯಾದರೆ

'ಈ ಬಾರಿ ಪ್ರಮೋಷನ್ ಖಂಡಿತವಾಗಿ ಸಿಗುತ್ತೆ.' ಎಂದು ನರಸಪ್ಪ ನಂಬಿದ್ದ. ಅಪ್ಪರ್ ಡಿವಿಜನ್ ಕ್ಲಾರ್ಕ್ ಅವ. ಸೂಪರಿಂಟೆಂಡೆಂಟ್ ಆಗಬೇಕಾಗಿತ್ತು; ಮೂರು ವರ್ಷಗಳ ಹಿಂದೆ. ಆದರೆ ಜಾತ್ಯಾತೀತ ರಾಷ್ಟ್ರದಲ್ಲಿ ನೌಕರಿ ಮಾಡುತ್ತಿದ್ದ ಕಾರಣ, ಮೂರು ಅವಕಾಶಗಳು ಇತರರಿಗೆ ದಕ್ಕಿತ್ತು. ಈ ಸರ್ತಿ ಅಂಥಹ ಸ್ಪರ್ಧೆಯಿಲ್ಲ ಎಂದು ನಂಬಿದ್ದ. ಆಗಿನ ಕಾಲದ ಕೇವಲ ಮೆಟ್ರಿಕ್ಯುಲೇಷನ್ ಮಾಡಿದ್ದ ನರಸಪ್ಪನಿಗೆ, ವಿಶ್ರಾಂತಿ ವೇತನವನ್ನು ಪಡೆಯುವ ಹೊತ್ತಿಗೆ ಸೂಪರಿಂಟೆಂಡೆಂಟ್ ಆಗಬೇಕು ಎಂಬ ಅತಿ ದೊಡ್ಡ ಆಸೆಯಿತ್ತು. ಅಗತ್ಯವಾದ ಇಲಾಖಾ ಪರೀಕ್ಷೆಗಳನ್ನು ಯಶಸ್ವಿಯಾಗಿ ಪ್ಯಾಸು ಮಾಡಿದ್ದ. ಆದಕಾರಣ ಈ ಬಾರಿ ಸತ್ಯನಾರಾಯಣನ ಪೂಜೆಗೆ ಅಣಿಯನ್ನೂ ಮಾಡಿಕೊಳ್ಳುತ್ತಿದ್ದ ; ಪ್ರಮೋಷನ್ ಆರ್ಡರ್ ಬಂದ ಮೇಲೆ ಅದ್ದೂರಿಯಿಂದ ಆಚರಿಸಬೇಕೆಂದು.

ಆಸೆಯು ನಿರಾಸೆಯಾಯಿತು. ಸುಳ್ಳು ವಯಸ್ಸನ್ನು ಕೊಟ್ಟು ಸೇರಿಕೊಂಡಿದ್ದ ಹಳೆಯ ಸೂಪರಿಂಟೆಂಡನಿಗೆ ಇನ್ನೊಂದು ವರ್ಷ ಎಕ್ಸ್‌ಟೆನ್ಷನ್ ದೊರಕಿತು. ನರಸಪ್ಪ ಸತ್ತ ನಾರಾಯಣನ ಪೂಜೆಗೆ ಸಿದ್ಧವಾಗಬೇಕಾಯಿತು. ಹೀಗೇಕೆ ಆಯಿತು ಎಂದು ತಿಳಿದುಕೊಳ್ಳಲು, ಅವ, ಜಾತಕವನ್ನು ಹಿಡಿದುಕೊಂಡು ಜ್ಯೋತಿಷ್ಕನ ಬಳಿಗೆ ಹೋದ. ಜಾತಕವನ್ನು ಪರಿಶೀಲಿಸಿದ ಮೇಲೆ, ಜ್ಯೋತಿಷಿಯು ನುಡಿದ :–ರಾಯರೇ ! 'ಏಳರಾಟದ ಶನಿಕಾಟ ನಿಮಗೆ. ಕೈಗೆ ಬಂದ ತುತ್ತು ಬಾಯಿಗೆ ಸಿಗುವುದಿಲ್ಲ. ಗ್ರಹಗತಿಗಳು ಕ್ರೂರವಾದರೆ, ಮನುಷ್ಯನು ಎಷ್ಟು ಲಾಗ ಹಾಕಿದರೂ ಪ್ರಯೋಜನವಾಗುವುದಿಲ್ಲ. ನವಗ್ರಹ ಪೂಜೆಯನ್ನು ಮಾಡಿಸಿ.' ಎಂದು.

ಇದನ್ನು ಕೇಳಿದ ಮೇಲೆ ನರಸಪ್ಪನ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. ಆ ಮೊದಲು ತುಂಬಾ ನಿರಾಸೆಯಾಗಿ, ಕುಗ್ಗಿಹೋಗಿದ್ದ. ಮನಸ್ಸು ಬಹಳ ಬೇಸರಗೊಂಡು, ಯಾವುದರಲ್ಲಿಯೂ ಉತ್ಸಾಹವು ಇರಲಿಲ್ಲ.'ನನ್ನ ಪ್ರಯತ್ನವನ್ನು ಕಾಯಾ ವಾಚಾ ಮನಸಾ ಮಾಡಿದ್ದಾಯಿತು. ಗ್ರಹಗಳು ಕ್ರೂರವಾದರೆ ಕೇವಲ ನರ ಮನುಷ್ಯ ಏನನ್ನು ತಾನೆ ಮಾಡಬಲ್ಲ ?' ಎಂದು ಈಗ ಸಮಾಧಾನವನ್ನು ಮಾಡಿಕೊಂಡಿದ್ದ. ಉತ್ಸಾಹವು ಅಷ್ಟಾಗಿ ಇರದಿದ್ದರೂ ಸಂತೆ ಹೊತ್ತಿಗೆ ಮೂರು ಮೊಳ ನೇಯುತ್ತಿದ್ದ.

ಆಸೆಯು ನಿರಾಸೆಯಾದಾಗ ಮನಸ್ಸಿನ ತುಂಬಾ ಜುಗುಪ್ಸೆಯು ತುಂಬಿಕೊಳ್ಳುತ್ತದೆ. ಆಗ ಜ್ಯೋತಿಷ್ಕನ ನುಡಿಯು ಸ್ವಲ್ಪ ಮಟ್ಟಿಗಾದರೂ ಸಮಾಧಾನವನ್ನು ನೀಡುತ್ತದೆ. ಏಕೆ? 'ನಾನು ನನ್ನ ಪ್ರಯತ್ನಗಳು' ಎಂದು ತುಸು ಹೆಮ್ಮೆ ಪಡುತ್ತಿದ್ದವನ Ego ಮೆರೆಯುತ್ತಿತ್ತು. 'ಗ್ರಹಗಳ ಕಾಟದ ಮುಂದೆ ನೀನು ಯಾವ ಲೆಕ್ಕಕ್ಕೆ' ಎಂಬ ಅರಿವನ್ನು ಜ್ಯೋತಿಷ್ಕನ ನುಡಿಯು ಮೂಡಿಸಿತ್ತು. ಆಗ ನಾನು, ನನ್ನ ಪ್ರಯತ್ನ ಎಂದು ಮೆರೆದಿದ್ದ Ego ಕರಗತೊಡಗಿತ್ತು, ಕೊರಗಿನಿಂದ; ನಿಸ್ಸಹಾಯಕತೆಯಿಂದ, Ego ಅಳಿಯಲಾರಂಭಿಸಿದರೆ, ಲೌಕಿಕವಾದ ಆಸೆಗಳು, Id ಇನ ಕಾಮನೆಗಳು, ಎಲ್ಲವೂ ಯಾವುದನ್ನು ಜಗ್ಗಾಡಿಸಬೇಕು? Ego ದೃಢವಾಗಿದ್ದಾಗ Id ಜಗ್ಗಾಡಿಸುತ್ತದೆ. Ego ಸಡಿಲಗೊಂಡಾಗ Id ಕೂಡ ತೆಪ್ಪಗಾಗುತ್ತದೆ, ತಾತ್ಕಾಲಿಕವಾಗಿಯಾದರೂ.

ಆಸೆಯು ನಿರಾಸೆಯಾದಾಗ, ಮನಸ್ಸಿನಲ್ಲಿ ಮುತ್ತಿಕೊಳ್ಳುವ ಬೇಸರವು ಖಿನ್ನತೆಯನ್ನು ಉಂಟು ಮಾಡುತ್ತದೆ. ದುಃಖವನ್ನುಂಟುಮಾಡುತ್ತದೆ. ನಮ್ಮ ನಾಡಿನ ಸಂಸ್ಕೃತಿಯಲ್ಲಿ ಪುರಾತನ ಕಾಲದಿಂದಲೂ ಬೇರೂರಿ ಬಂದಿರುವ ಜಾತಕಗಳಲ್ಲಿ ನಂಬಿಕೆ ಗ್ರಹಗತಿಗಳಲ್ಲಿ ವಿಶ್ವಾಸ ; ಜನ್ಮಜನ್ಮಾಂತರದ ಕರ್ಮದ ಕಲ್ಪನೆ, ಇವೆಲ್ಲವೂ ನಿರಾಸೆಯಿಂದಾಗುವ ಖಿನ್ನತೆಯನ್ನು ಸ್ವಲ್ಪಮಟ್ಟಿಗೆ ಶಮನ ಮಾಡುತ್ತವೆ. ಆದ ಕಾರಣ ವೈಯಕ್ತಿಕವಾಗಿ ; ಲೌಕಿಕ ಬಾಳಿನಲ್ಲಿ ಉಪಯುಕ್ತವಾಗಿವೆ. ಮಾನಸಿಕ ತಳಮಳವನ್ನು ಸಾಕಷ್ಟು ಮಟ್ಟಿಗೆ ಕಡಿಮೆ ಮಾಡುತ್ತದೆ.

ಭವಿಷ್ಯ ನುಡಿಯುವವರಿಂದ, ಈ ರೀತಿಯಲ್ಲಿ ಒಳ್ಳೆಯ ಫಲಿತಾಂಶವು ದೊರೆತರೆ ; ಮತ್ತೆ ಕೆಲವು ವೇಳೆ ಕೆಟ್ಟ ಪರಿಣಾಮವೂ ಆಗುವುದುಂಟು. 'ಇನ್ನು ಮೂರು ವರ್ಷಗಳ ನಂತರ ಗಂಡಾಂತರವಿದೆ. ಆದಕಾರಣ ಶಾಂತಿ ಮಾಡಿಸಿ' ಎಂದು ಭವಿಷ್ಯವನ್ನು ಹೇಳಿದರು ಅನ್ನಿ. ಇಂತಹ ಭವಿಷ್ಯದ ನುಡಿಗಳು ಹಲವಾರು ಅರ್ಥಗಳನ್ನು ನೀಡಬಲ್ಲವು. ಆದರೆ ಕೇಳಿದವನು ವಿಪರೀತಾರ್ಥವನ್ನು ಮಾಡಿಕೊಳ್ಳುತ್ತಾನೆ. ಇಂತಹ ಪ್ರೇರಕಗಳಿಂದ ಕೆಲವರಿಗೆ ಆತಂಕವು ಅತ್ಯಧಿಕವಾಗಿ, ಮಾನಸಿಕ ಸ್ವಾಸ್ಥ್ಯವು ಕೆಡುತ್ತದೆ. ಈ ಕಾರಣಗಳಿಂದಾಗಿ, ಆತಂಕಪಡುತ್ತಿರುವ ರೋಗಿಗಳನ್ನು ವೈದ್ಯರು ಪರೀಕ್ಷಿಸುವ ಮುನ್ನ 'ಯಾರಿಗಾದರೂ ಜಾತಕವನ್ನು ತೋರಿಸಿದ್ದಿರಾ? ಅಂಗೈ ತೋರಿಸಿ ಭವಿಷ್ಯವನ್ನು ಕೇಳಿದ್ದಿರಾ' ; ಎಂದು ಕೇಳುತ್ತಾರೆ. ರೋಗಿಯನ್ನು ಪರಿಹಾಸ್ಯ ಮಡುವುದಕ್ಕೆಂದು ಇಂತಹ ಪ್ರಶ್ನೆಗಳನ್ನು ವೈದ್ಯರುಗಳು ಕೇಳುವುದಿಲ್ಲ. ಯಥಾರ್ಥವನ್ನು ತಿಳಿದುಕೊಳ್ಳುವುದಕ್ಕಾಗಿ ಕೇಳುತ್ತಾರೆ.

ನಿರಾಸೆಯು ಅತ್ಯಧಿಕವಾದಾಗ, ಮುಂದೆಂದೂ ಈ ಪರಿಸ್ಥಿತಿಯು

ಸರಿಹೋಗುವುದಿಲ್ಲ ಎಂದು ಖಂಡಿತವಾದರೆ ತೀವ್ರವಾದ ಶೋಕ, ಅಥವಾ ಕೊರೆವ ಕೊರಗು ಉಂಟಾಗಬಹುದು. ಮಗನೊಬ್ಬನ ಹೊರತು, ಇತರ ಯಾವ ಆಸರೆಯೂ ಇಲ್ಲದ ವಿಧವೆಗೆ, ಮಗ ಅಪಘಾತಕ್ಕೀಡಾಗಿ ಅಕಸ್ಮಾತ್ ಸತ್ತರೆ, ಕೊರಗು ಕೊರೆಯುತ್ತದೆ. ಬದುಕುವ ಆಸೆಯು ನಿರ್ಮೂಲವಾಗುತ್ತದೆ. ಯಾವುದರಲ್ಲೂ ಉತ್ಸಾಹವಿರುವುದಿಲ್ಲ.

'Grief Syndrome' ಅಥವಾ ವಿಪರೀತ ಕೊರಗಿನ ವಿಚಿತ್ರ ಹಾವಳಿ, ಎಂಬ ವಿಷಯವನ್ನು ಪ್ರತ್ಯೇಕವಾಗಿ ಮನೋವಿಜ್ಞಾನಿಗಳು ಅಭ್ಯಾಸಮಾಡುತ್ತಾರೆ. ಅಷ್ಟು ಪ್ರಾಮುಖ್ಯವಾದ ವಿಷಯವಿದು. ಕೊರಗು ಹತ್ತಿದಾಗ ಬಿಕ್ಕಿ ಬಿಕ್ಕಿ ಅತ್ತರೆ ಮನಸ್ಸು ಸ್ವಲ್ಪ ಹಗೂರಾಗುತ್ತದೆ. ಉಕ್ಕಿ ಬಂದ ಅಳುವನ್ನು ಸೊಕ್ಕಿದ Ego ಅದುಮಿ ತಡೆದಿಟ್ಟರೆ, ಮುಂದೆ ಈ ಕಾರಣದಿಂದ ಮಾನಸಿಕ ಸ್ವಾಸ್ಥ್ಯವು ಕೆಟ್ಟು, ನಡವಳಿಕೆಯು ವಿಪರೀತವಾಗಬಹುದು. ಮನೆಯಲ್ಲಿ ಯಾರಾದರೂ ಸತ್ತರೆ, ಅಳುವನ್ನೇ ಕಸಬು ಮಾಡಿಕೊಂಡಿರುವವರನ್ನು ದುಡ್ಡು ಕೊಟ್ಟು ಕರೆಸಿ, ಮನೆಯಲ್ಲಿ ಗೋಳೋ ಎಂದು ಅಳಿಸುತ್ತಾರೆ, ಕೆಲವು ಪಂಗಡದವರು. ವೈಜ್ಞಾನಿಕವಾಗಿ ಈ ಪದ್ಧತಿಯು ಒಳ್ಳೆಯದು. ಹತ್ತೂ ಜನರು ಕುಟ್ಟಿಕ್ಕೊಂಡು ಸುತ್ತಲೂ ಅತ್ತರೆ, ಸತ್ತವನೇನೂ ಹಿಂತಿರುಗಿ ಬರುವುದಿಲ್ಲ. ಆದರೆ ಹತ್ತೂ ಜನರ ಜತೆಗೆ ಮನೆಯವರು ಕೂಡ ಸುಲಭವಾಗಿ ಅಳುವಂತಾಗುತ್ತದೆ. ಆಗ ಉಳಿದವರು ಸ್ವಲ್ಪ ಮಟ್ಟಿಗೆ ಕೊರಗನ್ನು ಕಡಿಮೆ ಮಾಡಿಕೊಳ್ಳಬಹುದು.

ನಿರಾಸೆಯ ಕೊರಗು ಅತ್ಯುಲ್ಬಣವಾದಾಗ, Ego ಕರಗಿ, ವ್ಯಕ್ತಿಯು ಸಾಯಬಹುದು. ಪುತ್ರಶೋಕದಿಂದ ದಶರಥನು ಸತ್ತಂತೆ. ಬಾಳು ಬೇಸರವಾದಾಗ, ಸಾವು ಹಿಂಬಾಲಿಸಬಹುದು. ಅಥವಾ ಸೇಡಿನ ಮನೋಭಾವವು Ego ವನ್ನು ಮುತ್ತಿಕ್ಕಿ, ಕೊರಗುವವನನ್ನು ಹುರಿದುಂಬಿಸಿ ನಡೆಸಲೂಬಹುದು. ಇಂದ್ರಜಿತುವು ಸತ್ತ ಸುದ್ದಿಯನ್ನು ಕೇಳಿದ ರಾವಣನು ವೀರಾವೇಶದಿಂದ ಹೋರಾಡಿದಂತೆ.

ನಿರಾಶೆಯ ಕೊರಗು ಅತ್ಯುಗ್ರವಾಗಬೇಕಾದರೆ, ಸಾವು ಆಗಬೇಕಾಗಿಲ್ಲ, ವ್ಯಕ್ತಿಯ ಮನಸ್ಸು ಇನ್ನೂ ಬಾಲ್ಯಾವಸ್ಥೆಯಲ್ಲಿದ್ದರೆ, ಕಿರು ನೆಪವು ಕೂಡ ಅತ್ಯುಗ್ರ ಕೊರಗನ್ನುಂಟುಮಾಡಬಹುದು. ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ರ್‍ಯಾಂಕು ಗಳಿಸಿ ಕೆಲಸಕ್ಕೆ ಸೇರಿದ ಯುವಕ, ಮದುವೆಯ ವಿಚಾರದಲ್ಲಿ ತಂದೆಯು ಏನೋ ಅಂದರು ಎಂಬ ಕಾರಣದಿಂದ, ಕೆರೆಗೆ ಹೋಗಿ ಬಿದ್ದು ಆತ್ಮಹತ್ಯೆಯನ್ನು ಮಾಡಿಕೊಂಡ ಅಂದರೆ ಕೊರಗಿನ ಪರಿಣಾಮವು, ವ್ಯಕ್ತಿಯ ಮಾನಸಿಕ ಪ್ರೌಢತೆಯನ್ನು ಅವಲಂಬಿಸಿರುತ್ತದೆ.

ಕೊರಗನ್ನು ಅದುಮಿಟ್ಟು, ಸಮಾಜದಲ್ಲಿ ಎಂದಿನಂತೆ ನಡೆದುಕೊಳ್ಳುವವರು ಇದ್ದಾರೆ. ಇಂತಹವರಲ್ಲಿ ಕೆಲವರು ಮುಂದೆ ಮಾನಸಿಕ ಸ್ವಾಸ್ಥ್ಯವನ್ನು ಕಳೆದು ಕೊಂಡು, ನಡವಳಿಕೆಯಲ್ಲಿ ವೈಪರೀತ್ಯವನ್ನು ತೋರಿಸುತ್ತಾರೆ. ಇತರರನ್ನು ವಿನಾಕಾರಣ ಕೊರಗಿಸಿ, ಆ ಮೂಲಕ ಸ್ವಲ್ಪ ಸಮಾಧಾನವನ್ನು ಪಡೆಯುತ್ತಾರೆ.

ಕೊರಗು ಅತ್ಯುಗ್ರವಾದಾಗ, ಸತ್ತ ಮಗುವನ್ನು ಬದುಕಿಸಿಕೊಡು ; 'ನೀನು ಭಗವಂತನಂತೆ, ಬುದ್ಧನಂತೆ' ಎಂದು ಕೇಳಿದ ಕಿಸಾಗೌತಮಿಯ ತರಹ ; ಮನಸ್ಸಿನ ಸತ್–ಚೈತನ್ಯಾಂಶವು ಅರಳಿ, Ego ವುಕರಗಿ; ನೆಮ್ಮದಿಯು ದೊರಕಬಹುದು. ಬಹುಕಾಲ ತಪಸ್ಸು ಮಾಡಿ ಋಷಿಗಳು ಯಾವ ನೆಮ್ಮದಿಯನ್ನು ಅನುಭವಿಸುತ್ತಾರೋ, ಅಂತಹ ಅವಿನಾಶಿಯಾದ ನೆಮ್ಮದಿಯು ಅತ್ಯುಗ್ರವಾದ ಕೊರಗಿನಿಂದ, ವಿರಳವಾಗಿಯಾದರೂ ಯೋಗ್ಯತೆಯಿದ್ದ ಕೆಲವರಲ್ಲಿ ಉಂಟಾಗಬಹುದು.

ಅತಿ ತೀವ್ರವಾದ ಕೊರಗಿಗೆ, ಮಿತಿ ಇರುವುದಿಲ್ಲ. ಎಲ್ಲೆಗಳಿರುವುದಿಲ್ಲ. ಬ್ರಹ್ಮಾಂಡದ ಮೂಲ ವಸ್ತುವನ್ನೂ ಮಿತಿ ಇಲ್ಲದುದು, ಎಲ್ಲೆ ಇಲ್ಲದುದು, ಎಂದು ತಿಳಿದ ಅನುಭಾವಿಗಳು ವರ್ಣಿಸುತ್ತಾರೆ. ಸಮಾನ ಗುಣಗಳಿರುವುದರಿಂದ, ತೀವ್ರವಾದ ಕೊರಗು, ಮಾತು ಮತ್ತು ಮನಸ್ಸಿಗೆ ಸಿಗದ, ನೆಮ್ಮದಿಯನ್ನು ನೀಡಬಹುದು. ಎಂದು ನಿಸ್ಸಂಶಯವಾಗಿ ನಂಬಬಹುದು.

ಅತ್ಯಂತ ನಿರಾಸೆಯಾಗಿ, ಕೊರಗು ಅತಿಯಾದಾಗ, Egoವು ಅಳಿಯತೊಡಗುತ್ತದೆ. ಅಂದಮೇಲೆ Id ಇನ ಕಾಮನೆಗಳು ತಾವಾಗಿಯೇ ಅಳಿಸಿ ಹೋಗುತ್ತವೆ. ಪಶುಗಳಲ್ಲಿ Id ಇನ ಪ್ರಾಬಲ್ಯವು ಅತ್ಯಧಿಕ. ತಾನು ಎನ್ನುವ Ego ಇರುತ್ತದೆ. ತನ್ನದು, ತನ್ನ ಸಂಸಾರ ಎಂಬ ಕಲ್ಪನೆಗಳು ಕಾಮೋದ್ರೇಕವಾದಾಗ, ತಾತ್ಕಾಲಿಕವಾಗಿರುತ್ತದೆ. Super-Ego ಅಂಶವು ಹಿಂಡು ಜೀವನವನ್ನು ನಡಸುವ ಕಾಡು ಪ್ರಾಣಿಗಳಲ್ಲಿರುತ್ತದೆ. ಪ್ರಾಣಿಗಳಲ್ಲಿ ಅಳುವು ಅಥವಾ ನಗುವು ಕಾಣಬರುವುದಿಲ್ಲ. ಮುಪ್ಪೂ ಇರುವುದಿಲ್ಲ. ಏಕೆಂದರೆ, ಮುಪ್ಪು ಮೂಡುವ ಮುನ್ನ ಬಲವು ಕುಗ್ಗಿದಾಗ, ಹಿಂಡಿನ ಹೋರಿಗಳು ಅವುಗಳೊಂದಿಗೆ ಹೋರಾಡಿ, ಮುಗಿಸಿ ಬಿಡುತ್ತದೆ. ಅತ್ಯುಗ್ರ ಕೊರಗು ಎನ್ನುವುದು ಪ್ರಾಣಿಗಳಲ್ಲಿ ಉಂಟಾಗುವುದಿಲ್ಲ. ಮನಸ್ಸು ಎಂಬುದು ಮನುಷ್ಯರಲ್ಲಿ ಹೊರವಾಗಿ ಬೆಳೆದಿರುವುದರಿಂದ Id ಶಕ್ತಿಯ ವಿರುದ್ಧ, Super-Ego ಬೆಳೆದು ಬಂದಿದೆ. Ego ಕಲ್ಪನೆಯು, ತಾನು, ತನ್ನ ಸಂಸಾರ, ತನ್ನ ಊರು, ತನ್ನ ದೇಶ ಇತ್ಯಾದಿ ಅತಿ ವಿಶಾಲವಾಗುತ್ತಿದೆ. ಹೀಗಾಗಿರುವುದರಿಂದ, Id ಇನ ಪ್ರಭಾವವು

ಪ್ರಬಲವಾಗಿದ್ದರೂ, Ego ಕೊರಗಿನಿಂದ ಕರಗಿದರೆ, ಆಗ ನಿರ್ಬಲವಾಗುತ್ತದೆ. ಕಾಡು ಪ್ರಾಣಿಗಳಿಗೂ ಮನುಷ್ಯನಿಗೂ ಇರುವ ವ್ಯತ್ಯಾಸಗಳಲ್ಲಿ ಇದೊಂದು ಮುಖ್ಯವಾದುದು.

ಆಸೆಯು ನಿರಾಸೆಯಾದರೆ, ಮನಸ್ಸಿನ ಮೇಲೆ ಮತ್ತೊಂದು ರೀತಿಯ ಪರಿಣಾಮವಾಗಬಹುದು. ವಕ್ರಗತಿಯಲ್ಲಿ ಮನಸ್ಸು ನಡೆಯತೊಡಗಿ, ಸಮಾಜ ವಿಚ್ಛಿದ್ರಕ ಅಪರಾಧಗಳನ್ನು ಮಾಡಿಸುತ್ತದೆ.

ಚುನಾವಣೆಯಲ್ಲಿ ಶ್ರೀಮಂತನೊಬ್ಬನು ಅಭ್ಯರ್ಥಿಯಾಗಿ ನಿಲ್ಲುತ್ತಾನೆ. ಅಪಾರ ಹಣವನ್ನು ಖರ್ಚುಮಾಡುತ್ತಾನೆ. ಖಂಡಿತವಾಗಿಯೂ ಅಸೆಂಬ್ಲಿ ಮೆಂಬರಾಗುತ್ತೇನೆ ಎನ್ನುವ ಹಿರಿಯಾಸೆಯು ಮೂಡಿರುತ್ತದೆ. ಹಲವಾರು ಕಾರಣಗಳಿಂದ ಅವ ಠೇವಣಿ ಹಣವನ್ನು ಕಳೆದುಕೊಳ್ಳುತ್ತಾನೆ. ನಿರಾಸೆಯು ಇಂತಹವನಲ್ಲಿ ತೀವ್ರವಾಗಿರುತ್ತದೆ. ಕಾನೂನುಗಳ ಪ್ರಕಾರ ಏನನ್ನೂ ಮಾಡಬರುವಂತಿಲ್ಲ. ಆಗ ಅವನ ಮನಸ್ಸು ವಕ್ರಗತಿಯಲ್ಲಿ ನಡೆಯುತ್ತದೆ. ಜಯ ಗಳಿಸಿದ ಅಭ್ಯರ್ಥಿಯ ವಿರುದ್ಧ ಅಪಪ್ರಚಾರವನ್ನು ಮಾಡತೊಡಗುತ್ತಾನೆ. ತಲೆಗೆ ಮುಸುಕು ಹಾಕಿಕೊಂಡು ಇಂತಹ ಗಲ್ಲಿಯ ಅಂತಹ ಮನೆಗೆ ರಾತ್ರಿ ಹೋಗುತ್ತಾನೆ, ಎಂದು ಸುದ್ದಿಯನ್ನು ಹೊರಡಿಸುತ್ತಾನೆ. ತನ್ನ ಕಾರಿನಲ್ಲಿ ಧೈರ್ಯವಾಗಿ ಹೋಗುವುದಿಲ್ಲ. ಆಟೋರಿಕ್ಷಾದಲ್ಲಿ ತಲೆ ಮರೆಸಿಕೊಂಡು ಹೋಗುತ್ತಾನೆ. ಎಂದು ಮೊದಲ ಸುದ್ದಿಗೆ ಒಗ್ಗರಣೆಯನ್ನು ಹಾಕುತ್ತಾನೆ. ದಿನ ಪತ್ರಿಕೆಗಳಲ್ಲಿ ಅನಾಮಧೇಯವಾದ ಪತ್ರಗಳನ್ನು ಇತರರ ಮೂಲಕ ಪ್ರಕಟಿಸುತ್ತಾನೆ. Character-Assasination ಎಂಬುದು ನಿರಾಸೆಯು ನಡಸುವ ವಕ್ರವಾದ ಕಾರ್ಯಕ್ರಮ.

ನಿರಾಸೆಯ ಕೊರಗು ಸೋತ ಅಭ್ಯರ್ಥಿಯ ಮನಸ್ಸಿಗೆ ಸ್ವಲ್ಪ ಸಮಾಧಾನವನ್ನು ನೀಡುತ್ತದೆ.

ಈ ರೀತಿಯ ವಕ್ರಮಾರ್ಗದಲ್ಲಿ ಮನಸ್ಸು ನಡೆಯುವಾಗ, ಅದರ ಮೂರು ಪ್ರಮುಖ ಅಂಶಗಳು ಹೇಗೆ ಕಾರ್ಯಗತವಾಗುತ್ತವೆ ?

Id ಇನ ಪ್ರಭಾವವು ಪ್ರಬಲವಾಗಿರುತ್ತದೆ. ಆಹಾರದ ಸೆಳೆತಕ್ಕಿಂತಲೂ, ಕಾಮದ ಬರಸೆಳೆತಕ್ಕಿಂತಲೂ, ಸಮಾಜದಲ್ಲಿ ಗಣ್ಯನೆನಸಿಕೊಳ್ಳಬೇಕು, ಮನ್ನಣೆಯನ್ನು ಗಳಿಸಬೇಕು ಎನ್ನುವ ಆತುರವು ಹೊರವಾಗಿರುತ್ತದೆ, ಹಿರಿದಾಗಿರುತ್ತದೆ. ಕಾಡುಮೃಗಗಳಲ್ಲಿ Id ಇನ ಪ್ರಭಾವವು ವಿರೋಧಿಗಳನ್ನು ತಿವಿದು ಬಡಿದು ಹೇಳ ಹೆಸರಿಲ್ಲದಂತೆ ಮಾಡಿಸುತ್ತದೆ. ಆದರೆ ನಾಡ ಮಾನವನಲ್ಲಿ, ತಿವಿಯುವುದು, ಬಡಿಯುವುದು, ಹೆಸರನ್ನು ಅಪಮಾನಗೊಳಿಸುವುದು ; ಇವನ್ನೆಲ್ಲಾ ಮನಸ್ಸಿನ

ಮೂಲಕ ಮಾಡಿಸುತ್ತದೆ. ವಿರೋಧಿಗಳನ್ನು ಮಾನಸಿಕ ರೀತಿಯಲ್ಲಿ ; ಕಾಡುವುದು; ಅವಮಾನಿಸುವುದು, ಇವೆಲ್ಲವೂ Character-Assasination ಇನ ಹಲವಾರು ಅಸ್ತ್ರಗಳು, ಆಯುಧಗಳು.

Ego ವನಕ ದೃಢವಾಗಿರುತ್ತದೆ. ಭದ್ರವಾದ ಕೋಟೆಯಾಗಿರುತ್ತದೆ. ಈ ಕೋಟೆಯನ್ನು ಜಗ್ಗಿ ಆಡಿಸುವ ಪರಮಾಧಿಕಾರವು Id ಇಗೆ ಮೀಸಲಾಗಿರುತ್ತದೆ. Id ಇನಿಂದಲೇ ಸುಖವನ್ನು ಮತ್ತು ಮನ್ನಣೆಯನ್ನು ಸಮಾಜದಲ್ಲಿ ಗಳಿಸಬಹುದು ಎಂಬ ದೃಢ ನಂಬಿಕೆಯು ಇಂತಹವರ Egoಕ್ಕೆ ಇರುತ್ತದೆ. Ego ಕೋಟೆಗೆ Id ಕಂದುಕವೇ ಸಾಕ್ಷಿ ; ಮತ್ತು ರಕ್ಷಣೆ.

Id ಮತ್ತು Ego ; ತಮೋಗುಣ, ಮತ್ತು ರಜೋಗುಣ ; ಇವೆರಡೂ ಒಂದಕ್ಕೊಂದು ನೆಂಟಾಗಿ ಗಂಟು ಹಾಕಿಕೊಂಡಾಗ, ಲೌಕಿಕದಲ್ಲಿ ಸುಖವನ್ನು ಅನುಭವಿಸಬಹುದು. ಸುಖವನ್ನು 'ತಾನು' ಅನುಭವಿಸಲಾಗದಿದ್ದರೆ, ಇತರರಿಗೆ ಕಷ್ಟವನ್ನು ಕೊಟ್ಟು, ಅವರನ್ನು ವಿನಾಕಾರಣ ಕೊರಗಿಸಿ ಆ ಮೂಲಕ ತುಸು ಸಮಾಧಾನವನ್ನು ಪಡೆಯಬಹುದು.

Super-Ego ಅಥವಾ ಸತ್–ಚೈತನ್ಯಾಂಶವು ಇಂತಹವರಲ್ಲಿ ದೃಢವಾಗಿ ಬೆಳೆದಿರುವುದಿಲ್ಲ. Ego ಕಲ್ಪನೆಯು ಕಲ್ಲಿನ ಸುದೃಢ ಕೋಟೆಯಂತೆ Super-Ego ವನ್ನು ಮುತ್ತಿ ಮರೆಮಾಚಿ ಬಿಡುತ್ತದೆ. ಆದುದರಿಂದಲೇ ನಿರಾಸೆಯು ತೀವ್ರವಾದಾಗ, ಮನಸ್ಸು ವಕ್ರಗತಿಯಲ್ಲಿ ನಡೆದು, ಸಮಾಜ ವಿರೋಧಕ ಅಪರಾಧಗಳನ್ನು ಮಾಡಿಸುತ್ತದೆ. ಹಾಗೆ ವರ್ತಿಸಿದಾಗ ಅವರುಗಳ Ego ವಿಗೆ ಸ್ವಲ್ಪ ಸಮಾಧಾನವುಂಟಾಗುತ್ತದೆ. ಈ ವರ್ತನೆಯನ್ನು ಅಭ್ಯಾಸ ಮಾಡಿಕೊಂಡುಬಿಟ್ಟರೆ, ಅನಂತರ ಯಾವ ಶಿಕ್ಷಯೂ ಅವರನ್ನು ಸಭ್ಯವರ್ತನೆಯತ್ತ ತಿರುಗಿಸಲಾರದು. Habitual Offenders ಆಗಿ ಬಿಡುತ್ತಾರೆ. ಎಂತಹ ಕಠಿಣ ಶಿಕ್ಷೆಯೂ ಇವರಲ್ಲಿ 'ಶಿಕ್ಷಣ' ವಾಗುವುದಿಲ್ಲ. ಮಾನಸಿಕ ದೃಷ್ಟಿಯಿಂದ ಇವರು ಮನೋರೋಗಿಗಳು. ಶಿಕ್ಷೆಯನ್ನು ತಪ್ಪಿಸಿ ಸೂಕ್ತ ರೀತಿಯ ಶಿಕ್ಷಣವನ್ನು ಕೊಡುವುದರಿಂದ ಇವರುಗಳ ಸ್ವಭಾವವನ್ನು ಸಾಕಷ್ಟು ಮಟ್ಟಿಗೆ ಪರಿವರ್ತಿಸಬಹುದು.

* * * *

# ೮. ಮನಸ್ಸಿನ ಮಥನ

ಯಲ್ಲಪ್ಪನದು ಸ್ವಲ್ಪ ವಿಚಿತ್ರ ಸ್ವಭಾವ. ಹೇಳಿಕೊಳ್ಳುವಂತಹ ಜಾಣನೇನೂ ಅಲ್ಲ. ಆದರೆ ಸಣ್ಣ ಸಣ್ಣ ವಿಷಯಕ್ಕೂ ಅತಿಯಾಗಿ ಯೋಚಿಸಿ, ಅಳೆದು, ಸುರಿದು, ಕಡೆಗೆ ತೀರ್ಮಾನಕ್ಕೆ ಬರುತ್ತಾನೆ. ರಾತ್ರಿ ಮಲಗುವ ಮುಂಚೆ ಚಾಪೆಯನ್ನು ಹಾಸುತ್ತಾನೆ. ಅದರಮೇಲೆ ವಾರಣವಾಗಿ ಜಮಖಾನವನ್ನು ಹಾಸುತ್ತಾನೆ. ಸ್ವಲ್ಪವೂ ಸುಕ್ಕುಬರದಂತೆ ಅದರ ಮೇಲೆ ಕುಕ್ಕುರುಗಾಲಿನಲ್ಲಿ ಕುಳಿತು ಕೈಯಾಡಿಸುತ್ತಾನೆ. ನಂತರ ಹಾಸಿಗೆಯನ್ನು ಹರಡುತ್ತಾನೆ. ಅದರ ಮೇಲೆ ಮಲಗುತ್ತಾನೆ. ಆಗ ಇಂತಹ ಸ್ಥಳದಲ್ಲಿ ಮೊದಲ ದಿಂಬನ್ನು ಇಡಬೇಕು ಎಂದು ನಿರ್ಧರಿಸುತ್ತಾನೆ. ಎದ್ದು ದಿಂಬನ್ನಿಟ್ಟು, ಮಗ್ಗಲು ಹಾಸಿಗೆಯನ್ನು ಸುಕ್ಕುಗಳು ಬರದಂತೆ ಹಾಸುತ್ತಾನೆ. ಹಾಸಿಗೆಯ ಕೆಳಕ್ಕೆ ಮಗ್ಗಲು ಹಾಸಿಗೆಯ ಪಕ್ಕಗಳನ್ನು ವೈನವಾಗಿ ತುರುಕುತ್ತಾನೆ. ನಂತರ ಎರಡನೆಯ ದಿಂಬನ್ನು ಮೊದಲ ದಿಂಬಿನ ಮೇಲೆ ಇಡುತ್ತಾನೆ. ಶಾಲನ್ನು ಅಣಿಯಾಗಿ ಮಡಿಸಿ ಕಾಲ ದಿಸೆಯಲ್ಲಿ ಅಲಂಕಾರವಾಗಿಡುತ್ತಾನೆ. ತುಸು ದೂರದಿಂದ ಎಲ್ಲವನ್ನೂ ಅರೆಕ್ಷಣ ನೋಡುತ್ತಾನೆ. ನಂತರ ಸಂತಸದಿಂದ ಹಾಸಿಗೆಯ ಮೇಲೆ ಹಗೂರಾಗಿ ಮಲಗುತ್ತಾನೆ.

ಕಾಲೇಜಿನಲ್ಲಿ ಓದುತ್ತಿದ್ದಾಗ ಯಲ್ಲಪ್ಪ ನನ್ನ ರೂಂ ಮೇಟ್. ಇಷ್ಟೆಲ್ಲಾ ಅಣಿಯನ್ನು ಅವ ಮಾಡುವುದನ್ನು ನೋಡಿ ಅಯ್ಯೋ ನತದೃಷ್ಟ ! ಬಿದ್ದುಗೊಳ್ಳುಕ್ಕೆ ಇಷ್ಟೆಲ್ಲಾ ಯೋಚಿಸಬೇಕೇ? ಎಂದು ಅಂದುಕೊಳ್ಳುತ್ತಿದ್ದೆ. ಸುರುಳಿ ಸುತ್ತಿಟ್ಟಿದ್ದ ಹಾಸಿಗೆಯನ್ನು ಕತ್ತೆ ಒದ್ದ ಹಾಗೆ ಒದೆಯುವುದರಿಂದ, ಹಾಸಿಗೆಯು ಬಿಡಿಸಿಕೊಂಡು ಹರಡುತ್ತದೆ. ತತ್‌ಕ್ಷಣ ಅದರ ಮೇಲೆ ನಾನು ಬಿದ್ದುಕೊಳ್ಳುತ್ತಿದ್ದೆ. ಅಗತ್ಯ ತೋರಿದ ಹಾಗೆ ದಿಂಬು ಶಾಲುಗಳನ್ನು ನಂತರ ಅಳವಡಿಸಿಕೊಳ್ಳುತ್ತಿದ್ದೆ.

ಇಬ್ಬರೂ ಮಲಗಬೇಕು, ನಿದ್ರೆಮಾಡಬೇಕು. ಆದರೆ ಅವ ಏನೆಲ್ಲಾ ಅಣಿ ಮಾಡಿಕೊಳ್ಳುತ್ತಿದ್ದ. ಆದರೆ ಬೆಳಗ್ಗೆ ಎದ್ದಾಗ ಇಬ್ಬರ ಹಾಸಿಗೆಯೂ ಒಂದೇ ರೀತಿ ಮುದುಡಿಕೊಂಡಿರುತ್ತಿತ್ತು. ಯಾಕೆ ಹಾಗೆ ಯಲ್ಲಪ್ಪ ತುಂಬಾ ಯೋಚಿಸಿ ಅಣಿಯಾಗಿ ಹಾಸಿಗೆಯನ್ನು ಹರಡಿಕೊಳ್ಳುತ್ತಾನೆ ಎಂದು ನಾನೂ ಆಲೋಚಿಸುತ್ತಿದ್ದೆ.

ಇಬ್ಬರೂ ಹೀಗೆ ಯೋಚಿಸುವುದು, ನನ್ನ ವಿಷಯದಲ್ಲಿ ಅವ; ಅವ ಏಕೆ ಹಾಗೆ ಎಂದು ನಾನು; ಇಬ್ಬರಿಗೂ ಯೋಚನೆಯು ಮೂಡಿರುತಿತ್ತು.

ಯೋಚನೆ ಎಂದರೇನು? ಹಾಸಿಗೆಯನ್ನು ಅಣಿಯಾಗಿ ಹಾಸುವ ಯೋಚನೆ ಅವನಿಗೆ. ಎಲ್ಲಿ ಅಂದರೆ ಅಲ್ಲಿ ಬಿದ್ದುಕೊಂಡರೆ ಅವನಿಗೆ ನಿದ್ರೆಯು ಬರುವುದಿಲ್ಲ. ಅವನು ಏಕೆ ವೃಥಾ ಶ್ರಮಪಡುತ್ತಾನೆ ಎಂದು ನನ್ನ ಯೋಚನೆ. ಅವನ ಯೋಚನೆಗಳು, ಒಂದು ಕಾರ್ಯದ ಸಿದ್ಧಿಗೆ. ನನ್ನ ಯೋಚನೆಯು ಒಂದು ಸಮಸ್ಯಾ ಪರಿಹಾರಕ್ಕೆ. ಯೋಚಿಸಿದನಂತರ ನಾನು ನಿರ್ಣಯಿಸಿದೆ ; ಯಲ್ಲಪ್ಪನ ಸ್ವಭಾವ ಅದು ಎಂದುಕೊಂಡೆ. ಆದರೆ ಹಾಗೇಕಾಯಿತು ಎಂದು ಮುಂದೆ ನಾನು ಯೋಚಿಸಲಿಲ್ಲ. ಯೋಚಿಸಲು ಕುತೂಹಲವು ಉಂಟಾಗಲಿಲ್ಲ. ಬಿದ್ದು ಮಲಗಿಕೊಳ್ಳುಕ್ಕೆ ಇಷ್ಟೆಲ್ಲಾ ಏಕೆ ಒದ್ದಾಡುತ್ತೀನಿ ಎಂಬ ಯೋಚನೆಯು ಯಲ್ಲಪ್ಪನಿಗೆ ಬರವೊಲ್ಲದು.

ಕಾರ್ಯಕ್ಕಾಗಲೀ, ಸಮಸ್ಯೆಯ ನಿವಾರಣೆಗಾಗಲೀ ಯೋಚನೆಯನ್ನು ಮಾಡುತ್ತೇವೆ. ಯಾವುದಾದರೂ ಕೆಲಸವನ್ನು ಮಾಡುವಾಗ, ಈ ರೀತಿಯಲ್ಲಿ ಮಾಡಿದರೆ, ಖರ್ಚು ಕಡಿಮೆಯಾಗುತ್ತದೆ, ಕೆಲಸವು ಬೇಗ ಆಗುತ್ತದೆ. ಲಕ್ಷಣವಾಗಿಯೂ ಆಗುತ್ತದೆ, ಎಂಬುದನ್ನು ನಿರ್ಣಯಿಸಬೇಕು. ಸಾಧ್ಯವಾದಷ್ಟು ಮಟ್ಟಿಗೆ ಇತರ ಎಲ್ಲ ವಿಧಾನಗಳನ್ನು ಯೋಚಿಸಿ, ಅವುಗಳಲ್ಲೆಲ್ಲ ಒಂದು ಉತ್ತಮವಾದುದು ಎಂದು ತೀರ್ಮಾನಿಸಬೇಕು. ಸಮಸ್ಯೆಯು ಎದುರಾದಾಗ, ಅದನ್ನು ಬಿಡಿಸಬೇಕಾದರೆ, ಅಥವಾ ಪರಿಹಾರವನ್ನು ಕಂಡುಹಿಡಿಯಬೇಕಾದರೆ, ಆಗಲೂ ಹಲವಾರು ಪರಿಹಾರ ಮಾರ್ಗಗಳನ್ನು ಪರಿಶೀಲಿಸಿ, ಸುಲಭವಾದ ಮತ್ತು ಉತ್ತಮವಾದ ಮಾರ್ಗವನ್ನು ನಿರ್ಧರಿಸಬೇಕು.

ಮನಸ್ಸನ್ನು ಮಥಿಸುವುದರಿಂದ, ವಿಚಾರವನ್ನು ಮಾಡುವುದರಿಂದ, ನಿರ್ಣಯಿಸಲು ಸಾಧ್ಯ. ಮೊಸರನ್ನು ಚೆನ್ನಾಗಿ ಕಡೆದರೆ ಬೆಣ್ಣೆಯು ಮೇಲಕ್ಕೆ ತೇಲುತ್ತದೆ. ಮನಸ್ಸನ್ನು ವಿಚಾರದ ಕಡೆಗೋಲಿನಿಂದ ಕಡೆದರೆ ನಿರ್ಣಯವು ಹೊರಬೀಳುತ್ತದೆ.

ನಮ್ಮ ನಾಡಿನ ಋಷಿಗಳು ಮನವನ್ನು ಮಥಿಸುವಾಗ ಉದ್ಭವಿಸುವವುಗಳನ್ನು ಪುರಾಣದ ಕತೆಯ ಮೂಲಕ ವಿವರಿಸಿದರು.

ಮನಸ್ಸು ಸಮುದ್ರದಂತೆ ವಿಶಾಲವಾದುದು, ಆಳವಾದುದು ಮೇಲ್ಪದರದಲ್ಲಿರುವುದು ಮಾತ್ರ ನಮ್ಮ ಗಮನಕ್ಕೆ ಪ್ರತ್ಯಕ್ಷವಾಗುತ್ತದೆ. ಮನಸ್ಸಿನಲ್ಲಿ ಇದನ್ನು Conscious part ಎನ್ನುತ್ತಾರೆ. ತೋರ ಮನಸ್ಸು. ಆಳಮನಸ್ಸಿನಲ್ಲಿ, ಸಮುದ್ರದ ಗರ್ಭದಲ್ಲಿ ಯಾವ ಯಾವುವು ಅಡಗಿವೆಯೋ ಯಾರು ಬಲ್ಲರು?

ಬುದ್ಧಿಯನ್ನು ಉಪಯೋಗಿಸಿ, ಅನುಭವದ ನೆರವು ಪಡೆದು ಅನುಮಾನ ಪ್ರಮಾಣದಿಂದ ಹೀಗಿರಬಹುದು ಎಂದು ಊಹಿಸಬಹುದಷ್ಟೇ. ಸಮುದ್ರದ ಗರ್ಭದಾಳದಲ್ಲಿ ಕಣ್ಣುಗಳಿಲ್ಲದ ಅದ್ಭುತವಾದ ಅತಿದೊಡ್ಡ ಗಾತ್ರದ ಪ್ರಾಣಿಗಳಿವೆಯಂತೆ. ಕಾರ್ಗತ್ತಲಲ್ಲಿ ಹುಟ್ಟಿ ಅಲ್ಲೇ ಬೆಳೆದು ಅಲ್ಲೇ ಸಾಯುವ ಅವುಗಳಿಗೆ ಕಣ್ಣಾದರೂ ಏಕೆ ಬೇಕು?

ಮನಸ್ಸಿನ ಆಳದಲ್ಲಿರುವ ಜಗ್ಗಾಡಿ ಮನಸ್ಸನ್ನು ನಡೆಸುವ, Id ಶಕ್ತಿಯು ಸಮುದ್ರದಾಳದಲ್ಲಿರುವ ಘೋರ ಪ್ರಮಾಣದ ಜಲಚರಗಳಂತೆಯೇ ! ಲೌಕಿಕ ಪ್ರಪಂಚದ ಹೊರಗೆ ಏನಿದೆ ಎನ್ನುವುದರ ಕಲ್ಪನೆಯೂ ಅವುಗಳಿಗಿರುವುದಿಲ್ಲ !

ಮಹಾಸಾಗರದ ತಳದಲ್ಲಿ, ಪುರಾಣದ ಕತೆಯ ಪ್ರಕಾರ, ಅತ್ಯಧಿಕ ಪ್ರಮಾಣದ ಕೂರ್ಮವು ಇದೆಯಂತೆ. ಅದರ ಬೆನ್ನೊಡಲು ಬಲು ಕಠಿಣವೂ ಕಠೋರವೂ ಆಗಿದೆಯಂತೆ. ವಾಸ್ತವಿಕವಾದ ಬ್ರಹ್ಮಾಂಡ. ಅದರ ಬೆನ್ನ ಮೇಲೆ ಮಂದರ ಪರ್ವತವನ್ನು ಇರಿಸಿದರಂತೆ. ಸಮುದ್ರ ಮಥನದಲ್ಲಿ ಮಂದರ ಪರ್ವತವೇ ಕಡೆಗೋಲು. ಮನಸ್ಸಿನಲ್ಲಿ Ego ಇದ್ದಂತೆ, ಸಮುದ್ರದಲ್ಲಿ ಮಂದರ ಪರ್ವತ ವಾಸ್ತವಿಕವಾದ ಲೌಕಿಕವಾದ ಬ್ರಹ್ಮಾಂಡದ ಮೇಲೆ ಪ್ರತಿಷ್ಠಿತವಾಗಿರುತ್ತದೆ.

ಕಡೆಗೋಲನ್ನು ಕಡೆಯಬೇಕಾದರೆ ಎರಡೂ ಕಡೆಗಳಲ್ಲಿ ಸೆಳೆದಾಡುವ ಹಗ್ಗವಿರುವಂತೆ ಸಮುದ್ರ ಮಥನದ ಕತೆಯಲ್ಲಿ, ಹೆಬ್ಬಾವಾದ, ಕಾಲದ ಸಂಕೇತವಾದ, ವಾಸುಕಿಯನ್ನು ಮಂದರ ಪರ್ವತದ ಸುತ್ತ ಬಿಗಿದು ಕಡೆಯುವರಂತೆ.

ಕಡೆಯುವವರು ಯಾರು ? ಒಂದು ಕಡೆ ಸುರರು, ಇನ್ನೊಂದು ಕಡೆ ಅಸುರರು, ಇಬ್ಬರೂ ಜತೆ ಜತೆಯಲ್ಲಿ ಹುಟ್ಟಿದ, ದಿತಿ ಮತ್ತು ಸವತಿಯಾದ ಅದಿತಿಯ ಮಕ್ಕಳು ಇತ್ತ ಮತ್ತು ಅತ್ತ ವಾಸುಕಿಯನ್ನು ಹಿಡಿದು ಸಮುದ್ರವನ್ನು ಕಡೆಯತೊಡಗಿದರು. ಮಥಿಸಿದರು.

ಮನಸ್ಸಿನ ಸಾಗರದಲ್ಲಿ ವಾಸ್ತವಿಕವಾದ ಪಿಂಡಾಂಡದ ಮೇಲೆ ನಿಂತಿರುವ Ego ವನ್ನು ಅತ್ತ Id ಗಣಗಳೂ ಇತ್ತ Super-Ego ಗಣಗಳೂ ಕಡೆಯುತ್ತವೆ. ವಿರಾಮವಿಲ್ಲದೆ, ಸರಭರ ಕಡೆಯುತ್ತಿರುತ್ತವೆ. Ego ಒಮ್ಮೆ ಲೌಕಿಕ ವಾಸ್ತವಿಕೆಯತ್ತ ಸೆಳೆಯಲ್ಪಡುತ್ತದೆ. ಮರುಕ್ಷಣದಲ್ಲಿ ಅಲೌಕಿಕವಾದ ಶಾಶ್ವತದತ್ತ ಎಳೆಯಲ್ಪಡುತ್ತದೆ.

ಈ ತರಹ ಬಿರುಸಿನ ಮಥನದಿಂದಾಗಿ, ಸಮುದ್ರದಲ್ಲಿ ಮೊದಲು ತೇಲಿ ಬಂದಿತ್ತು ವಿಷ; ಹಾಲಾಹಲ. ಬ್ರಹ್ಮಾಂಡವನ್ನು ಸುಟ್ಟು ನಾಶಪಡಿಸುವಂತಹ ಹಾಲಾಹಲ. ಆದರೆ ಪುರಾಣದ ಕತೆಯಲ್ಲಿ, ಶಿವನು ಕೈವಲ್ಯದ ಕೈಲಾಸದಿಂದ ಬಂದು ಲೋಕ ಕಲ್ಯಾಣಕ್ಕಾಗಿ, ಹಾಲಾಹಲವನ್ನು ಆಪೋಶನ ತೆಗೆದುಕೊಂಡನಂತೆ.

ಕೈವಲ್ಯವನ್ನು ಮನೆಯಾಗಿರಿಸಿಕೊಂಡಿರುವ ಕೈಲಾಸಾಧಿಪತಿಯೂ ಕೂಡ, ಹಾಲಾಹಲವು ಹೊಟ್ಟೆಯನ್ನು ಸೇರಿದ್ದರೆ, ಭಸ್ಮವಾಗುತ್ತಿದ್ದನಂತೆ. ಅಸ್ತಿತ್ವವು ಅವನಿಗೆ ಉಳಿಯುತ್ತಿರಲಿಲ್ಲವಂತೆ. ಆದಕಾರಣ ಶಿವನಿಗೂ ಕೂಡ ಹಾಲಾಹಲವು ನುಂಗಲಾರದ ತುತ್ತಾಯಿತಂತೆ. ಗಂಟಲಿನಲ್ಲಿ ಸಿಕ್ಕಿಕೊಂಡಿತಂತೆ. ಗಂಟಲು ಪ್ರದೇಶವು ನೀಲಿಗಟ್ಟಿತಂತೆ. ನೀಲಕಂಠನಾದನಂತೆ. ಶಿವ. ವಿಷಕಂಠನಾದನಂತೆ ಶಿವ. ಶ್ರೀಕಂಠನಾದನಂತೆ ಶಿವ. ಇದರಿಂದಾಗಿ ವಾಸ್ತವಿಕ ಲೋಕವು ಅಸ್ತಿತ್ವದಲ್ಲಿ ಉಳಿಯಿತಂತೆ. ಲೌಕಿಕ ಕಲ್ಯಾಣವು ಆಯಿತಂತೆ.

೧. ಮನಸ್ಸಿನಲ್ಲಿ ಮಥನವಾದಾಗ ಮೊದಲು ಹೊರಹೊಮ್ಮುವುದು ವಿಷ, ಕೆಟ್ಟ ಯೋಚನೆ. ಸಾವಿನ ಭಯ. ಮನೆಗೆ ಸಂಜೆ ಆರರ ವೇಳೆಗೆ ಹಿಂತಿರುಗುತ್ತೇನೆ. ಆ ವೇಳೆಗೆ ಮೊದಲ ಮಗನು ಚಾಕರಿಯಿಂದ ಹಿಂತಿರುಗಿ ಸುಸ್ತು ಬಡಿದು ಬಂದು, ತಿಂಡಿಯನ್ನು ತಿನ್ನುತ್ತಿರಬೇಕು. ಆದರೆ ಆ ಸಂಜೆ ಮನೆಗೆ ಅವ ಹಿಂತಿರುಗಿರುವುದಿಲ್ಲ. ಏನು ಕಾರಣವಿತ್ತೋ ಅವನಿಗೆ ಮಾತ್ರ ಗೊತ್ತು. ಕ್ಲುಪ್ತವಾದ ಹೊತ್ತಿಗೆ ಮಗನು ಬರಲಿಲ್ಲ ಎಂದಾಗ ನನಗೆ ಆತಂಕವಾಗುತ್ತದೆ. ಹೊಸ ಸ್ಕೂಟರನ್ನು ಕೊಂಡಿದ್ದಾನೆ. ಯೌವನದ ಆತುರ, ಸ್ಕೂಟರಿನ ಅನುಭವ ಸಾಲದು. ಆದಕಾರಣ ಅಪಘಾತಕ್ಕೀಡಾಗಿದ್ದಾನೆ. ಯಾವ ಆಸ್ಪತ್ರೆಗೆ ದಾಖಲು ಮಾಡಿದ್ದಾರೋ? ಇದಾನೆಯೋ ? ಪ್ರಜ್ಞಾಹೀನನಾಗಿದ್ದಾನೆಯೋ ? ಅಥವಾ.....ಮುಂದೆ ಬರುವ ಯೋಚನೆಯನ್ನು ಮುಂದುವರಿಸಲಾರೆ. ಆ ವಿಷಯವನ್ನು ನನ್ನ ಮನಸ್ಸು ನುಂಗಲಾರದು. ಉಗುಳಲೂ ಆಗದು. ಸ್ವಲ್ಪ ಕಾಲ ನಾನೂ ವಿಷಕಂಠನೇ ! 'ಹೆಲ್ಮೆಟ್ ಕೊಳ್ಳಲು ಹೋಗಿದ್ದೆ. ಬರ್ತಾ ಹಾಗೇ ಮಜೇಂದ್ರ ಭವನಕ್ಕೆ ಹೋಗಿ ಕಾಫಿ ಕುಡಿದು ಬಂದೆ' ಎಂದು ಒಂದು ತಾಸು ಮುಗಿದ ಮೇಲೆ ಅವನು ಬಂದು ಹೇಳಿದಾಗ, ನನ್ನ ಗಂಟಲಲ್ಲಿ ಸಿಕ್ಕಿಕೊಂಡಿದ್ದ ಮನಸ್ಸಿನ ಆತಂಕದ ವಿಷವು ತಟ್ಟಂತ ನಿವಾರಣೆಯಾಗುತ್ತದೆ. ನನ್ನ ಮನಸ್ಸಿನ ಲೋಕದ ಕಲ್ಯಾಣವಾಗುತ್ತದೆ.

ಹಾಲಾಹಲವನ್ನು ನಿವಾರಿಸಿದನಂತರ ಸಮುದ್ರ ಮಥನವಾದಾಗ, ಜ್ಯೇಷ್ಠಾ ಎಂಬ ಹೆಸರಿನ ದರಿದ್ರ ಲಕ್ಷ್ಮಿಯು ತೇಲಿ ಬಂದಳಂತೆ. ಮೊದಲು ಹುಟ್ಟಿ ಬಂದವಳು ಜ್ಯೇಷ್ಠಾ.

೨. ಲೌಕಿಕ ಬಾಳಿನಲ್ಲಿ ಯಶಸ್ವಿಯಾಗಲು ಯಾವುದಾದರೂ ಒಂದು ಕಾರ್ಯವನ್ನೋ ಅಥವಾ ವ್ಯವಹಾರವನ್ನೋ ಮಾಡಬೇಕಾಗುತ್ತದೆ. ಸಾಕಷ್ಟು ವಿಚಾರವನ್ನು ಮಾಡಿದಾಗ, ಮೊದಲು ಬರುವ ಯೋಚನೆಯು ನಷ್ಟದ್ದು. ಮಸಲಾ ನನ್ನ ಯೋಜನೆಯು ಕಾರಣಾಂತರದಿಂದ ಸರಿ ನಡೆಯದಿದ್ದರೆ, ಆಗ ತುಂಬಾ

ನಷ್ಟವಾಗುತ್ತದೆ. ಹಿಂದೆ ಕೂಡಿಟ್ಟಿದ್ದೆಲ್ಲಾ ಈ ವ್ಯವಹಾರದಲ್ಲಿ ಕಳೆದು ಹೋಗುತ್ತದೆಯೋ ಎಂಬ ಆಲೋಚನೆ, ವರ್ಷವೆಲ್ಲಾ ವ್ಯಾಸಂಗವನ್ನು ಶ್ರದ್ಧೆಯಿಂದ ಮಾಡಿದ್ದೇನೆ; ಪರೀಕ್ಷೆಯ ಸಮಯದಲ್ಲಿ ಕಾಯಿಲೆ ಮಲಗಿದರೆ ಎನ್ನುವ ಯೋಚನೆ. ಎಲ್ಲವೂ ದರಿದ್ರದ ಯೋಚನೆಗಳು.

ಜ್ಯೇಷ್ಠಾ, ಅಥವಾ ದರಿದ್ರ ಲಕ್ಷ್ಮಿಯು, ಕೃಷ್ಣರೂಪ ಧರಾ ದೇವಿಯಂತೆ. ಸರ್ವಾಭರಣ ಭೂಷಿತಳಂತೆ. ದಾರಿದ್ರ್ಯವು ಕಪ್ಪಂ ಕಪ್ಪಾದ ಭವಿಷ್ಯವನ್ನು ಸೂಚಿಸಬಹುದು. ಆದರೆ ಸರ್ವಾಭರಣ ಭೂಷಿತಳು ಹೇಗೆ? ಲೌಕಿಕ ಬಾಳಿನಲ್ಲಿ ಶ್ರೀಮಂತರ ಸಂಸಾರವನ್ನು ನೋಡಿ. ಪ್ರತಿಯೊಬ್ಬರಿಗೂ ಆರ್ಥಿಕ ಸ್ವಾತಂತ್ರ್ಯವಿರಲು ಸುಲಭ. ಹಿರಿಯರ ಹೆದರಿಕೆಯು ಕಿರಿಯರನ್ನು ನಡಸುತ್ತದೆ. ಹಿರಿಯರ ಕಣ್ಣು ತಪ್ಪಿದರೆ ಸಾಕು; ಕಿರಿಯರು ಸ್ವೇಚ್ಛಾ ವಿಹಾರಿಗಳಾಗುತ್ತಾರೆ. ನಿಕಟವಾದ ಅನ್ಯೋನ್ಯತೆಯು ಬೆಳೆಯುವುದು ಕಷ್ಟ. ನಮ್ಮಪ್ಪ ನನಗಾಗಿ ಏನು ಮಾಡಿದ? ಅವರಪ್ಪ ಬಿಟ್ಟು ಹೋದ ಆಸ್ತಿಯನ್ನು ಬೆಳಸಿದ. ತಾನೂ ಮಜ ಜೀವನ ನಡಸಿದ. ಅವನ ಅಂತಸ್ತಿಗೆ ತಕ್ಕಂತೆ ಸಮಾಜದಲ್ಲಿ ನಾನು ಮೆರೆಯಬೇಕು ಎಂದು ಸೌಲಭ್ಯಗಳನ್ನು ನೀಡಿದ ಎನ್ನುವ ಭಾವನೆಯು ಮೂಡುತ್ತದೆ.

ಆದರೆ ಬಡವರ ಸಂಸಾರದಲ್ಲಿ ನೋಡಿ. ಮಗನಿಗೆ ಅನ್ನವನ್ನಿಟ್ಟು ಶಾಲೆಗೆ ತಾಯಿ ಕಳಿಸಿದಳು. ಶಾಲೆಗೆ ಹೋದ ಮೇಲೆ, ಯಾರೋ ದೊಡ್ಡವರು ಸತ್ತರು ಅಂತ ರಜಾ ಕೊಟ್ಟರು. ಹತ್ತು ವರ್ಷದ ಮಗ ಮನೆಗೆ ಹನ್ನೆರಡರ ವೇಳೆಗೆ ಹಿಂತಿರುಗಿ ಬಂದ. ತಾಯಿ ಊಟಕ್ಕೆ ಕುಳಿತಿದ್ದಳು. ರಾಗಿ ಮುದ್ದೆಯನ್ನು ತಟ್ಟೆಗೆ ಬಡಿಸಿಕೊಂಡಿದ್ದಳು. ಅನ್ನವನ್ನು ನೀನು ತಿನ್ನುಲ್ಲವಾ? ಎಂದು ಮಗ ಕೇಳಿದ. ಎಲ್ಲರೂ ಅನ್ನವನ್ನು ತಿನ್ನುವಷ್ಟು ಸಂಪಾದನೆಯು ನಿಮ್ಮಪ್ಪನಿಗೆ ಇಲ್ಲ. ಹೊರಗೆ ಹೋಗಿ ಬರುವ ಗಂಡಸರಿಗೆ ಅನ್ನವನ್ನು ಮಾಡಿ ಹಾಕುತ್ತೇನೆ. ಮನೆಯಲ್ಲೇ ಕುಳಿತಿರುವ ಹೆಂಗಸರು ಏನನ್ನು ತಿಂದರೂ ಆಯಿತು, ಎಂದಳು ತಾಯಿ.

ರಾಗಿ ಮುದ್ದೆಯನ್ನು ದಿನವೂ ಹಲವಾರು ಶ್ರೀಮಂತರು ತಿನ್ನುತ್ತಾರೆ. ಅದು ಅಭ್ಯಾಸವಾಗಿದ್ದುದರಿಂದ. ಅಕ್ಕಿಯು ದುಬಾರಿ ದುರ್ಲಭ ಎಂದಲ್ಲ. ಆ ಅಭ್ಯಾಸವಿಲ್ಲದ ಬಡವರ ಮನೆಯಲ್ಲಿ ಗಂಡು ಮಕ್ಕಳಿಗೆ ಅಭ್ಯಾಸವಾದ ಅನ್ನವನ್ನು ಹಾಕಿ, ರಾಗಿ ಮುದ್ದೆಯನ್ನು ತಾಯಿಯು ಉಳಿತಾಯಕ್ಕಾಗಿ ತಿಂದರೆ, ಮಗ–ತಾಯಿ ಇವರುಗಳ ನಡುವೆ ಎಂತಹ ನಿಕಟ ಪ್ರೇಮವು ಉಂಟಾಗುತ್ತದೆ ! ಇಂದು ನಾಲ್ಕಾರು ಸಾವಿರ ರೂಪಾಯಿಗಳನ್ನು ಪ್ರತಿ ತಿಂಗಳೂ ಸಂಪಾದಿಸುವ ಶ್ರೀಮಂತ, ನಾಲ್ವತ್ತು ವರ್ಷಗಳ ಹಿಂದಿನ ತಾಯ ಒಲವನ್ನು ಸ್ಮರಿಸಿಕೊಂಡು,

ನನ್ನೆದುರಿಗೆ ಒಮ್ಮೆ ಅತ್ತ. ಅಂತಹ ತಾಯಿಯು ಯಾರಿಗೆ ಸಿಗುತ್ತಾರೆ ಡಾಕ್ಟರ್ ! ಅವಳ ನಿಷ್ಕಪಟವಾದ ಆಶೀರ್ವಾದದಿಂದಲೇ ನಾನೀಗ ಹತ್ತೂ ಜನರಿಗೆ ಅನ್ನವನ್ನು ನೀಡುವಂತಾಗಿದ್ದೇನೆ ಎಂದ. ಇಂತಹ ಅನುಪಮ ವಾತ್ಸಲ್ಯವು ಬಡ ಸಂಸಾರಗಳಲ್ಲಿ ಸಾಧ್ಯವೇ ಹೊರತು, ಶ್ರೀಮಂತರ ಬಂಗಲೆಗಳಲ್ಲಿ ಖಂಡಿತಾ ಇಲ್ಲ.

ನೆಂಟರಿಷ್ಟರ, ತಾಯ್ತಂದೆ ಮಕ್ಕಳ, ತುಂಬು ವಾತ್ಸಲ್ಯಕ್ಕಿಂತ ಹಿರಿದಾದ ಆಭರಣವು ಉಂಟೆ? ಆದಕಾರಣ ದರಿದ್ರ ಲಕ್ಷ್ಮಿಯು ಕಾಳಭವಿಷ್ಯದ ಸಂಕೇತವಾದರೂ ವಾತ್ಸಲ್ಯದ ಆಭರಣವನ್ನು ತೊಟ್ಟಿರುತ್ತಾಳೆ : ಮೆರೆಸಿ ಮಡಿಲಿಗೆ ಹಾಕಿಕೊಂಡು ದೇವಿಯಾಗಿ ರಕ್ಷಿಸುತ್ತಾಳೆ, ರಕ್ಷಾಕವಚವಾಗುತ್ತಾಳೆ, ಆಜೀವ ಪರ್ಯಂತ. ಆದುದರಿಂದಲೇ ಏನೋ ತುಂಬೊಲವಿನ ಮನನಿಗರು, ಹೊನ್ನನ್ನು ಕಾರ್ಕೋಟಕ ವಿಷ ಎಂದಂದರು.

ಲೌಕಿಕದ ಬಾಳಿನಲ್ಲಿ ಈಜಾಡಲೇಬೇಕಾದ ನಮ್ಮಂತಹವರು ಮನವನ್ನು ಮಥಿಸಿದಾಗ, ಸಮುದ್ರ ಮಥನದಲ್ಲಿ ಹುಟ್ಟಿ ಬಂದ ಹಿರಿಯಕ್ಕನು, ದರಿದ್ರ ಲಕ್ಷ್ಮಿಯು, ಅತ್ಯಂತ ವಾತ್ಸಲ್ಯಮಯೀ, ವಾತ್ಸಲ್ಯವೇ ಆಕೆಯ ಆಭರಣ ; ತನಗಾಗಿ ಆಕೆಯು ಏನನ್ನೂ ಬಯಸುವುದಿಲ್ಲ, ಅಂದ ಮೇಲೆ ಬೇಡುವಳೇ ? ಎನ್ನಿಸುತ್ತದೆ.

ಪೌಗಂಡ ವಯಸ್ಸಿನಲ್ಲಿ, ಪರಾವಲಂಬನದಿಂದ, ಸ್ವಾವಲಂಬನದ ಹೊಸಲನ್ನು ದಾಟುವಾಗ, ಉದಾತ್ತವಾದ ಲೋಕ ಕಲ್ಯಾಣದ ಧ್ಯೇಯವು ಪ್ರಜ್ವಲಿಸುತ್ತಿರುವಾಗ, ಲೋಕವನ್ನು ಉದ್ಧರಿಸುತ್ತೇನೆ. ಎಂತಹ ಸಂಕಟ, ನೋವು, ಬಡತನ, ನನ್ನನ್ನು ಕಾಡಿದರೂ ಧೃತಿಗೆಡುವುದಿಲ್ಲ ಎಂದು, ಆತ್ಮ ಬಲಿಯ, ನಾಲ್ಕೂ ಮೂಲೆಯ ಶಿಲುಬೆಯ, ಸ್ಪಷ್ಟ ಚಿತ್ರವನ್ನು ಆರಾಧಿಸುತ್ತಾನೆ.

ಆದರೆ ವಯಸ್ಕನಾಗತೊಡಗಿದಾಗ, ಧ್ಯೇಯವು ದೂರವಾಗುತ್ತದೆ. ಬಲ ಮಸುಕಾಗುತ್ತದೆ. ತಾನು, ತನ್ನ ತಾತ್ಕಾಲಿಕ ಸುಖ ಎಂಬುವು, ಧ್ಯೇಯದ ಸುತ್ತಲೂ ಪರದೆಯನ್ನು ಹರಡುತ್ತದೆ. ಹರಡಿ ಕವಿಯುತ್ತದೆ.

ಸಮುದ್ರ ಮಥನದ ಹಿರಿಯಕ್ಕ ಜೇಷ್ಠಾ ; ಮನ ಮಥನದಲ್ಲೂ ಹಿರಿಯಕ್ಕನಾಗಿ ವಾತ್ಸಲ್ಯವನ್ನು ಎತ್ತೆತ್ತಲೂ ಸುತ್ತಲೂ ಹರಡುವ, ಮಾನವನ ರಕ್ಷೆಯಾಗುತ್ತಾಳೆ ; ಶಿಲುಬೆಯಿಂದ ಸಾಕ್ಷಾತ್ಕಾರವನ್ನು ಕರುಣಿಸುತ್ತಾಳೆ.

* * *

೩. ಸಮುದ್ರ ಮಥನದ, ಪುರಾಣದ ಕತೆಯಲ್ಲಿ, ಜೇಷ್ಠಾ ಹೊರಹೊಮ್ಮಿದ ನಂತರ, ಕಾಣಿಸಿಕೊಂಡುದು, 'ಪ್ರಸನ್ನಾತ್ಮಾ ಸಮುತ್ಪನ್ನ'ವಾದ 'ಸೋಮ'. ಮೂರನೆಯದಿದು. ಶೀತಾಂಷುರುಂಗ್ವಲಃ–ತಂಪಾದುದಂತೆ, ಸೋಮ. ಚಂದ್ರಮನು ತಂಪು.

ಮನಸ್ಸನ್ನು ಮಥಿಸುವಾಗ. ಜೇಷ್ಠಾಳ ದಾರಿದ್ರ್ಯವು ತೋರಿದಾಗ, ಇದಕ್ಕಿಂತ ಕೆಟ್ಟದ್ದು ಇನ್ನೇನು ತಾನೆ ಆಗಲು ಸಾಧ್ಯ ? ಎಂದೆನ್ನುವ ಭಾವನೆಯು ಬರುತ್ತದೆ. ಮುಂದೆ ಏನೇ ಆಗಲಿ ಈಗಿರುವ ಪರಿಸ್ಥಿತಿಗಿಂತ ಉತ್ತಮವಾಗಿಯೇ ಇರಬೇಕು ಎನ್ನುವ ಸಮಾಧಾನವೂ ಆಗುತ್ತದೆ. ಇದೂ ಒಂದು ರೀತಿಯ ತಂಪೆರೆಯುವ ಸಾಧನವೇ.

೪. ಸೋಮದ ನಂತರ ತೇಲಿ ಬಂದುದು ಶ್ರೀಭಾಗ್ಯಲಕ್ಷ್ಮಿ. ದರಿದ್ರಲಕ್ಷ್ಮಿಯ ತಂಗಿ ಈಕೆ. ಈಕೆಯ ಜತೆಯಲ್ಲಿದ್ದರೆ, ಶ್ರೀಮನ್ನಾರಾಯಣ ಎಂಬ ಪ್ರಸಿದ್ಧಿಯು ಭಗವಂತನಿಗೆ ಬರುವುದು ! ಈಕೆಯ ಜತೆಯಲ್ಲಿರದಿದ್ದರೆ ಆತ ಅಪೂರ್ಣ. ಭಕ್ತರೊಂದಿಗೆ ಸಂಪರ್ಕವನ್ನು ಹೊಂದಲಾರ.

ಮನಸ್ಸು ಮಥಿಸುವಾಗ, ತಂಪೆರೆಯುವ ಸೋಮವು ಹರಡಿದಾಗ, ಸಾಂತ್ವನ ದಿಂದ ಮನಸ್ಸು ಕೆಲಸ ಮಾಡುತ್ತದೆ. ನಿರಾತಂಕವಾಗಿ ಕೆಲಸವನ್ನು ಮಾಡಲು ಸಾಧ್ಯ. ಆಗ ಭಾಗ್ಯವು ದೊರೆಯುವ ಅವಕಾಶವು ಹೆಚ್ಚು. ಶ್ರೀಯು ಕರುಣಿಸುತ್ತಾಳೆ.

೫, ೬, ೭. ಶ್ರೀಯ ನಂತರ ಪುರಾಣದ ಕತೆಯಲ್ಲಿ ಸುರಾದೇವೀ, ತುರಗ, ಕೌಸ್ತುಭವೆಂಬ ದಿವ್ಯ ಮಣಿಯು ಉತ್ಪನ್ನವಾದುವಂತೆ.

ಮನಸ್ಸು ಮಥಿಸಿದಾಗ ಭಾಗ್ಯವು ನನ್ನದಾಯಿತು ಎಂದು ನಂಬಿದಾಗ, ಸುರಾದೇವಿಯು ತುಟಿಯತ್ತ ನೊರೆ ನೊರೆಯಾಗಿ ಚಿಮ್ಮುತ್ತ ಬರುತ್ತಾಳೆ. ವಾಹನ ಮತ್ತು ವಜ್ರ ವೈಢೂರ್ಯಗಳೂ ಮನಸ್ಸನ್ನು ಆಕರ್ಷಿಸುತ್ತವೆ.

೮. ಅನಂತರ ಪಾರಿಜಾತವು ಉತ್ಪನ್ನವಾಯಿತಂತೆ. ಹೂ ಹಗುರವೆಂಬುದು ಪಾರಿಜಾತದಿಂದ ಪ್ರೇರಿತವಾಗಿರಬಹುದು. ಎಂತೆಂತಹ ಒಡವೆಗಳನ್ನೂ ಧರಿಸಿದರೂ ಹೂವನ್ನು ಮುಡಿದುಕೊಳ್ಳದಿದ್ದರೆ ಶೃಂಗಾರವು ಪೂರ್ಣವಾಗುವುದಿಲ್ಲ. ಹೂವಿನ ಮಾಲೆಯು ಪವಿತ್ರದ ನಿರ್ಮಲ ಸಂಕೇತ.

೯. 'ಸುರಭಿ'ಯು ನಂತರ ಉತ್ಪನ್ನವಾಯಿತಂತೆ ; ಬ್ರಹ್ಮಾಂಡದ ಆದಿಮೂಲವಾದ ಬ್ರಹ್ಮವನ್ನು ಕುರಿತು ಜಿಜ್ಞಾಸೆ ಮಾಡುವ ಮಹಾಮುನಿಗಳು ಇಚ್ಛಿಸುದದನ್ನೆಲ್ಲಾ ಸುರಭಿಯು ನೀಡುವುದಂತೆ. ಸರ್ವ ಕಾಮ ಫಲ ಪ್ರದವಂತೆ.

ಮನಸ್ಸು ಮಥಿಸಿ, ಭಾಗ್ಯಲಕ್ಷ್ಮಿಯು ಲೌಕಿಕ ಕಾಮ್ಯಗಳನ್ನು ನೀಡಿದ ಮೇಲೆ, ಯಾವುದೋ ಒಂದು ಕೊರತೆಯು ಮನಸ್ಸಿನಲ್ಲಿ ಉಳಿದಿರುತ್ತದೆ. The sweetest songs are those that tell of saddest thought. ಅತ್ಯಂತ ದುಃಖಕರವಾದ ಯೋಚನೆಯು ಅತ್ಯಂತ ಹಿತವಾಗಿಯೂ ಇರುತ್ತದೆ. ಅಂತಹ ಯೋಚನೆಯು ಯಾವುದು? ಆದಿಮೂಲದಿಂದ ಬೇರ್ಪಟ್ಟು ಬಂದು ತೌರನ್ನು ಪುನಃ ಕಾಣದೆ,

ಅದರ ಸ್ಮರಣೆಯನ್ನು ಮಾಡಿಕೊಳ್ಳುವುದು. ಅತ್ಯಂತ ದುಃಖವೂ ಹೌದು ಅತ್ಯಂತ ಹಿತವೂ ಹೌದು. ಬಾಳ ಮೂಲವಾದ ತೌರಿಗೆ ಹೋದ ಮೇಲೆ ಸರ್ವಕಾಮಗಳೂ ಫಲಿಸಿದಂತೆಯೇ ! ಸುರಭಿಯು ಮನಸ್ಸಿನಲ್ಲಿ ಪ್ರತ್ಯಕ್ಷವಾದಾಗ, ಆದಿ ಮೂಲದ ತೌರಿನ ಸ್ಮರಣೆಯು ಚಿಗುರುತ್ತದೆ.

೧೦, ೧೧. ಚತುರ್ದಂತಿ ಮಹಾಗಜವು ; ಮತ್ತು ಕಾಮವೃಕ್ಷ ಅಂದರೆ ಬೇಡಿದುದನ್ನು ನೀಡುವ ಕಲ್ಪತರು, ತೇಲಿ ಬಂದುವಂತೆ Dinosauras, ಮುಂತಾದ ಮಹಾಕಾಯಗಳೂ ಪ್ರಕೃತಿಯ ಜೀವನ ಪ್ರಗತಿಯಲ್ಲಿ ಕಂಡುಬಂದುವು. ಆಗ ಗಜಗಳಿಗೆ ನಾಲ್ಕು ದಂತಗಳೂ ಇದ್ದುವು. ನಂತರ ಕಾಮವೃಕ್ಷವು ಕಾಣಿಸಿತು.

ಮನಸ್ಸು ಬೆಳೆಯತೊಡಗಿದಾಗ ಮಹಾಶಕ್ತಿಯನ್ನು ಸಂಪಾದಿಸಿಕೊಂಡಾಗ, ಚತುರ್ದಂತಿಗಳಂತೆ ಏನೆಲ್ಲವನ್ನೂ ಗೆಲ್ಲಬಹುದು, ವಶಪಡಿಸಿಕೊಳ್ಳಬಹುದು, Right of might ಇದ್ದಾಗ ಕಾಮವೃಕ್ಷ ಕರಗತವಾಗದಂತೆಯೇ ! God is always on the side of the stronger army. ಎನ್ನುವುದು ಈ ಕಾರಣದಿಂದಲೇ. ಚಂದ್ರನ ಮೇಲೆ ಅಡಿಯಾಡಿಸಬಹುದು.

೧೨. ಅಪ್ಸರ ಗಣವು ತದನಂತರ ತೇಲಿ ಬಂದುವಂತೆ. ಕಣ್ಣಂಚಿನ ಕ್ರೂರ ನೋಟವು, ಎಂತಹ ಧಾಂಡಿಗನನ್ನೂ ಈಟಿಗಿಂತಲೂ ಪರಿಣಾಮಕಾರಿಯಾಗಿ ಇರಿಯು ಬಲ್ಲುದು. ಅಪ್ಸರೆಯುರು ಸರಸ್ಸಿನಲ್ಲಿ ಹುಟ್ಟಿ ಬಂದವರು. ಜಲಕನ್ಯೆಯರಂತೆಯೇ ಜಲಕ್ರೀಡೆಯನ್ನು ಆಡಬಲ್ಲರು. ರತಿಯಂತೆಯೇ ರತಿಕ್ರೀಡೆಯನ್ನು ಆಡಬಲ್ಲರು. ಏನೇನನ್ನು ಮಾಡಿದರೂ ಕನ್ಯಾವಸ್ಥೆಯನ್ನು ಉಳಿಸಿಕೊಂಡಿರುವರಂತೆ. ಕಾಮವೃಕ್ಷದ ಹಿಂದೆಯೇ ಅಪ್ಸರಸಿಯರು ಉದ್ಭವಿಸುವುದು ಸ್ವಾಭಾವಿಕ.

ಮನಸ್ಸಿನ ಮಥನದಲ್ಲಿ ಕಾಮ್ಯವಸ್ತುಗಳು ವಾಸ್ತವಿಕ ಪ್ರಪಂಚದಲ್ಲಿರುವುದಕ್ಕಿಂತ ಕನಸಿನಲ್ಲಿ ಮೂಡಿ ಬಂದಾಗ ಅತಿ ಸುಂದರವಾಗಿರುತ್ತವೆ. ಲೌಕಿಕ ಪ್ರಪಂಚದಲ್ಲಿ ಎಷ್ಟೋ ಮನಮೋಹಕವಾದ ವಸ್ತುವು ಇದ್ದರೂ, ಅಲ್ಪ ಸ್ವಲ್ಪವಾದರೂ ಲೋಪ ದೋಷಗಳಿರುತ್ತವೆ. ಆದರೆ ಕನಸಿನಲ್ಲಿ ಮೂಡಿ ಬಂದವುಗಳಿಗೆ ಲೋಪ ದೋಷಗಳು ಇರಬೇಕಾಗಿಲ್ಲ. ಕನಸಿನ ಕನ್ಯೆಯರು ಸದಾ ರಮಣೀಯರು. ಸಂಪೂರ್ಣವಾಗಿ ಯಥಾ ಇಚ್ಛರು ; ಯಥೇಚ್ಛ ವರ್ತಿಗಳು.

ಕನಸಿನಲ್ಲಿ ಮೂಡಿ ಬಂದ ಗಂಧರ್ವರು, ಅಪ್ಸರೆಯರಿಗೆ ಸರಿಯಾದ ಜೋಡಿ. ಕನ್ನಡಿಯನ್ನು ನೋಡಿದಾಗ, ಪ್ರತಿಬಿಂಬವನ್ನು ಕಂಡಾಗ ಎಷ್ಟು ಅವಲಕ್ಷಣ ಎಂದು ಒದ್ದು ಬಿಡುವಹಾಗಾಗುತ್ತೆ ; ಸಾಕಷ್ಟು ಮಂದಿಗೆ. ಇಂತಹವರೂ ಕೂಡ

ಕನಸಿನ ಲೋಕದಲ್ಲಿ–ಅಪ್ಸರೆಯರು ಮತ್ತು ಗಂಧರ್ವರು ನಮಗಿಂತ ಸ್ವಲ್ಪ ಕಳಪೆ ಎಂದುಕೊಳ್ಳುವವರೇ ! ನನ್ನ ಮನಸ್ಸಿನಲ್ಲಿ 'ನನ'ಗಿಂತ ಸುಂದರವಾದುದು ಇಲ್ಲವೇ ಇಲ್ಲ. ವಾಸ್ತವಿಕ ಪ್ರಪಂಚದಲ್ಲಿ ಇದಕ್ಕೆ ಸಾಕ್ಷ್ಯವು ಸಿಗುವುದಿಲ್ಲ. ಆದರೆ ಮನಸ್ಸಿನ ನಿದ್ರಾವಸ್ಥೆಯಲ್ಲಿ ಮೂಡಿಬರುವ ಕನಸ್ಸಿನ ಪ್ರಪಂಚದಲ್ಲಿ 'ನನ'ಗಿಂತ ಸುಂದರವಾದುದು ಇಲ್ಲ ಎಂಬುದು ಖಚಿತವಾಗಿರುತ್ತದೆ. ಈ ನಂಬಿಕೆಯನ್ನು ತಪ್ಪಿಸುವುದಾವುದೂ ಇರುವುದಿಲ್ಲ.

೧೩. ಆನಂತರ ಪುರಾಣದ ಕತೆಯಲ್ಲಿ 'ವಪುಷ್ಮಾನ್ ಉಪತಿಷ್ಠತ' ನಾಗಿದ್ದ ಧನ್ವಂತರಿಯು ತೇಲಿ ಬಂದನಂತೆ.

ಮನಸ್ಸಿನ ಮಥನದಲ್ಲಿ, ಚತುರ್ದಂತಿಯಂತಹ ಮಹಾಶಕ್ತಿಯುಳ್ಳ ಮನಸ್ಸು ದೃಢವಾಯಿತು. ಆನಂತರ ಮನಸ್ಸು ನಿದ್ರಾವಸ್ಥೆಯಲ್ಲಿ, ಎಚ್ಚರವಾಗಿರುವಾಗ ಅನುಭವಿಸಲಾಗದ ಕಾಮ್ಯಗಳನ್ನು, ಅನುಭವಿಸಲು ಸಾಧ್ಯವಾಯಿತು. ಕನಸಿನ ಅನುಭವಗಳಿಂದ ಸಂಪೂರ್ಣ ತೃಪ್ತಿಯನ್ನು ಪಡೆಯಲು ಅಸಾಧ್ಯ. ಆದುದರಿಂದ ಮನಸ್ಸಿನ ಗರ್ಭದಲ್ಲಿ ಯಾವುದೋ ಇದೆ. ಅದನ್ನು ಪಡೆದರೆ ಸಂಪೂರ್ಣವಾದ, ಸದಾ ಕಾಲವೂ ಇರುವ ತೃಪ್ತಿಯು ಲಭ್ಯವಾಗುತ್ತದೆ. ಎನ್ನುವ ಅನುಮಾನವು ಉಂಟಾಗುತ್ತದೆ. 'ಅದ'ನ್ನು ಪ್ರತ್ಯಕ್ಷ ಮಾಡಿಕೊಳ್ಳಬೇಕು ಎಂಬ ಹೆಬ್ಬಯಕೆಯೆಯು ಮೂಡುತ್ತದೆ. ಇಂತಹ ಹಿರಿ ಹಂಬಲವು ಮನಸ್ಸನ್ನು ಪೂರ್ತಿ ಮುತ್ತಿಕೊಂಡಾಗ ಇತರ ಕಾಮನೆಗಳು ಯಾವುವೂ ಮನಸ್ಸನ್ನು ಕಾಡುವುದಿಲ್ಲ. ಮನಸ್ಸಿನ ಇಂತಹ ಸ್ಥಿತಿಯನ್ನು Meditation ಅಥವಾ ಧ್ಯಾನ ಎನ್ನುತ್ತಾರೆ. ಅಂಬಿನಂತೆ ನೇರವಾಗಿ, ಮನಸ್ಸು ಚಂಚಲತೆಯನ್ನು ಕಳೆದುಕೊಂಡು, ಮುನ್ನಡದರೆ, ಧನ್ವಂತರಿ ಎಂಬ ಹೆಸರಿನ ದೇವನು ಪ್ರತ್ಯಕ್ಷವಾಗುತ್ತಾನೆ. ಮನಸ್ಸಿನ ಆರೋಗ್ಯವನ್ನೂ ತನ್ಮೂಲಕ ದೇಹದ ಆರೋಗ್ಯವನ್ನೂ ಧನ್ವಂತರಿಯು ರಕ್ಷಿಸುತ್ತಾನೆ. ಏಕೆಂದರೆ ಧನ್ವಂತರಿಯು ಪ್ರತ್ಯಕ್ಷವಾಗಿ ಮನಸ್ಸಿಗೆ ಗೋಚರವಾದಾಗ, ಮನಸ್ಸು Id, Ego, ಮತ್ತು Super-Ego.. ತಮೋ, ರಜಸ್ ಮತ್ತು ಸತ್–ಚೈತನ್ಯಾಂಶಗಳ ದಾಯಾದಿ ಕಲಹವು ನಿಂತು ಹೋಗುತ್ತದೆ. ತ್ರಿಗುಣಾತೀತವಾದ ಮನಸ್ಸಿನ ಅವಸ್ಥೆಯೇ, ಧನ್ವಂತರಿಯ ಅರಿವನ್ನು ಸಾಧಿಸಿ ಕೊಡುವುದು.

೧೪. ಧನ್ವಂತರಿಯು ಕತೆಯಲ್ಲಿ "ಶ್ವೇತಂ ಕಮಂಡಲುಂ ಭೀಭ್ರತ್ 'ಅಮೃತಂ' ಯುತ್ರ ತಿಷ್ಠತೆ" ಅಮೃತವು ತುಂಬಿದ್ದ, ಬೆಳ್ಳನೆ ಕಮಂಡಲುವನ್ನು ಹಿಡಿದುಕೊಂಡಿದ್ದನಂತೆ. ಅಮೃತವನ್ನು ಕುಡಿದವರು ಸಾಯುವುದೇ ಇಲ್ಲವಂತೆ. ಹೆಸರೇ ಈ ಅರ್ಥವನ್ನು ಸೂಚಿಸುತ್ತದೆ.

ಮನಸ್ಸಿನ ಮಥನದಲ್ಲಿ, ಮನಸ್ಸನ್ನು ನೇರವಾಗಿ ಯಾವುದೋ ಗುರಿಯತ್ತ ನಡೆಸುವುದನ್ನು ಅಭ್ಯಾಸ ಮಾಡಿ, ಕಲಿತುಕೊಂಡರೆ, ಆಗ ಮನಸ್ಸನ್ನು ಅವ್ಯಕ್ತವಾಗಿ ನಡೆಸುತ್ತಿರುವ, ಮನಸ್ಸಿನ ತಿರುಳಿನಂತಿರುವ ಅಂಶವು ವ್ಯಕ್ತವಾಗುತ್ತದೆ. ಇದನ್ನು ಅಮೃತವೆನ್ನಬಹುದು. ಏಕೆಂದರೆ ಮನಸ್ಸಿನ ತಿರುಳಾದ ಈ ಅಂಶವು, ಮನಸ್ಸನ್ನು ಸಾಮಾನ್ಯವಾಗಿ ಜಗ್ಗಾಡಿಸುವ, Id ಅಥವಾ ಪಾಶವೀ ಶಕ್ತಿಗಳಿಂದಲೂ Ego ಎಂದು ಭ್ರಮಿಸಿ ಮೆರೆಯಿಸುವ ರಜೋಶಕ್ತಿಯಿಂದಲೂ, ಹಾಗೂ ಶಿಕ್ಷೆಯನ್ನು ಮಾಡಿ ಶಿಕ್ಷಣ ಕೊಡುತ್ತೇನೆ ಎನ್ನುವ ಮನಸ್ಸಿನ ಸತ್–ಚೈತನ್ಯಾಂಶದ Super-Ego ಪ್ರಭಾವವನ್ನೂ, ಇವು ಮೂರನ್ನೂ ನಡಸುವುದಾದರೂ, ಅವುಗಳಿಗೆ ಹೊರತಾಗಿರುತ್ತದೆ.

ಮೆದುಳಿನ ಬುಡದಲ್ಲಿ IIIrd Ventricle ಎಂಬುದರ ತಳದ ಸುತ್ತಲೂ ಇರುವ ಕೆಲವು ನರ ಸಮೂಹಗಳ ಕೇಂದ್ರಗಳು ವಿಚಿತ್ರವಾಗಿ ವರ್ತಿಸುತ್ತವೆ ; ಉದ್ರೇಕಿಸಿದಾಗ. ಪ್ರಯೋಗಾರ್ಥವಾಗಿ ಪ್ರಾಣಿಗಳ ಮೆದುಳಿನ ಈ ಭಾಗದಲ್ಲಿ, ವಿದ್ಯುತ್ ಶಕ್ತಿಯನ್ನು ಸೂಕ್ತ ಪ್ರಮಾಣದಲ್ಲಿ ಹರಿಸಿ ಉದ್ರೇಕಿಸಿದರೆ, ಅಂತಹ ಪ್ರಾಣಿಗಳು, ಅನಂತರ ತುಂಬಾ ಹಸಿವಾಗಿದ್ದರೂ, ಹತ್ತಿರವೇ ಸಿದ್ಧವಾಗಿರುವ ಆಹಾರದ ಬಳಿಗೆ ಓಡುವುದಿಲ್ಲ. ಬದಲು ವಿದ್ಯುತ್‌ಶಕ್ತಿಯನ್ನು ಹರಿಸಿ ಉದ್ರೇಕಿಸುವ ಬಳಿಗೆ ಓಡುತ್ತವೆ. ಅಲ್ಲಿರುವ ಕೈಹಿಡಿಯನ್ನು ಒತ್ತುತ್ತವೆ. ಇಂತಹ ಪ್ರಾಣಿಗಳು, ಋತು ಸಮಯದಲ್ಲಿ ಕಾಮೋದ್ರೇಕವಾಗಿದ್ದರೂ, ಹತ್ತಿರಲೇ ಸಿದ್ಧವಾಗಿರುವ ಜತೆಯು ಕಣ್ಣು ಕಣ್ಣು ಮಿಟಿಕಿಸಿದರೂ, ಕೈಹಿಡಿಯ ಬಳಿಗೆ ಓಡುತ್ತವೆ. ಹಿಡಿಯನ್ನು ಒತ್ತುತ್ತವೆ. ಇದರಿಂದ ಉಂಟಾದ ವಿದ್ಯುತ್ ಶಕ್ತಿಯು, ಮೆದುಳಿನ ವಿಶಿಷ್ಟವಾದ ಆ ಭಾಗವನ್ನು ಉದ್ರೇಕಿಸುತ್ತದೆ. ಇದರಿಂದ ಲಭಿಸುವ ಆನಂದವು, ಮಿಕ್ಕ ಸುಖಗಳಿಗಿಂತ ಮಿಗಿಲಾಗಿರಲೇ ಬೇಕು. ಇಲ್ಲವಾದರೆ ಪ್ರಾಣಿಯು ಕೈ ಹಿಡಿಯ ಹತ್ತಿರ ಓಡುತ್ತಿರಲಿಲ್ಲ.

ಈ ಕೇಂದ್ರಗಳನ್ನು 'ಆನಂದದ ಕೇಂದ್ರಗಳು' ಎಂದು ಕರೆಯುವುದು ಉಚಿತ.

ಇದೇ ತೆರನ ವ್ಯವಸ್ಥೆಯು ಮನುಷ್ಯನ ಮೆದುಳಿನಲ್ಲಿಯೂ ಇರಬೇಕು Meditation ಅಥವಾ ಧ್ಯಾನದಿಂದ, ಆ ಕೇಂದ್ರಗಳನ್ನು ಉದ್ರೇಕಿಸಿದರೆ, ಅಂತಹವನು, ದೇಹ ಮತ್ತು ಮನಸ್ಸಿನ ಕಾಮನೆಗಳಿಗೆ ಬಲಿಯಾಗುವುದಿಲ್ಲ. ಬದುಕಿರುವ ತನಕ ದೇಹಕ್ಕೆ ಆಹಾರವು ಅಗತ್ಯ. ಆದಕಾರಣ ಸಾಕಷ್ಟನ್ನು ತಿನ್ನುತ್ತಾನೆ. ಸ್ವಾದಿಸುತ್ತಾನೆ. ಆದರೆ ಆಹಾರವನ್ನು ಪರಮಗುರಿ ಎಂದು ಅದಕ್ಕೆ

ಅಂಟಿಕೊಂಡುವುದಿಲ್ಲ. ಇತರ ಕಾಮ್ಯಗಳನ್ನು ಅನುಭವಿಸುವಾಗಲೂ, ಅವಕ್ಕೇ ಅಂಟಿಕೊಂಡು ಜೀವನದ ಗುರಿ ಸಾಧಿಸಿತು ಎನ್ನುವುದಿಲ್ಲ. ಆನಂದದ ಕೇಂದ್ರಗಳನ್ನೂ ಉದ್ರೇಕಿಸಿದಾಗ, ಉತ್ಪನ್ನವಾಗುವ ಶಕ್ತಿ ಸ್ವರೂಪವು ಎಂದೂ ಸಾಯುವುದಿಲ್ಲ. ದೇಹ ಮತ್ತು ಮನಸ್ಸಿನ ಒಕ್ಕೂಟ ಸಾಯುತ್ತದೆ. ಆದರೆ ಅವನ್ನು ನಡಸುವ ಆನಂದದ ಶಕ್ತಿ ಸ್ವರೂಪವು, ಸಾಯುವುದಿಲ್ಲ. ಅಂದರೆ 'ಅಮೃತ'ವಾಗಿದೆ ಎಂದು ಹೇಳಬಹುದು.

* * * *

# ೯. ಮನ ಮಂಥನವು ಹಳಿ ತಪ್ಪಿದಾಗ

ಲೌಕಿಕ ಬಾಳಿನಲ್ಲಿ ಮನ ಮಂಥನವನ್ನು ಅಂದರೆ ಆಲೋಚನೆಯನ್ನು ಎಲ್ಲರೂ ಮಾಡಲೇಬೇಕು. ಒಬ್ಬರಿಗಿಂತ ಇನ್ನೊಬ್ಬರು, ಹೆಚ್ಚು ಸರಳವಾಗಿ, ಬಹಳ ಚುರುಕಾಗಿ ಯೋಚನೆಗಳನ್ನು ಹೂಡಬಹುದು. ಯೋಚನೆಗಳ ಗುಣದಲ್ಲಿ ಪ್ರಮಾಣದಲ್ಲಿ, ವೇಗದಲ್ಲಿ ಮತ್ತು ತೀಕ್ಷ್ಣತೆಯಲ್ಲಿ, ವ್ಯಕ್ತಿ ವ್ಯಕ್ತಿಗೂ ತುಂಬಾ ವ್ಯತ್ಯಾಸವಿರುತ್ತದೆ.

ಯೋಚಿಸುವಾಗ ದೇಹ ಮತ್ತು ಅದಕ್ಕೆ ನಿಕಟವಾಗಿ ಸಂಬಂಧಿಸಿದ Id ಶಕ್ತಿಯು ಒಂದು ಕಡೆಗೆ ಸೆಳೆಯುತ್ತದೆ. ತಾನು, ತನ್ನ ಅಗತ್ಯ ಎಂಬ ಮಮಕಾರದ, Ego ಕಲ್ಪನೆಯು, ಮನಸ್ಸಿನ ಕೇಂದ್ರವಾಗಿರುತ್ತದೆ. ಸಮಾಜದ ಅಂದರೆ ಸುತ್ತಲಿರುವವರ ಹಿತ ಸಾಧನೆಯನ್ನು Super-Ego, ಅಥವಾ ಸತ್–ಚೈತನ್ಯಾಂಶವು ಬೆದರಿ ಸುತ್ತ, ಹಾಗೂ ಹೊಗಳುತ್ತ, ಮನಸ್ಸಿನಿಂದ ಮೂಡಿಸುತ್ತದೆ.

ಯೋಚನೆಯನ್ನು ಮಾಡುವಾಗ, ಪರಿಸರದ ವಾಸ್ತವಿಕತೆಯು ದೃಢವಾದ ಆಧಾರವಾಗಿರುತ್ತದೆ. ತಾನು ; ತನ್ನ ಕಲಿಕೆ ಮತ್ತು ಅನುಭವ ; ತಾನಿರುವ ಮನೆಯಲ್ಲಿನ ಹತ್ತಿರದ ನೆಂಟರಿಷ್ಟರು ; ಬೇರೆ ಬೇರೆ ಊರು ದೇಶಗಳಲ್ಲಿದ್ದರೂ, ತನ್ನ ನೆಂಟರು ಇಷ್ಟರು ; ತಾನು ವಾಸಿಸುತ್ತಿರುವ ಸಮಾಜ ; ಇವೆಲ್ಲದರ ಸ್ಪಷ್ಟವಾದ ಅರಿವು ಮನಸ್ಸಿನಲ್ಲಿರುತ್ತದೆ. ಮನ ಮಂಥನವನ್ನು ಅಂದರೆ ಯೋಚನೆಯನ್ನು ಮಾಡುವಾಗ, ವಾಸ್ತವಿಕವಾದ ಈ ಚೌಕಟ್ಟಿನಲ್ಲಿರಬೇಕು. ಹಾಗಿದ್ದರೆ, ಯೋಚಿಸಿದ ಮೇಲೆ ನಿರ್ಣಯವನ್ನು ಕೈಗೊಂಡು ಕಾರ್ಯಗತಮಾಡಿದರೆ ಆಶಿಸಿದ ಕಾರ್ಯವು ನೆರವೇರುತ್ತದೆ.

ಮನ ಮಂಥನಕ್ಕೂ, ಸಮುದ್ರ ಮಥನದ ಪುರಾಣದ ಕತೆಗೂ ಬಹಳಷ್ಟು ಸಾಮ್ಯವಿದೆ ಎಂಬುದನ್ನು ಅರಿತೆವು. ಆದರೆ ಮನೆಗಳಲ್ಲಿ ಸಾಮಾನ್ಯವಾಗಿ ಮೊಸರನ್ನು ಕಡೆದು ಬೆಣ್ಣೆಯನ್ನು ತೆಗೆಯುವ ಸಾಮತಿಯು ಮನ ಮಂಥನದ ಅರಿವಿಗೆ ಸಹಾಯಕವಾಗುತ್ತದೆ.

Ego ಎನ್ನುವ ಕಲ್ಪನೆಯು ಕಡೆಗೋಲು ಇದ್ದ ಹಾಗೆ ಕಾಲವೆಂಬ ಹಗ್ಗದಿಂದ ಕಡೆಗೋಲನ್ನು ಕಟ್ಟಿ, ಒಂದು ಕಡೆ Id ಹಿಡಿದೆಳೆಯುತ್ತದೆ. ಇನ್ನೊಂದು ಕಡೆ -

Super-Ego ಹಿಡಿದೆಳೆಯುತ್ತದೆ. ಕಡೆಗೋಲು ಮೊಸರು ತುಂಬಿರುವ ಮಡಕೆಯಲ್ಲಿ ಕಡೆಯುಬೇಕು. ವಿಚಾರಪರ ಮನಸ್ಸು ; ಸ್ಮರಣೆಗಳು, ಪರಿಸರದಿಂದ ಪಂಚೇಂದ್ರಿಯಗಳ ಮೂಲಕ ಸಂಗ್ರಹಿಸಿದ ವಿಷಯಗಳು, ಇತ್ಯಾದಿಗಳೆಲ್ಲವೂ ಸೇರಿದುದನ್ನು ಮೊಸರಿಗೆ ಹೋಲಿಸಬಹುದು. ಪರಿಸರದ ವಾಸ್ತವಿಕತೆಯ ಅರಿವು, ಮಡಕೆ. ಅದರೊಳಗೆ ಮನ ಮಥನವಾಗಬೇಕು.

ಹದವಾಗಿ ಕಡೆಗೋಲನ್ನು, ಮಡಕೆಗೆ ಅಪಾಯವಿಲ್ಲದಂತೆ ಕಡೆದರೆ, ಬೆಣ್ಣೆಯು ಸ್ವಲ್ಪಕಾಲಾನಂತರ ತೇಲಿ ಬರುತ್ತದೆ. ಅದರಂತೆಯೇ ಮನಸ್ಸನ್ನು ಹದವಾಗಿ ಮಥಿಸಿದರೆ, ನಿರ್ಣಯವೆಂಬ ಬೆಣ್ಣೆಯು ಲಭಿಸುತ್ತದೆ. ಬೆಣ್ಣೆಯನ್ನು ತಿಂದು ಸುಖಪಡುವಂತೆ, ನಿರ್ಣಯವನ್ನು ಬಾಳಿನಲ್ಲಿ ಕಾರ್ಯಗತಮಾಡಿ ಸುಖ ಪಡಬಹುದು.

ಹದವಾಗಿ ಕಡೆಗೋಲನ್ನು, ಮೊಸರು ಮಡಕೆಯಿಂದ ಚೆಲ್ಲಿ ಹೋಗದಂತೆ ಕಡೆದರೆ, ಬೆಣ್ಣೆಯನ್ನು ಪಡೆಯಬಹುದು. ಹದವಾಗಿ ಕಡೆಯದೆ ಇದ್ದರೆ ? ಕಡೆಯಲು ಆಗದೆ ಇದ್ದರೆ?

೧

ಹಗ್ಗವನ್ನು ಕಡೆಗೋಲ ಸುತ್ತ ಬಿಗಿದು ಕಡೆಯುತ್ತೇವೆ. ಹದವಾಗಿ ಕಡೆಯದೆ ಇದ್ದರೆ ಅಂದರೆ ರಭಸದಿಂದ ಕಡೆದರೆ, ಕಡೆಗೋಲಿನ ಆಯವು ತಪ್ಪಿ, ಕಡೆಗೋಲಿನ ಮಂತು ಮಡಕೆಗೆ ಬಡಿಯಬಹುದು. ಮಡಕೆಯು ಒಡೆದು ಅಥವಾ ಬಿರುಕು ಬಿಟ್ಟು ಮೊಸರು ಚೆಲ್ಲಬಹುದು, ಅಥವಾ ಸೋರಬಹುದು.

Id ಅಥವಾ Super-Ego ಶಕ್ತಿಗಳ ಉಲ್ಬಣವಾಗಿ ಸೆಳೆದಾಡತೊಡಗಿದರೆ, ಹಾಗೂ Ego ದ ಸುತ್ತಲೂ ಬಿಗಿದ ಆಯವು ಸಮತೋಲನವಾಗದಿದ್ದರೆ, Ego ಆಯತಪ್ಪಿ ರಭಸದಿಂದ ಮಡಕೆಯನ್ನು ಬಡಿಯಬಹುದು. ಅಂತಹವನಲ್ಲಿ ವಾಸ್ತವಿಕತೆಯ ಅರಿವು ಏರುಪೇರಾಗುತ್ತದೆ. ಅಥವಾ ಇಲ್ಲವಾಗುತ್ತದೆ. In-Sight into Reality ಇಲ್ಲ. ಅಂತಹವರ ಮಾನಸಿಕ ಬೇನೆಗಳಲ್ಲಿ ಇದು ಮುಖ್ಯವಾದ ಚಿಹ್ನೆ.

ವಿಚಾರಪರ ಮನಸ್ಸು, ಅನುಭವ, ಕಲಿಕೆ ಮತ್ತು ಸ್ಮರಣೆ ಇವುಗಳೆಲ್ಲವೂ ಬಳಸಲ್ಪಟ್ಟರೆ ನಿರ್ಣಯವು ವಾಸ್ತವಿಕವಾಗಿರುತ್ತದೆ. ಬಾಳಿನಲ್ಲಿ ಯಶಸ್ಸನ್ನು ಮತ್ತು ಫಲವನ್ನು ನೀಡುತ್ತದೆ. ಆದರೆ ಕೆಲವು ಭಾಗಗಳು, ಸೋರಿ ಹೋದ ಮೊಸರಿನಂತಾಗಿ, ಮಂಥನಕ್ಕೆ ಬಳಸಲಾಗದಿದ್ದರೆ ನಿರ್ಣಯವು ವಾಸ್ತವಿಕತೆಯಿಂದ

ದೂರವಾಗಿರುತ್ತದೆ. ಹಾಗೂ ವಾಸ್ತವಿಕ ಪ್ರಪಂಚದಿಂದ ಹೊರಗಿದ್ದು, ಊಹಾ ಲೋಕದಲ್ಲಿ ವೃಥಾ ಮಥಿಸಬಹುದು.

ಸ್ಕೀಜೋಫ್ರೆನಿಯಾ; ಮ್ಯಾನಿಕ್ ಡಿಪ್ರೆಸಿವ್ ಸೈಕೋಸಿಸ್ ;ಮುಂತಾದ ರೋಗ ಸಮೂಹಗಳಲ್ಲಿ In Sight into reality ಇಲ್ಲದೆ, ಊಹಾ ಲೋಕದಲ್ಲಿ ಮನಸ್ಸಿನ ಒಂದು ಭಾಗವು ಮಥಿಸುತ್ತದೆ. ಸೀಬೆ ಮರಕ್ಕೆ ಕಲ್ಲೆಸೆಯುವುದು ವಾಸ್ತವಿಕತೆಯ ಅರಿವಿನಿಂದ. ಸೀಬೇಕಾಯಿ ಬೀಳಲಿ ಎಂಬ ಆಸೆಯಿಂದ, ಮನಸ್ಸಿನ ಆರೋಗ್ಯವು ಸರಿಯಾಗಿದ್ದವರು ಮಾಡುವ ಕೆಲಸ. ಎಸೆದ ಕಲ್ಲು ಗೋಡೆಯ ಆಚೆ ಕೆಲಸ ಮಾಡುತ್ತಿರುವವನ ಮೇಲೆ ಬಿದ್ದು ಗಾಯವಾಗಬಹುದು. ಹಾಗಾದಾಗ ಅದು ಆಕಸ್ಮಿಕ.

ಆದರೆ ರಸ್ತೆಯಲ್ಲಿ ನಡೆಯುತ್ತಾ. ಎಡವಿದ ಕಲ್ಲನ್ನು ತೆಗೆದುಕೊಂಡು ರಸ್ತೆಯಲ್ಲಿ ಬರುತ್ತಿರುವ ಮೋಟಾರಿನತ್ತ ಬೀರಿದರೆ, ಆಗ ವಾಸ್ತವಿಕತೆಯ ಅರಿವು ಇಲ್ಲ. ಇವ ಹುಚ್ಚ ಎಂದನ್ನಬೇಕು.

೨

ಕಡೆಯುವ ಹಗ್ಗದ ಒಂದು ಕಡೆಯಲ್ಲಿ ಹಗ್ಗದ ಕೆಲವು ಹುರಿಗಳು ಕತ್ತರಿಸಿ ಹೋಗಬಹುದು. ಅಂತಹ ಹಗ್ಗವನ್ನು ಎಳೆಯಬೇಕಾದರೆ, ತುಂಬಾ ಎಚ್ಚರಿಕೆಯಿಂದಿರಬೇಕು. ಸ್ವಲ್ಪ ಜೋರಾಗಿ ಎಳೆದರೆ ಎಲ್ಲಿ ಹಗ್ಗವು ಹರಿದು ಹೋಗುತ್ತದೆಯೋ ಎಂಬ ಭಯವು ಇರುತ್ತದೆ. ಮೊಸರಿನ ಮಡಕೆಯು ಸರಿಯಾಗಿಯೇ ಇರುತ್ತದೆ. ಆದರೆ ಭಯದಿಂದ ಮೆಲ್ಲಗೆ ಮನ ಮಂಥನವಾಗುವುದರಿಂದ ನಿರ್ಣಯವೂ ದೃಢವಾಗಿರುವುದಿಲ್ಲ.

ಹೊರಗಿನಿಂದ ಮನೆಗೆ ಬಂದಾಗ, ಕಾಲುಗಳನ್ನು ತೊಳೆದುಕೊಳ್ಳುವುದು, ಆರೋಗ್ಯಕರ ಅಭ್ಯಾಸ. ಆದರೆ ಕಾಲುಗಳನ್ನು ಇಪ್ಪತ್ತು ಮೂವತ್ತು ಬಾರಿ, ಪುನಃ ಪುನಃ ತೊಳೆದುಕೊಂಡರೆ ; ಕಾಲುಗಳು ಶುಭ್ರವಾಗಿಲ್ಲ ಎಂಬ ಭಯ ಮತ್ತು ಆತಂಕವು ಅವನ ಮನಸ್ಸನ್ನು ಕಾಡುತ್ತಿದೆ ಎಂಬುದು ಸ್ಪಷ್ಟ. ಇಂತಹ ಮಾನಸಿಕ ರೋಗ ಸಮೂಹಗಳನ್ನು ಒಬ್ಸೆಷನಲ್ ಬೇನೆಗಳು ಎಂದನ್ನುತ್ತಾರೆ. ಪುನಃ ಪುನಃ ಪಾದಗಳನ್ನು ತೊಳೆದುಕೊಳ್ಳುವುದು ಪೆಚ್ಚುತನ ಎಂದು ಅವರಿಗೆ ತಿಳಿದಿರುತ್ತದೆ. ಆದರೆ ಮನ ಮಥಿಸುವ ಹಗ್ಗವು, ಕೆಲವು ಕಡೆ ಹರಿದು ಹೋಗಿರುವುದರಿಂದ ಆತಂಕವೂ ಭಯವೂ ಪಿಶಾಚಿಗಳಂತೆ ಅವರನ್ನು ಜಗ್ಗಿ ಆಡಿಸುತ್ತವೆ. "An irrestible force impinging on an immovable object" ಎಂದು ವರ್ಣಿಸುತ್ತಾರೆ. ಪಿಶಾಚಿಯು ಅಮರಿಕೊಂಡು ಅವರನ್ನು ಈ ರೀತಿ

ಆಡಿಸುತ್ತದೆ ಎಂದರೂ ಅದೇ ಅರ್ಥವು ಬರುತ್ತದೆ. ಪಿಶಾಚಿಯು ಅವರ ಮನಸ್ಸಿನ ಹಗೇವುಗಳಿಂದ ಮೇಲಕ್ಕೆ ಬಂದು ಹೀಗೆ ಕಾಡುತ್ತದೆ ಎಂದೂ ವರ್ಣಿಸಬಹುದು.

೩

ಕಡೆಯುವ ಕೋಲು ಅಥವಾ ಅದರ ಮಂತು ದೃಢವಾಗಿಲ್ಲ ಎನ್ನಿ. Ego ಕಲ್ಪನೆಯು ದೃಢವಾಗಿ ಬೆಳೆದು ಬಂದಿಲ್ಲ ಎಂದಂತಾಯಿತು. ಇಂತಹವರಲ್ಲಿ Ego-Drive ಬಹಳ ದುರ್ಬಲವಾಗಿರುತ್ತದೆ. ಅಂದರೆ ರಜೋಗುಣವು, ಕಾರ್ಯಗತ ಮಾಡುವ ಶಕ್ತಿಯು ಕ್ಷೀಣವಾಗಿರುತ್ತದೆ.

ಮನ ಮಂಥನವನ್ನು ಇಂತಹವರು ಮಾಡುವಾಗ, ಹೆದರಿಕೊಂಡು ಬೆದರಿಕೊಂಡು ಮನಸ್ಸು ಕಡೆಯಬೇಕು. ಏನು ಮಾಡಿದರೆ ಮತ್ತೇನು ಆಗುತ್ತದೆಯೋ ಎಂಬ ಸಂಶಯವು ಸದಾ ಕಾಡುತ್ತದೆ. ಇಂತಹವರು ಬೆಪ್ಪರಂತಾಗುತ್ತಾರೆ. ಹಲವುತೆರನ "Depressions" ಈ ರೀತಿಯವು, 'ಇದ್ದೇನು ಪ್ರಯೋಜನ ? ಎಲ್ಲರಂತೆ ಧಿಮ್ರಂಗ ಅಂತ ಮೆರೆಯುವುದಕ್ಕಾಗುವುದಿಲ್ಲ' ಎಂಬ ಹೀನ ಮನೋಭಾವನೆಯು ಉಂಟಾಗುತ್ತದೆ. ಆತ್ಮಹತ್ಯೆಯನ್ನು ಮಾಡಿಕೊಳ್ಳುವವರಲ್ಲಿ ಸುಮಾರು ಮಂದಿ ಈ ಮಾನಸಿಕ ಪರಿಸ್ಥಿತಿಯಿಂದ ನರಳುವವರು.

೪

ಕಡೆಗೋಲು ಸರಿಯಾಗಿದೆ. Id ಮತ್ತು Super-Ego ಗಳು ಸಮಸಮ Ego ದ ಸುತ್ತಲೂ, ಆಯಕಟ್ಟಾದ ಸ್ಥಳದಲ್ಲಿ ಬಿಗಿದುಕೊಂಡಿವೆ. ಹಗ್ಗದ ಎಳೆಗಳೂ ಸರಿಯಾಗಿವೆ. ಮಡಕೆಯೂ ಲಕ್ಷಣವಾಗಿದೆ. ಆದರೆ.........ಆದರೆ ಮೊಸರು ಚೆನ್ನಾಗಿ ಹೆಪ್ಪಿಡದೆ ಇದ್ದರೆ, ಕೇವಲ ಹಾಲಾಗಿಯೇ ಇದ್ದರೆ ?ಕಡೆದರೆ ಬೆಣ್ಣೆ ಸಿಗುತ್ತದೆಯೇ?

ವಿಚಾರಪರ ಮನಸ್ಸು ; ಅನುಭವ, ಕಲಿಕೆ ಮತ್ತು ಸ್ಮರಣೆಗಳು, ಎಲ್ಲವೂ ಕೂಡಿ 'ಮೊಸರು' ಎಂದೆವು. ಕಲಿಕೆಯು ಸಾಕಷ್ಟು ಇಲ್ಲದಿದ್ದರೆ ; ಅನುಭವವು ಅಲ್ಪವಾಗಿದ್ದರೆ, ಆಗ ಹಾಲು ಹೆಪ್ಪುಗಟ್ಟಿ ಮೊಸರಾಗಿರುವುದಿಲ್ಲ. Immature personality ಅಥವಾ Psycho-pathic Personality ಎನ್ನುತ್ತಾರೆ, ಇಂತಹ ವರನ್ನು. ಸಾಕಷ್ಟು ಜಾಣರಾಗಿರುವ, ಹಲವಾರು ವೇಳೆ ಅತಿ ಜಾಣರಾಗಿಯೂ ಇರುವ ಯುವಕ ಯುವತಿಯರು ಮಾನಸಿಕ ಬೇನೆಗಳಿಗೆ ತುತ್ತಾಗುವುದು ಈ ಕಾರಣದಿಂದ. ಅನುಭವದಿಂದ ಅವರುಗಳ ಧ್ಯೇಯವಾದೀ ಮನಸ್ಸು ಪಕ್ವವಾಗದೇ ಇರುವುದರಿಂದ.

೫

ವಾಸ್ತವಿಕತೆಯ ಅರಿವು ಮಡಕೆಯಂತೆ. ಇದರಲ್ಲಿ ಮೊಸರು, ಕಡೆಗೋಲು, ಅದನ್ನು ಕಡೆಯುವ Id ಮತ್ತು Super-Ego ಸೆಳೆತಗಳು, ಇವೆಲ್ಲವೂ ಕೂಡಿ ಮನಸ್ಸು ಎಂದೆವು.

ದೇಹವೆಂಬ ಪ್ರತ್ಯಕ್ಷವಾಗಿರುವ ದೊಡ್ಡ ಮಡಕೆಯಲ್ಲಿ, ಮನಸ್ಸೆಂಬುದು, ಒಂದು ಚಿಕ್ಕ ಮಡಕೆ. ದೇಹವು ವಸ್ತು ಪ್ರಧಾನವಾದುದು. ಅದರಲ್ಲಿರುವ ಚಿಕ್ಕ ಮಡಕೆಯು ಶಕ್ತಿ ಪ್ರಧಾನವಾದುದು. ಮನ ಮಂಥನವಾದಾಗ, ವಾಸ್ತವಿಕ ಅರಿವು ಎಂಬ ಮನಸ್ಸಿನ ಮಡಕೆಯು ತುಳುಕಾಡಿದರೆ, ಉಕ್ಕಿದರೆ, ಅದರ ಪ್ರಭಾವವು ದೇಹವೆಂಬ ದೊಡ್ಡ ಘಟಕ್ಕೆ ಅಥವಾ ಮಡಕೆಗೆ ವಕ್ರಿಸುತ್ತದೆ.

ಮೆದುಳು ಮತ್ತು ಸ್ಪೈನಲ್ ಕಾರ್ಡ್, ಈ ನರ ಸಮೂಹಗಳ ಮೂಲಕ, ಮನಸ್ಸಿನ ಮಂಥನದಿಂದ ಉಕ್ಕಿ ಬಂದು ಪ್ರವಹಿಸಿದರೆ, ಆಗ ಚಿಕ್ಕ ಮಡಕೆಯಲ್ಲಿ ತಳಮಳವು ಸ್ವಲ್ಪ ಕಡಿಮೆಯಾಗುತ್ತದೆ. ಆದರೆ ದೊಡ್ಡ ಮಡಕೆಯಾದ ದೇಹದಲ್ಲಿ ಯಾವುದಾದರೂ ಒಂದು ಅಂಗಕ್ಕೆ, ಉಕ್ಕಿ ಬಂದ ತಳಮಳವು ವಕ್ರಿಸುತ್ತದೆ. ಇಂತಹ ಬೇನೆಗಳಲ್ಲಿ ಹಿಸ್ಟಿರಿಯಾ ತೆರನಾದವು ಪ್ರಾಮುಖ್ಯವಾದುವು.

ಸ್ವೇಚ್ಛಾ ಅಥವಾ ಸ್ವತಂತ್ರವಾಗಿ ಕೆಲಸ ಮಾಡುವ ನರ ಸಮೂಹಗಳ ಮೇಲೆ, ಅಂದರೆ Autonomic Nervous system ಇನ ಮೂಲಕ ಮನ ಮಂಥನದಿಂದ ಉಕ್ಕಿ ಬಂದುದು ಪ್ರವಹಿಸಿದರೆ, ಮನೋದೈಹಿಕ ಬೇನೆಗಳು ಉಂಟಾಗುತ್ತವೆ, 'ಮನೋನಂದನ'ದಲ್ಲಿ ಇವನ್ನು ವಿವರಿಸಲಾಗಿದೆ.

* * * *

## ೧೦. ದೇಹದ ರೋಗಗಳಿಂದ ಮಾನಸಿಕ ಭಯ–ಅಸ್ವಾಸ್ಥ್ಯ

ದೇಹವೆಂಬ ದೊಡ್ಡ ಘಟದಲ್ಲಿ ಬೇನೆಗಳು ಕಾಣಿಸಿಕೊಂಡರೆ, ಆಗ ಮನಸ್ಸಿನ ಸ್ವಾಸ್ಥ್ಯವೂ ಅಲ್ಪ ಸ್ವಲ್ಪ ಅಥವಾ ಹೆಚ್ಚಾಗಿ ಕೆಡಬಹುದು. ದೇಹಕ್ಕೆ ಬಡಿದ ಬೇನೆಗಳು ಮನಸ್ಸನ್ನು ಅಷ್ಟಾಗಿ ಕ್ಷೋಭಿಸುವುದಿಲ್ಲ. ಆದರೆ ಅಂತಹ ಬೇನೆಗಳು ತಾಕಿವೆ ಅಥವಾ ತಾಕಬಹುದು ಎಂದು ತಿಳಿದಾಗ, ಅವ ನರಳಲು ಆರಂಭಿಸುತ್ತಾನೆ. ರಕ್ತದ ಒತ್ತಡವು ಹೆಚ್ಚಾಯಿತು; ಸಕ್ಕರೆ ಬೇನೆಯು ಬಂದಿತು; ಕ್ಯಾನ್ಸರ್ ಏನಾದರೂ ಶುರುವಾಗಿದೆಯೋ; ಎಂದು ಹೆದರಿ ಹೆದರಿ ಆತಂಕದಿಂದ ನರಳುವವರ ಸಂಖ್ಯೆಯು, ಬೇನೆಯಿಂದ ನರಳುವವರ ಸಂಖ್ಯೆಗಿಂತ, ಶತಸಹಸ್ರ ಪಾಲು ಹೆಚ್ಚಾಗಿರುತ್ತದೆ.

* * * *

# ೧೧. ನನಗೆ ಹುಚ್ಚು ಹಿಡಿದಿದೆಯೇ?

ಐದಾರು ಬಟ್ಟಲು ಕಾಫಿಯನ್ನು ಕುಡಿದು, ರಾತ್ರಿಯ ವೇಳೆ ಬಹಳ ಹೊತ್ತು ಓದುವುದು ಹಲವಾರು ವಿದ್ಯಾರ್ಥಿಗಳ ಹಣೆಯ ಬರಹ. ಪರೀಕ್ಷೆಯು ಹತ್ತಿರವಾದಂತೆಲ್ಲಾ, ನಿದ್ರೆಗೆಟ್ಟು ಓದುವುದು ಹೆಚ್ಚಾಗುತ್ತದೆ. ಪರೀಕ್ಷೆಯು ನಾಳೆ ನಾಡಿದ್ದು ಎನ್ನುವಾಗ, ಅಕ್ಷರಗಳೇನೋ ಪುಸ್ತಕದಲ್ಲಿ ಕಂಡರೂ, ಅವುಗಳ ಅರ್ಥವೇನು ಎನ್ನುವುದು ತಲೆಗೆ ಹತ್ತುವುದೇ ಇಲ್ಲ. ಹಿಂದಿನ ದಿನ ಓದಿದ್ದನ್ನು ಜ್ಞಾಪಿಸಿಕೊಳ್ಳಹೋಗುತ್ತಾನೆ. ಯಾವುದೂ ನೆನಪಿಗೆ ಬರುವುದಿಲ್ಲ. ದಿಗ್ಭ್ರಮೆ ಯಾದಂತಾಗುತ್ತದೆ. ನನಗೇನಾದರೂ ಹುಚ್ಚು ಗಿಚ್ಚು ಹಿಡಿದಿದೆಯೋ ಎಂದು ಅರೆಕ್ಷಣ ಅನುಮಾನಿಸುತ್ತಾನೆ.

ಕಚೇರಿಯಲ್ಲಿ ಲೆಕ್ಕ ಬರೆಯುವ ನೌಕರರು ಕೋಪಿಷ್ಠ ಅಧಿಕಾರಿಯ ಕೆಳಗೆ ದುಡಿಯಬೇಕಾಗುತ್ತದೆ. ವೇಳೆಗೆ ಸರಿಯಾಗಿ ಅಕಸ್ಮಾತ್ ಒಂದು ದಿನ, ಆ ದಿನದ ಲೆಕ್ಕಗಳನ್ನು ಪೂರೈಸದೆ ಇದ್ದಾಗ 'ಏನ್ರೀ ! ಕತ್ತೆ ಹಾಗೆ ಬೆಳೆದಿದ್ದೀರಿ. ಹತ್ತು ವರ್ಷ ಸರ್ವಿಸ್ ಆಗಿ. ಎರಡು ಗಂಟೆಗಳಲ್ಲಿ ಮುಗಿಸುವ ಕೆಲಸವನ್ನು ಇನ್ನೂ ಮುಗಿಸಿಲ್ಲವಲ್ರೀ, ನಾಚಿಕೆಯಾಗುಲ್ವೇ, ಎಂದು ಅಧಿಕಾರಿಯು ರೇಗಿ ಬೈಯುತ್ತಾನೆ. ನೌಕರನಿಗೆ ಆತಂಕವು ಶುರುವಾಗುತ್ತದೆ. ಮುಂದೆ ಬರಬೇಕಾದ ಪ್ರಮೋಷನ್ನಿಗೆ ಈ ಅಧಿಕಾರಿ ತುಂಡು ಹಾಕುತ್ತಾನೆ, ನನ್ನ ಭವಿಷ್ಯವೇ ಕುಂಟುತ್ತದೆ ಎಂದು ಖಿನ್ನನಾಗುತ್ತಾನೆ. ಈ ಸ್ಥಿತಿಯಲ್ಲಿ ಅವ ಮಾಡಿದ ಕೆಲಸವು ತಪ್ಪುಗಳಿಂದ ಕೂಡಿರುವುದು ಸ್ವಾಭಾವಿಕ. ಮಾಡಿದ ಲೆಕ್ಕವನ್ನು ತಿರುಗಿ ತಿರುಗಿ ಮೂರು ಬಾರಿ ಮಾಡುತ್ತಾನೆ. ಮೂರು ಉತ್ತರಗಳು ದೊರೆಯುತ್ತವೆ. ನನ್ನ ತಲೆಗೆ ಏನೋ ಆಗಿದೆ ; ಇಂತಹ ಸಣ್ಣ ಲೆಕ್ಕವನ್ನು ಸರಿಯಾಗಿ ಮಾಡಲು ಆಗಲಿಲ್ಲ' ಎಂದು ಕೊರಗುತ್ತಾನೆ. ನನ್ನ ಚಿಕ್ಕಜ್ಜನಿಗೆ ಹುಚ್ಚು ಹಿಡಿದಿತ್ತು ಎನ್ನುತ್ತಿದ್ದರು. ನನಗೂ ಹಾಗೆಯೇ ಆಗುತ್ತಿದೆಯೇನೋ ಎನ್ನುವ ಸಂದೇಹವು ಕಾಡತೊಡಗುತ್ತದೆ.

ಅತ್ತೆಯ ದೈನಂದಿನ ಸುಸಂಸ್ಕೃತ ಕುಕ್ಕಾಟದಿಂದ, ಬಡವರ ಮನೆಯಿಂದ ಬಂದ ಸೊಸೆಗೆ ಬೇಸರವಾಗುತ್ತದೆ. ಆಡುವಂತಿಲ್ಲ, ಅನುಭವಿಸುವಂತಿಲ್ಲ. ಬೇಸರವು ಮನಸ್ಸನ್ನು ತುಂಬಿದಾಗ, ಮಾಡಿದ ಮನೆಗೆಲಸವು ಸಮರ್ಪಕವಾಗಿರುವುದಿಲ್ಲ.

ಕುದಿಯುವ ಸಾರಿಗೆ ಉಪ್ಪನ್ನು ಹಾಕಿದ್ದೇನೆಯೋ ಇಲ್ಲವೋ ಎಂಬ ಸಂದೇಹವು ಮೂಡಿ, ಎರಡನೆಯ ಬಾರಿ ಉಪ್ಪನ್ನು ಹಾಕುತ್ತಾಳೆ. 'ಕತ್ತೆ ಬೆಳೆದ ಹಾಗೆ ಬೆಳೆದಿದ್ದೀಯೆ? ಬಣ್ಣದ ಬೀಸಣಿಗೆಯ ತರಹ ವಾಲಾಡ್ತೀ; ಒಂದು ಸಾರು ಮಾಡುವುದಕ್ಕೆ ಬರುಲ್ಲವಲ್ಲೇ? ಅಷ್ಟನ್ನಾದರೂ ನಿಮ್ಮಮ್ಮ ಕಲಿಸಲಿಲ್ಲವೇ?' ಎಂದು ಅತ್ತೆ ಅನ್ನುತ್ತಾಳೆ. ಗೃಹ ಕೃತ್ಯದ ಎಂಟು ಹತ್ತು ವಿಷಯಗಳಲ್ಲಿ ಮೇಲಿಂದ ಮೇಲೆ ಹೀಗಾದರೆ ಸೊಸೆಯ ಮನಸ್ಸಿನಲ್ಲಿ ಕಸಿವಿಸಿಯಾಗುತ್ತದೆ. 'ನನಗೇನಾದರೂ ಮಂಕು ಬಡಿದಿದೆಯೇ? ಅತ್ತೆ ಅನ್ನುವುದೊಂದಲ್ಲ. ನಾನು ಮಾಡುವುದು ಒಂದಲ್ಲ. ಎಷ್ಟೇ ಎಚ್ಚರವನ್ನು ವಹಿಸಿದರೂ, ಹೀಗೆ ತಪ್ಪಾಗಬೇಕಾದರೆ ನನ್ನ ಬುದ್ಧಿಗೆ ಏನೋ ಆಗುತ್ತಿರಬೇಕು ಹುಚ್ಚೋ ಬೆಪ್ಪೋ ಹಿಡಿದುಬಿಡುತ್ತೇನೋ ಎಂದು ಕಾತರಳಾಗುತ್ತಾಳೆ.

ಹುಚ್ಚು ಹಿಡಿದು ಬಿಡುತ್ತೇನೋ ಎನ್ನುವ ಯೋಚನೆಯು ಎಲ್ಲರಲ್ಲಿಯೂ ಒಂದಲ್ಲ ಒಂದು ಕಷ್ಟದ ಸಮಯದಲ್ಲಿ ಉಂಟಾಗುತ್ತದೆ. ಮನಸ್ಸು ಪಲ್ಲಟವಾಗುತ್ತಿದೆಯೋ ಎನ್ನುವ ಯೋಚನೆಯು ಮೂಡಿದರೆ, ಅಂತಹವನ ಮನಸ್ಸು ಸ್ವಸ್ಥವಾಗಿದೆ ಎನ್ನುವುದರ ಗುರುತು. ದಿಟವಾಗಿಯೂ ಹುಚ್ಚು ಹಿಡಿದವನಿಗೆ, 'ನನಗೇನೂ ಆಗಿಲ್ಲ. ಆದರೆ ನನ್ನ ನಡವಳಿಕೆಯನ್ನು ಕಂಡು ಎಲ್ಲರೂ ಬೈಯ್ಯುತ್ತಾರೆ, ಹೀಯಾಳಿಸುತ್ತಾರೆ' ಎನ್ನಿಸುತ್ತದೆ.

ಐನ್‌ಸ್ಟೈನ್ ಮಹಾಶಯರು ಆಗಿಂದಾಗ್ಗೆ ಒಂದು ದ್ವಿಪಂಙ್ಞ್ತಿಯನ್ನು ನುಡಿಯುತ್ತಿದ್ದರು.

A thought that some-time makes me hazy
Am I or are the others crazy ?

ಈ ತೆರನ ಯೋಚನೆಯು ಮೂಡಿದರೆ, ಅಂತಹವನ ಮನಸ್ಸು ಆರೋಗ್ಯ ಸ್ಥಿತಿಯಲ್ಲಿದೆ, ಸುಸೂತ್ರವಾಗಿ ಕೆಲಸವನ್ನು ಮಾಡುತ್ತಿದೆ, ಎಂದವನು ಧೈರ್ಯದಿಂದಿರ ಬಹುದು.

ಮಾನಸಿಕ ರೋಗಗಳನ್ನು ಕುರಿತು ಪುಸ್ತಕವನ್ನು ಓದಿದ ಮೇಲೆ, ನನಗೂ Half crack ಏನಾದರೂ ತರಹ ಆಗುತ್ತಿದೆಯೋ ಎನ್ನಿಸಬಹುದು. ಹೀಗನ್ನಿಸಿದರೆ, ನಿಮ್ಮ ಮನಃಸ್ವಾಸ್ಥ್ಯ ಆರೋಗ್ಯವಾಗಿದೆ ಎಂದು ನೆಮ್ಮದಿಯಿಂದಿರಬಹುದು. ಇದನ್ನು ಶ್ರಮವಹಿಸಿ ಬರೆಯುವಾಗ, ನನಗೂ ಒಮ್ಮೊಮ್ಮೆ ಹಾಗೆ ಅನ್ನಿಸುತ್ತಿತ್ತು, ಅನ್ನಿ ಆದರೆ ಮನಸ್ಸು ಹಳಿ ತಪ್ಪಲಿಲ್ಲ.

* * * *

# ೧೨. ಮಹರ್ಷಿ ಪತಂಜಲಿಯವರ ಯೋಗ ಸೂತ್ರಗಳ ಪ್ರಕಾರ

**ಮನಸ್ಸು**

ಹಿಂದಿನ ಅಧ್ಯಾಯಗಳಲ್ಲಿ, ಇಂದಿನ ಮನೋ ವಿಜ್ಞಾನದ ಪ್ರಕಾರ ಮನಸ್ಸಿನಲ್ಲಿ ಸ್ವರೂಪ ಮತ್ತು ಕಾರ್ಯಕ್ರಮಗಳನ್ನು ತಿಳಿದೆವು. ಸಾರಾಂಶವು ಇಷ್ಟು.

ಪಂಚೇಂದ್ರಿಯಗಳ ಮೂಲಕ ಹೊರ ಪ್ರಪಂಚದ ಅರಿವನ್ನು ಸಂಗ್ರಹಿಸುತ್ತೇವೆ. ಇವು ತೋರಮನಸ್ಸಿನಲ್ಲಿ ಸ್ಪಷ್ಟವಾಗುತ್ತದೆ. ಹಾಗೂ ಇವುಗಳ 'ಪ್ರತಿ'ಯೊಂದು ಸ್ಮರಣಾ ವಿಭಾಗದಲ್ಲಿ ಶೇಖರಿಸಿಡಲ್ಪಡುತ್ತದೆ. ಬಾಲ್ಯದಲ್ಲಿ ಮನಸ್ಸು ಈ ಕಾರ್ಯದಲ್ಲಿ ಕುತೂಹಲದಿಂದ ಅತಿ ಪ್ರಮುಖವಾಗಿ ತೊಡಗಿರುತ್ತದೆ.

ಬೆಳೆಯುತ್ತ ಹೋದಾಗ, ಪಂಚೇಂದ್ರಿಯಗಳ ಮೂಲಕ ಅರಿತಿದ್ದನ್ನು, ಸ್ಮರಣಾ ಭಾಗದ ನೆರವನ್ನು ಪಡೆದು, ವಿಚಾರವನ್ನು ಮಾಡಿ, ಅರಿತಿದ್ದುದು ಇಷ್ಟು; ಅದರ ಕಾರಣವು ಹೀಗಿರಬೇಕು ಎಂದು ಮನಸ್ಸು ನಿರ್ಣಯಿಸುತ್ತದೆ. ವಿಚಾರಪರ ಮನಸ್ಸು; ಮತ್ತು ಸ್ಮರಣಾ ವಿಭಾಗಗಳ ನೆರವು, ಕಾರ್ಯ ಮಾಡುವುದೆಲ್ಲವೂ, ತೋರ ಅಥವಾ Conscious mind ಇಗೆ ಕಾಣಬೇಕಾಗಿಲ್ಲ. ಮನಸ್ಸಿನ ಅವ್ಯಕ್ತವಾದ ಪದರಗಳಲ್ಲಿ ಈ ಕಾರ್ಯಗಳು ನಡೆಯತ್ತವೆ. ಯುವಕರಲ್ಲಿ ಮತ್ತು ವಯಸ್ಕರಲ್ಲಿ ವಿಚಾರಪರ ಚಟುವಟಿಕೆಗಳು ಹೆಚ್ಚಾಗಿ ನಡೆಯುತ್ತವೆ.

ಬಾಹ್ಯ ಪ್ರಪಂಚದ ಸುದ್ದಿಯನ್ನು ಈ ರೀತಿ ಮನಸ್ಸು ವಿಶ್ಲೇಷಿಸುವಾಗ, ಭಾವನಾ ಕೇಂದ್ರಗಳು ಕೆರಳುತ್ತವೆ. ರಾಗ, ದ್ವೇಷ, ಕ್ರೋಧ; ಭಯ, ಪ್ರೀತಿ, ವಾತ್ಸಲ್ಯ, ಜುಗುಪ್ಸೆ, ಇತ್ಯಾದಿ ಭಾವನೆಗಳು ಉಂಟಾಗಿ ಮನಸ್ಸಿನ ಮೇಲೆ ಪ್ರಭಾವವನ್ನು ಬೀರಿ, ಪ್ರಚೋದಿಸಿ, ಈ ರೀತಿ ಕಾರ್ಯವನ್ನು ಮಾಡಿದರೆ ತೃಪ್ತಿಯಾಗುತ್ತದೆ, ಎಂದು ಮನಸ್ಸನ್ನು ನಡೆಸುತ್ತವೆ. ಆಗ ಮನಸ್ಸು ಕರ್ಮೇಂದ್ರಿಯಗಳ ಮೂಲಕ ಕೆಲಸವನ್ನೂ ಮಾಡುತ್ತದೆ.

ಬಾಲ್ಯದಲ್ಲಿ ಕುತೂಹಲ ಮತ್ತು ಸ್ವಾವಲಂಬಿಯಾಗುವ ಆಸೆ, ಇವೆರಡೂ ಮುಖ್ಯವಾದ ಪ್ರೇರಕಗಳು, ಯುವಕರಲ್ಲಿ ಇವೆರಡರ ಜತೆಗೆ 'ಕಾಮ'ವು ಪ್ರಮುಖ ಪ್ರೇರಕವಾಗುತ್ತದೆ, ಬಾಲ್ಯದಲ್ಲಿ ಈ ಪ್ರೇರಕವು ಶೈಶವಾವಸ್ಥೆಯಲ್ಲಿರುತ್ತದೆ. ಪೌಗಂಡ ವಯಸ್ಸಿನಲ್ಲಿ ಅರಳಿ ಹೊರವಾಗುತ್ತದೆ.

ಇದೊಂದೇ ಅಲ್ಲದೆ, ಸಮಾಜದಲ್ಲಿ ತಲೆಯೆತ್ತಿ ನಿಂತು, ಮನ್ನಣೆಯನ್ನು ಗಳಿಸಬೇಕು, ಎನ್ನುವ Ambition ಅಥವಾ ಹೆಬ್ಬಯಕೆಯೂ, ಮುಖ್ಯ ಪ್ರೇರಕವಾಗಬಹುದು. ಸುಮಾರು ಜನರಲ್ಲಿ Ambition ಹಿರಿಯ ಪ್ರಚೋದನೆಯಾಗುತ್ತದೆ. ಕಾಮಕ್ಕಿಂತಲೂ ಹಿರಿದಾಗಬಹುದು.

ಸಮಾಜದ ಹಲವು ಮುಪ್ಪಿಗರಲ್ಲಿ ವಾಸ್ತವಿಕ ಲೋಕದ ಬಗ್ಗೆ ಜುಗುಪ್ಸೆಯು ಉಂಟಾಗುತ್ತದೆ. ಪ್ರಬಲವಾಗತೊಡಗುವ ಜುಗುಪ್ಸೆಯು, ಮನಸ್ಸನ್ನು ತೀವ್ರವಾಗಿ ಪ್ರಚೋದಿಸಿ, ಈ ಲೋಕವಲ್ಲದೆ ಇತರವು ಯಾವುದಾದರೂ ಇದೆಯೇ ? ಎಂಬುದನ್ನು ತಿಳಿಯುವ ಪ್ರಯತ್ನವನ್ನು ಮಾಡಿಸುತ್ತದೆ. ಹಾಗೂ ಜುಗುಪ್ಸೆಯು ಯೌವನ ಮತ್ತು ಪ್ರೌಢರಲ್ಲಿ, ಒಬ್ಸೆಷನಲ್ ಬೇನೆಗಳ ಮೂಲ ಪ್ರೇರಕವಾಗಬಹುದು. Straus ಎಂಬ ಮನೋವೈದ್ಯನು ೧೯೪೮ರಲ್ಲಿ ಈ ಸಲಹೆಯನ್ನು ಮಾಡಿದ ಸಿದ್ಧಾಂತವನ್ನಾಗಿ ಮಾಡಲು ಪ್ರಯತ್ನಿಸಿದ.

ಮೂಲಭೂತವಾಗಿ ಮನಸ್ಸಿನಲ್ಲಿ Id ಎಂಬ ಶಕ್ತಿಯು ಆಳ ಪದರಗಳಲ್ಲಿ ದೃಢವಾಗಿದ್ದು, Ego ವನ್ನು ತನ್ನತ್ತ ಬರಸೆಳೆದು ಅಪ್ಪುತ್ತದೆ. Ego ಒಂದು ಅಂಶವು Id ನೊಂದಿಗೆ ಮನಸ್ಸಿನ ಆಳ ಪದರಗಳಲ್ಲಿ ತಳಪಾಯವಾಗಿರುತ್ತದೆ. Ego ವಿನ ಇನ್ನೊಂದು ಅಂಶವು ತೋರ ಅಥವಾ ವ್ಯಕ್ತವಾಗಿರುವ Conscious Mind ನಲ್ಲಿರುತ್ತದೆ. Ego ವಿನ ಇವೆರಡೂ ಸ್ವಾರ್ಥೀ ಹಾಗೂ ಸಾಮಾಜಿಕ ಸುಖ ಮತ್ತು ಹಿತವನ್ನು ಸಾಧಿಸುತ್ತವೆ. Ego ಎಂಬ ಶಕ್ತಿಯು ಸಮಾಜದ ಹಿತವನ್ನು ರಕ್ಷಿಸುತ್ತದೆ. ಈ ಶಕ್ತಿಯೂ ಮನಸ್ಸಿನ ಆಳ ಪದರಗಳಲ್ಲಿರುತ್ತದೆ, ಹಾಗೂ ತೋರ ಮನಸ್ಸಿನಲ್ಲೂ ಪಸರಿಸಿರುತ್ತದೆ.

ಹುಟ್ಟು ಗುಣ, ಮತ್ತು ಬೆಳೆದ ಆವರಣಗಳು, Id-Ego-Super-Ego ಗಳ ಸಮತೋಲನವನ್ನು, ನಿಷ್ಕರ್ಷಿಸುತ್ತದೆ. ಲೌಕಿಕ ಬಾಳನ್ನು, ನಡವಳಿಕೆಯನ್ನು ನಿರ್ಧರಿಸುತ್ತದೆ. Nature & Nurture ; Heredity and Environment ; ಸ್ವಭಾವ, ಮತ್ತು ಕಲಿಕೆ ಇವೆಲ್ಲ ವಾಕ್ಯಗಳೂ, ಮೇಲೆ ಹೇಳಿದುದನ್ನು ವಿವರಿಸುತ್ತವೆ.

Id-Ego-Super-Ego ಹಾಗೂ Heredity and Environment, ಇವುಗಳು ಸಮ ಸಮ ಅನ್ವಯಿಸಿಕೊಂಡು ನಡೆಯದಿದ್ದರೆ, ಮಾನಸಿಕ ಪಲ್ಲಟವು, ಮಾನಸಿಕ ಬೇನೆಗಳು ಉಂಟಾಗುತ್ತವೆ. ಅಂತಹವರ ನಡವಳಿಕೆಯು ಲೌಕಿಕವಾದ, ಸಾಮಾಜಿಕವೂ ಆದ, ಬದುಕಿನಲ್ಲಿ, ಅವ್ಯವಸ್ಥೆಗೊಂಡು Disturbed-Easeಅಥವಾ ಮಾನಸಿಕ Disease ಆಗುತ್ತದೆ. ಹೀಗಾಗುವ ಹಲವಾರು ವಿಧಗಳನ್ನು ಈ ಪುಸ್ತಕದ ಮೊದಲ ಭಾಗದಲ್ಲಿ ಉದಾಹರಣೆಗಳೊಂದಿಗೆ ; ಎರಡನೆಯ ಭಾಗದಲ್ಲಿ

ವಿಚಾರ ಪೂರ್ವಕವಾಗಿ, ಆದಷ್ಟು ಸರಳವಾಗಿ ಅರಿಯಲು, ವಿಶ್ಲೇಷಿಸಲು ಪ್ರಯತ್ನವನ್ನು ಮಾಡಲಾಗಿದೆ.

ಈಗ ಪತಂಜಲಿ ಮಹರ್ಷಿಗಳು ಮನಸ್ಸಿನ ವಿಶ್ಲೇಷಣೆಯನ್ನು ಹೇಗೆ ಮಾಡಿದರು ಎಂಬುದನ್ನು ತಿಳಿಯುವ. ಸುಮಾರು ಎರಡು ಸಹಸ್ರ ವರ್ಷಗಳ ಹಿಂದೆ, ಪತಂಜಲಿಯೆಂಬ ಮಹರ್ಷಿಗಳು ನಮ್ಮ ನಾಡಿನಲ್ಲಿದ್ದರು. ಅವರು ಬಾಳಿ ಬದುಕಿದ್ದ ಕಾಲದಲ್ಲಿ, ನಮ್ಮ ನಾಡಿನ ಮನನಿಗರ ಜ್ಞಾನ ಭಾಂಡಾರವು ಏನೇನಿದ್ದುವೋ ಅದನ್ನು ಅವರು ಕಲಿತು, ಸ್ವಂತ ವಿವೇಚನೆಯಿಂದ, ಜನ್ಮ ಜನ್ಮಾಂತರಗಳ ಸ್ಮೃತಿಯಿಂದ, ವಿಶ್ಲೇಷಿಸಿ, ಹಿರಿಯರ ತೋಳುಗಳ ಮೇಲೆ ನಿಂತು, ಹಿರಿಯರಿಗಿಂತಲೂ ಸ್ವಲ್ಪ ಹೆಚ್ಚಾದ ಅರಿವನ್ನು ಪಡೆದರು. ಜ್ಞಾನ ಋಣವನ್ನು ಈ ರೀತಿ ಪಡೆದ ಪತಂಜಲಿ ಮಹರ್ಷಿಗಳು, ಮನಸ್ಸೇ ಎಲ್ಲಕ್ಕೂ ಕಾರಣ ಎಂದು ಅರಿತರು. ಮನಸ್ಸು ಮನುಷ್ಯರಂತೆ ಸಹಸ್ರ ಅಂಶಗಳನ್ನು ಹೊಂದಿದೆ. ಅವನ್ನು ಪ್ರಮುಖವಾದ ಭಾಗಗಳನ್ನಾಗಿ ಕಲಿಯತೊಡಗಿದರೆ ನೆಮ್ಮದಿಯು ದೊರಕುತ್ತದೆ ಎಂದು ತಿಳಿದರು. ಆದಕಾರಣ ತಾವು ಸಂಪಾದಿಸಿದ ಜ್ಞಾನದ ಋಣವನ್ನು, ಜ್ಞಾನ ಪ್ರಸಾರದ ಮೂಲಕ ತೀರಿಸಿಕೊಂಡರು. ಋಣ ಸಂದನೆಯನ್ನು ಮಾಡುವಾಗ, ನಿರ್ಬಂಧವಾಗಬಯಸಿದಾಗ, ಆ ಬಯಕೆಯು ಹೆಬ್ಬಯಕೆಯಾಗಿ ಮನಸ್ಸನ್ನು ಸಂಪೂರ್ಣವಾಗಿ ತುಂಬಿಕೊಂಡಾಗ, ವಿವರವಾಗಿ, ವಿಶದವಾಗಿ, ಇತರರೊಂದಿಗೆ ಸಾವಧಾನ ಸಂಪರ್ಕವಾಗಿ ತುಂಬಿಕೊಂಡಾಗ, ವಿವರವಾಗಿ, ವಿಶದವಾಗಿ, ಇತರರೊಂದಿಗೆ ಸಾವಧಾನ ಸಂಪರ್ಕವನ್ನು ಪಡೆಯುವುದು ಅಸಾಧ್ಯ. ಋಣ ಸಂದನೆಗೆ ಆತುರವು ಅಗತ್ಯ. ಆದಕಾರಣ ಜ್ಞಾನ ಋಣವನ್ನು 'ಸೂತ್ರಗಳ' ಪ್ರಕಾರದಲ್ಲಿ ಬಲು ಹ್ರಸ್ವವಾಗಿ ತೀರಿಸಿಕೊಳ್ಳಲೇಬೇಕಾಯಿತು. ಮಹರ್ಷಿಗಳಿಗಿದ್ದ ಆತುರವು, ಅವಸರವು, ಕಲಿಯಲೆತ್ನಿಸುವ ಮಗುವಿಗೂ ಇರುತ್ತದೆ. ಅರಿವನ್ನು ಪೂರ್ಣವಾಗಿ ಪಡೆದ ಮಹರ್ಷಿಗಳ ಮನಸ್ಸು ಮಗುವಿನ ಮನಸ್ಸಿನಂತೆ ನಿರ್ಮಲವಾಗಿರುತ್ತದೆ. ಆದಕಾರಣ ಕಲಿಸಲಾಗಲಿ ಕಲಿಯಲಾಗಲೀ ಆತುರವು ಮಿಗಿಲು.

ಅಂತಹವರು ರಚಿಸಿದ ಸೂತ್ರಗಳನ್ನು ಅರ್ಥಮಾಡಿಕೊಳ್ಳಬೇಕಾದರೆ, ಅವುಗಳನ್ನು ಅರಿತು ವಿವರಿಸುವ ವಿದ್ವಾಂಸರ ನೆರವು ಅಗತ್ಯ. ಪತಂಜಲಿ ಋಷಿಗಳ ಯೋಗ ಸೂತ್ರಗಳಿಗೆ ವಿಜ್ಞಾನ ಭಿಕ್ಷು ಎಂಬುವರು 'ಯೋಗ–ಸಾರ–ಸಂಗ್ರಹ' ಎಂಬ ಟೀಕೆಯನ್ನು ಸಾಕಷ್ಟು ವಿವರವಾಗಿ ಬರೆದಿದ್ದಾರೆ. ಆನಂತರ ಹಲವಾರು ಪಂಡಿತರು ಆಯಾಕಾಲದ ಅರಿವಿಗೆ ಸಮನ್ವಯ ಮಾಡಿಕೊಂಡು, ಟೀಕೆಗಳನ್ನು ಬರೆದಿದ್ದಾರೆ.

ದೇಹ ಕಾರ್ಯ ಶಾಸ್ತ್ರವನ್ನೂ, ಮನೋವಿಜ್ಞಾನವನ್ನೂ (Physiology & psychology) ಆಧರಿಸಿಕೊಂಡು ಯೋಗ ಸೂತ್ರಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವೇ? ಸಾಧ್ಯ ಮತ್ತು ಪ್ರಯೋಜನಕಾರಿ ಎಂದನ್ನಿಸಿತು. ಆದಕಾರಣ ಈ ಪ್ರಯತ್ನವನ್ನು ಮಾಡಲಾಗಿದೆ. ಯೋಗ ಸೂತ್ರಗಳು, ಮನಸ್ಸಿನ ವಿಶ್ಲೇಷಣೆಯನ್ನು ವೈಜ್ಞಾನಿಕವಾಗಿ ಮಾಡಿವೆ. ಜಾತಿ, ಮತ, ಪಂಥ ಇತ್ಯಾದಿ ಸಂಕೋಲೆಗಳಿಲ್ಲದೆ, ಕೇವಲ ವೈಜ್ಞಾನಿಕವಾಗಿ, ವಿಶ್ಲೇಷಿಸಲಾಗಿದೆ. ಆದಕಾರಣ ಸೂತ್ರಗಳನ್ನು ಅರ್ಥಮಾಡಿಕೊಳ್ಳುವುದು ವಿಜ್ಞಾನಿಗಳಿಗೆ ಸುಲಭವಾಗಬೇಕು.

ಪ್ರಕೃತಿಯಲ್ಲಿ 'ಜೀವ'ದ ಪ್ರಗತಿಯು ಕೋಟಿ ಕೋಟ್ಯಂತರ ವರ್ಷಗಳಿಂದ ನಡೆದಿದೆ. ಆದಿಮಾನವನು, 'ಜೀವ' ಸಮೂಹದಲ್ಲಿ ಕಾಣಿಸಿಕೊಂಡು, ಹಲವು ಕೋಟಿ ವರ್ಷಗಳಾಗಿದೆ. ಇಂತಹ ದೀರ್ಘಾವಧಿಯಲ್ಲಿ ೨,೦೦೦ ಸಾವಿರ ವರ್ಷಗಳು ಅಲ್ಪ ಪ್ರಮಾಣ. ಈ ಅವಧಿಯಲ್ಲಿ ಮನಸ್ಸಿನ ಪ್ರಗತಿಯು ಅತ್ಯಲ್ಪವಾಗಿರುತ್ತದೆ. ಅಂದರೆ ಮಾನವನ ಮನಸ್ಸಿನ ಸ್ವರೂಪವಾಗಲೀ ಕಾರ್ಯಕ್ರಮಗಳಿಗೆ ವ್ಯತ್ಯಾಸವಾಗಿರುವುದಿಲ್ಲ. ಆದರೆ ಮನಸ್ಸಿನ ವಿಚಾರಪರ ಮನಸ್ಸಿನಿಂದ ಸಂಗ್ರಹಿಸಲ್ಪಟ್ಟ ಜ್ಞಾನ ಭಾಂಡಾರವು ಅಧಿಕ ಪ್ರಮಾಣದಲ್ಲಿ ಆಸ್ಫೋಟಕ ರೀತಿಯಲ್ಲಿ ಅಭಿವೃದ್ಧಿಯಾಗಿದೆ. ಹಾಗೂ ಕಳೆದ ಒಂದು ಶತಮಾನದಲ್ಲನಕ ಬಹಳಷ್ಟು ಹೆಚ್ಚಾಗಿದೆ. ಅಂದ ಮಾತ್ರಕ್ಕೆ ಮನಸ್ಸಿನ ರೂಪ ರೇಷೆಗಳು ಬದಲಾಯಿಸಿಲ್ಲ. ಇಂದು ಅದೇ ಮನಸ್ಸು ಹೆಚ್ಚು ಅನುಭವದಿಂದ, ತಾಂತ್ರಿಕಸಲಕರಣೆಗಳ ಸೃಷ್ಟಿಯಿಂದ, ಅತ್ಯಧಿಕವಾಗಿ ವಿಜ್ಞಾನದ ಹಲವಾರು ಶಾಖೆಗಳಲ್ಲಿ ಅಮೋಘವಾದ ಪ್ರಗತಿಯನ್ನು ಸಾಧಿಸಿದೆ ಅಷ್ಟೇ.

ಆದಕಾರಣ ಪತಂಜಲಿ ಮಹರ್ಷಿಗಳು ವಿಶ್ಲೇಷಿಸಿದ 'ಮನಸ್ಸು' ಇಂದೂ ಅದೇ ತೆರನಾಗಿದೆ. ಆದುದರಿಂದ ಯೋಗ ಸೂತ್ರಗಳ ಅಧ್ಯಯನವು ಇಂದಿಗೂ ಸೂಕ್ತ. ಯಾಂತ್ರಿಕ ಸಾಧನೆಗಳಿಂದ, ವಿಜ್ಞಾನದ ಇತರ ಶಾಖೆಗಳ ಪ್ರಗತಿಯ ನೆರವಿನಿಂದ ಮನೋ ವಿಜ್ಞಾನಿಗಳು ಅಪಾರ ಪ್ರಯೋಗಗಳನ್ನು ನಡೆಸಿ ಸಿದ್ಧಾಂತಗಳನ್ನು ಮಾಡಿದ್ದಾರೆ. ಯೋಗಸೂತ್ರಗಳಲ್ಲಿ ವಿವರಿಸಲಾದ ವಿಶ್ಲೇಷಣೆಯು, ಇಂದಿನ ವಿಜ್ಞಾನಿಗಳ ಸಿದ್ಧಾಂತಗಳನ್ನು ಆ ಕಾಲದ ಭಾಷೆಯಲ್ಲಿ ಹೇಳಿದೆ. ಕೆಲವು ವಿಷಯಗಳಲ್ಲಿ ಮುಂದುವರೆದೂ ಇದೆ ಎನ್ನಿಸುತ್ತದೆ.

**ಯೋಗ ಭೋಗ**

ಯೋಗ ಎನ್ನುವ ಪದವು, ವಸ್ತುಗಳು ಅಥವಾ ವಿಷಯಗಳೆರಡಕ್ಕೆ ಸಂಬಂಧವನ್ನು ಕಲ್ಪಿಸುವುದು, ಅಥವಾ ಅವುಗಳ ಮಧ್ಯೆ ಸೇತುವೆಯನ್ನು ಕಟ್ಟುವುದು,

ಎಂಬ ಅರ್ಥವನ್ನು ಹೊಂದಿದೆ. ಯೋಗ ಎನ್ನುವುದು ಒಂದು ವಿಧಾನ, ಇಂತಹ ಸಂಪರ್ಕವನ್ನು ಕಲ್ಪಿಸುವ ವಿಧಾನ. ಯಾವ ಎರಡು ವಿಷಯಗಳಿಗೆ ಸಂಪರ್ಕವನ್ನು ಕಲ್ಪಿಸುತ್ತದೆ?

ಭೋಗ ಎನ್ನುವ ಪದವು ಎಲ್ಲರಿಗೂ ತಿಳಿದಿದೆ. ಅದರ ಅರ್ಥವೂ ಎಲ್ಲರಿಗೂ ಆಗಿದೆ. ನಮಗೆ ಇಷ್ಟವಾದವುಗಳನ್ನು ಅನುಭವಿಸಿ ಸುಖಿಸುವುದು ಭೋಗ. ರುಚಿಯಾದ ಊಟವನ್ನು ಪಟ್ಟಾಗಿ ಹೊಡೆಯುವುದು ಭೋಗ. ಇತರರು ಕರುಬುವಂತೆ ಶೃಂಗಾರವನ್ನು ಮಾಡಿಕೊಂಡು ಮೆರೆಯುವುದು ಭೋಗ. ಮನ್ಮಥನಂತಹ ಸುಂದರನನ್ನು ಬುಟ್ಟಿಗೆ ಹಾಕಿಕೊಂಡ ಹೆಂಗಸು, ಭೋಗಿ. ಭೋಗಕ್ಕೆ ಇತಿಯುಂಟೆ? ಮಿತಿಯುಂಟೆ? ವೈವಿಧ್ಯಕ್ಕೆ ಕೊರತೆಯೇ? ಇವೆಲ್ಲವೂ ಲೌಕಿಕದ ಅನುಭವಗಳು. ಸ್ವಲ್ಪ ಕಾಲ ಮಾತ್ರ ನಡೆಯುವಂತಹವು. ಲೌಕಿಕದ ಬಾಳೇ ಶಾಶ್ವತವಲ್ಲದಿರುವಾಗ ಭೋಗವು ಕೂಡ ಶಾಶ್ವತವಾಗಲಾರದು. ಲೌಕಿಕದ ಬಾಳೂ ಮತ್ತು ಭೋಗ, ಇವೆರಡಕ್ಕೂ ಅಷ್ಟು ನಿಕಟವಾದ ಸಂಬಂಧವಿದೆ.

ಯೋಗವು ಭೋಗವನ್ನು ಮತ್ತಾವುದೋ ವಿಷಯವೊಂದಕ್ಕೆ, ಸಂಪರ್ಕವನ್ನು ಕಲ್ಪಿಸುವ ವಿಧಾನವಾಗಿರಬೇಕು. ಅಂತಹ ಮತ್ತೆ ಯಾವುದೋ ವಿಷಯವು ಯಾವುದು?

ಭೋಗವು ನಶ್ವರವಾದರೆ, ಆ ಮತ್ತೊಂದು ಶಾಶ್ವತವಾಗಿರಬಹುದು.

ಸುಖವನ್ನು ನೀಡುವ ಭೋಗವು, ದುಃಖವನ್ನು ನೆರಳಿನಂತೆ ಹೊಂದಿರುತ್ತದೆ. ಭೋಗಿಸಲು ಆಗದಿದ್ದಾಗ ದುಃಖವು ಉಂಟಾಗಲೇಬೇಕು. ಸಾಧ್ಯವಾಗಿ ಭೋಗಿಸುವಾಗ ಸುಖ. ಸಾಧ್ಯವಾಗದೆ ಇದ್ದಾಗ ದುಃಖ. ಹೀಗೆ ಭೋಗ ದ್ವಂದ್ವ ರೂಪಿನದು.

ಆದರೆ ಶಾಶ್ವತವಾದ ಮತ್ತೊಂದು, ಏಕರೂಪವಾದುದು. ಆದುದರಿಂದಲೇ ಶಾಶ್ವತವೂ ಆದುದು. ಏಕರೂಪವಾದುದು ಕೇವಲ ಒಂದೇ ಆಗಿರಬೇಕು., ಏಕರೂಪ ಎಂದಾಗ ಕೇವಲ ಒಂದೇ ಎನ್ನುವ ಅರ್ಥವೂ ಬರುತ್ತದೆ. ಕೇವಲ ಒಂದೇ ಆದುದರಿಂದ ಪತಂಜಲಿ ಮಹರ್ಷಿಗಳೂ ಕೈವಲ್ಯ ಎಂದರು. ಕೈವಲ್ಯದ ಮನೋಸ್ಥಿತಿಯು ಶಾಶ್ವತವಾದುದು, ದ್ವಂದ್ವಾತೀತವಾದುದು, ಎಂದರು.

ಲೌಕಿಕ ಬಾಳಿನ ಭೋಗಗಳನ್ನು ಅನುಭವಿಸುವ ; ಮನುಷ್ಯನು, ಭೋಗದ ಸುಖಗಳನ್ನು ಮನಸ್ಸಿನ ಯಾವುದೋ ಅಂಶದಲ್ಲಿ ಅಥವಾ ಸ್ಥಿತಿಯಲ್ಲಿ ಅನುಭವಿಸುತ್ತಾನೆ. ಸುಖದ ಅನುಭವಕ್ಕಾಗಿ ದೇಹದ ಅಂಗಾಂಗಗಳನ್ನು

ಬಳಸಿಕೊಳ್ಳುತ್ತಾನೆ. ಸುಂದರವಾದ ಚಿತ್ರವನ್ನು ಕಂಡ ಕಣ್ಣುಗಳು ಸುಖವನ್ನು ತಾವೇ ಅನುಭವಿಸಲಸಾಧ್ಯ. ಕಂಡವನ ಮನಸ್ಸು ಸೌಂದರ್ಯಾನುಭವವನ್ನು ಪಡೆಯುತ್ತದೆ. ಅದರ ಪ್ರತಿಕ್ರಿಯೆಯಾಗಿ ಕಣ್ಣುಗಳು ಹೊಳೆಯತೊಡಗಬಹುದು. ಅಷ್ಟೇ ವಿನಹಾ, ಅನುಭವಿಸಿ ಸುಖಿಸುವ ಮನಸ್ಸು ಇಲ್ಲದಿದ್ದರೆ, ಕಣ್ಣುಗಳು ಹೊಳೆಯುವುದಿಲ್ಲ. ಸ್ಮಶಾನಕ್ಕೆ ಇಷ್ಟನ ಹೆಣವನ್ನು ಸಾಗಿಸುತ್ತಿರುವಾಗ, ಸಂಧ್ಯಾರಾಗವು ಕ್ಷಿತಿಜದಲ್ಲಿ ಕಾಣಿಸುತ್ತವೆ. ಆದರೆ ಸುಖಾನುಭವವನ್ನು ಕೊಡುವುದಿಲ್ಲ. ಮೊದಲ ದೀಪಾವಳಿಗೆ ಅತ್ತೆಯ ಮನೆಗೆ ಹೋಗುವಾಗ, ಆಕಾಶದಲ್ಲಿ ತುಂಬಿರುವ ಕಾರ್ಮೋಡಗಳೂ ಚೆಂದ ಕಾಣಿಸಿ ಸುಖವನ್ನು ನೀಡುತ್ತವೆ. ಆದರೆ ದೇಹದ ಅಂಗಾಂಗಗಳು ಸುಖಾನುಭವಕ್ಕೆ ಅಗತ್ಯವಾದ ಪ್ರೇರಕಗಳು, ದಿಟ. ಆದರೆ ಸುಖಾನುಭವವು ಮನಸ್ಸಿನ ಯಾವುದೋ ಅಂಶದಲ್ಲಿ ಲಬ್ಧವಾಗುತ್ತದೆ.

ಮನಸ್ಸಿನ ಮತ್ತೆ ಯಾವುದೋ ಒಂದು ಅಂಶವು, ಎಚ್ಚರಗೊಂಡಾಗ, ಚೇತನಗೊಂಡಾಗ, ದ್ವಂದ್ವಗಳಿಲ್ಲದ ಸುಖವು, ಅಂದರೆ ಆನಂದದ ಅನುಭವವು ಉಂಟಾಗುತ್ತದೆ, ಇದನ್ನು ಕೈವಲ್ಯ ಸ್ಥಿತಿ ಎನ್ನಬಹುದು.

ನಶ್ವರವಾದ ಲೌಕಿಕ ಸುಖ ದುಃಖಾನುಭವವನ್ನು; ಶಾಶ್ವತವಾದ, ದ್ವಂದ್ವಾತೀತವಾದ ಆನಂದದ ಅನುಭವವನ್ನೂ, ಕೂಡಿಸುವುದೇ ಯೋಗ. ಅವುಗಳೆರಡರ ಮಧ್ಯೆ ಸೇತುವೆಯನ್ನು ಕಟ್ಟಿ ಸಂಪರ್ಕವನ್ನು ನೇರವಾಗಿ ಕಲ್ಪಿಸುವುದೇ ಯೋಗ.

ಯೋಗವನ್ನು ವಿವರಿಸುವುದು ; ಅದನ್ನು ಸಾಧಿಸುವಾಗ ಮನಸ್ಸಿನಲ್ಲಿ ನಡೆಯುವ ಕಾರ್ಯಕ್ರಮಗಳನ್ನು ವಿಶ್ಲೇಷಿಸಿ ತಿಳಿಸುವುದು, ಇವು 'ಯೋಗವಾದ' ಮೊದಲ ಭಾಗ, ಪತಂಜಲಿಗಳ ಪುಸ್ತಕದಲ್ಲಿ. ಹೇಗೆ ಯೋಗವನ್ನು ಸಾಧಿಸುವುದು; ಮನಸ್ಸು ಹೇಗೆ ವರ್ತಿಸಬೇಕು ಎಂಬುವುಗಳನ್ನು ವಿವರಿಸುವುದು ಸಾಧನವಾದ ಎರಡನೆಯ ಭಾಗ. ಸಾಧನೆಯು ಯಶಸ್ವಿಯಾಗತೊಡಗಿದಾಗ ದೊರಕುವ ಫಲಿತಾಂಶಗಳು ಮೂರನೆಯ ಭಾಗವಾದ ವಿಭೂತಿ ಪಾದದಲ್ಲಿ ವಿವರಿಸಲ್ಪಟ್ಟಿವೆ. ಯೋಗದ ಸಾಧನೆಯು ಸಂಪೂರ್ಣಗೊಂಡಾಗ, ಕೇವಲ ಒಂದೇ ಎಂಬ ಅನುಭವವಾದಾಗ ಯಾವ ರೀತಿ ಮನಸ್ಸು ಇರುತ್ತದೆಯೋ ಅದನ್ನು ಕೈವಲ್ಯ–ಪದವು ವಿವರಿಸುತ್ತದೆ.

**ಯೋಗ ಪಾದ**

ದೇಹದ ವಿವಿಧ ಅಂಗಗಳ ಕೆಲಸವನ್ನು ಸಮನ್ವಯಗೊಳಿಸುವ ವ್ಯವಸ್ಥೆಯನ್ನು ಅಂತಃಕರಣ ಎಂದು ಕರೆಯುತ್ತಿದ್ದರು. ಯೋಚನೆಯನ್ನು ಮಾಡುವ, ಆಲೋಚಿಸುವ

ವ್ಯವಸ್ಥೆಯನ್ನು Mind ಎಂದು ನಾವಂದರೆ, ಆ ಕಾಲದಲ್ಲಿ ಅಂತಃಕರಣ ಎಂದರು. ಒಳಗೆ ಇದ್ದುಕೊಂಡು ಕೆಲಸಗಳನ್ನು ಮಾಡಿಸುವ ವ್ಯವಸ್ಥೆಯು ಅಂತಃಕರಣ, ಇದಕ್ಕೆ ವಸ್ತು ಸ್ವರೂಪವಿಲ್ಲ. ಶಕ್ತಿ ಸ್ವರೂಪದ ಒಂದು ಮುಖ.

ಅಂತಃಕರಣದಲ್ಲಿ ಮುಖ್ಯವಾದ ನಾಲ್ಕು ಭಾಗಗಳಿವೆ.

೧. ಮನಸ್ಸು : ಈ ಭಾಗದಿಂದ ಅರಿಯುವುದು ಅಥವಾ ತಿಳಿಯುವುದು ಸಾಧ್ಯವಾಗುತ್ತದೆ. ಪಂಚೇಂದ್ರಿಯಗಳಿಂದ ಸಂಗ್ರಹಿಸಿದುದನ್ನು ಅರಿಯುವುದು ಮನಸ್ಸು. ಸ್ಮರಣೆಯನ್ನು ಚೇತನಗೊಳಿಸಿ ತಿಳಿಯುವುದೂ ಮನಸ್ಸು.

೨. ಚಿತ್ತ : ಅಂತಃಕರಣದ ಈ ಭಾಗವು ಯಾವುದಾದರೂ ವಸ್ತುವಿನ ಮೇಲೆ ಸಂಪೂರ್ಣವಾಗಿ ನೆಲೆಸಿ, ಆ ವಸ್ತುವನ್ನು ತನ್ನದನ್ನಾಗಿ ಮಾಡಿಕೊಳ್ಳುತ್ತದೆ. ದಾರಿಯಲ್ಲಿ ನಡೆಯುವಾಗ ಹತ್ತು ವಸ್ತುಗಳನ್ನು ಕಣ್ಣುಗಳು ಕಾಣುತ್ತವೆ. ಆದರೆ ಅದರಲ್ಲೊಂದು ನಮ್ಮ ಗಮನವನ್ನು ತುಸು ಕಾಲವಾದರೂ ಸೆರೆ ಹಿಡಿಯುತ್ತದೆ. ಗಮನವು ಸಂಪೂರ್ಣವಾಗಿ, ಇತರ ಯಾವುವೂ ಬಾರದಂತಾಗುವುದು ಚಿತ್ತದ ಜವಾಬ್ದಾರಿ.

೩. ಅಹಂ–ಕಾರ : ಚಿತ್ತವು ತನ್ನದನ್ನಾಗಿ ಮಾಡಿಕೊಂಡುದನ್ನು 'ನಾನು' ಎನ್ನುವ ಕಲ್ಪನೆಯೊಂದಿಗೆ ದೃಢವಾಗಿ ಜತೆಗೂಡಿಸುವುದು, ಅಹಂ–ಕಾರದ ಹೊಣೆ, ಮತ್ತು ಕರ್ತವ್ಯ.

೪. ಬುದ್ಧಿ : ಅಂತಃಕರಣದ ಈ ಭಾಗವು ವಿವೇಚನೆಯನ್ನು ಮಾಡುತ್ತದೆ. ಆಗುಹೋಗುಗಳನ್ನು ವಿಚಾರಮಾಡಿ, ಹೀಗೆ ಮಾಡಿದರೆ ಹಿತ ಮತ್ತು ವಿಹಿತ ಎನ್ನುವುದನ್ನು ನಿರ್ಣಯಿಸುತ್ತದೆ.

ಅಂತಃಕರಣದ ಈ ನಾಲ್ಕು ಭಾಗಗಳಲ್ಲಿ ಯಾವುದನ್ನಾದರೂ ಬಳಸಿಕೊಂಡು, ಅದನ್ನು ಪರಿವರ್ತಿಸುವುದರಿಂದ, ಅರಿವು ಅಥವಾ ಗ್ರಹಿಸಲು ಸಾಧ್ಯ. ಇಂತಹ ಪರಿವರ್ತನೆಯನ್ನು 'ಪರಿಣಾಮ' ಎಂದನ್ನುತ್ತಿದ್ದರು. ಇಂತಹ ಗ್ರಹಿಕೆಯು ದೇಹದ ಹೊರಗಿನದೂ ಆಗಿರಬಹುದು. ದೇಹದೊಳಗಿನದೂ ಆಗಿರಬಹುದು.

ಅಂತಃಕರಣವು ನಿರ್ಮಲವಾಗಿರುವ, ಸತ್ವಗುಣವನ್ನು ಪೂರ್ಣ ಹೊಂದಿರುವ, ಚಿತ್ತದ ಪರಿಣಾಮದ ಸ್ಥಿತಿ ಎಂದೂ ಹೇಳಬಹುದು.

ಸಾಮನ್ಯವಾಗಿ ಚಿತ್ತವು ಐದು ಅವಸ್ಥೆಗಳಲ್ಲಿರುತ್ತದೆ.

೧. ಲೌಕಿಕ ಬಾಳಿನಲ್ಲಿ ಪ್ರವರ್ತಿಸಿ, ಸುಖ ದುಃಖಾದಿಗಳನ್ನು ಅನುಭವಿಸುವ ಚಿತ್ತದ ಅವಸ್ಥೆಗೆ ರಜೋಗುಣವೇ ಪ್ರಧಾನವಾದ ಪ್ರೇರಕ. ಚಿತ್ತದ ಈ ಅವಸ್ಥೆಯನ್ನು ಕ್ಷಿಪ್ತ ಎನ್ನುತ್ತಾರೆ.

೨. ವಿಚಾರವನ್ನು ಮಾಡಲಾಗದೆ, ದುಡುಕಿ, ರೇಗಿ, ಮದೋನ್ಮತ್ತತೆಯಿಂದ, ಚಿತ್ತವು ಪ್ರವರ್ತಿಸುವ ಅವಸ್ಥೆಯನ್ನು 'ಮೂಢ' ಎನ್ನುತ್ತಾರೆ. ಇದು ತಮೋಗುಣ ಪ್ರೇರಿತವಾದುದು.

೩. ಭೋಗ ಸಾಧನೆಗಳಲ್ಲಿ ಹಿತವನ್ನು ಮರೆಯದೆ, ಪ್ರವರ್ತಿಸುವ ಚಿತ್ತಕ್ಕೆ 'ವಿಕ್ಷಿಪ್ತ' ಎನ್ನುತ್ತಾರೆ. ಹಿತವೆಂದಾಗ ಮುಂದಾಗಬಹುದಾದ ದುಷ್ಪರಿಣಾಮಗಳನ್ನು ಗಮನಕ್ಕೆ ತಂದುಕೊಳ್ಳುವುದು ಎಂಬ ಅರ್ಥ. ಸತ್ವಗುಣ ಪ್ರೇರಿತವಾದುದು 'ವಿಕ್ಷಿಪ್ತ'.

೪. ಹೊರಗಿನ ಪ್ರಪಂಚದಲ್ಲಿ ಪರಸರಿಸದೆ, ಅಂತರ್ಮುಖಿಯಾದ ಚಿತ್ತದ ಅವಸ್ಥೆಯನ್ನು 'ಏಕಾಗ್ರ' ಎನ್ನುತ್ತಾರೆ.

೫. ಹೊರಗಿನ ಪ್ರಪಂಚದಲ್ಲಾಗಲೀ, ಆಂತರ್ಯವಾದ ಪ್ರಪಂಚದಲ್ಲಿಯಾಗಲೀ ತೊಡಗದೇ ಇರುವ ಚಿತ್ತಾವಸ್ಥೆಗೆ 'ನಿರುದ್ಧ' ವೆಂದನ್ನುತ್ತಾರೆ.

ಪತಂಜಲಿ ಮಹರ್ಷಿಗಳ ಕಾಲದಲ್ಲಿ ನಾವೀಗ ಸ್ಥೂಲವಾಗಿ ಕರೆಯುವ 'ಮನಸ್ಸು' ಎಂಬುದನ್ನು ಈ ರೀತಿ ವಿಶ್ಲೇಷಣೆ ಮಾಡಿದ್ದರು.

ಆದರೆ ನಮ್ಮ ಈ ಕಾಲದಲ್ಲಿ ಅಂತಃಕರಣ ಎಂದರೆ ಅನುಕಂಪ, ಹೆಂಗರುಳು, ಕರುಣೆ ಎಂಬ ಅರ್ಥವು ಬರುತ್ತದೆ. ಕಾಲಕಾಲದಲ್ಲಿ ಪದಗಳ ಅರ್ಥವು ಬಹಳಷ್ಟು, ಬದಲಾಯಿಸುತ್ತದೆ ಎನ್ನುವುದಕ್ಕೆ ಅಂತಃಕರಣವೂ ಒಂದು ನಿದರ್ಶನ.

ಇಂದಿನ ಮನೋವೈಜ್ಞಾನಿಕ ಭಾಷೆಯಲ್ಲಿ ಅಂತಃಕರಣದ ನಾಲ್ಕು ಭಾಗಗಳನ್ನು ತಿಳಿಯಲೆತ್ನಿಸುವ. ಸಮನ್ವಯವು ಸರಿಯಾಗದಿದ್ದಾಗ, ಅದನ್ನೂ ತಿಳಿದುಕೊಳ್ಳೋಣ. ಸರಿಹೊಂದದೆ ಇರುವ, ಋಷಿಗಳು ನುಡಿದ ವಾಕ್ಯಗಳು, ವೈಜ್ಞಾನಿಕ ಸಂಶೋಧನೆಗೆ ಪ್ರೇರಕವಾಗಬಹುದು. ಅಂತಹ ಹಂಬಲದಿಂದ ಈ ಪ್ರಯತ್ನವನ್ನು ಮಾಡಲಾಗಿದೆ.

ಮನಸ್ಸನ್ನು Id;Ego ; ಮತ್ತು Super-Ego ಎಂಬ ಮೂರು ಶಕ್ತಿಗಳನ್ನಾಗಿ ವಿಭಾಗಿಸಿದ್ದಾರೆ. ತಮೋಗುಣ ಪ್ರಧಾನವಾದ Id ಪುರಾತನವೂ ಆದುದು. ದೇಹದ ಕಾಮ್ಯಗಳನ್ನು ಪೂರೈಸು, ಹಾಗೂ ದೇಹದೊಂದಿಗೆ ಒಕ್ಕೂಡಿದ ಮನಸ್ಸಿನ ಆಸೆಗಳನ್ನೂ ತೀರಿಸು ಎಂದು ಬಲವಾಗಿ ಸೆಳೆಯುವ ಶಕ್ತಿ. ಸ್ವಾರ್ಥವೇ ಇದರ ಹಿರಿಯ ಗುರಿ.

'ಮೂಢ' ಎಂಬ ಚಿತ್ತಾವಸ್ಥೆಯನ್ನು Id ಇಗೆ ಹೋಲಿಸಬಹುದು.

Ego ಎನ್ನುವುದು ಮನಸ್ಸಿನಲ್ಲಿರುವ ಬೆಳೆದಂತೆಲ್ಲಾ ದೃಢವಾಗುತ್ತ ಬರುವ ಕಲ್ಪನೆ. ಬಾಳಿನಲ್ಲಿ ಸ್ವಾವಲಂಬಿಯಾಗುವ ಪ್ರಚೋದನೆಗೆ, Ego ಕಲ್ಪನೆಯು

ಅತ್ಯಗತ್ಯ. Id ಮತ್ತು Super-Ego ಗಳು Ego ವನ್ನು ಜಗ್ಗಿಸಿ ಕಡೆಯುತ್ತವೆ. Ego ಮಥಿಸಲ್ಪಟ್ಟಾಗ ಸ್ವಾರ್ಥಿಯಾದ Id ಅನ್ನೂ ತೃಪ್ತಿಗೊಳಿಸಬೇಕು. ಸಮಾಜದ ಹಿತವನ್ನು ಗುರಿಯಾಗಿಟ್ಟುಕೊಂಡು Super-Ego ವನ್ನೂ ಮೆಚ್ಚಿಸಬೇಕು. ಕಾರ್ಯ ನಿರತವಾಗಿರಲೇಬೇಕು, Ego; ರಜೋಗುಣವು Ego ವಿನ ಮುಖ್ಯ ಗುಣ.

Ego ವನ್ನು ಅಹಂ–ಕಾರ ಎನ್ನುವ ಪದಕ್ಕೆ ಹೋಲಿಸಬಹುದು. ಆದರೆ ಇದರ ಕಾರ್ಯದಲ್ಲಿ ಎರಡು ತರಹ ಚಟುವಟಿಕೆಗಳಿವೆ. ಒಂದು 'ಕ್ಷಿಪ್ತ; ಎನ್ನುವ Id ಅನ್ನು ತೃಪ್ತಿಗೊಳಿಸುವ ಭಾಗ. ಇನ್ನೊಂದು ಸಮಾಜದ ಹಿತವನ್ನು ರಕ್ಷಿಸುವ, ಹಾಗೆ ಮಾಡಿ ತೃಪ್ತಿಪಡುವ 'ವಿಕ್ಷಿಪ್ತ' ಎನ್ನುವ ಭಾಗ. ರಜೋಗುಣ ಪ್ರಧಾನವಾದ Ego ಚಟುವಟಿಕೆಗಳಲ್ಲಿ, ತಮೋಗುಣವು ಹೆಚ್ಚಾದರೆ 'ವಿಕ್ಷಿಪ್ತ' Id ತೃಪ್ತಿ ಸತ್ವಗುಣವು, ತಮೋಗುಣಕ್ಕಿಂತ ಪ್ರಬಲವಾದರೆ 'ವಿಕ್ಷಿಪ್ತ'. Super-Ego ಮೆಚ್ಚುಗೆ.

Super-Ego ವಿನ ಧ್ಯೇಯವು, ಸಮಾಜದ ಹಿತ. ಸ್ವಾರ್ಥದ ಅಂಶವು ಸ್ವಲ್ಪ. ನಿಸ್ವಾರ್ಥದ ಅಂಶವು ಹೆಚ್ಚು. ಸತ್ವಗುಣ ಪ್ರಧಾನವಾದುದು. ಆದರೆ ಸಮಾಜದ ಹಿತವನ್ನು ಕಾರ್ಯಗತ ಮಾಡಬೇಕಾದರೆ ರಜೋಗುಣವು ಇರಲೇಬೇಕು. ಈ ಮಿಶ್ರಣವು ಸಮಸಮವಾದರೆ, "Faddists" ಆಗುತ್ತಾರೆ. ಸತ್ವಗುಣ ಪ್ರೇರಿತವಾದ ತಮ್ಮಂತೆಯೇ, ಸಮಾಜದ ಇತರರೂ ಧ್ಯೇಯ ಸಾಧನೆಯನ್ನು ಮಾಡಬೇಕು, ಎಂದು ಆಶಿಸುವವರು. ಆಸೆಯನ್ನು ತೀರಿಸಿಕೊಳ್ಳಲು ರಜೋಗುಣವನ್ನು ಸಮಸಮ ಬಳಸಿಕೊಂಡು Saddists ಆಗುತ್ತಾರೆ.

ಮನಸ್ಸಿನ ಈ ಮೂರೂ ಭಾಗಗಳು, ಲೌಕಿಕ ಬಾಳನ್ನು ನಡೆಸಲು ಅಗತ್ಯ. ಅವುಗಳ ಝುಂಝಾಟದಲ್ಲಿ ಮನಸ್ಸಿನ ನೆಮ್ಮದಿಯು ತಪ್ಪುತ್ತದೆ.

ಮನಸ್ಸಿನ ನೆಮ್ಮದಿಯನ್ನು ಸಾಧಿಸಲು, ಮನಸ್ಸಿನಲ್ಲಿರುವ ಒಂದು ಅಂಶವು ಹಾತೊರೆಯುತ್ತದೆ. ಎಲ್ಲರ ಅನುಭವದಲ್ಲೂ ನೆಮ್ಮದಿಯ ಹಂಬಲವು ಪ್ರತ್ಯಕ್ಷವಾಗುತ್ತದೆ. ಆಗೊಮ್ಮೆ, ಈಗೊಮ್ಮೆ, ಮನಃಶಾಸ್ತ್ರದ ವೈಜ್ಞಾನಿಕ ಸಂಶೋಧಕರು, ಇತ್ತಿಂದೀಚೆಗೆ, ಮೆದುಳಿನ ಬುಡದ ಒಂದು ಭಾಗದಲ್ಲಿ ಆನಂದದ ಕೇಂದ್ರಗಳಿರುತ್ತವೆ. ಈ ಕೇಂದ್ರಗಳನ್ನು ಜೀವ ರಾಸಾಯನಿಕ, Bio-Chemical ಅಥವ ಜೀವ ಭೌತಿಕ Bio-Physical ವಿಧಾನಗಳಿಂದ ಪ್ರಚೋದಿಸಿದರೆ, ಆನಂದವು ಮತ್ತು ನೆಮ್ಮದಿಯು ಲಭಿಸುತ್ತದೆ, ಎಂಬುದನ್ನು ಸಿದ್ಧಾಂತ ಮಾಡಿದ್ದಾರೆ. Bio-Chemical ಪ್ರೇರಕಗಳು, ಸಾರಾಯಿ ಮೆಸ್ಕಲಿನ್, ಲೈಸರ್ಜಿಕ್ ಆ್ಯಸಿಡ್,ಮೊದಲಾದ ದುಃಶ್ಚಟಗಳಾಗಿರಬಹುದು. Bio-Physical ಅಥವಾ ಎತ್ತರದ ಬೆಟ್ಟದ ಗುಹೆಗಳಲ್ಲಿ ವಾಸಿಸುವುದು, ಉಪವಾಸ ಮುಂತಾದ ವ್ರತಗಳನ್ನು ಕೈಗೊಳ್ಳುವುದು, ಇತ್ಯಾದಿಗಳಾಗಿರಬಹುದು.

ಆದರೆ ಯಾವುದಾದರೂ ಒಂದು ಇಷ್ಟವಾದ ವಿಷಯದಲ್ಲಿ, ಮನಸ್ಸನ್ನು ಸಂಪೂರ್ಣ ತೊಡಗಿಸಿದರೆ ಆಗಲೂ ಒಂದು ತೆರನ ನೆಮ್ಮದಿ ಅಥವಾ ಆನಂದವನ್ನು ಅನುಭವಿಸಬಹುದು. ಸಂಶೋಧಕ ವಿಜ್ಞಾನಿಗಳು, ಉದಾತ್ತ ಕಲಾರಾಧಕರು, ಇಂತಹ ಆನಂದವನ್ನು ತುಸು ಕಾಲವಾದರೂ ಅನುಭವಿಸುತ್ತಾರೆ. ಇವರುಗಳ ಮನಸ್ಸು ಆ ಸ್ಥಿತಿಗಳಲ್ಲಿ 'ಏಕಾಗ್ರ ಚಿತ್ತ'ವಾಗಿರುತ್ತದೆ.

ಅನುಕಂಪದಿಂದ ಜಾಗೃತರಾದ ಕೆಲವರು, ಏಕಾಗ್ರ ಚಿತ್ತತೆಯಿಂದ, ಮಾನವ ನೆಮ್ಮದಿಗಾಗಿ ವಿಧಾನಗಳನ್ನು ಕಂಡುಹಿಡಿಯುವ ಆತುರದಲ್ಲಿರುತ್ತಾರೆ. ಇಂತಹ ಯುಗ ಪುರುಷರು, ಮನಸ್ಸಿನ ತೀವ್ರ ಹಂಬಲದಿಂದ, ಆನಂದದ ಕೇಂದ್ರಗಳನ್ನು ಪ್ರಚೋದಿಸುತ್ತಾರೆ. ಅತಿ ವಿರಳರಾದ ಇಂತಹವರ ಮನಸ್ಸು– 'ನಿರುದ್ಧ'ದ ಸ್ಥಿತಿಯನ್ನು ಪಡೆದಿದೆ ಎನ್ನಬಹುದು.

ಮನಸ್ಸಿನಲ್ಲಿ ಏಕಾಗ್ರ ಚಿತ್ತತೆಯು ಇರುವ ಸ್ಥಿತಿಯನ್ನು, ಪ್ರಯೋಗಾ ಪರೀಕ್ಷೆಗಳಿಂದ, ಇಂದಿನ ಮನಃಶಾಸ್ತ್ರ ಪಂಡಿತರು ತಿಳಿಯಲು ಅಥವಾ ವಿಶ್ಲೇಷಿಸಲು ಸಾಧ್ಯವಾಗಿಲ್ಲ. ಅಂದಮೇಲೆ ವಿರುದ್ಧದ ಸ್ಥಿತಿಯನ್ನು, ಪ್ರಯೋಗಾ ಪರೀಕ್ಷೆಗಳಿಂದ, ಅರಿಯಲು ಅಸಾಧ್ಯ. ಅನುಭವದಿಂದ ಮಾತ್ರ ಅರಿಯಬೇಕು.

* * *

ಕ್ಲೇಶಗಳಿಂದ ನರಳದೆ ಇರುವ, ಲೌಕಿಕ ಆಸೆಗಳಿಂದ ಬಿಡುಗಡೆಯನ್ನು ಹೊಂದಿದ ನಿರ್ಮಲವಾದ, ಅಂತಃಕರಣವೇ ಚಿತ್ತ. ಸತ್ವಗುಣಾಧಿಕ್ಯದ ಪರಿಣಾಮವು ಚಿತ್ತವೇ ಅಂತಃಕರಣ ಎಂಬುದನ್ನು ಸಿದ್ಧಾಂತ ಮಾಡುತ್ತದೆ.

**"ಯೋಗಃ ಚಿತ್ತ ವೃತ್ತಿ ನಿರೋಧಃ"**

ಎಂಬ ಸೂತ್ರವನ್ನು ಪತಂಜಲಿ ಮಹರ್ಷಿಗಳು ರಚಿಸಿದರು.

ಚಿತ್ತದ ಐದೂ ಅವಸ್ಥೆಗಳನ್ನು ತಿಳಿದೆವು. ಅಂತಃಕರಣದ ನಾಲ್ಕೂ ಭಾಗಗಳಲ್ಲಿ ಚಿತ್ತದ ಪಾತ್ರವನ್ನು ತಿಳಿದೆವು. ಸತ್ವಗುಣದಿಂದ ಪೂರ್ಣವಾದ, ಅಂದರೆ ನಿಸ್ವಾರ್ಥಿಯಾದ ಚಿತ್ತವೇ ಅಂತಃಕರಣ ಎಂಬುದನ್ನೂ ತಿಳಿದೆವು. ಈ ಕಾರಣದಿಂದ 'ಚಿತ್ತ' ಎನ್ನುವ ಪದವನ್ನು ಉಪಯೋಗಿಸಿದರು.

ವೃತ್ತಿ ಎಂದರೆ ಕಾರ್ಯ ಮತ್ತು ಕ್ರಮ. ಮರಗೆಲಸವನ್ನು ಮಾಡುವ ವೃತ್ತಿಯು, ಬಡಗಿಯದು. ಪಾಠಗಳನ್ನು ಕಲಿಸುವ ವೃತ್ತಿಯು ಮಾಸ್ತರದು. ಅದರಂತೆಯೇ ಚಿತ್ತವು ಕೆಲಸವನ್ನು ಮಾಡುವಾಗ, ವೃತ್ತಿಯನ್ನು ಕೈಗೊಂಡಿರುತ್ತದೆ. ಕ್ಷಣಕ್ಷಣಕ್ಕೂ ಚಿತ್ತವು ಒಂದಲ್ಲ ಮತ್ತೊಂದು ವಿಷಯದಲ್ಲಿ ತೊಡಗುತ್ತಿರುತ್ತದೆ. ಅಂದರೆ ಚಿತ್ತದ ವೃತ್ತಿಗಳೂ ಅಪರಿಮಿತ. ಚಿತ್ತದ ಸಹಸ್ರಾರು ವೃತ್ತಿಗಳನ್ನು

ನಿರೋಧಿಸುವುದು, ಅಥವಾ ತಡೆಗಟ್ಟುವುದು 'ಯೋಗ'.

ಅಂದರೆ ಭೋಗಕ್ಕೂ ಆನಂದದ ಅನುಭವಕ್ಕೂ, ಸೇತುವೆಯನ್ನು ಕಟ್ಟುವುದು, ಅಥವಾ ಸಂಪರ್ಕವನ್ನು ಕಲ್ಪಿಸುವುದು, ಯೋಗ. ಭೋಗಗಳನ್ನು ಅನುಭವಿಸುವಾಗ ಚಿತ್ತವು ಸಹಸ್ರಾರು ವೃತ್ತಿಗಳನ್ನು ಪಡೆಯುತ್ತಿರುತ್ತದೆ. ಅವುಗಳನ್ನು ತಡೆಹಿಡಿದರೆ, ಆನಂದದ ಅಥವಾ ನೆಮ್ಮದಿಯ ಕೇಂದ್ರಗಳೊಡನೆ ಸುಲಭವಾಗಿ ಸಂಪರ್ಕವನ್ನು ಪಡೆಯಬಹುದು. ಇದೇ ಯೋಗ ಮಾರ್ಗ, ಯೋಗ್ಯ ಮಾರ್ಗ.

ಯೋಗದ ನಿರಂತರ ಅಭ್ಯಾಸದಿಂದ, ಚಿತ್ತದ ವೃತ್ತಿಗಳನ್ನು, ಅಂದರೆ ಭೋಗದ ಕ್ಲೇಶಗಳನ್ನು ಪೂರ್ತಿಯಾಗಿ ನಿವಾರಿಸಬಹುದು. ಆನಂದದ ಅನುಭವವನ್ನು ಪಡೆಯಬಹುದು.

ಆಗ ಚಿತ್ತವನ್ನು ನಡಸುವ, ಮನಸ್ಸನ್ನು ನಿಯಂತ್ರಿಸುವ, ಶಾಶ್ವತವಾದ ಯಾವುದೋ 'ಅದನ್ನು' ಪ್ರತ್ಯಕ್ಷವಾಗಿ ಅರಿಯಬಹುದು. ಇದನ್ನು ಎರಡನೆಯ ಸೂತ್ರದಲ್ಲಿ ನುಡಿದರು.

**"ತದಾ ದ್ರಷ್ಟುಃ ಸ್ವರೂಪೇ ಅವಸ್ಥಾನಃ"**

ಆನಂದದ ಅನುಭವವು ಇರದೆ ಇದ್ದಾಗ, ಚಿತ್ತವೃತ್ತಿಗಳು ಇರುತ್ತವೆ. ಇವುಗಳನ್ನು ಮುಖ್ಯವಾದ ಎರಡು ಭಾಗಗಳನ್ನಾಗಿ ವಿಂಗಡಿಸಬಹುದು. ಕ್ಲಿಷ್ಟ ಅಥವಾ ದುಃಖಗಳಿಗೆ ಕಾರಣವಾದವು. ಅಕ್ಲಿಷ್ಟ ಅಂದರೆ ಸುಖದ ಅನುಭವವನ್ನು ನೀಡುವುವು. ಕ್ಲಿಷ್ಟ ಅಥವಾ ದುಃಖಗಳನ್ನು ಬಹಿಷ್ಕರಿಸುವುದು ; ಮತ್ತು ಅಕ್ಲಿಷ್ಟ, ಅಂದರೆ ಸುಖವನ್ನು ಅರಸುವುದು. Avoidance of pain and Pursuit of Pleasure, ಇವೆರಡೇ ಲೌಕಿಕ ಬಾಳಿನ ಪ್ರಾಣಿವರ್ಗದ ಪ್ರೇರಕಗಳು.

**ವೃತ್ತಯಃ ಪಂಚತಮ್ಯಃ ಕ್ಲಿಷ್ಟ ಅಕ್ಲಿಷ್ಟಾಃ**

ಪಂಚ, ಐದು ತೆರನಾದ ಚಿತ್ತ ವೃತ್ತಿಗಳು ಯಾವುವು ?

೧. ಪ್ರಮಾಣ. (a) ಪ್ರತ್ಯಕ್ಷವಾಗಿ ಕಂಡುದು : ಹಾಗೂ ಪಂಚೇಂದ್ರಿಯಗಳ ಮೂಲಕ ತಿಳಿದುದು. (b) ಅನುಮಾನ. ವಿಚಾರ ಪೂರ್ವಕವಾಗಿ ; ಹಿಂದಿನ ಅನುಭವದಿಂದ ಊಹಿಸುವುದು. ಹೊಗೆಯನ್ನು ಕಂಡಾಗ, ಬೆಂಕಿಯು ಕಾಣಿಸದೆ ಇದ್ದರೂ, ಬೆಂಕಿಯು ಇದೆ ಎಂದು ಊಹಿಸುವುದು ಅನುಮಾನ. ನಮ್ಮ ಕಾಲದ ಭಾಷೆಯಲ್ಲಿ ಅನುಮಾನ ಎಂದರೆ ಸಂಶಯ ಸಂದೇಹ ಎಂಬ ಅರ್ಥವು ಮಾತ್ರ ಬರುತ್ತದೆ. ೨,೦೦೦ ವರ್ಷಗಳ ಹಿಂದೆ ಅನುಮಾನ ಎಂಬ ಪದಕ್ಕೆ ಅಂತಹ ಅರ್ಥವು ಇರಲಿಲ್ಲ. (c) ಆಗಮ, ಹಿರಿಯರು, ಅರಿತವರು ನುಡಿದ ಶಬ್ದಗಳು ಅಥವಾ ವಾಕ್ಯಗಳು, ವೇದಗಳು, ಶ್ರುತಿ, ಸ್ಮೃತಿಗಳು ಇತ್ಯಾದಿ. ಇವುಗಳೂ ನಮ್ಮ

ಅರಿವಿಗೆ ಪ್ರಮಾಣಗಳು : ಸಾಧನಗಳು. Direct experience : Indirect but conclusive evidence ; and knowledge expounded by thinkers. All these contribute to our knowledge.

೨. ವಿಪರ್ಯಯ ವೃತ್ತಿ : ಮಿಥ್ಯಾಜ್ಞಾನವನ್ನು ಮೂಡಿಸುವ ವೃತ್ತಿ. ಮಸುಗತ್ತಲಲ್ಲಿ ಕಂಬವನ್ನು ಕಂಡಾಗ, ಅದನ್ನು ಮನುಷ್ಯ ಎಂದು ತಿಳಿಯುವುದು.

೩. ವಿಕಲ್ಪವೃತ್ತಿ : ಕೇವಲ ಶಬ್ದಗಳಿಂದ ಇಂತಹ ವಸ್ತುವು ಇದೆ ಎಂದು ತಿಳಿಯುವುದು. ನಿಜವಾಗಿ ಅಂತಹ ವಸ್ತುವು ಇರುವುದೇ ಇಲ್ಲ. ಚಿತ್ತದ ಇಂತಹ ವೃತ್ತಿಯನ್ನು ವಿಕಲ್ಪ ಎನ್ನುತ್ತಾರೆ ಸೂರ್ಯೋದಯ, ಸೂರ್ಯಾಸ್ತಮ ; ಕುದುರೆಯ ಕೊಂಬು : ರಾಹುವಿನ ಶಿರಸ್ಸು ಇತ್ಯಾದಿಗಳು ವಿಕಲ್ಪವೃತ್ತಿ.

೪. ನಿದ್ರಾವೃತ್ತಿ : ಸ್ವಪ್ನಗಳಿಲ್ಲದೆ ಇರುವ, ಗಾಢನಿದ್ರೆಯನ್ನು ಸುಶುಪ್ತ ಎನ್ನುತ್ತಾರೆ. ತಮೋಗುಣಪ್ರಧಾನವಾದ ಇಂತಹ ನಿದ್ರಾವೃತ್ತಿಯಲ್ಲೂ, ಸುಖವಾಗಿ ನಿದ್ರಿಸಿದೆ ಎನ್ನುವ ಸ್ಮರಣೆಯು, ಎಚ್ಚರವಾದ ನಂತರ ಉಳಿಯುತ್ತದೆ. ಆದಕಾರಣ ಈ ವೃತ್ತಿಯಲ್ಲಿ ಕೂಡ ಚಿತ್ ವಿಹರಿಸುತ್ತದೆ, 'ಡೆಲ್ಟ ಸ್ಲೀಪ್' ಎನ್ನುವ ಹಂತದ ನಿದ್ರೆ.

೫. ಸ್ಮೃತಿವೃತ್ತಿ : ಪ್ರಮಾಣಗಳಿಂದ ಅನುಭವಿಸಿದ ವಿಷಯಗಳನ್ನು ಸ್ಮರಿಸಿಕೊಳ್ಳುವುದನ್ನು ಸ್ಮೃತಿವೃತ್ತಿ ಎಂದನ್ನುತ್ತಾರೆ,

**"ಪ್ರಮಾಣ ವಿಪರ್ಯಯ ವಿಕಲ್ಪ ನಿದ್ರಾ ಸ್ಮೃತಯಃ"**

ಎಂದು ೬ನೆಯ ಸೂತ್ರ.

ಮಾನಸಿಕ ಆರೋಗ್ಯವನ್ನು ಹೊಂದಿರುವ ಸಾಮಾನ್ಯ ಮನುಷ್ಯರಲ್ಲಿ ಈ ಐದೂ ತೆರನ ಚಿತ್ತ ವೃತ್ತಿಗಳು, ಅಥವಾ ಮನಸ್ಸಿನ ಕಾರ್ಯಕ್ರಮಗಳು ನಡೆಯುತ್ತಿರುತ್ತವೆ. ಪ್ರಮಾಣ, ನಿದ್ರಾ ಮತ್ತು ಸ್ಮೃತಿ ವೃತ್ತಿಗಳು, ಬಹಳ ಪಾಲು, ವಿಪರ್ಯಯ ಮತ್ತು ವಿಕಲ್ಪಗಳು ಕೆಲವು ಸಲ ನಡೆಯುತ್ತವೆ.

ಆದರೆ ಮಾನಸಿಕ ಬೇನೆಗಳು ನರಳಿಸುವಾಗ, ವಿಪರ್ಯಯ ಮತ್ತು ವಿಕಲ್ಪ ವೃತ್ತಿಗಳು ಸರ್ವೇ ಸಾಮಾನ್ಯವಾಗಿ ಇರುತ್ತವೆ. ನಿದ್ರಾ ಮತ್ತು ಸ್ಮೃತಿ ವೃತ್ತಿಗಳು ಪಲ್ಲಟವಾಗುತ್ತವೆ.

ವಿಪರ್ಯಯ ವೃತ್ತಿಯ ಸ್ಕೀಜೋಫ್ರೆನಿಯಾ, ಮತ್ತು ಮ್ಯಾನಿಕ್ ಡಿಪ್ರೆಸಿವ್ ಸೈಕೋಸಿಸ್ ಬೇನೆಗಳಲ್ಲಿ ಬಹಳಷ್ಟು ಇರುತ್ತದೆ. ಮಿಥ್ಯಾಜ್ಞಾನವೇ ನಿಜವಾದುದು ಎಂದು ಆ ರೋಗಿಗಳು ದೃಢವಾಗಿ ನಂಬಿರುತ್ತಾರೆ. Loss of Insight into Reality ಎಂಬುದು ವಿಪರ್ಯಯ ವೃತ್ತಿಯ ಪರಮಾವಧಿ ಸ್ಥಿತಿ.

ನಿದ್ರಾವೃತ್ತಿಯು ಪಲ್ಲಟವಾಗುವುದರಿಂದ ಸ್ವಪ್ನಾವಸ್ಥೆಯ ಅವಧಿಯು ಹೆಚ್ಚಾಗಿ. ಸುಷುಪ್ತ ಅಥವಾ 'ಡೆಲ್ಟ ಸ್ಲೀಪ್' ಇನ ಅವಧಿಯು ಕಡಿಮೆಯಾಗುತ್ತದೆ. ಎಚ್ಚರವಾದ ನಂತರ ಅಲಸಿಕೆಯು ಹೆಚ್ಚಾಗಿರುವುದೇ, ನಿದ್ರಾವೃತ್ತಿಯ ಪಲ್ಲಟದ ಸೂಚನೆ. ತೀವ್ರ ಆತಂಕ, ತಳಮಳ ಇತ್ಯಾದಿ ಮಾನಸಿಕ ಪಲ್ಲಟಗಳಲ್ಲಿ ನಿದ್ರಾವೃತ್ತಿಯು ಏರುಪೇರಾಗುವುದು ಸಾಮಾನ್ಯ. ಮುಪ್ಪಿನಲ್ಲಿ ಮಾನಸಿಕ ಸ್ವಾಸ್ಥ್ಯವು ಪಲ್ಲಟವಾದರೆ ನಿದ್ರಾವೃತ್ತಿಯೂ ಅವ್ಯವಸ್ಥಿತವಾಗುತ್ತದೆ.

ಸ್ಮೃತಿ ವೃತ್ತಿಯೂ ಮಾನಸಿಕ ಬೇನೆಗಳಲ್ಲಿ ವ್ಯತ್ಯಾಸವಾಗುತ್ತದೆ. ಸ್ಮೃತಿಯೂ ವಿಪರ್ಯವೂ ಜತೆಗೂಡಿ ಚಿತ್ರವಿಚಿತ್ರವಾಗುತ್ತದೆ. ಭ್ರಮೆಯು ಮೂಡುತ್ತದೆ.

ಆರನೆಯ ಸೂತ್ರದ ಚಿತ್ತವೃತ್ತಿಗಳನ್ನು ಆಧರಿಸಿಕೊಂಡು ಮಾನಸಿಕ ಬೇನೆಗಳನ್ನು ವಿಂಗಡಿಸಿ ಅಧ್ಯಯನವನ್ನು ಮಾಡಬಹುದು. ಆದರೆ ವೃತ್ತಿಗಳೆರಡು ಮೂರು ಕಲೆಯುವುದನ್ನು ಮರೆಯಬಾರದು.

* * *

ಚಿತ್ತವೃತ್ತಿಗಳನ್ನು ನಿರೋಧಿಸುವುದು ಹೇಗೆ ? ನಿರಂತರ ಅಭ್ಯಾಸ ಮತ್ತು ವೈರಾಗ್ಯ. ಅಭ್ಯಾಸ ಎನ್ನುವ ಪದವು ಸುಲಭವಾಗಿ ಅರ್ಥವಾಗುತ್ತದೆ. ವೈರಾಗ್ಯ ಎನ್ನುವ ಪದವು ವಿ–ರಾಗ ಎಂಬುದನ್ನು ನೆನಪಿಗೆ ತಂದರೂ, ರಾಗಗಳಲ್ಲಿ ಅನಾಸಕ್ತಿ ಎಂಬ ಅರ್ಥವು ಹೆಚ್ಚು ಉಚಿತ. ನಿರಂತರವಾಗಿ ಬಿಡುವಿಲ್ಲದೆ ಅಭ್ಯಾಸವನ್ನು ಮಾಡಬೇಕು. ವೈರಾಗ್ಯವು, ದೃಷ್ಟವಾದ ಲೌಕಿಕದಲ್ಲಿ ಅನುಭವಿಸುವ ಕಾವ್ಯಗಳಲ್ಲಿ ಅನಾಸಕ್ತಿಯನ್ನು ಹೊಂದುವುದಲ್ಲದೆ ; ಊಹಾಪೋಹಾದಿ ಸ್ವರ್ಗ ಮತ್ತು ಅಂತಹ ಕಾಮ್ಯಗಳನ್ನೂ ಅನಾಸಕ್ತಿಯಿಂದ ಕಾಣಬೇಕು.

ಅಭ್ಯಾಸ ಮತ್ತು ವೈರಾಗ್ಯದಿಂದ ಚಿತ್ತವೃತ್ತಿಗಳು ಏಕಾಗ್ರಚಿತ್ತ ಸ್ಥಿತಿಯನ್ನು ಹೊಂದಲು ಸುಲಭ, ಅನಂತರ ನಿರುದ್ಧವು ಲಭಿಸುತ್ತದೆ. ಆಗ ಸಮಾಧಿ ಸ್ಥಿತಿಯು ಅಥವಾ ಆನಂದದ ಕೇಂದ್ರಗಳ ಪ್ರಚೋದನೆಯು ಸುಲಭ ಸಾಧ್ಯವಾಗುತ್ತದೆ. ಚಿತ್ತ ವೃತ್ತಿಗಳನ್ನು ಬಂಧಿಸಿ ಏಕಾಗ್ರಚಿತ್ತರಾಗಿ, ನಿರುದ್ಧವನ್ನು ಪಡೆದ ಮೇಲೆ, ಸಮಾಧಿಯ ಸ್ಥಿತಿಯು ಲಭಿಸಿದಾಗ ಯೋಗದ ಪ್ರಯತ್ನವು ಫಲಿಸಿತು ಎನ್ನಬಹುದು.

ಆನಂತರ ಪತಂಜಲಿ ಮಹರ್ಷಿಗಳು ಸಮಾಧಿಯಲ್ಲಿರುವ, ಅಥವಾ ಇರಬಹುದಾದ ಮುಖ್ಯ ವಿಭಾಗಗಳನ್ನು ವಿವರಿಸುತ್ತಾರೆ.

ಸಂ–ಪ್ರಜ್ಞಾತ ಸಮಾಧಿ–ಅಸಂಪ್ರಜ್ಞಾತ ಸಮಾಧಿ : ವಿದೇಹಿಗಳು ಪ್ರಕೃತಿ ಲಯರು ಇತ್ಯಾದಿಗಳನ್ನು ವಿವರಿಸುತ್ತಾರೆ. ಇವೆಲ್ಲವೂ ಮನಃಶಾಸ್ತ್ರ ಪಂಡಿತರಿಗೆ

ನೆರವಾಗಬಹುದು. ಸಾಮಾನ್ಯರಿಗೆ ಅಸಂಭವ, ಆದಕಾರಣ ಇಲ್ಲಿ ಅಪ್ರಕೃತ. ಆದರೆ ಒಂದೆರಡು ಮಾತುಗಳನ್ನು ಹೇಳಬಹುದು.

ವಿದೇಹಿಗಳು ಎನ್ನುವ ಸ್ಥಿತಿಯು ಸಾನಂದದ ರೂಪಿನದು. ಆನಂದಾನುಭವಿಗಳು ; ದೇಹದ ಬಂಧನವಿರದೆ ಪ್ರಕೃತಿಲಯರು ಎಂದರೆ ಸಾಸ್ಮಿತ ಸ್ಥಿತಿಯಲ್ಲಿರುವವರು. ಸ–ಅಸ್ಮಿತ. 'ನಾನು' ಎಂಬುದನ್ನು ಅರಿತವರು, ಆನಂದಾನುಭವವು ಇವೆರಡು ರೀತಿಯ ಸಮಾಧಿ ಸ್ಥಿತಿಯಲ್ಲಿ ದೊರಕಿದರೂ, 'ಕೇವಲ ಒಂದೇ' ಎನ್ನುವ ಕೈವಲ್ಯದ ಅನುಭವವು ಸಿಗುವುದಿಲ್ಲವಂತೆ.

* * *

ಈ ವಿಧಿಗಳಲ್ಲದೆ, ಕೇವಲ ಈಶ್ವರೋಪಾಸನೆಯಿಂದ, ಭಕ್ತಿಯಿಂದ ಕೂಡಿದ ಉಪಾಸನೆಯಿಂದ ಸಮಾಧಿ ಸ್ಥಿತಿಯನ್ನು ಪಡೆಯಬಹುದಂತೆ.

**ಈಶ್ವರ ಪ್ರಣಿದಾನಾತ್ ವಾ**

ಪ್ರಣಿದಾನವೆಂದರೆ ನಿರಂತರವಾದ ಅಚಲವಾದ ನಂಬಿಕೆ ಅಥವಾ ಭಕ್ತಿ.

ಈ ವಿಧಾನದಿಂದಲೂ, ನಮ್ಮ ಇಂದಿನ ಭಾಷೆಯಲ್ಲಿ ಮನಸ್ಸನ್ನು ನಡಸುವ; ಋಷಿಗಳ ಕಾಲದ ಭಾಷೆಯಲ್ಲಿ ಚಿತ್ತವೃತ್ತಿಗಳನ್ನು ನಿರೋಧಿಸುವ, ಚೇತನವನ್ನು ಅರಿಯಬಹುದು. ಅಂತಹ ಚೇತನವು 'ಈಶ್ವರ' ಎಂದು ಕರೆಯಲ್ಪಟ್ಟಿತ್ತು. 'ಓಂ' ಕಾರವೆಂಬುದು ಇನ್ನೊಂದು ಹೆಸರು, ಈಶ್ವರನಿಗೆ.

ಋಷಿಗಳ ಕಾಲದ ಈಶ್ವರನು ನಮ್ಮ ಕಾಲದ ಶಿವನಲ್ಲ ಎಂಬುದನ್ನು ನೆನಪಿನಲ್ಲಿಡಬೇಕು. ಆ ಕಾಲದ ಈಶ್ವರನು ಮಾನಸಿಕ ಚಟುವಟಿಕೆಯ ಅತ್ಯುನ್ನತ ಸಾಧನೆ. ಶಿವನು ಈ ಕಾಲದ ಗಣನಾಯಕ, ಗಣಶಿಕ್ಷಕ, ಗಣಶಿಕ್ಷಣಕಾರ. ಈಶ್ವರ ವ್ಯಕ್ತಿಗೆ ಮೀಸಲಾದವನು. ಅವನು ಸಮಾಜಕ್ಕೆ 'ಗುರು'ವಾದವನು ಎನ್ನಬಹುದು.

* * *

ಯೋಗವನ್ನು ಅಭ್ಯಾಸ ಮಾಡತೊಡಗಿದರೆ, ವಿಘ್ನಗಳು ಲೌಕಿಕದಲ್ಲಿ ತಡೆ ಬರಬೇಕು. ಇವುಗಳನ್ನು ಅಂತರಾಯಗಳು ಎನ್ನುತ್ತಿದ್ದರು. ಅವುಗಳು ಒಂಭತ್ತು. ಹೀಗೆ ವಿವರಿಸಲ್ಪಟ್ಟಿವೆ ಸೂತ್ರದಲ್ಲಿ. ಸುಲಭವಾಗಿ ಅರ್ಥವಾಗುವವುಗಳನ್ನು ಬಿಟ್ಟು ಮಿಕ್ಕವನ್ನು ಅರ್ಥ ಮಾಡುತ್ತೇನೆ

**'ವ್ಯಾದಿ,' 'ಸ್ತ್ಯಾನ,' 'ಸಂಶಯ', 'ಪ್ರಮಾದ', 'ಆಲಸ್ಯ', 'ಅವಿರತಿ', 'ಭ್ರಾಂತಿ', 'ದರ್ಶನ'–ಆಲಬ್ಧ, ಭೂಮಿಕತ್ವ, ಅನವಸ್ಥಿತತ್ವಾನಿ : ಚಿತ್ತ ವಿಕ್ಷೇಪಾಸ್ತೆ ಅಂತರಾಯಃ**

ಸ್ತ್ಯಾನ=ಅಂಗಪಾಟವು ತಪ್ಪಿ ಚಿತ್ತವು ಕೆಲಸವನ್ನು ಮಾಡಲಾಗದುದು ಸ್ತ್ಯಾನ.

ಇವುಗಳನ್ನು Congenital Defects ಎನ್ನಬಹುದು. ಉದಾ. Moron etc.

ಪ್ರಮಾದ=ಅಜಾಗರೂಕತೆ. ಆಲಸ್ಯ=ಜಡತ್ವ Inertia

ಅವಿರತಿ=ಲೌಕಿಕ ಕಾಮ್ಯಗಳಲ್ಲಿ ತೃಪ್ತಿಯನ್ನು ಹೊಂದದೆ ಇರುವ Dissatisfied ಸ್ಥಿತಿ.

ದರ್ಶನಾಲಬ್ಧ ಭೂಮಿಕತ್ವ=ಹಂಬಲಿಸಿದ ದರ್ಶನವು ದೊರೆಯಲಿಲ್ಲವೆಂಬ ಕೊರಗು.

ಅನವಸ್ಥಿತತ್ವ=ಏಕಾಗ್ರ ಚಿತ್ತತೆಯನ್ನು ಸಾಧಿಸಲಾರದೆ, ಚಂಚಲವಾಗಿರುವ ಸ್ಥಿತಿ.

**ದುಃಖ ; ದೌರ್ಮನಸ್ಸು ; ಅಂಗಮೇಜಯತ್ವ ;**
**ಶ್ವಾಸ ಪ್ರಶ್ವಾಸಾ ; ವಿಕ್ಷೇಪ, ಸಹಭುವಃ.**

ದುಃಖವು ಆಧ್ಯಾತ್ಮಿಕ, ಆಧಿಭೌತಿಕ, ಆದಿದೈವಿಕಗಳೆಂಬ ಮೂರು ತೆರನಾದವು.

ಆಧ್ಯಾತ್ಮಿಕವು, ಶರೀರ ಮತ್ತು ಮಾನಸಿಕ–ಆದಿಭೌತಿಕವು, ಪ್ರಕೃತಿಯಿಂದ, ಸಿಡಿಲು ಹುಲಿ ಇತ್ಯಾದಿಗಳಿಂದ ಉಂಟಾದವು. ಆದಿ ದೈವಿಕವು, ರಾಕ್ಷಸ, ಪಿಶಾಚಿ ಎಂಬುವುಗಳ ನಂಬಿಕೆಯಿಂದ ಉಂಟಾದ ದುಃಖಗಳು.

ದೌರ್ಮನಸ್ಯ=ಚಂಚಲವಾದ ಮನಸ್ಸು, ದುರ್ಬಲವಾದ ಮನಸ್ಸು.

ಅಂಗಮೇ ಜಯತ್ವ=ಆಸನ ಇತ್ಯಾದಿಗಳಿಂದ ದೇಹವನ್ನು ಸ್ಥಿರಪಡಿಸಿ, ಮನಸ್ಸನ್ನೂ ಸ್ಥಿರಪಡಿಸುವುದು.

ಶ್ವಾಸಪ್ರಶ್ವಾಸವು=ಉಸಿರಾಡುವಿಕೆ=ನಿಯಂತ್ರಿಸಿದ ಉಸಿರಾಡುವಿಕೆಯನ್ನು ಪ್ರಾಣಾಯಾಮ ಎಂದುರ.

ವಿಕ್ಷೇಪ=ಕೇವಲ ಶಬ್ದದಿಂದಲೇ– “Bare Slogans” ಗಳಿಂದಲೇ ವಾಸ್ತವಿಕವಾಗಿ ಇಲ್ಲದ ಸಲ್ಲದ, ವಿಷಯವನ್ನು ; ಇದೆ, ಲಭ್ಯವಾಗುತ್ತದೆ ಎಂದು ನಂಬಿಕೆಯನ್ನು ಮೂಡಿಸುವ, ಮನಸ್ಸಿನ ಮಾಟ, ಒಂದು ತೆರನ ಚಿತ್ತವೃತ್ತಿ. ಮಾಯಾಪೂರಿತ ಚಿತ್ತದ ಪ್ರವೃತ್ತಿ. ಗುಂಪುಗುಳಿತನದ ಪ್ರವೃತ್ತಿ. ಇವೆಲ್ಲವೂ ‘ಚಿತ್ತವೃತ್ತಿನಿರೋಧ’ಕ್ಕೆ ಲೌಕಿಕವಾದ ಅಂತರಾಯಗಳು. ವಿಘ್ನಗಳು, ಅಡೆತಡೆಗಳು.

* * *

**ತತ್ ಪರಿಷೇಧಾರ್ಥಂ, ಏಕತತ್ವ ಅಭ್ಯಾಸಃ**

ಅಂತರಾಯಗಳನ್ನು ನಿವಾರಿಸಲು, ತನಗೆ ಇಷ್ಟವಾದ ರುಚಿಸುವ, ಏಕತತ್ವವನ್ನು ಅಂದರೆ ಯೋಚಿಸಿದ ‘ತನ್ನ’ ನಿರ್ಣಯವನ್ನು, ಅಭ್ಯಾಸ ಮಾಡಬೇಕು. ಅಂದರೆ ‘ತನ್ನ’ ನಿರ್ಣಯವು ಸರಿಯಾದುದು ಎಂದು ದೃಢವಾಗಿ ನಂಬಿ,

ಮಾನಸಿಕವಾಗಿ ಮುನ್ನುಗ್ಗಬೇಕು.

ಮಾನಸಿಕ ಬೇನೆಗಳಿಂದ ನರಳುತ್ತಿರುವವರನ್ನು ಅರ್ಥಮಾಡಿಕೊಳ್ಳಲು ಈ ಸೂತ್ರವು ಅಮೂಲ್ಯ. ಮಾನಸಿಕ ರೋಗಿಗಳಿಗೆ ಪಿಶಾಚಿ ಹಿಡಿದಂತೆ ಯಾವುದಾದರೂ ಒಂದು ಗೀಳು ಹಿಡಿಯುತ್ತದೆ. ಅದನ್ನು ತಡೆ ಹಿಡಿಯಲು ಇತರರು ಪ್ರಯತ್ನಿಸಿದರೆ, ರೋಗಿಗಳ ಮನಸ್ಸು ಮೊಂಡುಹಿಡಿಯುತ್ತದೆ. ಅಸಾಧ್ಯ ಕೋಪವು ಬರುತ್ತದೆ. ಆದುದರಿಂದ ಹಿಡಿದ ಗೀಳಿಗೆ ಉತ್ತೇಜನವನ್ನು ಕೊಡದೆ ಇದ್ದರೂ, ಅಡ್ಡಿ ಬರಬಾರದು.

ಏಕಾಗ್ರಚಿತ್ತತೆಯನ್ನು ಪಡೆಯಲು ನೆರವಾಗುವ ಇತರ ಸ್ಥಿತಿಗಳನ್ನೂ ಹೇಳುತ್ತಾರೆ.

**ಮೈತ್ರೀ ಕರುಣಾ ಮುದಿತಃ ಉಪೇಕ್ಷಾಣಾಂ, ಸುಖ ದುಃಖ, ಪುಣ್ಯ, ಅಪುಣ್ಯ**
**ವಿಷಯಾಣಾಂ ಭಾವನಾತ್ ತತ್ ಚಿತ್ತ ಪ್ರಸಾದನಂ**

ಸುಖ ದುಃಖ; ಪುಣ್ಯ ಅಪುಣ್ಯ ; ಇವುಗಳ ಬಗ್ಗೆ ಮೈತ್ರಿ ಕರುಣೆ, ಸಂತೋಷ, ಮತ್ತು ಉಪೇಕ್ಷೆ ಇವುಗಳನ್ನು ಕ್ರಮವಾಗಿ ಅಭ್ಯಾಸವನ್ನು ಮಾಡಿದರೆ, ಚಿತ್ತವು ಏಕಾಗ್ರವಾಗಲು ಸಹಾಯವಾಗುತ್ತದೆ.

ಇದಲ್ಲದೆ ಪ್ರಾಣಾಯಾಮದಿಂದಲೂ ಚಿತ್ತವನ್ನು ಏಕಾಗ್ರದತ್ತ ನಡೆಸಬಹುದಂತೆ

**ಪ್ರಚ್ಛರ್ದನ ವಿಧಾರಣಾಭ್ಯಾಂ ವಾ ಪ್ರಾಣಸ್ಯ**

ಮುಂದಿನ ಶ್ಲೋಕಗಳಲ್ಲಿ ಸಮಾಧಿಯ ವಿವಿಧ ಸ್ವರೂಪಗಳನ್ನು ವಿವರಿಸುತ್ತಾರೆ ಸವಿತರ್ಕ ಮತ್ತು ನಿರ್ವಿತರ್ಕ ಎಂಬ ಎರಡು ಪ್ರಮುಖವಾದ ಸಮಾಧಿ ಸ್ಥಿತಿಗಳು. ಹಾಗೂ ಸ–ವಿಚಾರ ಮತ್ತು ನಿರ್ವಿಚಾರ ಎಂಬ ಭೇದಗಳೂ ಇವೆ. ನಾಲ್ಕೂ ತೆರನ ಇವು ಸ–ಬೀಜ ಸಮಾಧಿಗಳು. ಅಂದರೆ ಯಾವುದಾದರೂ ಒಂದನ್ನು ಆಲಂಬಿಸುವುದು, ಅಥವಾ ಸಂ–ಪ್ರಜ್ಞಾತ. ಈ ಸ್ಥಿತಿಯಲ್ಲಿ ಋತಂಭರಾ ತತ್ರಪ್ರಜ್ಞಾ–ಸದಾ ಸತ್ವದಲ್ಲಿರುವ, ಸತ್ಯವಾಗಿರುವ ಪ್ರಜ್ಞೆಯು ಲಭಿಸುತ್ತದೆ. ಸಂಪ್ರಜ್ಞಾತ ಋತಂಭರಾ ಇವೆರಡೂ ನಿರೋಧಿಸಲ್ಪಟ್ಟಾಗ ನಿರ್ಬೀಜ ಸಮಾಧಿ ಅಥವಾ ಯಾವುದರ ಆಲಂಬನವೂ ಇಲ್ಲದ ಸಮಾಧಿ ಸ್ಥಿತಿಯು ದೊರಕುತ್ತದೆ.

ಮನಸ್ಸು ತನ್ನ ವೃತ್ತಿಗಳನ್ನು ನಿಲ್ಲಿಸಿದ ಮೇಲೆ ಯಾವ ತೆರನ ಸಮಾಧಿಯ ಅನುಭವವಾಗುತ್ತದೆಯೋ ಅದನ್ನು ಇಂದಿನ ಹಂತದ ಮನೋವಿಜ್ಞಾನದಲ್ಲಿ, ಪರೀಕ್ಷಾ ಪ್ರಯೋಗಗಳಿಂದ ಕಂಡುಹಿಡಿಯಲು ಅಸಾಧ್ಯ. ಆದಕಾರಣ ಇವುಗಳನ್ನು ಸೂಕ್ಷ್ಮವಾಗಿ ಹೆಸರಿಸಲಾಗಿದೆ.

## II ಸಾಧನ ಪಾದ

**ತಪಃ ಸ್ವಾಧ್ಯಾಯೇಶ್ವರ ಪ್ರಣಿಧಾನಾನಿ ಕ್ರಿಯಾ ಯೋಗಃ**

ತಪಃ ಯೋಗ ಸಾಧನೆಗಾಗಿ ಮನಸ್ಸಿನಲ್ಲಿ ತಪಿಸುತ್ತಾ, ಅಗತ್ಯವಾದ ವ್ರತ ಪೂಜೆ ಇತ್ಯಾದಿಗಳನ್ನು ಆಚರಿಸುವುದು. ಸ್ವಾಧ್ಯಾಯ=ಪ್ರಣವಪೂರ್ವಕವಾದ ಮಂತ್ರವನ್ನು ಜಪಿಸುವುದು. ಈಶ್ವರ ಪ್ರಣಿಧಾನ=ಎಲ್ಲವೂ ಈಶ್ವರನಿಗೆ ಸಮರ್ಪಿತ ಎನ್ನುವ ಪೂರ್ಣ ನಂಬುಗೆ. ಈ ಮೂರೂ ಕೂಡಿ ಕ್ರಿಯಾಯೋಗ ಎಂದೆನಿಸಿಕೊಳ್ಳುತ್ತದೆ.

ಯೋಗದ ವಿವರಗಳನ್ನು, ಚಿತ್ತದ ವಿವಿಧ ವೃತ್ತಿಗಳನ್ನು, ವೃತ್ತಿಗಳ ಮೇಲೆ ಹತೋಟಿಯನ್ನು ಪಡೆಯುವ ರೀತಿಗಳನ್ನೂ ಮೊದಲನೆಯ ಪಾದದಲ್ಲಿ ಹೇಳಲಾಯಿತು. ಎರಡನೆಯ ಈ ಪಾದದಲ್ಲಿ ಅವನ್ನು ಸಾಧಿಸುವ ರೀತಿಗಳನ್ನು ವಿವರಿಸಲಾಗುತ್ತದೆ. ಆದುದರಿಂದ ಈ ಭಾಗವನ್ನು 'ಕ್ರಿಯಾಯೋಗ' ಎಂದು ಕರೆಯುತ್ತಾರೆ.

**ಸಮಾಧಿ ಭಾವನಾರ್ಥಃ ಕ್ಲೇಶ ತನೂ ಕರಣಾರ್ಥಶ್ಚ**

ಕ್ರಿಯಾಯೋಗವನ್ನು ಸಾಧನೆ ಮಾಡುವುದರಿಂದ ಸಮಾಧಿಸ್ಥಿತಿಯು ಸ್ಥಿರವಾಗುವುದಕ್ಕೂ ಮತ್ತು ಕ್ಲೇಶಗಳು ಅಥವಾ ವಿಘ್ನಗಳು ನಾಶವಾಗುವುದಕ್ಕೂ ಸಹಾಯವಾಗುತ್ತದೆ.

**ಅವಿದ್ಯಾ, ಅಸ್ಮಿತ, ರಾಗ, ದ್ವೇಷ, ಅಭಿನಿವೇಶಾಃ ಕ್ಲೇಶಾಃ**

ಕ್ಲೇಷಗಳು ಎಂದರೆ :

ಅವಿದ್ಯಾ=ಅಜ್ಞಾನ ಅಥವಾ ಸರಿಯಾದ ಸತ್ಯವಾದ ಜ್ಞಾನವು ಇಲ್ಲದಿರುವುದು.

ಅಸ್ಮಿತ=ನಾನು ನನ್ನ ಬಾಳು ಎಂಬ ಭಾವನೆ.

ರಾಗ=ಸುಖ ಕಾಮ್ಯಗಳ ಬಗ್ಗೆ ಇರುವ ಆಸೆ.

ದ್ವೇಷ=ಇಷ್ಟಾರ್ಥ ಸಾಧನೆಗೆ ಅಡ್ಡಿ ಬರುವವುಗಳ ಬಗೆಗೆ ಉಂಟಾಗುವ ಭಾವನೆ.

ಅಭಿನಿವೇಶ=ಸೊಬಗು ಸೌಖ್ಯಗಳಿಂದ ಬದುಕಬೇಕು ಎಂಬ ಹೆಬ್ಬಯಕೆ.

ಮೆದುಳಿನಲ್ಲಿರುವ ಆನಂದದ ಕೇಂದ್ರಗಳ ಬಳಿಗೆ ಮನಸ್ಸು ಹರಿಯುವಾಗ, ಈ ಕ್ಲೇಶಗಳು ಅಡ್ಡ ಬಂದು ತಮ್ಮ ಬಳಿಗೆ ಸೆಳೆಯುತ್ತವೆ.

**ಅವಿದ್ಯಾ ಕ್ಷೇತ್ರಂ ಉತ್ತರೇಷಾಂ ಪ್ರಸುಪ್ತ ತನುವಿಚ್ಛಿನ್ನ ಉದಾರಾಣಾಂ**

ಕ್ಲೇಶಗಳೆಲ್ಲವೂ ಸುಪ್ತವಾಗಿರಲಿ, ಅಲ್ಪವಾಗಿರಲಿ, ಅಥವಾ ಉಲ್ಬಣಗೊಂಡಿರಲಿ, ಅವುಗಳೆಲ್ಲಕ್ಕೂ ಅವಿದ್ಯೆಯೇ ಪ್ರಧಾನ ಕಾರಣವಾಗಿರುತ್ತದೆ.

ಅವಿದ್ಯೆ ಅಥವಾ ಅಜ್ಞಾನದಿಂದಲೇ ಮಿಕ್ಕ ವಿಘ್ನಗಳು ಮನಸ್ಸಿನಲ್ಲಿ

ಕಾಣಿಸುತ್ತವೆ. ಸರಿಯಾದ ಹಾಗೂ ಸ್ಪಷ್ಟವಾದ ಜ್ಞಾನಾರ್ಜನೆಯಿಂದ, ಮನಸ್ಸಿನಲ್ಲಿ ಕಂಡುಬರುವ ಅಡ್ಡಿಗಳನ್ನು ನಿವಾರಿಸಿ ಆನಂದದ ಕೇಂದ್ರಗಳ ಬಳಿಗೆ ಮನಸ್ಸನ್ನು ಹರಿಸಬಹುದು.

ಮುಂದಿನ ಶ್ಲೋಕಗಳಲ್ಲಿ ಕ್ಲೇಶಗಳೈದರ ವಿವರಣೆಯನ್ನು ಕೊಡಲಾಗಿದೆ.

ಅವುಗಳ ಮುಖ್ಯಸಾರಾಂಶವು : ಆನಂದದ ಕೇಂದ್ರಗಳ ಪ್ರಚೋದನೆಯಿಂದ ಉಂಟಾಗುವ ಅರಿವು ಶಾಶ್ವತವಾದುದರ ಜ್ಞಾನ. ಅಂತಹ ಅರಿವನ್ನು 'ಪುರುಷ' ಎಂದರು. ಕ್ಲೇಶಗಳಿಂದ ನಡೆಸಲ್ಪಟ್ಟ ಮನಸ್ಸು, 'ಪುರುಷನೇ' ಕ್ಲೇಶಗಳೊಂದಿಗೆ ಕೂಡಿಕೊಂಡು ಅನುಭವಿಸುತ್ತಾನೆ. ಎಂದು ಭ್ರಮಿಸುತ್ತದೆ, ಭ್ರಮೆಯು ನಿವಾರಣೆಯಾಗಬೇಕಾದರೆ, ಪುರುಷ ಮತ್ತು ಅವಿದ್ಯೆಯಿಂದಾಗಿ ಪುರುಷನು ಅನುಭವಿಸುತ್ತಾನೆ ಎಂಬ ಸಂಯೋಗವನ್ನು ಪರಿಹರಿಸಬೇಕು. ನಿರಂತರವಾಗಿ ವಿವೇಕವನ್ನು ಉಪಯೋಗಿಸುವುದರಿಂದ ಸಂಯೋಗವನ್ನು ಪರಿಹರಿಸಬಹುದು, ಹಾಗಾಗುವ ತನಕ ಯೋಗಾಂಗಾನುಷ್ಠಾನವನ್ನು ಆಚರಿಸಬೇಕು. ಆಗ ಚಿತ್ತವು ಸತ್ವಗುಣದಿಂದ ತುಂಬಿಕೊಂಡು ವಿವೇಕ ಖ್ಯಾತಿಯನ್ನು ಪಡೆಯುವ ಪರಿಪಕ್ವತೆಯನ್ನು ಪಡೆಯುತ್ತದೆ.

ಅನುಷ್ಠಾನವನ್ನು ಮಾಡಬೇಕಾದ ಯೋಗಾಂಗಗಳು ಯಾವುವು? ಎಷ್ಟು?

**ಯಮ, ನಿಯಮ, ಆಸನ, ಪ್ರಾಣಾಯಾಮ ; ಪ್ರತ್ಯಾಹಾರ,**
**ಧಾರಣ, ಧ್ಯಾನ, ಸಮಾಧಯೋಃ ಅಷ್ಟಾವಯವಂಗಾನಿ**

ಎಂಟು ಭಾಗಗಳುಳ್ಳ ಯೋಗಾಂಗಗಳಲ್ಲಿ ಐದು ಬಾಹ್ಯ ನಡವಳಿಕೆಗೆ ಸಂಬಂಧಪಟ್ಟುದು.

ಯಮ=ಅಹಿಂಸೆ, ಸತ್ಯ, ಆಸ್ತೇಯ, (ಇತರರ ಆಸ್ತಿಯನ್ನು ಅಪಹರಿಸದೆ ಇರುವುದು) ಬ್ರಹ್ಮಚರ್ಯ, ಅಪರಿಗ್ರಹ.

ನಿಯಮ=ಶುಚಿ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರ ಪ್ರಣಿಧಾನ.

ಆಸನ=ದೇಹವನ್ನು ತಹಬಂದಿಗೆ ತಂದು, ಚಿತ್ತಸ್ಥೈರ್ಯವನ್ನು ಪಡೆಯಲು ಆರಾಮವಾಗಿ ಕೂತುಕೊಳ್ಳುವುದು.

ಪ್ರಾಣಾಯಾಮ=ಉಚ್ಛ್ವಾಸ, ನಿಶ್ವಾಸಗಳನ್ನು ಕ್ಲುಪ್ತವಾಗಿ ಸಾವಧಾನವಾಗಿ ನಡಸುವುದು.

ಪ್ರತ್ಯಾಹಾರ=ಲೌಕಿಕ ಸ್ವಭಾವದಿಂದ ಇಂದ್ರಿಯಗಳು ಬಹಿರ್ಮುಖ ವಾಗಿರುತ್ತವೆ. ಅದಕ್ಕೆ ಪ್ರತಿಯಾಗಿ ಅಂತರ್ಮುಖಿಯಾಗುವಂತೆ ಮಾಡುವುದು

ಮಿಕ್ಕ ಐದು ಯೋಗಾಂಗಗಳು ಮನಸ್ಸಿಗೆ ಮೀಸಲಾದುವು. ಚಿತ್ತಕ್ಕೆ

ಸಂಬಂಧಿಸಿದುದವು.

ಧಾರಣ=ಚಿತ್ತವನ್ನು ಅಥವಾ ಮನಸ್ಸನ್ನು ಒಂದು ಗುರಿಯತ್ತ ಸ್ಥಿರವಾಗಿ ನಿಲ್ಲಿಸುವುದು.

ಧ್ಯಾನ=ಧಾರಣಾಸ್ಥಿತಿಗೆ, ಇತರ ಚಿತ್ತವೃತ್ತಿಗಳು, ಮನಸ್ಸಿನ ಆಲೋಚನೆಗಳು, ಅಡ್ಡಬಂದು ಕುಂದುತರದಂತೆ ಅಭ್ಯಾಸ ಮಾಡುವುದು.

ಸಮಾಧಿ=ಧ್ಯಾನವನ್ನು ಮಾಡುತ್ತಿದ್ದೇನೆ ಎಂಬ ಅರಿವೂ ನಾಶವಾಗಿ, ಮನಸ್ಸು ಶೂನ್ಯವಾಗುವುದು. ಆಗ ಅಲೌಕಿಕವಾದ ಯಾವುದೋ ಪ್ರಜ್ಞೆಯು ಆನಂದಮಯವಾಗಿ ಸತ್ಯವಾಗಿರುತ್ತದೆಯಂತೆ.

ಯೋಗಾಂಗಳಾದ ಈ ಎಂಟರ ವಿವರಣೆಯನ್ನು ಮತ್ತು ಅವುಗಳಿಂದ ಲಭಿಸುವ ಪ್ರಯೋಜನವನ್ನೂ, ಅವುಗಳಿಂದ ಸಮಾಧಿಸ್ಥಿತಿಗೆ ಹೇಗೆ ಏರಬಹುದೆಂಬುದನ್ನೂ, ಮುಂದಿನ ಶ್ಲೋಕಗಳಲ್ಲಿ ವಿವರಿಸಲಾಗಿದೆ. ಆಸಕ್ತಿ, ಇದ್ದವರು ಯೋಗಸೂತ್ರಗಳನ್ನು ವ್ಯಾಸಂಗ ಮಾಡಬೇಕು.

ಪ್ರಕೃತ, ವಯಸ್ಸಿನ ಏರುಪೇರು, ಮತ್ತು ಸ್ವಾಸ್ಥ್ಯತೆ, ಇವುಗಳನ್ನು ಗುರಿಯಾಗಿರಿಸಿಕೊಂಡು ಮನಸ್ಸಿನ ವಿಶ್ಲೇಷಣೆಯನ್ನು ಪತಂಜಲಿ ಮಹರ್ಷಿಗಳು ಹೇಗೆ ಮಾಡಿದ್ದಾರೆ ಎಂಬುದನ್ನು ತಿಳಿಯಲು ಯತ್ನಿಸಲಾಗಿದೆ.

## III. ವಿಭೂತಿ ಪಾದ

ಮೂರನೆಯ ಈ ಭಾಗದಲ್ಲಿ ಧಾರಣ, ಧ್ಯಾನ, ಮತ್ತು ಸಮಾಧಿ ಸ್ಥಿತಿಗಳನ್ನು ವಿವರಿಸಲಾಗಿದೆ. ಮತ್ತು ಈ ಮೂರೂ ಚಿತ್ತದ ಸ್ಥಿತಿಗಳ ಸಮೂಹವನ್ನು 'ಸಂಯಮ' ಎಂದು ಕರೆಯಲಾಗಿದೆ. ಸಂಯಮವು ಯಾವುದಾದರೂ ಒಂದು ವಿಷಯ ಅಥವಾ ವಸ್ತುವಿನಲ್ಲಿ ಕೇಂದ್ರೀಕರಿಸಲ್ಪಟ್ಟಾಗ, ಲಭಿಸುವ ಸಿದ್ಧಿಗಳೂ, ಅಂದರೆ ಅಸಾಧಾರಣವಾದ ಪರಿಣಾಮಗಳನ್ನು ವಿಶದೀಕರಿಸಿದೆ.

ಮನಸ್ಸನ್ನು ಅಭ್ಯಾಸದಿಂದ, ಹಾಗೂ ವೈರಾಗ್ಯದಿಂದ ಹದಗೊಳಿಸಿದರೆ ಅನಂತರ ಮನಸ್ಸು ವಕ್ರವಕ್ರವಾಗಿ, ಚಂಚಲವಾಗಿ ವರ್ತಿಸದೆ ನೇರವಾಗಿ ಇಷ್ಟವಾದ ಅಥವಾ ಸಂಕಲ್ಪಿಸಿದ ಗುರಿಯತ್ತ ಸುಲಭವಾಗಿ ಸಾಗುತ್ತದೆ. ಹೀಗೆ ಮನಸ್ಸೆಂಬ ಶಕ್ತಿಯನ್ನು ಅಭಿವೃದ್ಧಿಸಿ ನೇರ ನಡಸಿದರೆ, ಅಸಾಧಾರಣವಾದ ಫಲಗಳು ದೊರಕುತ್ತವೆ. ವಿಭೂತಿ ಪಾದದ ಸಾರಾಂಶವಿದು.

* * *

**ದೇಶಬಂಧ ಚಿತ್ತಸ್ಯ ಧಾರಣಾ**

ಚಿತ್ತವನ್ನು ಅಥವಾ ಮನಸ್ಸನ್ನು ಯಾವುದಾದರೂ ಒಂದು ಪ್ರದೇಶದಲ್ಲಿ ಸ್ಥಿರವಾಗಿ ನಿಲ್ಲಿಸುವುದು 'ಧಾರಣ'. ಪ್ರದೇಶ ಎಂದಾಗ ದೇಹದ ಹೊರಗಿರುವ ದೇವರ ವಿಗ್ರಹವಾಗಿರಬಹುದು ; ದೇಹದಲ್ಲಿರುವ, ನಾಸಿಕಾಗ್ರ ಇತ್ಯಾದಿಯಾಗಿರಬಹುದು ; ಇಂತಹ ಪ್ರದೇಶಗಳು ಪವಿತ್ರವಾಗಿರಬೇಕು. ಋಷಿಗಳ ಕಾಲದಲ್ಲಿ ದೇಶ ಎಂದರೆ Space ಎನ್ನುವ ಅರ್ಥವಿತ್ತು. ವಿಶಾಲವಾದ Space ನಲ್ಲಿ ಸೀಮಿತವಾದ ಒಂದು ಪುಟ್ಟ ಪ್ರದೇಶದಲ್ಲಿ ಚಿತ್ತವನ್ನು ಬಂಧಿಸಿಡುವುದು, ಅಥವಾ ಮನಸ್ಸನ್ನು ಹಿಡಿದಿಡುವುದು 'ಧಾರಣ.'

**ತತ್ರ ಪ್ರತ್ಯಯೈಕ ತಾನತಾ ಧ್ಯಾನಂ**

ಆ ಪ್ರದೇಶದಲ್ಲಿ ಇತರ ವಸ್ತುಗಳು ಮನಸ್ಸಿಗೆ ಬಾರದಂತೆ ಮಾಡುವುದು. ಮತ್ತು ಧಾರಣವನ್ನು ಮಾಡಿದ ವಸ್ತು ಅಥವಾ ವಿಷಯದೊಂದಿಗೆ ಒಂದಾಗುವುದು. ಇಂತ ಸ್ಥಿತಿಯನ್ನು ಧ್ಯಾನ ಎನ್ನುತ್ತಾರೆ. ಮನಸ್ಸಿನ ಈ ಅವಸ್ಥೆ ಅಥವಾ ಸ್ಥಿತಿಯಲ್ಲಿ ಧ್ಯಾನಕ್ಕೆ ಪಾತ್ರವಾದ ವಸ್ತು ಮತ್ತು ಅದನ್ನು ಅರಿಯುವ ಮನಸ್ಸು ; ಇವೆರಡರ ಹೊರತು, ಮತ್ತೆ ಯಾವುದೂ ಇರುವುದಿಲ್ಲ.

**ತತ್ ಏವ ಅರ್ಥ ಮಾತ್ರ ನಿರ್ಭಾಸಂ ಸ್ವರೂಪ ಶೂನ್ಯಂ ಇವ ಸಮಾಧಿಃ**

ಆ ತೆರನ ಧ್ಯಾನವು ಧ್ಯಾನಿಸುವ ವಸ್ತುವಿನ ಸ್ವರೂಪವಾಗಿ, ಧ್ಯಾನಿಸುತ್ತಿದ್ದೇನೆ ಎನ್ನುವುದು ಕೂಡ ಶೂನ್ಯವಾಗುವ ಮನಸ್ಸಿನ ಅವಸ್ಥೆಯನ್ನು 'ಸಮಾಧಿ' ಎನ್ನುತ್ತಾರೆ.

**ತ್ರಯಂ ಏಕತ್ರ ಸಂಯಮಃ**

ಮನಸ್ಸಿನ ಈ ಮೂರೂ ಸ್ಥಿತಿಗಳು, ಧಾರಣ, ಧ್ಯಾನ, ಸಮಾಧಿ, ಇವೆಲ್ಲವೂ ಒಂದೇ ವಿಷಯದಲ್ಲಿ ಕೂಡಿರುವಾಗ 'ಸಂಯಮ'ವು ಲಭಿಸಿದೆ. ಧಾರಣ, ಧ್ಯಾನ, ಸಮಾಧಿ ಸ್ಥಿತಿಗಳು, ಒಂದೇ ಕಾಲದಲ್ಲಿ ಒಂದೇ ವಿಷಯದಲ್ಲಿ ನಿರತವಾದಾಗ 'ಸಂಯಮ' ಎನ್ನಿಸಿಕೊಳ್ಳುತ್ತದೆ.

**ತತ್ ಜಯಾತ್ ಪ್ರಜ್ಞಾಲೋಕಃ**

ಸಂಯಮವು ಲಭಿಸಿದಾಗ ಪ್ರಜ್ಞಾಲೋಕವು ಅತ್ಯಂತ ಸ್ಪಷ್ಟವಾಗುತ್ತದೆ. ಅಂದರೆ ಅರಿಯುವ ಮನಸ್ಸಿನ ಅಂಶವು ಅತ್ಯಂತ ಚುರುಕಾಗುತ್ತದೆ. ಸೂಕ್ಷ್ಮ ಗ್ರಾಹಿಯಾಗುತ್ತದೆ.

**ತಸ್ಯ ಭೂಮಿಷು ವಿನಿಯೋಗಃ**

ಸಂಯಮವನ್ನು ಹಂತಹಂತವಾಗಿ, ಸ್ಥೂಲವಾದ ವಿಷಯಗಳಿಂದ, ಸೂಕ್ಷ್ಮವಾದವುಗಳತ್ತ ಗುರಿ ಮಾಡಬೇಕು.

**ತ್ರಯಂ ಅಂತರಂಗಂ ಪೂರ್ವೇಭ್ಯಃ**

ಯಮ, ನಿಯಮ ಮೊದಲಾದ ಐದು ಅಂಗಗಳಿಗಿಂತಲೂ, ಧಾರಣ ಧ್ಯಾನ ಸಮಾಧಿಗಳು, ಅಂತರಂಗಂ, ಅಂದರೆ ಮನಸ್ಸಿನ ಆಂತರ್ಯದಲ್ಲಿರುತ್ತದೆ.

**ತದಪಿ ಬಹಿರಂಗಂ ನಿರ್ಬೀಜಸ್ಯ**

ಹಾಗೂ, ಈ ಮೂರೂ, ನಿರ್ಬೀಜ ಸಮಾಧಿಗೆ, ಹೊರತಾದುವು, ಅಂದರೆ ಬಾಹ್ಯದಲ್ಲಿರುವುವು.

ಎಂಟು ಸೂತ್ರಗಳನ್ನು ಈಗಿನ ಮನೋವೈಜ್ಞಾನಿಕ ರೀತಿಯಲ್ಲಿ ವಿಶ್ಲೇಷಿಸುವ.

ಕುತೂಹಲಕಾರಿಯಾದ ಕತೆಯನ್ನೋ, ಕಾದಂಬರಿಯನ್ನೋ ಓದುತ್ತಿರುವಾಗ ಮುಂದೇನಾಗುತ್ತೆ ಎಂಬ ಕುತೂಹಲವು ಓದುಗನ ಮನಸ್ಸನ್ನು ಸೆರೆಹಿಡಿಯುತ್ತದೆ. ಹತ್ತು ಹನ್ನೆರಡು ವರ್ಷದ ಹುಡುಗರೂ ಕೂಡ 'ತಡೀಮ್ಮಾ, ಈ ಕತೆಯನ್ನು ಮುಗಿಸಿಬಿಟ್ಟು ಆಮೇಲೆ ಊಟಕ್ಕೆ ಬರ್ತ್ತಿನಿ' ಎನ್ನುತ್ತಾರೆ. ಅಂದರೆ ಕತೆಯ ಪಾತ್ರಗಳು ಅವರ ಮನಸ್ಸಿನಲ್ಲಿ ಅವರೇ ಆಗಿಬಿಡುತ್ತಾರೆ. ಪಾತ್ರಗಳು ಅವತರಿಸಿದಂತೆಲ್ಲಾ ಇವರೂ ಹೊಸ ಪಾತ್ರಗಳಾಗುತ್ತಾರೆ. ಅಂದರೆ ಪಾತ್ರಗಳು ಬೇರೆ, ಓದುವವನು ಬೇರೆ ಎಂಬ ವ್ಯತ್ಯಾಸವು ಓದುವ ಕಾಲದಲ್ಲಿ ಉಳಿದಿರುವುದಿಲ್ಲ. ಹೀಗಾಗುವುದು ಮನಸ್ಸಿನ ಮೇಲ್ಪದರಗಳಲ್ಲಿ ಮಾತ್ರ. Superficial layers of the conscious mind ಎನ್ನಬಹುದು. ಸೊಳ್ಳೆಯು ಆಗ ಕಚ್ಚಿದರೆ, ಗಮನಕ್ಕೆ ಬರದೆ ಇರಬಹುದು. ಆದರೆ ಕಪ್ಪುಕಟ್ಟಿರುವೆಯು ಕಟುಕಿದರೆ, ಪುಸ್ತಕವನ್ನು ಬದಿಗಿಟ್ಟು, ಇರುವೆಯನ್ನು ಅಪ್ಪಚ್ಚಿಮಾಡತೊಡಗುತ್ತಾನೆ. ಆದ ಕಾರಣ ಮನಸ್ಸಿನ ಮೇಲ್ಪದರಗಳಲ್ಲಿ ತಾತ್ಕಾಲಿಕವಾಗಿ ಏಕಾಗ್ರಚಿತ್ತತೆಯು ಇತ್ತು ಎನ್ನಬೇಕು.

ಕತೆ ಕಾದಂಬರಿಗಳಲ್ಲಿ ಮಗ್ನವಾಗುವುದು ಏಕಾಗ್ರಚಿತ್ತತೆಯ ಒಂದು ಲಘು ರೂಪ.

ಮಧ್ಯಮ ವರ್ಗದ ನನ್ನ ಸ್ನೇಹಿತನೊಬ್ಬ, ಬಹಳಷ್ಟು ವರ್ಷಗಳು ಹೊಟ್ಟೆಕಟ್ಟಿ ಹಣವನ್ನು ಕೂಡಿಡುತ್ತಿದ್ದ. ಸ್ವಂತ ಮನೆಯನ್ನು ಕಟ್ಟಿಕೊಳ್ಳಬೇಕು ಎನ್ನುವ ಹಿರಿಯ ಹಂಬಲ. ಕಡೆಗೊಂದು ಸೈಟ್‌ಕೊಂಡ. ಆನಂತರ ಆರೇಳು ತಿಂಗಳು ಮನೆಯನ್ನು ಕಟ್ಟಿಸುವುದೊಂದೇ ಅವನ ಮನಸ್ಸಿನ ತುಂಬಾ ಇದ್ದುದು. ಚರಿತ್ರೆಯನ್ನು ಓದಿ ಪ್ಯಾಸುಮಾಡಿದ ಪದವೀಧರ. ಆದರೆ ಅವನೇ ಮನೆಯ ಪ್ಲಾನನ್ನು ಹತ್ತಾರು ಬಾರಿ ಬರೆದ. ಏನೇನೂ ಅರಿಯದ ಹಳ್ಳಿಯಿಂದ ಬಂದಿದ್ದ ಹೆಣ್ಣು ಬಲು ಉತ್ಸಾಹದಿಂದ ಸಲಹೆಗಳನ್ನು ನೀಡುತ್ತಿದ್ದಳು. ಕಚೇರಿಗೇನೋ ಕೆಲಸಕ್ಕೆ ಹೋಗಿ ಬರುತ್ತಿದ್ದ. ಸರಕಾರೀ ಕಚೇರಿಯಾದ್ದರಿಂದ ಹೇಗೋ ತಳ್ಳಿಕೊಂಡು ಹೋಗುತ್ತಿದ್ದ. ಏಕೆಂದರೆ ಕಚೇರಿಯಲ್ಲಿ ಅವ ಮಾಡುತ್ತಿದ್ದ ಕೆಲಸವೆಂದರೆ, ಎಲ್ಲಿ ಇಟ್ಟಿಗೆ ಕಮ್ಮಿದರದಲ್ಲಿ

ದೊರಕುತ್ತದೆ ; ಎಲ್ಲಿ ಸಿಮೆಂಟನ್ನು ಗಿಟ್ಟಿಸಬಹುದು ; ಎಲ್ಲಿ ಕಬ್ಬಿಣದ ಕಂಬಿಗಳು ದೊರಕುತ್ತವೆ ; ಮತ್ತೆಲ್ಲಿ ಅಗತ್ಯಬಿದ್ದರೆ ಸಾಲವು ಹುಟ್ಟಬಹುದು ; ಇವನ್ನೇ. ಗೃಹಪ್ರವೇಶವನ್ನು ಮಾಡಿ, ಲೆಕ್ಕಗಳನ್ನು ಸರಿಗೂಡಿಸಿ ಫೈಸಲ್ ಮಾಡುವತನಕ, ಮನೆಯ ವಿವರಗಳು ಹೊರತು ಮತ್ತೆ ಯಾವುದೂ ಅವನ ಮನಸ್ಸಿನಲ್ಲಿ ಸುಳಿಯುತ್ತಿರಲಿಲ್ಲ. ಈ ಅವಧಿಯಲ್ಲಿ ಯಾರು ಮಂತ್ರಿಗಳಾದರು, ಯಾವ ಗಣ್ಯರು ನೆಗೆದು ಬಿದ್ದರು. ಯಾವ ಊರಿನಲ್ಲಿ ಪ್ಲೇಗಿನ ಪಿಡುಗು ಕಾಡಿತು ; ಯಾವ ಸಿನಿಮಾ ಹೀರೋ ಯಾವ ಚಿಟ್ಟೆ ಹುಳವನ್ನು ಮದುವೆಯಾದ ; ಇದಾವ ಸುದ್ದಿಯೂ ಅವನಿಗೆ ತಿಳಿಯಲೇ ಇಲ್ಲ. ದಿನಪತ್ರಿಕೆಯನ್ನು ಓದಲಿಲ್ಲ. ಆಕಾಶವಾಣಿಯನ್ನು ಹಚ್ಚಲಿಲ್ಲ. ಕಡೆಗೆ ಟೆಸ್ಟ್ ಸ್ಕೋರ್ ಕೂಡ ಅವನ ಗಮನಕ್ಕೆ ಬರಲೇ ಇಲ್ಲ. ಮನೆ, ಮನೆ, ಮನೆ, ಇದೇ ಅವನ ಮನಸ್ಸನ್ನು ತುಂಬಿಕೊಂಡಿತ್ತು. ದೈನಂದಿನ ಕೆಲಸಗಳನ್ನು ಅವ ಮಾಡುತ್ತಿದ್ದ. ದಿಟ. ಆದರೆ ಯಾಂತ್ರಿಕವಾಗಿ. ಮನಸ್ಸೆಲ್ಲಾ ಮನೆ ಮಯವಾಗಿತ್ತು.

ಬಾಹ್ಯ ಪ್ರಪಂಚದಲ್ಲಿ, ಸ್ವಾರ್ಥಿಯಾದ, ಆಸೆಯ ಪೂರೈಕೆಗೆ ಅವನ ಮನಸ್ಸು ಮೀಸಲಾಗಿತ್ತು. ಮನಸ್ಸಿನ ಇಂತದೇ ಸ್ಥಿತಿಯು, ಯಾವುದಾದರೂ ಪವಿತ್ರವಾದ ಕಲ್ಪನೆಗೆ ಮೀಸಲಾದರೆ ಅದನ್ನು ಒಂದು ರೀತಿಯ ಧಾರಣ ಎನ್ನಬಹುದು.

* * *

**ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೇ, ನೀವು ಕಾಣಿರೆ?**
**ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ ?**
**ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ ?**
**ಕೊಳನ ತಡಿಯೊಳಾಡುವ ಹಂಸಗಳಿರಾ, ನೀವು ಕಾಣಿರೆ, ನೀವು ಕಾಣಿರೆ?**
**ಗಿರಿಗಹ್ವರದೊಳಾಡುವ ನವಿಲುಗಳಿರಾ ನೀವು ಕಾಣಿರೆ, ನೀವು ಕಾಣಿರೆ?**
**ಚೆನ್ನಮಲ್ಲಿಕಾರ್ಜುನನೆಲ್ಲಿಹನೆಂದು ನೀವು ಹೇಳಿರೆ, ನೀವು ಹೇಳಿರೆ ?**

ಎಂದು ಮನದಾಳದಿಂದ ನುಡಿದ ಅಕ್ಕಮಹಾದೇವಿಯು, ಚೆನ್ನಮಲ್ಲಿಕಾರ್ಜುನ ಎಂಬ ಇಷ್ಟದೇವನಲ್ಲಿ, ತನ್ನ ಮನಸ್ಸನ್ನು ಐಕ್ಯಗೊಳಿಸಿದ್ದಳು. ಸದಾ, ಶಿವನ ಈ ಮೂರ್ತಿಯನ್ನು, ಧ್ಯಾನಮಾಡುತ್ತಿದ್ದುದರಿಂದ, ಆಕೆಯಾಡಿದ ನುಡಿಗಳು ಚಿರಂಜೀವಿಗಳಾದುವು. ಎಲ್ಲರಂತೆ ಹುಟ್ಟಿಬೆಳೆದ ಹೆಣ್ಣೊಬ್ಬಳು, ಉನ್ನತ ಹಂತದ ಧ್ಯಾನವನ್ನು ಸಾಧಿಸಿಕೊಂಡಳು. ಇಷ್ಟದೇವನೊಂದಿಗೆ ಸಮಾಧಿ ಸ್ಥಿತಿಯನ್ನು

ಹೊಂದಿದಳು. ಅಂದರೆ 'ಸಂಯಮ'ದ ಪರಿಣಾಮವು ಜೀವಂತ ವ್ಯಕ್ತಿಯಲ್ಲಿ ಸಿದ್ಧಿಸಿದುದನ್ನು ಅಕ್ಕಮಹಾದೇವಿಯ ಬಾಳಚರಿತ್ರೆಯಲ್ಲಿ ಕಾಣಬಹುದು.

ಧಾರಣ, ಧ್ಯಾನ, ಸಮಾಧಿ ಇವುಗಳು ಅತ್ಯಂತ ಲಘು ಪ್ರಮಾಣದಿಂದ ಅತ್ಯುನ್ನತ ಹಂತದವರೆಗೂ, ಮಾನವನ ಜೀವನದಲ್ಲಿ ಸಾಧ್ಯವಾಗುತ್ತದೆ ಎಂದು ಸ್ಪಷ್ಟವಾಯಿತು. 'ಸಂಯಮ'ವು ಕೇವಲ ಶುಷ್ಕ ಮನೋವಿಶ್ಲೇಷಣೆಯು ಮಾತ್ರವಲ್ಲ.

ನಿತ್ಯಜೀವನದಲ್ಲಿ, ಧಾರಣ, ಧ್ಯಾನಗಳನ್ನು, ಅವುಗಳ ಪರಿಣಾಮಗಳನ್ನು ಕಾಣಬಹುದು. ವಿಜ್ಞಾನದ ಯಾವುದಾದರೂ ಒಂದು ಶಾಖೆಯಲ್ಲಿ, ಸಮಸ್ಯೆಯೊಂದರ ವಿಶ್ಲೇಷಣೆಗಾಗಿ ಸಂಶೋಧನೆಯನ್ನು ನಡಸುತ್ತಿರುತ್ತಾನೆ. ಆ ವೈಜ್ಞಾನಿಕ ಸಮಸ್ಯೆಯು ಪರಿಹಾರವಾಗುವತನಕ, ಮನಸ್ಸು ತವಕಪಡುತ್ತಿರುತ್ತದೆ. ಸಮಸ್ಯೆಯೇ ಅವನನ್ನು ಸೆರೆಹಿಡಿದಿರುತ್ತದೆ, ಪಿಶಾಚಿಯಂತೆ. ಆ ಹಂತದಲ್ಲಿ ಅವನು ಸಮಸ್ಯೆಯನ್ನು ಎದುರಿಸುತ್ತಿದ್ದಾನೆ ಎನ್ನುವುದಕ್ಕಿಂತ, ಸಮಸ್ಯೆಯು ಅವನನ್ನು ಹಿಡಿದಿದೆ ಎನ್ನುವುದು ಉಚಿತ. ಮನಸ್ಸು ಧಾರಣಾವಸ್ಥೆಯಲ್ಲಿದೆ ಎನ್ನಬಹುದು.

ಸಮಸ್ಯೆಯು ಪರಿಹಾರವಾಯಿತು. ಸ್ಫೂರ್ತಿಯ ಮಿಂಚಿನಿಂದ ಪರಿಹಾರವಾಯಿತು. ಆನಂತರ ತಾನು ಕಂಡುಹಿಡಿದುದನ್ನು ವೈಚಾರಿಕವಾಗಿ ಸಿದ್ಧಾಂತ ಮಾಡಬೇಕು. Research thesis ಅನ್ನು ಬರೆಯಬೇಕು. ಆಗ ಕುಳಿತ ಪೀಠಕ್ಕೆ ಅಂಟಿಕೊಂಡು ಬರೆಯತೊಡಗುತ್ತಾನೆ. ಆಗ ಅವನ ಆತುರ, ಅವಸರಕ್ಕೆ ಮಿತಿಯೇ ಇಲ್ಲ. ಊಟ ಬೇಡ, ತಿಂಡಿ ಬೇಡ. ಭದ್ರವಾಗಿ ಕುಳಿತು ತನ್ನ ಸಿದ್ಧಾಂತವನ್ನು ಬರೆದು ಮುಗಿಸುವ ತನಕ ಇತರ ಯಾವ ಯೋಚನೆಗಳೂ ಅವನ ಬಳಿ ಸುಳಿಯುವುದಿಲ್ಲ.

ಮನಸ್ಸು ಧ್ಯಾನಾವಸ್ಥೆಯಲ್ಲಿದೆ ಎನ್ನಬಹುದು.

ಆದರೆ ವಿಜ್ಞಾನಿಯ ಈ ಎರಡೂ ಅವಸ್ಥೆಗಳು ಲೌಕಿಕ ವಿಷಯಗಳಿಗೆ ಸಂಬಂಧವನ್ನು ಹೊಂದಿದವು. ತಾನು ಕಂಡುಹಿಡಿದೆ ಎನ್ನುವ ಹೆಮ್ಮೆಯ ಸ್ವಾರ್ಥವನ್ನು ಮರೆತರೆ, ವೈಯಕ್ತಿಕವಾಗಿ ಮತ್ತೆ ಯಾವ ಸ್ವಾರ್ಥ ಉದ್ದೇಶವೂ ಅವನಿಗಿರಬೇಕಾಗಿಲ್ಲ. ಸಮಸ್ಯೆ ಮತ್ತು ಅದರ ಪರಿಹಾರವು ಅವನ ವೈಯಕ್ತಿಕ ಬಾಳಿಗೆ ಅನಗತ್ಯ. ಆದರೂ ಹೆಮ್ಮೆಯು, ತುಸುಮಟ್ಟಿಗಾದರೂ ಇರುವುದರಿಂದ, ಹಾಗೂ ಧಾರಣಧ್ಯಾನಗಳು ಸಂಪೂರ್ಣವಾಗಿರದೆ ಇರುವುದರಿಂದ, ಸಮಾಧಿಯ ಸ್ಥಿತಿಯನ್ನು ಮನಸ್ಸು ಪಡೆಯುವುದಿಲ್ಲ. ಬಹಿರ್ಲೋಕದ ಪ್ರಜ್ಞೆಯನ್ನು ಸಂಪೂರ್ಣವಾಗಿ ತಾತ್ಕಾಲಿಕವಾಗಿಯಾದರೂ ಕಳೆದುಕೊಳ್ಳುವುದಿಲ್ಲ.

ಮಾರಿಯಮ್ಮ ಎಂಬ ದುರ್ಗಾದೇವಿಯ ಒಂದು ರೂಪು ಇದ್ದೇ ಇದೆ.

ತಪ್ಪು ಮಾಡಿದರೆ ಕ್ರೂರವಾಗಿ ಶಿಕ್ಷಿಸುತ್ತದೆ. ಆ ದೇವಿಗೆ ಸಂತುಷ್ಟಿಯಾದರೆ ಅನುಗ್ರಹಿಸುತ್ತಾಳೆ ಎಂದು ಹಲವರು ನಂಬಿರುತ್ತಾರೆ. ವಿಚಾರಪರರು ಎಂದವರನ್ನು ಹೇಳುವಂತಿಲ್ಲ. ಆದರೆ ಅವರನ್ನೂ ಅವರ ಮನಸ್ಸು ನಡಸುತ್ತದೆ. ಅಂತಹವರು ಪೂರ್ಣ ನಂಬುಗೆಯಿಂದ ಮಾರಿಯಮ್ಮನಿಗೆ ತಾವು ತಿಳಿದ ರೀತಿಯಲ್ಲಿ ಪೂಜೆಯನ್ನು ಹಾಕುತ್ತಾರೆ. ಅವರ ಪೂಜಾ ವಿಧಾನಗಳಲ್ಲಿ ವಿಗ್ರಹದ ಮುಂದೆ ತಮಟೆಯ ತಾಳಕ್ಕೆ ಸರಿಯಾಗಿ ಕುಣಿಯುವುದೂ ಒಂದು. ಹೀಗೆ ಕುಣಿಯುವಾಗ ಅವರ ಮನಸ್ಸು, ತಮ್ಮ ಇಷ್ಟದೇವತೆಯಲ್ಲಿ ಧಾರಣ, ಧ್ಯಾನವನ್ನು ಮಾಡಿರುತ್ತದೆ. ಆ ರೀತಿ ಪೂಜಾ ಕುಣಿತವನ್ನು ಮಾಡದಿದ್ದರೆ, ಕ್ರೂರ ಶಿಕ್ಷೆಯನ್ನು ಅನುಭವಿಸಬೇಕಾಗಬಹುದು ಎಂಬ ಮೂಲಭೂತ ಭಯವು, ಧಾರಣ, ಧ್ಯಾನಗಳನ್ನು ಪ್ರಚೋದಿಸಿರಬಹುದು. ಪ್ರಚೋದನೆಯು ಯಾವುದೇ ಆಗಿರಲಿ, ಧಾರಣ ಧ್ಯಾನಗಳು ಅಲ್ಪಮಟ್ಟದ್ದೇ ಆಗಿರಲಿ, ಅವರುಗಳೂ, ಒಂದು ಹಂತದಲ್ಲಿ ಒಮ್ಮೊಮ್ಮೆ, ಆವೇಶ ಬಂದವರಂತೆ ಕುಣಿದು, ಸ್ವಲ್ಪಕಾಲ ಪ್ರಜ್ಞಾಹೀನರಾಗಿ ಬಿದ್ದು ಬಿಡುತ್ತಾರೆ. ಆ ಅವಧಿಯಲ್ಲಿ ಅವರು ಸಮಾಧಿಸ್ಥಿತಿಯಲ್ಲಿರುತ್ತಾರೆಯೋ ಇಲ್ಲವೋ ಅದನ್ನು ಯೋಗಸೂತ್ರಗಳಲ್ಲಿ ಹೇಳಿಲ್ಲ. ದೇಹಾಟೋಪವಿಲ್ಲದೆ, ಸ್ಥಿರವಾದ ಆಸನದಲ್ಲಿ ಕುಳಿತು, ಉಸಿರಾಡುವುದನ್ನು ಹತೋಟಿಯಲ್ಲಿಟ್ಟುಕೊಂಡು, ಸ್ವಪ್ರಯತ್ನದಿಂದ, ಧಾರಣ, ಧ್ಯಾನವನ್ನು ಅಭ್ಯಾಸ ಮಾಡಿದರೆ, ಸೂಕ್ತ ಕಾಲದಲ್ಲಿ ಸಮಾಧಿಸ್ಥಿತಿಯು ದೊರೆಯುತ್ತದೆ, ಎನ್ನುತ್ತದೆ ಯೋಗಸೂತ್ರಗಳು. ತದ್ವಿರುದ್ಧವಾದುದು ಮಾರೀ ಕುಣಿತ. ಆದರೆ ಫಲಿತಾಂಶದಲ್ಲಿ, ಬಹಿರ್ಲೋಕ ಪ್ರಜ್ಞೆಯು ಎರಡೂ ಸಾಧನೆಗಳಿಂದ ಸ್ವಲ್ಪಕಾಲ ತಪ್ಪಿಹೋಗಿರುತ್ತದೆ.

ಮೂರ್ಛೆಯ ರೋಗದಲ್ಲಿ ಕೂಡ ದೇಹದ ಅಟಾಟೋಪವಿರುತ್ತದೆ. ನಂತರ ಪ್ರಜ್ಞೆಯು ತಪ್ಪಿಹೋಗಿರುತ್ತದೆ. ಬಹಿರ್ಲೋಕದ ಅರಿವು ಇರುವುದಿಲ್ಲ. ಮನಸ್ಸಿನ ಅಂತರ್ಲೋಕದಲ್ಲಿ ಆಗ ಏನು ನಡೆಯುತ್ತಿರುವುದೋ ಅದು ಯಾರಿಗೂ ತಿಳಿಯುವುದಿಲ್ಲ. ಎಚ್ಚರಗೊಂಡ ಮೇಲೆ ರೋಗಿಗಳಿಗೂ ಮನಸ್ಸಿನ ಅಂತರ್ಲೋಕದಲ್ಲಿ ಏನು ಆಯಿತು ಎಂಬುದರ ನೆನಪು ಉಳಿದಿರುವುದಿಲ್ಲ.

ಶಸ್ತ್ರಚಿಕಿತ್ಸೆಯ ಮೊದಲು ಜ್ಞಾನವನ್ನು ತಪ್ಪಿಸಲು ಹಲವಾರು ಔಷಧಿಗಳನ್ನು ಬಳಸುತ್ತಾರೆ. ಜ್ಞಾನವು ತಪ್ಪಿಹೋದಾಗ, ಅವರ ಮನಸ್ಸಿನ ಅಂತರ್ಲೋಕದಲ್ಲಿ ಏನಾಗುತ್ತೋ, ಅದರ ನೆನಪು ಉಳಿದಿರುವುದಿಲ್ಲ.

ಗಾಢನಿದ್ರೆಯಲ್ಲಿ, Delta Sleep ಸ್ಥಿತಿಯಲ್ಲಿ, ಸುಷುಪ್ತ ಎನ್ನುವ ನಿದ್ರೆಯಲ್ಲಿ, ಮನಸ್ಸಿನ ಅಂತರ್ಲೋಕದಲ್ಲಿ ಯಾವ ಅನುಭವವಾಗುತ್ತದೋ ಅದು ಎಚ್ಚರ

ವಾದಮೇಲೆ ಸ್ಮರಣೆಯಲ್ಲಿರುವುದಿಲ್ಲ.

ಆದರೆ ಯೋಗಸೂತ್ರಗಳ ಪ್ರಕಾರ, ಸಮಾಧಿಸ್ಥಿತಿಯನ್ನು ಪಡೆದುಕೊಂಡ ಮೇಲೆ, ಅಂತಹ ಸ್ಥಿತಿಯನ್ನು ಮುಂದುವರೆಸಿದರೆ, ಮನಸ್ಸಿನ ಅಂತರ್ಲೋಕದಲ್ಲಿ ಅನುಭವಿಸಿದುದು, ಎಚ್ಚರಗೊಂಡ ಮೇಲೆ ಸ್ಫುಟವಾಗಿ ಸ್ಮರಣೆಯಲ್ಲಿರುತ್ತದೆ.

ಯೋಗಸೂತ್ರಗಳಲ್ಲಿ ಈ ವಿಷಯವನ್ನು ಹೇಳಿರುವುದರ ಜತೆಗೆ, ಹಲವಾರು ಮನನಿಗರು ಮನಸ್ಸಿನ ಅಂತರ್ಲೋಕದಲ್ಲಿ, ಬಹಿರ್ಲೋಕದ ಪ್ರಜ್ಞೆಯಿಲ್ಲದಿರುವಾಗ, ತಾವು ಅನುಭವಿಸಿದುದನ್ನು ಎಚ್ಚರಗೊಂಡ ಮೇಲೆ ವರ್ಣಿಸಿದ್ದಾರೆ. ಇಂತಹ ಮನನಿಗರು ಪ್ರಪಂಚದ ಎಲ್ಲ ಕಡೆಗಳಲ್ಲೂ ಎಲ್ಲ ಕಾಲದಲ್ಲೂ, ವಿರಳವಾಗಿಯಾದರೂ, ಅವತರಿಸಿದ್ದಾರೆ. ಇವರೆಲ್ಲರ ಅನುಭವವೂ ಮೂಲಭೂತವಾಗಿ ಒಂದೇ ಆಗಿದೆ. ಪ್ಲಾಟಿನಸ್, ಮೈಸ್ಟರ್ ಎಕ್‌ಹಾರ್ಟ್, ರಾಮಕೃಷ್ಣ ಪರಮಹಂಸ, ಯೋಗಿ ಅರಬಿಂದೊ, ಪ್ರವಾದಿ ಪೈಗಂಬರ್, ಯೇಸುಸ್ವಾಮೀ ; ಇತ್ಯಾದಿ, ಇತ್ಯಾದಿ.

ಅಂದ ಮೇಲೆ ಸಮಾಧಿ ಸ್ಥಿತಿಯನ್ನು ಮತ್ತು ಅದರ ಮುಂದುವರಿದ ಸ್ಥಿತಿಗಳನ್ನೂ, ವಿಶ್ಲೇಷಿಸಿದ ಯೋಗಸೂತ್ರಗಳು, ಮನೋಶಾಸ್ತ್ರವನ್ನು ಅಭ್ಯಸಿಸುವ ಮತ್ತು ಆ ಶಾಸ್ತ್ರದಲ್ಲಿ ಸಂಶೋಧಿಸುವ ವಿದ್ಯಾರ್ಥಿಗಳಿಗೆ ಬಹಳ ಉಪಯುಕ್ತವಾಗ ಬಹುದು. ಅಂತಹ ಜ್ಞಾನಾಭ್ಯರ್ಥಿಗಳು ಯೋಗ ಸೂತ್ರಗಳನ್ನು ವ್ಯಾಸಂಗ ಮಾಡಬೇಕು. ಖಂಡಿತವಾಗಿ ಸಂಶೋಧನಾ ಮಾರ್ಗದರ್ಶನಗಳೂ ದೊರೆಯುತ್ತವೆ.

**ಪರಿಣಾಮ ತ್ರಯ ಸಂಯಮಾತ್ ಅತೀತಾನ್ ಆಗತ ಜ್ಞಾನಂ**

ನಿರೋಧ ಪರಿಣಾಮ ; ಸಮಾಧಿ ಪರಿಣಾಮ ; ಏಕಾಗ್ರತಾ ಪರಿಣಾಮ; ಇವು ಮೂರೂ ಪರಿಣಾಮಗಳೆಂದು ವಿಶ್ಲೇಷಿಸಲ್ಪಟ್ಟಿದೆ. ಮೂರೂ ಪರಿಣಾಮಗಳಿಗೆ, ಮತ್ತೂ ಮೂರು ವಿಭಾಗಗಳಿವೆ. ಭೌತಿಕವಾದ ವಸ್ತುವು ವ್ಯತ್ಯಾಸವಾದಾಗ ಧರ್ಮ ಪರಿಣಾಮ ; ಅಂತಹ ವಸ್ತುವು ಕಾಲಗತಿಯಲ್ಲಿ ವ್ಯತ್ಯಾಸವಾಗುವುದು ಲಕ್ಷಣ ಪರಿಣಾಮ ; ಇದಕ್ಕೂ ಆನಂತರ ಪರಿಪಕ್ವವಾಗಲೀ ಅಥವಾ ಪರಿಣಾಮ ಹೊಂದಲಿ, ಅಂತಹುದು ಅವಸ್ಥಾ ಪರಿಣಾಮ :

ನಿರೋಧ, ಸಮಾಧಿ, ಏಕಾಗ್ರತಾ ಪರಿಣಾಮಗಳಲ್ಲಿ ; ಸಂಯಮವನ್ನು (ಅಂದರೆ ಧಾರಣ, ಧ್ಯಾನ ಸಮಾಧಿಗಳ ಒಕ್ಕೂಟವನ್ನು) ಸಾಧಿಸಿಕೊಂಡರೆ, ಭೂತಕಾಲದ ಮತ್ತು ಭವಿಷ್ಯಕಾಲದಲ್ಲಾಗುವುದನ್ನು ಅರಿಯಬಹುದು. ವರ್ತಮಾನ ಕಾಲವಂತೂ ತಿಳಿದೇ ಇದೆ.

ಅಂದರೆ ಮನಸ್ಸನ್ನು ಏಕಾಗ್ರವಾಗಿ ಕ್ರೋಡೀಕರಿಸಿ, ಮನಸ್ಸಿನ ಎಳೆಗಳನ್ನೆಲ್ಲಾ

ಒಕ್ಕೂಡಿಸಿ, ನಡಸಿದರೆ ಧಾರಣ, ಧ್ಯಾನ ಮತ್ತು ಸಮಾಧಿಗಳು ಸುಲಭವಾಗಿ ಸಾಧ್ಯವಾಗುವುದು. ಇದಾದಾಗ 'ಸಂಯಮ'ವು ಲಬ್ಧವಾಯಿತು. ಆಗ ವಸ್ತುವಿಷಯಕವಾಗಿ, ಹಿಂದೆ ಈ ರೀತಿಯಲ್ಲಿತ್ತು, ಈಗ ಹೀಗಿದೆ, ಮುಂದೆ ಹೀಗಾಗುತ್ತದೆ ಎನ್ನುವ ತ್ರಿಕಾಲಜ್ಞಾನವು ಹುಟ್ಟುತ್ತದೆ. ಅಂದರೆ ಭೂತ, ವರ್ತಮಾನ, ಭವಿಷ್ಯತ್ ಕಾಲಗಳ ಜ್ಞಾನವು ಉಂಟಾಗುತ್ತದೆ. ಉಂಟಾಗುವುದನ್ನು ವೈಜ್ಞಾನಿಕವಾಗಿಯೂ ಒಪ್ಪಬೇಕು. ಮನಸ್ಸಿನ ಕಾರ್ಯಗಳಲ್ಲಿ ಭೂತಭವಿಷ್ಯತ್ತುಗಳನ್ನು ಅರಿಯುವುದೂ ಒಂದು. ಆದರೆ ಸೂಕ್ತವಾದ ಮನಸ್ಸಿನ ಹತೋಟಿಯು ಅಗತ್ಯ.

**ಶಬ್ದಾರ್ಥ ಪ್ರತ್ಯಯಾನಾಂ ಇತರೇತರ ಅಧ್ಯಾಸಾತ್ ಸಂಕರಸ್ ತತ್ ಪ್ರವಿಭಾಗ ಸಂಯಮಾತ್ ಸರ್ವಭೂತ ಋತಜ್ಞಾನಂ**

ಒಂದು ವಾಕ್ ಅಥವಾ ಮಾತು, ಶಬ್ದದ ಒಂದು ರೀತಿಯ ಸಂಕಲನ. ಉದಾ; ಹಸು, ಈ ಶಬ್ದವನ್ನು ಕೇಳಿದಾಗ, ಹಾಲು ಕೊಡುವ ಸಾಧುವಾದ ಪ್ರಾಣಿ ಎಂಬ ಅರ್ಥವು ಅರಿವಾಗುತ್ತದೆ. ಅದರ ಜತೆಯಲ್ಲಿ ಹಸುವಿನ ಆಕಾರ, ರೂಪ, ದೇಹರಚನೆ, ಅದರ ನಡವಳಿಕೆ ಇತ್ಯಾದಿಗಳೆಲ್ಲವೂ ಮನಸ್ಸಿನಲ್ಲಿ ಸ್ಫುಟವಾಗಿ ತಿಳಿಯುತ್ತದೆ. ಶಬ್ದ, ಅರ್ಥ, ಅದರಿಂದುಂಟಾದ ಜ್ಞಾನವನ್ನು ಉಂಟುಮಾಡುತ್ತದೆ.

ಶಬ್ದ, ಅರ್ಥ ಮತ್ತು ಜ್ಞಾನ ಇವುಗಳನ್ನು ಚಿತ್ತದ 'ಸಂಯಮ'ದಿಂದ ಬೇರೆ ಬೇರೆ ಮಾಡಿದರೆ, ಆಗ ಯಾವ ಪ್ರಾಣಿಯು ಉಲಿದ ಶಬ್ದವನ್ನು ಅದರ ಅರ್ಥ ಮತ್ತು ಜ್ಞಾನದೊಂದಿಗೆ ವಿವರವಾಗಿ ತಿಳಿಯಲು ಸಾಧ್ಯ. ಅಂದರೆ ಇರುವೆಗಳು ಶಬ್ದದ ಮೂಲಕ ಸಂಪರ್ಕವನ್ನು ಕಲ್ಪಿಸಿಕೊಂಡರೆ, ಅಂತಹ ಶಬ್ದಗಳನ್ನು ಇರುವೆಗಳ ಭಾಷೆ ಎನ್ನಬೇಕು. ಚಿತ್ತದ 'ಸಂಯಮ'ವನ್ನು ಪಡೆದುಕೊಂಡವರು ಪ್ರಾಣಿಗಳ ಭಾಷೆಯನ್ನು ತಿಳಿಯುತ್ತಾರೆ ಎನ್ನುವುದು ವೈಜ್ಞಾನಿಕವಾಗಿ ಸಾಧ್ಯ. ಆದರೆ ಹಾಗೆ ಸಾಧಿಸಿಕೊಂಡ ಮಾನವರನ್ನು ನಾವು ಕಂಡಿಲ್ಲ. ಕಟ್ಟುಕತೆಗಳಲ್ಲಿ ಕೇಳಿದ್ದೇವೆ. ಅಂದಮಾತ್ರಕ್ಕೇ ಮನಸ್ಸು ಅಥವಾ ಅದರ ಶೂನ್ಯಸ್ಥಿತಿಯಲ್ಲಿ, ಪ್ರಾಣಿಗಳ ಭಾಷೆಯನ್ನು ತಿಳಿಯಬಹುದು ಎನ್ನುವುದನ್ನು ಒಪ್ಪಿಕೊಳ್ಳದಿದ್ದರೂ, ನಿರಾಕರಿಸುವಂತೆಯೂ ಇಲ್ಲ.

**ಸಂಸ್ಕಾರ ಸಾಕ್ಷಾತ್ ಕರಣಾತ್ ಪೂರ್ವಜಾತಿ ಜ್ಞಾನಂ**

'ಸಂಯಮ'ದ ಮೂರನೆಯ ಸಿದ್ಧಿ ಎಂದರೆ, ಪೂರ್ವಜನ್ಮದ ಸ್ಮರಣೆಯನ್ನು ಪಡೆಯುವುದು. ಹುಟ್ಟುಗುಣಗಳು ಎನ್ನುವುದು Hereditary Characteristics ಎನ್ನುವ ಅರ್ಥವನ್ನು ನೀಡುತ್ತದೆ. ಇಂದಿನ ಮಾನವ, ಸಹಸ್ರಾರು ವರ್ಷಗಳ ಹಿಂದೆ ಒಂದು ತೆರನ ಮರ್ಕಟ, Chimpanzee ಆಗಿದ್ದ. ಅದಕ್ಕೆ ಸಹಸ್ರಾರು

ವರ್ಷಗಳ ಹಿಂದೆ ಸಸ್ತನಿಗಳ ಜಾತಿಯ ಪ್ರಾಣಿಯಾಗಿದ್ದ. ಅದಕ್ಕೂ ಲಕ್ಷಾಂತರ ವರ್ಷಗಳ ಹಿಂದೆ ಖಗ ಮತ್ತು ಉರಗಗಳಾಗಿದ್ದ. ಅದಕ್ಕೂ ಮೊದಲು ಕ್ರಿಮಿಕೀಟಗಳಾಗಿದ್ದ. ಎಲ್ಲದಕ್ಕೂ ಮೊದಲು ಜೀವವು ಪ್ರಾರಂಭವಾದಾಗ, ಜಂಗಮವಾಗಿದ್ದಾಗ, ಅಮೀಬಾ ಇತ್ಯಾದಿ ಒಂದು ಸೆಲ್ಲಿನ ಪುಟಾಣಿ ಜೀವಿಯಾಗಿದ್ದ. ಅದಕ್ಕೂ ಹಿಂದೆ ನಿರ್ಜೀವಿಯಾಗಿರುವ ವಸ್ತುವಾಗಿದ್ದ. ಇವೆಲ್ಲ ಅವಸ್ಥೆಗಳ ಸ್ಮರಣೆಯು ಮನಸ್ಸಿನ ಯಾವದೋ ಹಗೇವಿನಲ್ಲಿ ಕಣ್ಮರೆಯಾಗಿವೆ. ಮಾನವನ ಇಂದಿನ ಬಾಳಿಗೆ ಆ ಅವಸ್ಥೆಗಳ ಸ್ಮರಣೆಯು ಅನಗತ್ಯ. ಅಷ್ಟೇ ಅಲ್ಲ, ತೊಡಕೂ ಆಗುತ್ತದೆ. ಆದಕಾರಣ ಪ್ರಕೃತಿಯ ಪ್ರಗತಿಯು, Natural Evolution ಕೋಟ್ಯಂತರ ವರ್ಷಗಳ ನೆನಪನ್ನು, ಮಾನವನ ಸ್ಮರಣೆಯ ಆಳ ಆಳದಲ್ಲಿರುವ ಹಗೇವುಗಳಲ್ಲಿ ಹುದುಗಿಸಿಟ್ಟಿದೆ. ಭದ್ರವಾಗಿ ಬೀಗವನ್ನು ಹಾಕಿಟ್ಟಿದೆ.

'ಸಂಯಮ'ದಿಂದ, ಧಾರಣ, ಧ್ಯಾನ, ಸಮಾಧಿಗಳ ಒಕ್ಕೂಟವು ಲಬ್ಧವಾದಾಗ ಮಾನವನ ಮನಸ್ಸು ನಿರ್ಮಲವಾಗಿರುತ್ತದೆ. ಲೌಕಿಕವಾಗಿ ನಿರ್ಮಲವಾಗಿರುತ್ತದೆ. ಅಂತಹ ಸತ್–ಪರಿಸ್ಥಿತಿಯಲ್ಲಿ, ಹಗೇವುಗಳಲ್ಲಿ ಶೇಖರಿಸಿಡಲ್ಪಟ್ಟ ಪುರಾತನ ಸನಾತನ ಸ್ಮರಣೆಗಳು, ಹುದುಗಿರಬೇಕಾಗಿಲ್ಲ. 'ಸಂಯಮ'ವನ್ನು ಗಳಿಸಿದ ಮಾನವನಿಗೆ ಅವಾವುದೂ ತೊಡಕುಗಳಾಗುವುದಿಲ್ಲ. ಆದುದರಿಂದ ಅವುಗಳ ಸ್ಮರಣೆಯನ್ನು ಸಂಯಮಿಯು ಉಪದ್ರವವಾಗದೆ ಪಡೆಯಬಲ್ಲ. ನಿರ್ಜೀವಿಯಾದ ಅವಸ್ಥೆಯ ಮೂಲಭೂತವಾದುದನ್ನು ಅರಿಯಬಲ್ಲ. ಜೀವಿಯಾದ ಮೇಲೆ ಪ್ರಗತಿಯು, ಮುಂದು ಮುಂದು ನಡೆದಾಗ, ಹಂತಹಂತದಲ್ಲೂ ತಾನು ಏನು, ಯಾವಾಗ, ಆಗಿದ್ದ. ಯಾವ ಪ್ರಾಣಿಯಾಗಿದ್ದ ಎಂಬುದನ್ನೂ ತಿಳಿಯಬಲ್ಲ. ಇಂತಹ ಬ್ರಹ್ಮಾಂಡದ ಜ್ಞಾನ ಸಂಪಾದನೆಯಿಂದ ಲೌಕಿಕವಾದ ಈ ಮಾನವ ಬಾಳಿಗೆ ಅಡಚಣೆಯೂ ಇಲ್ಲ. ತೊಡಕೂ ಆಗುವುದಿಲ್ಲ. ಆದರೆ ತಾನು, ತನ್ನದು ಎಂಬ ದೃಢವಾದ ಲೌಕಿಕ ಕಲ್ಪನೆಯು ನಿರ್ಮೂಲವಾಗುತ್ತದೆ. ಬ್ರಹ್ಮಾಂಡವೇ ನಾನು ಎನ್ನುವ ವಿಶ್ವಕುಟುಂಬಿಯ ಅರಿವು ಬ್ರಹ್ಮಾಂಡದಲ್ಲೆಲ್ಲಾ ಹರಡುತ್ತದೆ. ಹರಡಿ ಅದರೊಡನೆ ಒಂದಾಗುತ್ತದೆ. ಅ–ದ್ವಿತೀಯವಾಗುತ್ತದೆ.

ಪೂರ್ವಜನ್ಮದ ಸ್ಮರಣೆಯು ಸ್ಫುಟವಾಗಿ, ೭–೮ ವಯಸ್ಸಿನ ಬಾಲಕ ಬಾಲಕಿಯರು. ಸ್ಮರಣೆಯನ್ನು ವಿವರಿಸಿದಾಗ, ಸಂಶೋಧನೆಯಿಂದ, ಆ ಹುಡುಗರಂದುದು ಚಾರಿತ್ರಿಕವಾಗಿ ನಿಜ ಎಂದು ತಿಳಿದಾಗ, ಆಶ್ಚರ್ಯವು ಉಂಟಾಗುತ್ತವೆ. ಏಕೆ ? ಹೀಗಾಗುವುದು ಹೇಗೆ ಸಾಧ್ಯ ? ಎಂದು ಅನಿಸುವುದರಿಂದ. ಆದರೆ 'ಸಂಯಮಿ'ಯ ಅನುಭವ ವಾಕ್ಯಗಳನ್ನು, Natural Evolution ಜತೆಗೆ

ಸಮನ್ವಯಿಸಿದರೆ, ಆಶ್ಚರ್ಯವಾಗುವುದಿಲ್ಲ. ಅರಿವು ವಿಶಾಲವಾಗುತ್ತದೆ. ಹಿರಿಯರ ಭಾಷೆಯಲ್ಲಿ ಬ್ರಹ್ಮಾಂಡ ಮತ್ತು ಪಿಂಡಾಂಡಗಳು, ಐಕ್ಯವಾಗುತ್ತವೆ.

Conscious ; Sub-conscious ; Personal unconcious and total unconsious ಎಲ್ಲವೂ ಮನಸ್ಸಿನ ಸ್ಥಿತಿಗತಿಗಳೂ. ಮನಸ್ಸನ್ನು ಮೆಟ್ಟಿನಿಂತು ವೀಕ್ಷಿಸಿದರೆ, ಅಂದರೆ ಅರಿಯತೊಡಗಿದರೆ, ಇವೆಲ್ಲಾ ಮನಸ್ಸಿನ ಸ್ಥಿತಿಗಳೂ, ಅವಸ್ಥೆಗಳೂ, ಒಂದೇ ಎಂಬ ಅರಿವು ಲಭಿಸುತ್ತದೆ.

ಸಂಯಮಿಯ ಸಾಧನೆಯು, ಈ ಕಡೆ, ಜನ್ಮ ಜನ್ಮಾಂತರದತ್ತ, Focus ಮಾಡಿದಾಗ, ಜನ್ಮ ಜನ್ಮಾಂತರದ ನೆನಪುಗಳು ಸಹಜವಾಗಿ ಎಚ್ಚರಗೊಂಡು, ಅರಿವು ವಿಶಾಲವಾಗುತ್ತದೆ. ಸೀಮಾತೀತ, ಕಾಲಾತೀತವಾದ 'ಅರಿವು' ದೇವರು ಎಂದು ಹೆಸರನ್ನಿಡಿಸಿಕೊಳ್ಳುವುದು, ಸಂಯಮಿಯಾಗಲಾರದ ಕೋಟ್ಯಂತರ ಮಂದಿಗೆ, ನೆಮ್ಮದಿಯನ್ನೂ ಸಮಾಧಾನವನ್ನೂ ತುಸು ಮಟ್ಟಿಗಾದರೂ ನೀಡುತ್ತದೆ. ಈ ತೆರನ ಅರಿವು ಹಂತ ಹಂತವಾಗಿ ಉಂಟಾಗುವುದರಿಂದ, ಹಂತ ಹಂತದ 'ದೇವರ ಕಲ್ಪನೆಯೂ ಸಹಜವಾದುದು. ಮೂವತ್ತು ಮೂರು ಕೋಟಿ ದೇವರುಗಳೂ ನೈಜವಾದುವು. ಸತ್ಯವಾದವು ಆಯಾ ಹಂತದವರಿಗೆ ಅಗತ್ಯವಾದುದು.

**ಪ್ರತ್ಯಯಸ್ಯ ಪರಚಿತ್ತ ಜ್ಞಾನಂ**
**ನತತ್ ಸಾಲಂಬನಂ ತಸ್ಯ ವಿಷಯೀ ಭೂತತ್ವಾತ್**

'ಸಂಯಮಿ'ಯು ಪರರನ್ನು ನೋಡಿದಾಗ, ಅವರುಗಳ ಮನಸ್ಸನ್ನು ಅರಿಯುವನು. ಆದರೆ, ಅವರುಗಳ ಮನಸ್ಸಿನೊಳಗೆ ಇರುವ ಆಲೋಚನೆಗಳನ್ನು ತಿಳಿಯಲಾರ. "Face is the index of the mind" ಎಂಬ ಅರಿವಿನ ನಾಡ ನುಡಿಯು ಪ್ರಸಿದ್ಧವಾದುದು.

ರಾಗದ ಆಕಾರಗಳು ಮತ್ತು ವಿಕಾರಗಳು, ರಾಗ ಪ್ರಚೋದಿತನಾದ ಮಾನವನ ಮುಖದಲ್ಲಿ ಕಾಣಿಸುತ್ತವೆ. ಇದು Obvious. ರೇಗಿರುವ ಗಂಡನ ಮುಖವು ಧುಮುಗುಟ್ಟುತ್ತಿರುತ್ತದೆ. ಅಜ್ಞಾನದಿಂದಾಗಿ, ರೇಗಿಸಿದ ಹೆಂಡತಿಯ ಮುಖವೂ ಧುಮು ಧುಮು ಆಗಿರುತ್ತದೆ. ಆದರೆ ಇಬ್ಬರೂ ಲೌಕಿಕ ಬಾಳನ್ನು ನಡಸಬೇಕು. ನಡಸಲೇಬೇಕು ! 'ನನಗೆ ಹಸಿವಿಲ್ಲ. ಒಂದು ಬಟ್ಟಲು ಮೊಸರನ್ನು ಕೊಡು ಸಾಕು' ಎಂದನ್ನುತ್ತಾನೆ ಗಂಡ. ಸರ್ವಂ ಭಕ್ಷಯಾಮಿ ಎನ್ನುವಂತೆ ಅವನ ಹೊಟ್ಟೆಯು ಉರಿಯುತ್ತಿರುತ್ತದೆ. ಮುಖವನ್ನು ಸಿಂಡರಿಸಿಕೊಂಡು ಬಟ್ಟಲು

ಮೊಸರನ್ನು ಹೆಂಡತಿಯು ತಂದಿಡುತ್ತಾಳೆ. ಅದನ್ನು ಕುಡಿದು ಹೋದಾಗ ಕಲ್ಲಿನ ಹರಳು ಸಿಗುತ್ತದೆ. ಆದುದರಿಂದಲೇ ಒಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲು ಸಿಕ್ಕಿತು ಎನ್ನುವುದು.

ಅಂತಹವರ ಮುಖವನ್ನು ನೋಡಿದರೆ ಸಾಮಾನ್ಯರಿಗೂ ಅವರುಗಳ ಮನಸ್ಸು ರೇಗು ಉದ್ವೇಗಗಳಿಂದ ಕೂಡಿದೆ ಎನ್ನುವುದು ಸ್ಪಷ್ಟವಾಗುತ್ತದೆ. 'ಸಂಯಮಿ'ಗಾದರೋ, ಮುಖವನ್ನು ನೋಡಿದಾಗ ಕಾಣಬರುವ ಕಿಂಚಿತ್ ವ್ಯತ್ಯಾಸಗಳಿಂದಲೂ, ಅವರುಗಳ ಮನಸ್ಸಿನಲ್ಲಿ ಯಾವ ರೀತಿಯ ರಾಗವಿದೆ ಎನ್ನುವುದು ತಿಳಿಯುತ್ತದೆ. ಆದರೆ ಆ ರಾಗ ಭಾವನೆಗೆ ಕಾರಣವಾದ ಮನಸ್ಸಿನಲ್ಲಿರುವ ಒಳ್ಳೆಯದು ಅಥವಾ ಕೆಟ್ಟುದು ಆದ ಆಲೋಚನೆಯು 'ಸಂಯಮಿ'ಗೂ ತಿಳಿಯುವುದಿಲ್ಲ.

**ಕಾಯ ರೂಪ ಸಂಯಮಾತ್ ತತ್ ಗ್ರಾಹ್ಯ ಶಕ್ತಿ ಸ್ಥಂಭೇ ಚಕ್ಷುಃ ಪ್ರಕಾಶ ಸಂಯೋಗೆ, ಅಂತರ್ಧಾನಂ**

ಸಂಯಮವನ್ನು ತನ್ನ ಕಾಯರೂಪದಲ್ಲಿ ಕೇಂದ್ರೀಕರಿಸಿದಾಗ, ಕಣ್ಣುಗಳ ಪ್ರಕಾಶವು ಮತ್ತು ಅದನ್ನು ಗ್ರಹಿಸುವ ಶಕ್ತಿಯು ಇವೆರಡೂ ಒಂದಾಗುವುದರಿಂದ, ಕಾಯರೂಪವು ಇತರರಿಗೆ ಕಾಣಿಸುವುದಿಲ್ಲ. ಅಂದರೆ ಸಂಯಮಿಯು ಅದೃಶ್ಯನಾಗುತ್ತಾನೆ.

ಸಾಧು ಸಂತರ ಜೀವನದಲ್ಲಿ ಹೀಗಾಗುತ್ತದೆ ಎಂಬುದನ್ನು ಕೇಳಿದ್ದೇವೆ. ಆದರೆ ವೈಜ್ಞಾನಿಕವಾಗಿ ಇಂದು ಇದನ್ನು ಊಹಿಸಲು ಅಥವಾ ವಿವರಿಸಲು ಆಗುವುದಿಲ್ಲ.

ಶರೀರದ ಮೇಲೆ ಬೆಳಕು ಬಿದ್ದಾಗ, ಶರೀರದ ಹೊರಪದರದಿಂದ ಹೊರ ಚೆಲ್ಲಿದ ಬೆಳಕು ಇತರರ ಕಣ್ಣಿಗೆ ಬಿದ್ದಾಗ, ನಮ್ಮ ಶರೀರದ ಸ್ವರೂಪವು, ಇತರರಿಗೆ ಕಾಣಿಸುತ್ತದೆ. ಆದರೆ ಶರೀರದ ಹೊರ ಪದರವು ಮೇಲೆ ಬಿದ್ದ ಬೆಳಕನ್ನು ಹೊರ ಚೆಲ್ಲದೆ ಇದ್ದರೆ, ಆಗ ಇತರರಿಗೆ ಕಾಣಿಸುವುದಿಲ್ಲ. ಕಗ್ಗತ್ತಲಲ್ಲಿ ಶರೀರವು ಕಾಣಿಸುವುದಿಲ್ಲ. ಅಂತಹ ಸ್ಥಿತಿಯನ್ನು ನಮ್ಮ ಶರೀರವು 'ಸಂಯಮ'ದ ಕೇಂದ್ರೀಕರಣದಿಂದ ಪಡೆಯುತ್ತದೆ ಎನ್ನುತ್ತಾರೆ, ಋಷಿಗಳು.

**ಏತೇನ ಶಬ್ದಾದಿ ಅಂತರ್ಧಾನ ಮುಕ್ತಂ**

ಮೇಲೆ ಹೇಳಿದ ರೀತಿಯಲ್ಲಿ, 'ಸಂಯಮಿ'ಯು ಶಬ್ದಾದಿಗಳು ಇತರರಿಗೆ ತಿಳಿಯದಂತೆ ಮಾಡಬಹುದು.

ಬೆಳಕಿನಂತೆಯೇ, ಶಬ್ದ, ರಸ, ಗಂಧ ಇತ್ಯಾದಿಗಳನ್ನೂ ಇತರರಿಗೆ

ಅರಿವಾಗದಂತೆ ಮಾಡಬಹುದು. ೨೧ನೇ ಸೂತ್ರವನ್ನು ಒಪ್ಪಿದರೆ ಇದನ್ನೂ ಒಪ್ಪಬೇಕು.

**ಸೋಪಕ್ರಮಂ, ನಿರುಪಕ್ರಮಂಚ ಕರ್ಮ ತತ್ ಸಂಯಮಾತ್**
**ಅಪರಾಂತ ಜ್ಞಾನಂ ಅರಿಷ್ಟೇಭ್ಯೋವಾ**

ಸಂಯಮಿಯು ; ಫಲ ನೀಡುವ ಕರ್ಮ ಮತ್ತು ನೀಡದೆ ಇರುವ ಕರ್ಮ ; ಇವುಗಳಲ್ಲಿ ಸಂಯಮವನ್ನು ಕೇಂದ್ರಿಕರಿಸಿದರೆ, ಮರಣ ಕಾಲವು ತಿಳಿಯುತ್ತದೆ. ಹಾಗೂ ಅರಿಷ್ಟಗಳು ಅಂದರೆ ಅಪಶಕುನಗಳಿಂದಲೂ ತಿಳಿಯಬಹುದು. ಅರಿಷ್ಟಗಳಲ್ಲಿ ದೇಹಕ್ಕೆ ಸಂಬಂಧಿಸಿದ ಆಧ್ಯಾತ್ಮಿಕ ; ಲೋಕಕ್ಕೆ ಸಂಬಂಧಿಸಿದ ಆದಿಭೌತಿಕ, ಮತ್ತು ಅಗೋಚರವಾದ ಲೋಕಗಳಿಗೆ ಸಂಬಂಧಿಸಿದ ಆದಿದೈವಿಕ ಎಂದು ಮೂರು ತೆರಗಳುಂಟಂತೆ.

ಹೃದಯಾಘಾತವಾಗುವಾಗ, ಸಾವು ಸನ್ನಿಹಿತವಾಗಿದೆ ಎಂಬ ತೀವ್ರ ಭಯವು ಮನಸ್ಸಿನ ತುಂಬಾ ಮುತ್ತಿರುತ್ತದೆ. ಮತ್ತೆ ಯಾವ ಲೌಕಿಕ ವಿಚಾರಗಳೂ ಅವನ ಮನಸ್ಸನ್ನು ಅಂಟುವುದಿಲ್ಲ. ಒಂದು ರೀತಿಯಲ್ಲಿ ಅಂತಹ ರೋಗಿಯ ಮನಸ್ಸು, ಧಾರಣ, ಧ್ಯಾನ, ಸಮಾಧಿಯನ್ನು, ಬದುಕು ಸಾವುಗಳಲ್ಲಿ ಸಂಯಮವನ್ನು ಮಾಡಿದೆ ಎನ್ನಬಹುದು.

ಆದರೆ ಸಾವಿನ ಅರಿವು, ರೋಗಿಗಳಲ್ಲಿ ಭಯದಿಂದ ತುಂಬಿರುತ್ತದೆ. ನಿಜವಾಗಿ 'ಸಂಯಮ'ವನ್ನು ಯೋಗ ಮಾರ್ಗದಲ್ಲಿ ಸಾಧಿಸಿದವನಿಗೆ ಸಾವಿನ ಅರಿವು, ಯಾವ ಭಯವನ್ನೂ ಉಂಟುಮಾಡುವುದಿಲ್ಲ. ಸಮಾಧಾನ ಮನಸ್ಸಿನಿಂದಲೆ ಇರುತ್ತಾನೆ.

ಮಿಕ್ಕ ಅರಿಷ್ಟಗಳು, ಒಂದೊಂದು ಸಮಾಜವೂ ಕಾಲಾನುಕಾಲದಿಂದ ರೂಢಿಸಿಕೊಂಡು ಬಂದ ಅಪಶಕುನ ಎಂಬ ನಂಬಿಕೆಗಳು ಎಂದಷ್ಟೇ ಹೇಳಬೇಕು; ಇಂದಿನ ವೈಜ್ಞಾನಿಕ ಹಂತದಲ್ಲಿ.

**ಮೈತ್ರಾದಿಷು ಬಲಾನಿ**

ಮೈತ್ರಿ ; ಮುದಿತ ; ಕರುಣ ; ಉಪೇಕ್ಷೆ, ಎಂಬಿವುಗಳಲ್ಲಿ 'ಸಂಯಮ'ವನ್ನು ಕ್ರೋಡೀಕರಿಸಿದರೆ, ಆ ಗುಣಗಳೆಲ್ಲವೂ ಬಲಗೊಂಡು ಅಭಿವೃದ್ಧಿಯಾಗುತ್ತದೆ. ಸಂಯಮಿಗೆ ಸ್ವಾರ್ಥದ ಹಾಗೂ ಲೌಕಿಕದ ಆಸೆಗಳಿರುವುದಿಲ್ಲ. ಅಂದಮೇಲೆ ಮೈತ್ರಾದಿಗಳು ಬಲಗೊಳ್ಳಲೇಬೇಕು.

**ಬಲೇಷು ಹಸ್ತಿ ಬಲಾನಿ**

ಆನೆ, ಸಿಂಹ, ಹುಲಿ ಮೊದಲಾದುವುಗಳ ಬಲದಲ್ಲಿ 'ಸಂಯಮ'ವನ್ನು

ಮಾಡಿದರೆ ಆ ತೆರನ ಬಲವು ಲಭಿಸುತ್ತದೆ.

ಉನ್ಮಾದಾವಸ್ಥೆಯಲ್ಲಿರುವ ಜನರು ಅಸಾಮಾನ್ಯವಾದ ಶಕ್ತಿ ಪ್ರದರ್ಶನವನ್ನು ಮಾಡುತ್ತಾರೆ. ಆವೇಶ ಬಂದವರೂ ಅತಿಬಲವನ್ನು ಪ್ರದರ್ಶಿಸುತ್ತಾರೆ. ಹುಲಿಯ ಬಾಯಿಗೆ ಸಿಕ್ಕಿದ್ದೇನೆ, ಎಂದು ಹೆದರಿ ತತ್ಕ್ಷಣ ಜೀವವನ್ನು ಹೇಗಾದರೂ ಉಳಿಸಿ ಕೊಳ್ಳಬೇಕು ಎಂದು ಉನ್ಮಾದಾವಸ್ಥೆಗೆ ಏರಿದ ಹಲ ಕೆಲವರು, ಹುಲಿಯೊಂದಿಗೆ ಸೆಣಸಾಡಿ, ಅದನ್ನು ಕೊಂದ ನಿದರ್ಶನಗಳು, ಅತಿ ವಿರಳವಾದರೂ, ದೊರೆತಿವೆ. ಸಂಯಮಿಗೂ ಇದು ಸಾಧ್ಯ ಎಂದು ನಂಬಬಹುದು. ಆದರೆ ಯೋಗ ಸಾಧನೆಯಿಂದ ಮೈತ್ರಿಯನ್ನು ಬಲಪಡಿಸಿಕೊಂಡ, ವೈರತ್ವವನ್ನು ನಿರ್ಮೂಲ ಮಾಡಿಕೊಂಡ, ಸಂಯಮಿಯನ್ನು, ಹುಲಿ ಸಿಂಹ ಇತ್ಯಾದಿ ಸ್ವಾಭಾವಿಕವಾಗಿ ಕ್ರೂರಿಗಳಾದ ಪ್ರಾಣಿಗಳು, ಹಿಂಸಿಸಹೋಗುವುದಿಲ್ಲ. ಬದಲು ಅಂತಹವರ ಬಳಿ ಸಾಧುವಾಗುತ್ತದೆ ಎಂಬುದನ್ನು ಕೇಳಿದ್ದೇವೆ. ಸಂಯಮಿಯ ಅಮೋಘ ಬಲದ ಸಹಜ ಅರಿವಿನಿಂದ ವನ್ಯ ಮೃಗಗಳು, ಸಾಧುವಾಗುತ್ತವೆಯೋ? ಏನೋ? ಯಾರು ಬಲ್ಲರು?

**ಪ್ರವೃತ್ತಿ ಆಲೋಕ ನ್ಯಾಸಾತ್ ಸೂಕ್ಷ್ಮ ವ್ಯವಹಿತ ವಿಪ್ರಕೃಷ್ಟ ಜ್ಞಾನಂ**

ಅಣುಗಳಂತೆ ಸೂಕ್ಷ್ಮವಾದ ; ಭೂಗರ್ಭದಲ್ಲಿದ್ದು ಅಗೋಚರವಾದ ; ಬಹಳ ದೂರದಲ್ಲಿ ಎಲ್ಲಿಯೋ ಅವ್ಯಕ್ತವಾಗಿರುವ, ವಸ್ತುಗಳ ಜ್ಞಾನವನ್ನು 'ಸಂಯಮಿ'ಯು ಪಡೆಯುತ್ತಾನೆ ; ಸಂಯಮವನ್ನು ಅವುಗಳತ್ತ ಕ್ರೋಡೀಕರಿಸಿದಾಗ.

ಅತಿ ದೂರದಲ್ಲಿರುವ ಚಂದ್ರನನ್ನು, ದೂರದರ್ಶಕ ಯಂತ್ರದಿಂದ, ಹತ್ತಿರ ಬರುವಂತೆ ಮಾಡಿಕೊಂಡು ಸೂಕ್ಷ್ಮ ವಿವರಗಳನ್ನು ತಿಳಿಯುತ್ತೇವೆ. ಅತಿ ಸೂಕ್ಷ್ಮವಾದ ವಸ್ತುಗಳನ್ನು ಮೈಕ್ರೋಸ್ಕೋಪ್ ನೆರವಿನಿಂದ ಬಲು ದೊಡ್ಡದಾಗಿ ಕಾಣುವಂತೆ ಮಾಡುತ್ತೇವೆ. ಇವೆರಡು ಸಾಧನೆಗಳಿಗೂ ಬೆಳಕು ಮೂಲವಾದುದು. ಅಂತೆಯೇ ಬಲು ದೂರದಲ್ಲಾದ ಶಬ್ದಗಳನ್ನು ರೇಡಿಯೋ ಸಾಧನದ ಮೂಲಕ ಸ್ಪಷ್ಟವಾಗಿ ಕೇಳುತ್ತೇವೆ. ಅತಿ ಸೂಕ್ಷ್ಮವಾದ ಶಬ್ದವನ್ನು ಆ್ಯಂಪ್ಲಿಫೈಯರ್ ಸಾಧನದಿಂದ ಲಕ್ಷಣವಾಗಿ ಕೇಳುತ್ತೇವೆ. ಶಬ್ದ ಬೆಳಕು ಇತ್ಯಾದಿಗಳಂತೆ ಎಲ್ಲಿಯೋ ಉತ್ಪಾದಿಸಿದ ವಿದ್ಯುತ್ ಶಕ್ತಿಯನ್ನು ಮತ್ತೆಲ್ಲೋ ದೂರದಲ್ಲಿ ಬಳಸುತ್ತೇವೆ.

ಈ ತೆರನ ಶಕ್ತಿಗಳಿಗಿಂತ, ಮನಸ್ಸು ಎಂಬುದು ವಿಭಿನ್ನವಾದುದು, ಪ್ರತ್ಯೇಕವಾದ ಶಕ್ತಿ. ಇದನ್ನೂ ಮನಸ್ಸಿನ ಸಾಧನೆಯಿಂದ, 'ಸಂಯಮ'ದಿಂದ, ಬಳಸಿ, ಸೂಕ್ಷ್ಮವಾದುವುಗಳನ್ನು ತಿಳಿಯಬಹುದು. ಅಗೋಚರವಾದುದನ್ನು ಅರಿಯಬಹುದು ; ಅವ್ಯಕ್ತವಾಗಿರುವುದನ್ನು ಕಾಣಬಹುದು. ವೈಜ್ಞಾನಿಕವಾಗಿ

ಇದು ಸಾಧ್ಯ ಎನ್ನಬೇಕು. 'ಸಂಯಮ'ವನ್ನು ಸಾಧಿಸುವುದು ಮಾತ್ರ ಕಠಿಣ.

**ಭುವನ ಜ್ಞಾನಂ ಸೂರ್ಯೋಃ ಸಂಯಮಾತ್**

**ಚಂದ್ರೇ ತಾರಾ ವ್ಯೂಹ ಜ್ಞಾನಂ**

**ಧ್ರುವೇ ತತ್ ಗತಿ ಜ್ಞಾನಂ**

ಸೂರ್ಯನಲ್ಲಿ, ಚಂದ್ರನಲ್ಲಿ, ಧ್ರುವ ನಕ್ಷತ್ರದಲ್ಲಿ, 'ಸಂಯಮ'ವನ್ನು ಮಗ್ನ ಮಾಡಿದರೆ ಭೂಲೋಕ ಇತ್ಯಾದಿ ಹದಿನಾಲ್ಕೂ ಲೋಕಗಳ ಜ್ಞಾನವನ್ನು ; ನಕ್ಷತ್ರ ಸಮೂಹಗಳ ಜ್ಞಾನವನ್ನೂ ; ಗ್ರಹಗಳ ಮತ್ತು ನಕ್ಷತ್ರಗಳ ಸಂಚಾರದ ರೀತಿಯ ಜ್ಞಾನವನ್ನೂ ಪಡೆಯಬಹುದು.

ಮನಸ್ಸು ಎಂಬುದು ಒಂದು ತೆರನ ಶಕ್ತಿ. ಭೌತಶಾಸ್ತ್ರದ ನಿಯಮಗಳಿಗೆ ಹೊರತಾದುದು. ಈ ಶಕ್ತಿಯನ್ನು ಕ್ರೋಡೀಕರಿಸಿ, 'ಸಂಯಮ'ವನ್ನು ಸಾಧಿಸಿದರೆ, ಮನಸ್ಸಿನ ಅಂಶವೊಂದು ಜಿಗಿದು, ಬೆಳಕಿನ ವೇಗಕ್ಕಿಂತ ಬಹಳ ಹೆಚ್ಚಾಗಿ ರಭಸದಿಂದ ದೌಡುತ್ತದೆ. ಆಗ, ಸೂರ್ಯ, ಚಂದ್ರ, ನಕ್ಷತ್ರಗಳ ಅರಿವು, ಸುಲಭವಾಗಿ ಉಂಟಾಗುತ್ತದೆ. ವೈಜ್ಞಾನಿಕವಾಗಿ ಇದು ಸಮರ್ಥನೀಯ.

**ನಾಭಿ ಚಕ್ರೇ ಕಾಯ ವ್ಯೂಹ ಜ್ಞಾನಂ**

**ಕಂಠ ಕೂಪೇ ಕ್ಷುತ್ ಪಿಪಾಸ ನಿವೃತ್ತಿಃ**

**ಕೂರ್ಮ ನಾಢ್ಯಾಂ ಸ್ಥೈರ್ಯಂ**

**ಮೂರ್ಧ ಜ್ಯೋತಿಷಿ ಸಿದ್ಧ ದರ್ಶನಂ**

ದೇಹದ ಹಲವು ಭಾಗಗಳಲ್ಲಿ 'ಸಂಯಮ'ವನ್ನು ಕೇಂದ್ರೀಕರಿಸಿದರೆ, ಆಯಾ ದೇಹಭಾಗಗಳ ಕಾರ್ಯಕ್ರಮಗಳ ಮೇಲೆ ಸಂಪೂರ್ಣ ಹತೋಟಿಯನ್ನು ಪಡೆಯಲಾಗುವುದು.

ನಾಭಿ ಚಕ್ರದಲ್ಲಿ :–ಮಣಿಪುರವೆಂದೂ ಇನ್ನೊಂದು ಹೆಸರು ; – ಇದರಲ್ಲಿ ಧಾರಣ, ಧ್ಯಾನ, ಸಮಾಧಿಗಳ ಒಕ್ಕೂಟವನ್ನು ಅಂದರೆ ಸಂಯಮವನ್ನು ಸಾಧಿಸಿದರೆ, ಆಗ ಉದರದಲ್ಲಿರುವ ಸಮಸ್ತ ಅಂಗಗಳ ಸ್ವರೂಪವು ಮತ್ತು ಕಾರ್ಯಕ್ರಮಗಳೂ ತಿಳಿಯಲ್ಪಡುತ್ತವೆ. ದೇಹಕಾರ್ಯ ಶಾಸ್ತ್ರದ ಪ್ರಕಾರ ಇದು ಸಾಧ್ಯ.

ಕಂಠ ಕೂಪದಲ್ಲಿ ಸಂಯಮವನ್ನು ಮಾಡಿದರೆ ಹಲವು ಬಾಯಾರಿಕೆಗಳು ನಿವಾರಣೆಯಾಗುವುದು. ಕಂಠಕೂಪ, ಎಂದರೆ ಗಂಟಲಿನ ತಳ ಎನ್ನಬೇಕು. ವೈಜ್ಞಾನಿಕವಾಗಿ ಇದು ಅಸಮರ್ಥನೀಯ. ಇಂದಿನ ಜ್ಞಾನದ ಹಂತದಲ್ಲಿ.

ಆದರೆ ಮೆದುಳಿನ ಬುಡದಲ್ಲಿ ಹೈಪೊಥೆಲಾಮಸ್ ಎನ್ನುವ ಭಾಗದಲ್ಲಿ Third ventricle ಎಂಬ ಸೆರಿಬ್ರೊ ಸ್ಪೈನಲ್ ದ್ರವವು ಕೂಡುವ ಕೂಪದ, ಬಳಿ,

ಇಕ್ಕೆಲೆಗಳಲ್ಲೂ ಕೆಲವು ನರಕೇಂದ್ರಗಳಿವೆ. Hunger ; Thirst ; & Satiety centres ಎಂದು ಕರೆಯುತ್ತಾರೆ. Satiety centre ಅನ್ನು ಯಾವುದೇ ವಿಧಾನದಿಂದಾಗಲೀ ಪ್ರಚೋದಿಸಿದರೆ, ದೇಹಕ್ಕೆ ಆಹಾರದ ಅಗತ್ಯವಿದ್ದರೂ, ಹಸಿವೇ ಆಗುವುದಿಲ್ಲ. ಇದರ ಪರಿಣಾಮದಿಂದಾಗಿ ದೇಹವು ಕೃಶವಾಗುತ್ತದೆ. Anorexia nervosa ತೆರನ ರೋಗಗಳಲ್ಲಿ. ಕ್ಷುತ್ ಪಿಪಾಸೆಗಳ ನಿವಾರಣೆಯು ಆದಂತೆಯೇ ಆಗುತ್ತದೆ. ಕೆಲವು ಮಾನಸಿಕ ಬೇನೆಗಳಲ್ಲಿಯೂ ಹೀಗೇ ಆಗುತ್ತದೆ. ದೇಹವು ತತ್ಕಾರಣ ಕೃಶವಾಗುತ್ತದೆ. ಮೆದುಳಿನ ಬುಡದ ಈ ಪ್ರದೇಶವನ್ನು ಕಂಠರೂಪ ಎನ್ನುವುದು ಅಸಾಧ್ಯ ಊಹೆ. ನಾಲ್ಕನೆಯ ವೆಂಟ್ರಿಕಲ್ ಎಂಬ ಇನ್ನೊಂದು ಕೂಪಕ್ಕೆ ಸಂಪರ್ಕವನ್ನು ಕಲ್ಪಿಸುವ Cerebral aqueduct ಎನ್ನುವ ಕಂಠವೂ ಇದೆ. ಆದರೆ ಹೀಗೆ ಸಮನ್ವಯಿಸಿ ಸಮರ್ಥನೆಯನ್ನು ಮಾಡುವುದು, ಮನಸ್ಸಿನ ಶೈಶವಾವಸ್ಥೆಯ ಮೋಹಕವಾದ ಆಟ ಮಾತ್ರ !

ಕೂರ್ಮನಾಡಿಯು ಕಂಠದ ಕೆಳಭಾಗದಲ್ಲಿದೆಯಂತೆ. 'ಸಂಯಮ'ವನ್ನು ಈ ಪ್ರದೇಶದಲ್ಲಿ ಮಾಡಿದರೆ ದೇಹದ ಎಲ್ಲ ಭಾಗಗಳಲ್ಲಿಯೂ ಸ್ಥೈರ್ಯವು ಉಂಟಾಗುವುದಂತೆ. ಥೈರಾಯ್ಡ್ ಪ್ರದೇಶಕ್ಕೆ ಕೂರ್ಮನಾಡಿ ಎಂದನ್ನುವುದೂ ಮೋಹಕವಾದ ಶೈಶವಾವಸ್ಥೆಯ ಮನಸ್ಸಿನ ಚೇಷ್ಟೆ ! ಎನಿಸುತ್ತದೆ.

ಮೆದುಳಿನಲ್ಲಿ ಪ್ರಕಾಶಾತ್ಮವಾದ, ಸುಷುಮ್ನಾಂತದಲ್ಲಿರುವ ಸಹಸ್ರಾರವೆಂಬಲ್ಲಿ ಸಂಯಮವನ್ನು ಮಾಡಿದರೆ, ಲೌಕಿಕವಾಗಿ ಅಗೋಚರವಾದ, ಸಿದ್ಧ ಪುರುಷರು, ವಿದೇಹಿಗಳು, ಪ್ರಕೃತಿಲಯರು, ಇಂತಹವರ ದರ್ಶನವಾಗುವುದಂತೆ. ಕಾಲ; ದೇಶದ ಅಡೆ ತಡೆಗಳು ಆಗ ಇರುವುದಿಲ್ಲವಂತೆ.

ವೈಜ್ಞಾನಿಕ ಸಮರ್ಥನೆಯು ಇಂದು ಸಾಧ್ಯವಿಲ್ಲ.

ಆದರೆ ಮನೋಶಕ್ತಿಯು ತೀವ್ರವಾದಾಗ ಯಾವ ಸಿದ್ಧಿಗಳಾದರೂ ಸಾಧ್ಯ ಎಂಬುದನ್ನು ಮರೆಯುವಂತಿಲ್ಲ.

**ಪ್ರತಿಭಾತ್ ವಾ ಸರ್ವಂ**

ಪ್ರತಿಭೆಯನ್ನು ಉದ್ದೇಶಿಸಿ ಸಂಯಮವನ್ನು ಮಾಡಿದರೆ ಸಕಲ ಜ್ಞಾನವೂ ಲಭಿಸುತ್ತದೆ. ಪ್ರತಿಭೆ ಎಂದರೆ ನಮ್ಮ ಇಂದಿನ ಭಾಷೆಯಲ್ಲಿ Intuition ಎಂಬ ಅರ್ಥ ಬರುತ್ತದೆ. ಆದರೆ ಪತಂಜಲಿಗಳ ಕಾಲದಲ್ಲಿ, ಪ್ರತಿಭೆಯ ಮೂರು ತೆರನ ವಿಧಗಳನ್ನು ವಿವರಿಸುತ್ತಿದ್ದರು.

೧. ಚಿತ್ತದ ಸತ್ವ ಭಾಗದಲ್ಲಿ ಉದ್ಭವಿಸುವ ಚಿತ್ತದಪ್ರಭೆ. ಚಿತ್ತ್ರಪ್ರಭೆ.

ಬುದ್ಧಿಯ ಕಾರಣವಿಲ್ಲದೆ ತತ್‌ಕ್ಷಣದಲ್ಲಿ ಹುಟ್ಟುವ ಜ್ಞಾನವು ಅಥವಾ

ಅರಿವು, ಪ್ರಾತಿಭ ಎನ್ನಲ್ಪಡುತ್ತಿತ್ತು.

ಬ್ರಹ್ಮರಂಧ್ರಕ್ಕೆ ಮೇಲೆ (ಬ್ರಹ್ಮರಂಧ್ರವು ಎಲ್ಲಿದೆಯೋ ಈಗ ನಮಗೆ ವೈಜ್ಞಾನಿಕವಾಗಿ ತಿಳಿಯದು).

ಸಹಸ್ರಾರಕ್ಕೆ ಕೆಳಗೆ (ಸಹಸ್ರಾರದ ಸ್ಥಾನವು ಆನಂದದ ಕೇಂದ್ರಗಳು, ಎನ್ನಬಹುದು). ಇರುವ ಪ್ರದೇಶವು ಚಿತ್ತದ ಸಾತ್ವಿಕ ಭಾಗ.

೨. ಬ್ರಹ್ಮರಂಧ್ರದ ಪ್ರಾಂತ್ಯದ ಭಾಗವು ಚಿತ್ತದ ರಾಜಸ ಭಾಗ.

೩. ಬ್ರಹ್ಮರಂಧ್ರದ ಕೆಳಗೆ ಇರುವ ಚಿತ್ತದ ಭಾಗವು ತಮೋಗುಣದಿಂದ ಕೂಡಿದ್ದು.

ಅಲ್ಲದೆ

ಶುದ್ಧ ಸತ್ವ ಭಾಗವಾದ ಪ್ರಭೆಗೆ ಪ್ರಜ್ಞೆಯೆಂದೂ, ಜ್ಞಾನವೆಂದೂ,

ರಾಜಸ ಭಾಗದ ಪ್ರಭೆಗೆ ಮನಸ್ಸೆಂದೂ

ತಾಮಸ ಭಾಗದ ಪ್ರತಿಭೆಗೆ ಅಹಂಕಾರವೆಂದೂ,

ಇವುಗಳೆಲ್ಲದರ ಒಕ್ಕೂಟಕ್ಕೆ ಅಂತಃಕರಣವೆಂದೂ, ಚಿತ್ತವೆಂದೂ ಹೇಳುತ್ತಿದ್ದರು.

ಇವುಗಳಲ್ಲಿ ಜ್ಞಾತೃವೆಂಬ ಕರಣಕ್ಕೆ ತ್ರಿಕಾಲ ಜ್ಞಾನವೂ, (ಜ್ಞಾತೃ = ಅರಿಯುವವ; Experiencer)

ಬುದ್ಧಿಗೆ ವರ್ತಮಾನ ಕಾಲವೂ,

ಮನಸ್ಸಿಗೆ ಭವಿಷ್ಯತ್ ಕಾಲ ಜ್ಞಾನವೂ,

ಚಿತ್ತಕ್ಕೆ ಭೂತಕಾಲ ಜ್ಞಾನವು,

ಅಹಂಕಾರಕ್ಕೆ ಅಜ್ಞಾನವು.

ಈ ರೀತಿಯಾಗಿ ಅಂತಃಕರಣಗಳಿಗೆ ಪ್ರತ್ಯೇಕ ಪ್ರತ್ಯೇಕ ಜ್ಞಾನಗಳಿರುತ್ತವೆ, ಎನ್ನುತ್ತಿದ್ದರು. ಮನೋ, ಬುದ್ಧಿ, ಅಹಂಕಾರ, ಚಿತ್ತಗಳು, ಇವುಗಳು ಪ್ರಪಂಚಾನುವರ್ತನೆಯಲ್ಲಿರುವುದರಿಂದ ಅಂತಃಕರಣ ರೂಪವಾಗಿರುತ್ತದೆ. ಇದೆಲ್ಲವನ್ನೂ ಅರಿಯುವ ಜ್ಞಾತೃವು, ಅಂತಃಕರಣವಾದರೂ, ವಿಷಯಗಳಲ್ಲಿ ಅನುವರ್ತಿಸುವುದಿಲ್ಲವಾದ್ದರಿಂದ, ಲೌಕಿಕಕ್ಕೆ ಕೇವಲ 'ಸಾಕ್ಷಿ' ಯಾಗಿರುತ್ತಾನೆ.

ಚಿತ್ತಪ್ರಭೆಯಲ್ಲಿ ಸಂಯಮವನ್ನು ಮಾಡುವುದರಿಂದ, ಇತರ ಯೋಗ ಸಾಧನಗಳನ್ನು ಆಚರಿಸದಿದ್ದರೂ, ಚಿತ್ತವೃತ್ತಿಯನ್ನು ನಿರೋಧಿಸಿ, ಕೈವಲ್ಯ ಪದವಿಯನ್ನು ಪಡೆಯಬಹುದು. ಕೇವಲ ಪ್ರತಿಭೆಯಿಂದ ಯೋಗದ ಫಲವನ್ನು ಪಡೆಯಬಹುದಾದ್ದರಿಂದ, ಇಂತಹ ಪ್ರತಿಭೆಯನ್ನು ತಾರಕ – ಜ್ಞಾನ, ಎಂದರು.

ತಾರಕಯೋಗ, ರಾಜಯೋಗ, ಎಂದೂ ಈ ವಿಧಾನವನ್ನು ಹೆಸರಿಸಿದರು.

ಪ್ರತಿಭೆಯನ್ನು ಸಂಯಮದಿಂದ ಪಡೆಯುವುದು, ಗಾಯತ್ರೀ ಜಪದ ಧ್ಯೇಯ ಆದುದರಿಂದಲೇ ಆ ಜಪದಲ್ಲಿ 'ಧೀಯೋ ಯೋನಃ ಪ್ರಚೋದಯಾತ್' ಎನ್ನುವರು.

* * *

ಸತ್-ಪೂರ್ಣ ಪ್ರತಿಭೆಯಿಂದ, ಪ್ರಸಿದ್ಧ ವಿಜ್ಞಾನಿಗಳು, ಮಾನವನ ಜ್ಞಾನ ಭಂಡಾರವನ್ನು ಹಿರಿದಾಗಿಸಿದರು. ರಾಜಸ-ಪೂರ್ಣ ಪ್ರತಿಭೆಯಿಂದ, ಚಕ್ರವರ್ತಿಗಳು, ರಾಜ ಮಹಾರಾಜರುಗಳು, ಜನನಾಯಕರೂ ಪ್ರಸಿದ್ಧರಾದರು ತಾಮಸಪೂರ್ಣ ಪ್ರತಿಭೆಯಿಂದ. ಸಮಾಜವನ್ನೇ ಬೆದರಿಸಿ ಕೊಳ್ಳೆ ಹೊಡೆಯುವ ದರೋಡೆಕಾರರು; ರಾಷ್ಟ್ರದ ಏಕಸ್ವಾಮ್ಯಾಭಿಲಾಷಿಗಳು, ಕುಪ್ರಸಿದ್ಧ ಕಳ್ಳರು, ಇಷ್ಟಾರ್ಥವನ್ನು ಕೆಲ ಕಾಲ ಪಡೆದರು.

ಅಂದರೆ, ಒಳ್ಳೆಯದಕ್ಕೆ, ಸಮಾಜದ ಹಿತಕ್ಕೆ, ಮಾನವ ಸುಖಕ್ಕಾಗಿಯೇ ಪ್ರತಿಭೆಯನ್ನು ಬಳಸಕೊಳ್ಳಬೇಕಾಗಿಲ್ಲ. ಸ್ವಾರ್ಥಕ್ಕೂ, ಪರಪೀಡನೆಗೂ, ಪ್ರತಿಭೆಯನ್ನು ದುರುಪಯೋಗಪಡಿಸಿಕೊಳ್ಳಬಹುದು. ಯೋಗ ಸಾಧನೆಯ ಫಲಿತಾಂಶವನ್ನು, ಸತ್ ಪ್ರತಿಭೆಯಿಂದ, ಅದೊಂದೇ ಮಾರ್ಗದಿಂದ, ಪಡೆಯಬಹುದು. ಭೋಗ ಸಾಧನೆಯು ಸುಖ-ದುಃಖ, ಫಲವನ್ನೂ ತಾಮಸ ಪ್ರತಿಭೆಯಿಂದ, ಅನುಭವಿಸಲೂಬಹುದು.

Intuition ಎಂಬ ಪದವು ಇವೆಲ್ಲ ಪರಿಣಾಮಗಳನ್ನು ಸೂಚಿಸ ಬಹುದಾದರೂ ವ್ಯಾವಹಾರಿಕವಾಗಿ, ಇಂದು, ಸತ್ವಗುಣ ಪ್ರಧಾನವಾದ ಪ್ರತಿಭೆ ಎಂಬ ಅರ್ಥವನ್ನು ನೀಡುತ್ತದೆ.

ಸಂಯಮದಿಂದ ಫಲಿಸುವ ವಿಧ ವಿಧವಾದ ಸಿದ್ಧಿಗಳನ್ನು ಈ ತನಕ ತಿಳಿಸಲಾಯಿತು. ಈಗ ಅಂತಹ ಸಿದ್ಧಿಗಳ ಗುಣ ದೋಷಗಳನ್ನು ವಿವರಿಸಲಾಗುವುದು.

**ತೇ ಸಮಾಧೌ ಉಪಸರ್ಗೌ ವ್ಯುತ್ಥಾನೆ ಸಿದ್ಧಯಃ**

ಈ ತನಕ ವಿವರಿಸಲ್ಪಟ್ಟ ಸಿದ್ಧಿಗಳು, ಸಮಾಧಿಯ ಅಭಿವೃದ್ಧಿಯಲ್ಲಿ ವಿಘ್ನಗಳು.

ಸಮಾಧಿ ಸ್ಥಿತಿಯು ಇಲ್ಲದಾಗ, ಫಲಗಳನ್ನು ತಾತ್ಕಾಲಿಕವಾಗಿ, ಲೌಕಿಕವಾಗಿ, ನೀಡುತ್ತವೆ. ತಾತ್ಕಾಲಿಕವಾಗಿ ತುಸು ಸಮಾಧಾನ, ಮತ್ತು ಸಂತೋಷಗಳನ್ನೂ ಉಂಟುಮಾಡುತ್ತವೆ.

* * *

ಎಚ್ಚರಿಕೆಯನ್ನು ಈ ರೀತಿ ಕೊಟ್ಟ ಮೇಲೆ, ಮಹರ್ಷಿಗಳು, ಮಾನವ ಮನಸ್ಸಿನ ಅಂತರಾಳವನ್ನು ಸಾಕ್ಷಾತ್ ಕಂಡು, ಮಾನವ ಸ್ವಭಾವವನ್ನು ಅರಿತು ಮುಂದೆ ನುಡಿಯುತ್ತಾರೆ.

**ಬಂಧಕಾರಣ ಶೈಥಿಲ್ಯಾತ್ ಪ್ರಚಾರ ಸಂವೇದನಾಚ್ಚ, ಚಿತ್ತಸ್ಯಪರ ಶರೀರಾವೇಶಃ**

ಪರಕಾಯ ಪ್ರವೇಶ ಎನ್ನುವುದರ ವಿವರಣೆ, ಇದು.

ದೇಹದೊಡನೆ ಇರುವ ಬಂಧನವನ್ನು ಕಳೆದುಕೊಂಡಿರುವುದರಿಂದಲೂ, ಹಾಗೂ ತನ್ನ ಮತ್ತು ಇತರರ ದೇಹಗಳ ಪ್ರಾಣ ನಾಡಿಗಳನ್ನು ಸ್ಪಷ್ಟವಾಗಿ ಅರಿತಿರುವುದರಿಂದಲೂ, ಚಿತ್ತವು ಇತರ ದೇಹಗಳಲ್ಲಿ ಪ್ರವೇಶಿಸಲು ಸಾಧ್ಯ. ಜೀವಂತ ದೇಹಗಳಲ್ಲಿಯಾದರೂ ಪ್ರವೇಶಿಸಬಹುದು, ನಿಧನವಾದ ಕಳೇಬರಗಳಲ್ಲಿಯೂ ಪ್ರವೇಶಿಸಬಹುದು, ಹೀಗನ್ನುತ್ತದೆ ಸೂತ್ರ.

ಪ್ರಾಣ ನಾಡಿಗಳೂ ಅಂದರೆ ಯಾವುವು? ವೈಜ್ಞಾನಿಕವಾಗಿ ತಿಳಿದಿಲ್ಲ ಇಂದು. ಚಿತ್ತವಾಹನಾಡಿಯ ಮೂಲಕ ಚಿತ್ತವು ದೇಹದಿಂದ ಹೋಗಿ, ಇನ್ನು ಯಾವುದಾದರೂ ದೇಹವನ್ನು ಪ್ರವೇಶಿಸಿ, ಸ್ವಲ್ಪಕಾಲ ಆ ದೇಹದ ಮೂಲಕ ಇಚ್ಛಾನುವರ್ತಿಯಾಗುತ್ತದೆ. ಆನಂತರ ಸ್ವದೇಹಕ್ಕೆ ಹಿಂತಿರುತ್ತದೆಯಂತೆ. ಚಿತ್ತವಾಹನಾಡಿಯ ಯಾವ ಸ್ವರೂಪದ್ದು? ಎಲ್ಲಿದೆ? ಯಾರಿಗೂ ಇಂದು ವೈಜ್ಞಾನಿಕವಾಗಿ ತಿಳಿಯದು.

ಆನಂದದ ಕೇಂದ್ರಗಳು ಮತ್ತು ಅವುಗಳಿಂದ ಯಾವ ಯಾವ ಮಾರ್ಗಗಳಲ್ಲಿ ಮನಸ್ಸಿನ ಯಾವ ಅಂಶಗಳು ಅಥವಾ ಶಕ್ತಿ ರೂಪಗಳು ಸರಿಯುತ್ತವೆ ಎಂಬುದು ಮುಂದೆ ಕಂಡು ಹಿಡಿಯಲ್ಪಟ್ಟರೆ, ಆನಂತರ ಪರಕಾಯ ಪ್ರವೇಶವು ಅರ್ಥವಾಗಬಹುದು.

* * *

**ಉದಾನ ಜಯಾಜ್ ಜಲ ಪಂಕ ಕಂಟಕಾದಿಷ್ವಸಂಗಂ ಉತ್ಕ್ರಾಂತಿಶ್ಚ**

ಉದಾನ ವಾಯುವಿನಲ್ಲಿ ಸಂಯಮವನ್ನು ಮಾಡಿದರೆ, ನೀರು, ಕೆಸರು, ಮುಳ್ಳುಗಳ ಮೇಲೆ ಸುಲಭವಾಗಿ ನಡೆಯಬಹುದಂತೆ.

**ಸಮಾನ ಜಯಾತ್ ಪ್ರಜ್ವಲನಂ**

ಸಮಾನ ವಾಯುವಿನಲ್ಲಿ ಸಂಯಮವನ್ನು ಮಾಡಿದರೆ ಮಹಾತೇಜಸ್ಸಿನಂತಹ ಕಾಂತಿಯು ಉಂಟಾಗುವುದಂತೆ.

**ಶ್ರೋತ್ರಾಕಾಶಯೋಃ ಸಂಬಂಧ ಸಂಯಮಾದ್ ದಿವ್ಯಂ ಶ್ರೋತ್ರಂ**

ಶ್ರೋತ್ರೇಂದ್ರಿಯ ಮತ್ತು ಆಕಾಶ ಇವುಗಳ ಸಂಬಂಧದ ಮೇಲೆ ಸಂಯಮವನ್ನು ಮಾಡಿದರೆ ಬಲು ದೂರದಲ್ಲಿ ಹುಟ್ಟಿದ ಶಬ್ದವೂ ಕೇಳಿಸುತ್ತದೆ.

**ಕಾಯ ಆಕಾಶಯೋಃ ಸಂಬಂಧ ಸಂಯಮಾತ್ ಲಘುತೂಲ ಸಮಾಪತ್ತೇಶ್ಚ ಆಕಾಶಗಮನಂ**

ದೇಹ ಮತ್ತು ಆಕಾಶ ಇವುಗಳ ಸಂಬಂಧವನ್ನುದ್ದೇಶಿಸಿ ಸಂಯಮವನ್ನು ಮಾಡಿದರೆ ಶರೀರವು ಲಘುವಾಗಿ ಆಕಾಶ ಮಾರ್ಗದಲ್ಲಿ ಸಾಗಬಹುದು.

**ಬಹಿರ್ ಅಕಲ್ಪಿತಾ ವೃತ್ತಿರ್ ಮಹಾವಿದೇಹಾ ತತಃ ಪ್ರಕಾಶಾವರಣ ಕ್ಷಯಃ**

ಪರಕಾಯ ಪ್ರವೇಶವನ್ನು ಮಾಡಲಿಚ್ಛಿಸದೆ, ಚಿತ್ತವು ಸಂಯಮದಿಂದ, ದೇಹಾಹಂಕಾರವಿಲ್ಲದ 'ಮಹಾವಿದೇಹ' ಎನ್ನಲ್ಪಡುತ್ತದೆ.

ಈ ಐದೂ ಸಿದ್ಧಿಗಳು ಇಂದಿನ ಮನಃಶಾಸ್ತ್ರದ ರೀತಿಯಾಗಿ ಅರ್ಥವಾಗುವುದಿಲ್ಲ. ಸುಂದರವಾಗಿ ಕಾಣುವ ಊಹೆಗಳಿಗೆ ಸಾಕಾದಷ್ಟು ಅವಕಾಶಗಳಿವೆ. ಕಟ್ಟುಕತೆಗಳಾಗಬಹುದು, ಅಂತಹ ಊಹೆಗಳು. ಆದ ಕಾರಣ ಮೂಡಿಬಂದ ಊಹೆಗಳನ್ನು ಇಲ್ಲಿ ಪ್ರಚರಿಸುವುದಿಲ್ಲ.

ಸಮಾಧಿಯನ್ನು ಸಾಧಿಸಲು ವಿವಿಧ ಮಾರ್ಗಗಳನ್ನು ಬೋಧಿಸುವ ಮೊದಲು ಪಂಚಭೂತ ಜಯವನ್ನು ಸಾಧಿಸಬೇಕು.

**ಸ್ಥೂಲ ಸ್ವರೂಪ ಸೂಕ್ಷ್ಮ ಅನ್ವಯಾರ್ಥವತ್ವ ಸಂಯಮಾತ್ ಭೂತಜಯಃ**

ಸ್ಥೂಲ, ಸ್ಥಿರ, ಸೂಕ್ಷ್ಮ, ಎಲ್ಲೆಲ್ಲೂ ಹರಡಿರುವ ಹಾಗೂ ಫಲದಾಯಕ, ಈ ಐದೂ ತೆರನ ಪಂಚಭೂತಗಳಲ್ಲಿ ಸಂಯಮವನ್ನು ಮಾಡುವುದರಿಂದ. ಭೂತಗಳ ಮೇಲೆ ಪೂರ್ಣ ಹತೋಟಿಯನ್ನು ಪಡೆಯಬಹುದು.

ಪೃಥಿವಿ, ಅಪ್, ತೇಜಸ್, ವಾಯು, ಆಕಾಶಗಳು, ಪಂಚಭೂತಗಳು; ಆ ಕಾಲದ ಭಾಷೆಯಲ್ಲಿ.

**ತತೋ ಅಣಿಮಾದಿ ಪ್ರಾದುರ್ಭಾವಃ ಕಾಯ ಸಂಪದ್ಧರ್ಮಾನ್ ಅಭಿಗಾತಶ್ಚ**

ಭೂತಜಯದಿಂದ ಅಣಿಮಾದಿ ಅಷ್ಟ ಸಿದ್ಧಿಗಳು; ರೂಪಲಾವಣ್ಯಾದಿ ದೇಹ ಸಂಪತ್ತು ; ದೇಹರೂಪಾದಿಗಳು ಶಾಶ್ವತವೂ, ಲಭಿಸುತ್ತದೆ.

ಅಷ್ಟಸಿದ್ಧಿಗಳೆಂದರೆ :– ೧. ಅಣಿಮಾ, ಸೂಕ್ಷ್ಮವಾಗುವಿಕೆ. ೨. ಮಹಿಮ ದೊಡ್ಡದಾಗುವಿಕೆ. ೩. ಗರಿಮ, ಬಹಳ ಭಾರವಾಗುವುದು. ೪. ಲಘಿಮ, ಅತಿ ಹಗುರವಾಗುವುದು. ೫. ಪ್ರಾಪ್ತಿ, ಸೂರ್ಯ ಚಂದ್ರಾದಿಗಳನ್ನು ಅನಾಯಾಸವಾಗಿ ಮುಟ್ಟುವಂತಹ ಶಕ್ತಿ. ೬. ಪ್ರಾಕಾಮ್ಯ, ನೆನಸಿದದು ಆಗುವುದು. ೭. ಈಶತ್ವ, ಮಹಿಮಾವಂತನಾಗುವುದು. ೮. ವಶಿತ್ವ, ಚರಾಚರ ಪ್ರಪಂಚವನ್ನು

ವಶಪಡಿಸಿಕೊಲ್ಲುವುದು.

ಪಂಚಭೂತಗಳಿಂದ ಬ್ರಹ್ಮಾಂಡವು ರಚಿತವಾಗಿದೆ. ಪಂಚಭೂತಗಳಿಂದಲೇ ನಮ್ಮ ದೇಹವೂ ರಚಿತವಾಗಿದೆ. ಮೂಲಭೂತಗಳಾದ ಇವುಗಳ ಮೇಲೆ 'ಸಂಯಮ'ವನ್ನು ಮಾಡಿದರೆ, ಅವುಗಳ ರಚನೆಯನ್ನು ವ್ಯತ್ಯಾಸ ಮಾಡಬಹುದು, ಮೇಲೆ ಹೇಳಿದ ಎಂಟು ತೆರನಾಗಿ. ಇದು ಋಷಿಗಳಂದುದು.

ಪಂಚಭೂತಗಳಿಂದ ಪ್ರಪಂಚವು, ಅಥವಾ ನಾವು ಸೃಷ್ಟಿಸಲ್ಪಟ್ಟಿರುವುದು, ಎನ್ನುವುದು ವೈಜ್ಞಾನಿಕವಾಗಿ ಅರ್ಥಮಾಡಿಕೊಳ್ಳಲು ಇಂದು ಸಾಧ್ಯವಿಲ್ಲ. ಅಂದಮೇಲೆ ಅಷ್ಟ ಸಿದ್ಧಿಗಳೂ ಅರ್ಥವಾಗುವುದಿಲ್ಲ.

ಆದರೂ ಹೀಗನ್ನಿಸುತ್ತದೆ :–ಸಂಯಮವನ್ನು ಸಾಧಿಸಿದ ಮನಸ್ಸು ಅಥವಾ ಚಿತ್ತವು, ಮನಸ್ಸೆಂಬ ಶಕ್ತಿಯನ್ನು ಅತ್ಯಮೋಘವಾಗಿ ಅಪರಿಮಿತವಾಗಿ ಹೊರಹೊಮ್ಮಿಸುತ್ತದೆ. ಅಣುವನ್ನು ಸಿಡಿಸಿದರೆ ಅದ್ಭುತವಾದ ಶಕ್ತಿಯು ಉತ್ಪನ್ನವಾಗುವಂತೆ. ಅಂತಹ ಶಕ್ತಿ ಬಣದ ಮೇಲೆ ಹತೋಟಿಯನ್ನು ಮನಸ್ಸಿನದೇ ಆದ, ಆದರೂ ಆ ಸ್ಥಿತಿಯಲ್ಲಿ ಹೊರತಾಗಿರುವ, ಹಿರಿಯ ಅಂಶವು ಹೊಂದಿರಲು ಸಾಧ್ಯ. ಅಂತಹ ಹತೋಟಿಯಿಂದ, ಅಲೌಕಿಕವಾದ ಅತ್ಯದ್ಭುತ ಶಕ್ತಿಯಿಂದ, ದೇಹವನ್ನು ಹೇಗೆಂದರೆ ಹಾಗೆ ಕುಣಿಸಬಹುದು. ಅಣಿಮ, ಮಹಿಮ, ಗರಿಮ, ಲಘಿಮ, ಪ್ರಾಪ್ತಿ ಈ ಐದೂ ದೇಹಕ್ಕೆ ಪ್ರಾಯಶಃ ಅನ್ವಯಿಸುತ್ತದೆ. ಮಿಕ್ಕ ಮೂರೂ ಮನಸ್ಸಿನ ಆ ಸ್ಥಿತಿಯಲ್ಲಿ ಪಡೆದ ಹತೋಟಿಗೆ ಒಳಪಡುತ್ತವೆ. ಹೀಗೆ ವಿಶ್ಲೇಷಿಸಿದರೆ, ಅಣಿಮಾದಿ ಸಿದ್ಧಿಗಳನ್ನು ಅರ್ಥಮಾಡಿಕೊಳ್ಳಬಹುದು. ವೈಜ್ಞಾನಿಕವಾಗಿ ಒಪ್ಪಲೂಬಹುದು.

ಸಾಮಾನ್ಯ ಜೀವನದಲ್ಲಿ ಪ್ರತ್ಯಕ್ಷವಾಗಿ ಕಾಣುವ ಕೆಲವು ನಿದರ್ಶನಗಳನ್ನು ವಿಶ್ಲೇಷಿಸುವ.

ಅಣಿಮ : ಮನಸ್ಸು ಅತ್ಯಂತ ಖುಷಿಯಿಂದಿರುವಾಗ, ತೌರಿಗೆ ಮೊದಲಬಾರಿ ಹೋಗುವ ಹೆಣ್ಣು ಮಗಳಂತೆ, ದೇಹವು ಹೂ ಹಗುರವಾದಂತಿರುತ್ತದೆ. ನಡಿಗೆಯು ಝಿಗಿ ಝಿಗಿ ಎಂಬಂತಿರುತ್ತದೆ. ಆಗ ಈ ಜನ್ಮದಲ್ಲಿನ ವ್ಯಕ್ತಿಯು, ಹುಟ್ಟು ತೌರಿಗೆ ಹೋಗುವಂತೆಯೇ ಸಂಭ್ರಮ ಪಡಬೇಕು, ಹಗುರ ನಡಿಗೆಯಿಂದ ಝಿಗಿ ಝಿಗಿ ನಡೆಯಬೇಕು. ದೇಹದಿಂದ ಸಂಬಂಧವನ್ನು ಇಂತಹ ಪರಿಸ್ಥಿತಿಯಲ್ಲಿರುವ ಮನಸ್ಸು ಹೂ ಹಗುರಾಗಿ ನಡಸುತ್ತದೆ ಎನ್ನಲು ಅಡ್ಡಿಯಿಲ್ಲ.

ಮಹಿಮ :–ಅಣಿಮ ಸಿದ್ಧಿಯನ್ನು ಸಾಧಿಸಿದ ಅಪಾರ ಶಕ್ತಿಯು ಮಹಿಮವನ್ನು

ಇಚ್ಛೆಸಿದಾಗ ಸಾಧಿಸಬಹುದು. ಇದನ್ನೂ ಒಪ್ಪಬೇಕು. ಅಥವಾ ಒಪ್ಪಬಹುದು. ಮಹಾತ್ಮರು, ಯೇಸು, ಪ್ರವಾದಿ ಮಹಮದ್ ಇತಹವರು ತಮ್ಮ ಪ್ರಭಾವವನ್ನು ಅತ್ಯಂತ ವಿಶಾಲವಾಗಿ ಬೀರಿದರು. ಇದೂ ಮಹಿಮೆಯ ಸಣ್ಣ ನಿದರ್ಶನ. 'ಸಣ್ಣ' ಎನ್ನುವುದು ಅಲೌಕಿಕ ದೃಷ್ಟಿಯಿಂದ. ಲೌಕಿಕ ದೃಷ್ಟಿಯಿಂದ ಇಂತಹ ಮಹಿಮಾ ಪ್ರಭಾವವು, ಬಲು ದೊಡ್ಡದು.

ಗರಿಮ :–ಅತ್ಯಂತ ಭಾರವಾಗುವಿಕೆ. ಕೊಲ್ಲುವ ಶತ್ರುವಿಗೂ ಬರಬಾರದಂತಹ ಅತೀವ ದುಃಖವು ವ್ಯಕ್ತಿಗೆ ಬಡಿದಾಗ, ಅವ ನಡೆಯಲೂ ಆರ. ಅವನ ದೇಹವು ಅವನಿಗೆ ಅಷ್ಟು ಭಾರವಾಗಿರುತ್ತದೆ. ಲೌಕಿಕ ಅನುಭವವು ಹೀಗಾದಲ್ಲಿ ; ಅಲೌಕಿಕ ಅನುಭವವು 'ಗರಿಮ'ವನ್ನು ಸಾಧಿಸುವುದು ಸಹಜ.

ಮೋಡಿಹಾಕುವ ಉಪಾಸಕರನ್ನು ಕಂಡಿದ್ದೇವೆ, ಕಾಣುತ್ತಿದ್ದೇವೆ. ಕೋಳಿಯ ಮೊಟ್ಟೆಯನ್ನು ಮಂತ್ರಿಸಿ ಮಂಡಲದಲ್ಲಿಟ್ಟು, ಇದನ್ನು ಯಾರಾದರೂ ಬಂದು ಜಜ್ಜಿ ಒಡೆದರೆ, ಅವರಿಗೆ ವೀಳೆಯವನ್ನು ಕೊಟ್ಟು ನನ್ನ ಸೋಲನ್ನು ಒಪ್ಪಿಕೊಳ್ಳುವೆ, ಎಂದು ಮೋಡಿಯವ ಸವಾಲು ಹಾಕುತ್ತಾನೆ. ಆ ಕಾಲದಲ್ಲಿ ಮೋಡಿ ಹಾಕುವ ಧಾಂಡಿಗನ ಮುಖವನ್ನು ನೋಡಿದರೆ, ಸಾಮಾನ್ಯರಿಗೆ ಭಯವಾಗುತ್ತದೆ. ಸುತ್ತುಗಟ್ಟಿಕೊಂಡಿರುವ ನೂರಾರು ಮಂದಿಯಲ್ಲಿ, ಒಬ್ಬ ಚಿಂದಿ ಬಟ್ಟೆಯನ್ನುಟ್ಟ ಸೇಣಕಲ, ಐದಾರು ನಿಮಿಷಗಳಲ್ಲಿ, ಯಾರೂ ಬಾರದಿರುವುದನ್ನು ಕಂಡು, ಮುಂದೆ ಬಂದು ಕ್ಷಣಾರ್ಧದಲ್ಲಿ, ಅನಾಯಾಸವಾಗಿ, ಮುಷ್ಟಿಯಿಂದ, ಮೊಟ್ಟೆಯನ್ನು ಒಡೆಯುತ್ತಾನೆ. ನಂತರ ಉಪಾಸಕನತ್ತ, ಕರುಣಾದೃಷ್ಟಿಯನ್ನು ಬೀರಿ, ವೀಳೆಯನ್ನು, ಹಾಗೂ ಜಯದ ಸಂಕೇತವನ್ನೂ ಲಕ್ಷಿಸದೆ ಸುತ್ತುವರಿದ ಮಂದಿಯಲ್ಲಿ ಹೇಳ ಹೆಸರಿಲ್ಲದೆ ಮಾಯವಾಗುತ್ತಾನೆ.

ಇದನ್ನು ಕಂಡ ಉಪಾಸಕನು ಜಜ್ಜಿದ ಮೊಟ್ಟೆಯ ಮುಂದೆ, ಅವಿಮನಸ್ಕನಾಗಿ ಕೂರುತ್ತಾನೆ. ಅವನ ಭಕ್ತರು ಎಷ್ಟು ಶ್ರಮಪಟ್ಟರೂ, ಹಾಗೆ ಕುಳಿತ ಗುರುವನ್ನು ಎತ್ತಲಾರರು. ಸ್ವಲ್ಪ ಕಾಲಾನಂತರ ಉಪಾಸಕನು ನಿಟ್ಟುಸಿರು ಬಿಟ್ಟು, ಕಣ್ಣಿಗೆ ಕಾಣಿಸದ ಯಾವುದನ್ನೋ ದಿಟ್ಟಿಸಿ ನೋಡುತ್ತಾ, ತಾನೇತಾನಾಗಿ ಏಳುತ್ತಾನೆ. ಕೈ ಮುಗಿಯುತ್ತಾನೆ. ತಲೆ ಬಾಗಿಸುತ್ತಾನೆ. ಮೌನವಾಗಿ ಪ್ರದರ್ಶನದ ತಾವಿನಿಂದ ಹೊರಬೀಳುತ್ತಾನೆ.

ಎಂಟೂ ಭಕ್ತರು ಎಬ್ಬಿಸಿ ನಿಲಿಸಲಾರದ ಭಾರವು ಮೋಡಿಹಾಕುವ ಹಾಗೂ ಸೋಲನ್ನೊಪ್ಪಿದ, ಉಪಾಸಕನಿಗೆ, ಹೇಗೆ ಬಿದ್ದಿತು?

ಪ್ರಾಯಶಃ ಅವ ಆ ಸ್ಥಿತಿಯಲ್ಲಿ 'ಗರಿಮ' ಸಿದ್ಧಿಯನ್ನು ಪಡೆದಿದ್ದ. ಬಾಳ

ಗುರಿಯು ಅದಲ್ಲ. ಅದನ್ನು ಅರಿತು ಅವ ಮೌನಿಯಾಗಿ ಎಲ್ಲವನ್ನೂ, ತನ್ನ ಗುರುತ್ವವನ್ನೂ ಮರೆತು, ಎತ್ತಲೋ ನಡೆದ. ಆಗ ಅವ ಖಿನ್ನತೆಯ ಅತ್ಯುಗ್ರ ಶಿಖರವನ್ನು ಮುಟ್ಟಿದ್ದ ಎನ್ನಬಹುದು.

ಇಂತಹ ಪ್ರದರ್ಶನಗಳನ್ನು, ಹಾಗೂ ದರ್ಶನಗಳನ್ನು ಸಂತೆಯು ಕೂಡುವಲ್ಲಿ ಆಗಾಗ್ಗೆ ಈಗಲೂ ಕಾಣುತ್ತೇವೆ.

ಅಂದರೆ ಗರಿಮ ಸಿದ್ಧಿಯು ಇಂದೂ ನಿದರ್ಶಿಸಲ್ಪಡುತ್ತದೆ, ಒಂದು ರೀತಿಯಲ್ಲಿ.

ಲಘಿಮ :– ಹತ್ತಿಯ ಕಣಕ್ಕಿಂತಲೂ ಹಗುರವಾಗುವಿಕೆ. ಬೀಸಿದ ಹಗೂರ ಗಾಳಿಯ ಮೇಲೆ ತೇಲಿ ಹೋಗುವಿಕೆ. Taking the path of least resistance. ಸುತ್ತಮುತ್ತಲೂ ಪರಿಸರದ ಬಾಳನ್ನು ಕಣ್ತೆರೆದು ನೋಡಿದರೆ, ಬಹಳಷ್ಟು ಮಂದಿ ಈ ನಿಯಮದಂತೆ ಬಾಳ ನಡಸುವುದನ್ನು ಪ್ರತ್ಯಕ್ಷ ಕಾಣುತ್ತೇವೆ. ಇದು 'ಸಂಯಮ'ದಿಂದ ಸಾಧಿಸಿದ ಸಿದ್ಧಿಯಲ್ಲ. ಮೌಢ್ಯದಿಂದ, ಆಳ ಮನಸ್ಸಿನ ಹೇಡಿತನದಿಂದ, ಭಯದಿಂದ, ಪ್ರಚೋದಿತವಾದ ನಡವಳಿಕೆ. ಇಂತಹ ಲೌಕಿಕರಲ್ಲಿ ಲಘಿಮಾ ತೆರನ ನಡವಳಿಕೆಯು, ಅವರುಗಳ ಮನಸ್ಸಿನ ಅಸ್ಥಿರತ್ವದಿಂದ, ಹಾಗೂ ಚಂಚಲತೆಯು ಲೌಕಿಕ ಆಸೆಗಳೊಡನೆ ಬೆಸಗೊಂಡಿರುವುದರಿಂದ.

ಆದರೆ, ಮನಸ್ಸನ್ನು ಸ್ವಪ್ರಯತ್ನದಿಂದ ತುಳಿದು ಹಳ್ಳಕ್ಕೆ ಹಾಕಿ, ನಂತರ ಎದ್ದು, ಎಚ್ಚರದಿಂದ, ಸಂಯಮದ ಪರಿಣಾಮವಾಗಿ, ಸ್ವೇಚ್ಛೆಯಿಂದ ಲಘಿಮವನ್ನು ಪಡೆಯಬಹುದು.

Over - taking the path of greatest resistance ; in the phenomenal world ; ಎಂದನ್ನಬಹುದು.

ಪ್ರಾಪ್ತಿ :– ಸೂರ್ಯ ಚಂದ್ರಾದಿಗಳನ್ನು ಅನಾಯಾಸವಾಗಿ ಇದ್ದಲ್ಲಿಂದಲೇ ಮುಟ್ಟುವಂತಹ ಅಂದರೆ ಅರಿಯುವಂತಹ ಶಕ್ತಿ. ದೂರದರ್ಶಕ ಯಂತ್ರಗಳ, ಕಾಲ ಕಾಲಕ್ಕೂ ಆಗುವ ಪ್ರಗತಿಯಿಂದ, ಹೆಚ್ಚು ಹೆಚ್ಚಾಗಿ ವಿವರಗಳನ್ನು ಕಾಣುವುದು ಸಾಧ್ಯವಾಗುತ್ತಿದೆ.

ಮನಸ್ಸೆಂಬ ಶಕ್ತಿಯ ಒಂದು ಹಿರಿಯ ಅಂಶವನ್ನು ಸ್ವಾಧೀನಪಡಿಸಿಕೊಂಡರೆ, ಅದು ಕೂಡ ದೂರಸ್ಪರ್ಶಕ ಯಂತ್ರವಾಗಲು ಸಾಧ್ಯ. ತೋಳ್ ಬಲದಿಂದ ಕಲ್ಲನ್ನೆಸೆದರೆ ನೂರುಗಜ ದೂರ ಹೋಗಬಹುದು. ಆದರೆ ಫಿರಂಗಿಯ ಯಂತ್ರದ ರಚನೆಯಿಂದ, ನೂರಾರು, ಮೈಲಿಗಳ ದೂರ ಗುಂಡನ್ನು ಎಸೆಯಬಹುದು. 'ಸಂಯಮ'ವನ್ನು ಸಾಧಿಸಿದವನ ತೋಳ್ಬಲವು, ಫಿರಂಗಿ ಯಂತ್ರಕ್ಕಿಂತಲೂ ಲಕ್ಷಾಂತರ

ಪಟ್ಟು ಅಧಿಕವಾಗಬಹುದು. ವಿಜ್ಞಾನದ ಇಂದಿನ ಹಂತದಲ್ಲಿ ಇದೊಂದು ಊಹೆ. ದಿಟ. ಆದರೆ ಇಂದಿನ ಊಹೆಯು ಮಾನವನ ಚರಿತ್ರೆಯಲ್ಲಿ, ನಾಳೆ ಅಥವಾ ನಾಡಿದ್ದು, ವೈಜ್ಞಾನಿಕ ಸಿದ್ಧಾಂತವಾಗುತ್ತದೆ. ಸಾಕಷ್ಟು ನಿದರ್ಶನಗಳಿಗಿರುವ ಈ ಸತ್ಯವನ್ನು. ವಿಶಾಲಗೊಳಿಸಿದರೆ, 'ಪ್ರಾಪ್ತಿ'ಯ ಅಸಾಧುವಲ್ಲ ಎಂದನಿಸುತ್ತದೆ.

ಪ್ರಾಕಾಮ್ಯ:– ಇಚ್ಛಿಸಿದುದು ನಡೆಯುವುದು. ಸಂಯಮವನ್ನು ಅಷ್ಟಾಂಗಯೋಗಸಾಧನೆಯಿಂದ ಲಭಿಸಿಕೊಂಡವನು ಇಚ್ಚಿಸುವುದಾದರೂ ಏನನ್ನು? ಸ್ವಾರ್ಥಕ್ಕಾಗಿ ಏನನ್ನೂ ಇಚ್ಛಿಸಲಾರ. ಪರಾರ್ಥಕ್ಕಾಗಿ, ಸರ್ವ ಜೀವ ಹಿತಕ್ಕಾಗಿ ಯಾವುದನ್ನಾದರೂ ಬಯಸಬಹುದು. ಅಂತಹ ಪರಿಸ್ಥಿತಿಯಲ್ಲಿ ಬಯಸಿದುದು ನಡೆದು ಹೋಗುತ್ತದೆ. ಕಾಮ್ಯವು ಸ್ವಾರ್ಥವಾಗಿರದೆ, ಪರಿಸರವನ್ನೆಲ್ಲಾ ಮುತ್ತಿಕೊಂಡು ಪ್ರಪಂಚಕ್ಕೆ ಅನ್ವಯಿಸಿದಾಗ ಪ್ರಾಕಾಮ್ಯವಾಗಿ, ಸಿದ್ಧಿಯನ್ನು ಸುಲಭವಾಗಿ ಪಡೆಯುತ್ತದೆ.

ಅಸ್ವಾವಸ್ಥೆಯಲ್ಲಿದ್ದ ರೋಗಿಯೊಬ್ಬರನ್ನು ಬೆಳಗಿನ ಝಾಮ ಆರರ ವೇಳೆಗೆ ನೋಡಲು ಹೋಗಿದ್ದೆ. ರೋಗಿಯನ್ನು ಗುಣಪಡಿಸುತ್ತೇನೆ ಎಂಬ ಭರವಸೆಯು ಸ್ವಲ್ಪವೂ ಇರಲಿಲ್ಲ. ಅವನು ಕಾಲಗತಿ ಹೊಂದಿದರೂ, ಅವನ ಮನೆಯವರಿಗೆ ತುಸು ಸಮಾಧಾನವಾಗುತ್ತದೆ ಎಂಬ ಆಸೆಯಿಂದ, ಅಲ್ಲಿಗೆ ಹೋಗಿದ್ದೆ. ಪ್ರದರ್ಶನಕ್ಕಾಗಿ ಚಿಕಿತ್ಸೆಯನ್ನೂ ಮಾಡಿ ಹೊರಬರುತ್ತಿದ್ದೆ. ರೋಗಿಯ ಮನೆಯ ಗೇಟನ್ನು ತಲುಪಿದಾಗ, ಬೈರಾಗಿಯೊಬ್ಬನು ಭಿಕ್ಷೆಯನ್ನು ಬೇಡಲು ಅಲ್ಲಿಗೆ ಬಂದಿದ್ದ. ಕಳುಹಿಸಿಕೊಡಲು ನನ್ನೊಂದಿಗೆ ಬಂದಿದ್ದ ರೋಗಿಯ ತಂದೆಯು ಬೈರಾಗಿಯನ್ನು ಹೀನಾಮಾನವಾಗಿ ಬೈದ. ಸಂಕಟವನ್ನು ಪರಿಹರಿಸಿಕೊಳ್ಳಲು ಆ ನತದೃಷ್ಟ ತಂದೆಗೆ ರೇಗುವುದೊಂದೇ ಸಾಧನವಾಗಿತ್ತು. ಸಂಸ್ಕೃತಿಯ ಒತ್ತಡದಿಂದಾಗಿ ನನ್ನನ್ನು ಬೈಯುವಂತಿರಲಿಲ್ಲ.

ಬೈರಾಗಿಯು, ತನ್ನ ಕಳೆಗುಂದಿದ ಮುಖವನ್ನೂ, ಕೆಂಪೇರಿ ಅಡರುತಿದ್ದ ರೋಗಿಯ ತಂದೆಯ ಮುಖವನ್ನೂ ಅರೆಕ್ಷಣ ನೋಡಿದ. ನನ್ನತ್ತ ದೃಷ್ಟಿಯನ್ನು ಅಂಬಿನಂತೆ ಹರಿಸಿ, 'ಜೈ ಭಗವತೀ' ಎಂದು ಹೇಳಿದ. ನಂತರ ಮುನ್ನಡೆದ. 'ಬೇಟಾ, ಚಿಂತಾಕರಾನಕೋ' ಎಂದು ನನಗೆ ಹೇಳಿದ. ಹೊರಟು ಹೋದ.

ಆ ರೋಗಿಯು ಬದುಕಿಕೊಂಡ. ಖಂಡಿತವಾಗಿ ಸಾಯುತ್ತಾನೆ ಎಂದು ವೈಜ್ಞಾನಿಕವಾಗಿ, ವಿಚಾರಪೂರ್ವಕ, ನಿರ್ಧರಿಸಿದ್ದ ನನಗೆ ಅತ್ಯಾಶ್ಚರ್ಯವಾಯಿತು. ಪ್ರಾಯಶಃ ಆ ಬೈರಾಗಿಯು 'ಪ್ರಾಕಾಮ್ಯ'ವನ್ನು ಈ ರೀತಿ ಬಳಸಿದ್ದನೋ ಎಂಬ ಸಂದೇಹವುಂಟಾಯಿತು, ಮೊದ ಮೊದಲು ಆನಂತರ ಹಾಗೇ ಆಗಿರಬೇಕು ಎಂದು ಮನಸ್ಸಿನಾಳದಲ್ಲಿ ನನಗೆ ದೃಢವಾಯಿತು. ವಯಸ್ಸೂ ಮುಪ್ಪಾಗುತ್ತಿತ್ತು.

ಅಲೌಕಿಕವಾದ, ವಿಚಾರಾತೀತವಾದ, ಈ ಅನುಭವವನ್ನು ಹೇಗೆ ವೈಜ್ಞಾನಿಕವಾಗಿ ಇಂದು ಸಮರ್ಥಿಸಲಿ? ಮುಂದೆ ಕಾಲಗತಿಯಲ್ಲಿ, ಚಿರಂಜೀವಿಗಳು ಸಮರ್ಥಿಸುತ್ತಾರೆ ಎನ್ನುವ ದೃಢ ನಂಬಿಕೆಯು ಬೇರೂರಿದೆ, ನನ್ನಲ್ಲಿ.

ಈಶತ್ವ :–ನವ್ಯ ನೂತನ ಸೃಷ್ಟಿಯನ್ನು ಮಾಡುವಂತಹ ಮಹಿಮೆಯನ್ನು ಈಶತ್ವ ಎನ್ನತ್ತಾರೆ.

ಕಾಲಕಾಲಕ್ಕೂ ದೇಶ, ವಿದೇಶಗಳಲ್ಲಿ, ವೈಜ್ಞಾನಿಕ ಸಂಶೋಧನೆಗಳನ್ನು, ಪರೀಕ್ಷಾ ಪ್ರಯೋಗಗಳಿಂದ ವಿಜ್ಞಾನಿಗಳು ನಡಸುತ್ತಾರೆ, ತುಂಬ ಶ್ರದ್ಧೆಯಿಂದ ; ಧಾರಣ, ಧ್ಯಾನಗಳಿಂದ ನವ್ಯ ಸಿದ್ಧಾಂತವನ್ನು ಪ್ರಚಾರ ಮಾಡುತ್ತಾರೆ. ಸಹವಿಜ್ಞಾನಿಗಳು 'ಆಹಾ ! ಎಷ್ಟು ಚೆಂದ ! ಎಷ್ಟು ಸುಲಭ ! ಎಷ್ಟು ದಿಟ' ಎಂದು ಅಚ್ಚರಿ ಪಡುತ್ತಾರೆ. ಒಂದೆರಡು ದಶಕಗಳಲ್ಲಿ ಹೋರಿ ವಿಜ್ಞಾನಿಗಳು ಸ್ಫೂರ್ತಿಯಿಂದ ಸಂಶೋಧನೆಗಳನ್ನು ನಡಸಿ, ಹಿಂದೆ ಒಪ್ಪಿಕೊಳ್ಳಲಾಗಿದ್ದ ಸಿದ್ಧಾಂತಗಳು ಅಸಮರ್ಥನೀಯ. ತಿರುಳಿಲ್ಲದುದು ; ಎಂದು ಸಿದ್ಧಾಂತವನ್ನು ಮಾಡುತ್ತಾರೆ. ಅವರೂ ಕಾಲ ಗತಿಯಲ್ಲಿ ನಿರ್ನಾಮವಾಗುತ್ತಾರೆ. ಆದರೆ ಆ ಕಾಲದ ಧಾರಣ ಧ್ಯಾನಗಳಿಂದ, ಅವರುಗಳು ಮಾಡಿದ ಸಿದ್ಧಾಂತವು ವೈಜ್ಞಾನಿಕ ದೇಶದಲ್ಲಿ 'ಈಶತ್ವ' ವನ್ನು ಪಡೆದಿರುತ್ತದೆ. ನವ್ಯ ನೂತನ ಸೃಷ್ಟಿಯ ಪರಂಪರೆಯೇ ಈಶತ್ವ. ಹಿಂದೆ, ಇಂದು, ಮುಂದು, ಎನ್ನುವುದನ್ನೆಲ್ಲಾ ಒಂದೇ ಎಂಬ ಸಿದ್ಧಾಂತವನ್ನು ಅರಿಯುವುದೇ ಈಶತ್ವ, ಎನ್ನಬಹುದು.

ವಶಿತ್ವ:– ಚರಾಚರ ಪ್ರಪಂಚವನ್ನು ತನ್ನ ಅಧೀನಕ್ಕೆ ವಶಮಾಡಿಕೊಳ್ಳುವುದು.

ಯಮ ನಿಯಮಾದಿಗಳಿಂದ, ಮತ್ತು 'ಸಂಯಮ'ದಿಂದ, ಮನಸ್ಸಿನ ಹಿರಿಯಂಶವೊಂದನ್ನು ಅತ್ಯುನ್ನತ ಶಕ್ತಿಯ ಹಂತಕ್ಕೆ ಏರಿಸಿದನು. ಪ್ರಪಂಚವನ್ನು ವಶಮಾಡಿಕೊಂಡ, ಎಂದರೆ ಚಕ್ರಾಧಿಪತಿಯಾದ ಎನ್ನುವ ಲೌಕಿಕ ಅರ್ಥವು ಬರುವುದಿಲ್ಲ. ಪ್ರಪಂಚದಲ್ಲಿರುವ ಯಾವುದೂ ಆತನನ್ನು ಪ್ರಭಾವಿಸಲಾರದು, ಕದಲಿಸಲಾರದು, ಹಾಗಾಗಿ ವಶಿತ್ವವನ್ನು ಪಡೆದಿದ್ದಾನೆ ಎನ್ನಬೇಕು.

ಅಣಿಮಾದಿಯಾದ ಅಷ್ಟ ಸಿದ್ಧಿಗಳನ್ನು ಈ ರೀತಿಯಲ್ಲಿ ಸಮರ್ಥಿಸಬಹುದು. ಆದರೆ ೭೦ ಕಿಲೋಗ್ರಾಂ ದೇಹವು ಒಂದು ಗ್ರಾಮಿಗೆ ಇಳಿಯುತ್ತದೆ ; ಅಥವಾ ಹತ್ತು ಮೈಲಿಗಳಷ್ಟು ಮೂರೂ ದಿಕ್ಕುಗಳಲ್ಲಿ ಹರಡುತ್ತದೆ, ಎಂದು ವಾಕ್ಯಾರ್ಥ ಮಾಡುವುದು, ಪೆಚ್ಚುತನವೆನಿಸುತ್ತದೆ.

**ರೂಪ ಲಾವಣ್ಯ ಬಲ ವಜ್ರ ಸಂಹನನತ್ವಾನಿ ಕಾಯ ಸಂಪತ್**

ಸಂಯಮದಿಂದ ದೇಹಕ್ಕೆ ರೂಪ, ಲಾವಣ್ಯ, ಬಲ, ದೃಢತೆಗಳು ಲಭಿಸುತ್ತದೆ.

**ಗ್ರಹಣ ಸ್ವರೂಪ ಅಸ್ಮಿತ ಅನ್ವಯಾರ್ಥವತ್ವ ಸಂಯಮಾತ್ ಇಂದ್ರಿಯ ಜಯಃ**

ಇಂದ್ರಿಯಗಳನ್ನು ಗ್ರಹಿಸುವುದು, ಅಥವಾ ತಿಳಿಯುವುದು, ಅವುಗಳ ಸ್ವರೂಪ, ಅವುಗಳು ನನ್ನಲ್ಲಿವೆ ಎಂದು ತಿಳಿಯುವುದು, ಅವುಗಳ ವೈಶಾಲ್ಯತೆ, ಮತ್ತು ಅವುಗಳು ನೀಡುವ ಫಲಿತಾಂಶಗಳು, ಇವುಗಳನ್ನು ಕುರಿತು ಸಂಯಮವನ್ನು ಮಾಡಿದರೆ ; ಅವುಗಳನ್ನು ಜಯಿಸಬಹುದು.

**ತತೋ ಮನೋಜವಿತ್ವಂ ವಿಕಾರಣ ಭಾವಃ ಪ್ರಧಾನ ಯಜಶ್ಚ**

ಇಂದ್ರಿಯಗಳನ್ನು ಜಯಿಸುವುದರಿಂದ, ಮನಸ್ಸಿನ ವೇಗದಂತೆ, ಮನಸ್ಸು ಮತ್ತು ದೇಹದೊಳಗೆ ಇಂದ್ರಿಯಗಳ ಗಮನ, ಆಗಮನಗಳು ; ಬಾಹ್ಯೇಂದ್ರಿಯ ಪ್ರಚಾರಗಳು, ಮತ್ತು ಮೂಲ ಪ್ರಕೃತಿಯ ಸ್ವಾಧೀನವು ಹುಟ್ಟುತ್ತದೆ.

ಕಡೆಯ ಐದು ಸೂತ್ರಗಳ ಸಿದ್ಧಿಗಳನ್ನು ಮಧುಪ್ರತೀಕವೆನ್ನುತ್ತಾರೆ. ಹಾಗೂ ಋತಂಭರ ಪ್ರಜ್ಞಾ ; ಸತ್ಯವಾದ, ತಾನೇ ತಾನಾಗಿ ಲಭಿಸುವ ಅರಿವು, ಇಂತಹ ಅರಿವಿನ ಮೂಲವು ಮಧುಪ್ರತೀಕ ಎಂದೂ ಅರ್ಥಮಾಡುತ್ತಾರೆ.

**ಸತ್ತ್ವ ಪುರುಷಾನ್ವತಾ ಖ್ಯಾತಿ ಮಾತ್ರಸ್ಯ ಸರ್ವ ಭಾವಾಧಿಷ್ಠಾತೃತ್ವಂ ಸರ್ವ ಜ್ಞಾತೃತ್ವಂಚ**

ಸತ್ವ ಮತ್ತು ಆಧಾರವಾಗಿದ್ದುಕೊಂಡು ಮನಸ್ಸನ್ನು ನಡಸುವ ಶಕ್ತಿ. ಇವುಗಳ ಪರಸ್ಪರ ಸಂಬಂಧವನ್ನು ಕುರಿತು ಸಂಯಮವನ್ನು ಮಾಡಿದರೆ, ಸರ್ವಾಧಿಕಾರವು ಮತ್ತು ಸರ್ವಜ್ಞತೆಯೂ ಲಭಿಸುತ್ತದೆ.

**ತತ್ ವೈರಾಗ್ಯತ್ ಅಪಿ ದೋಷ ಬೀಜ ಕ್ಷಯೆ ಕೈವಲ್ಯಂ**

ಈ ಸಿದ್ಧಿಗಳನ್ನು ಗಮನಿಸದಿದ್ದರೆ ಅವುಗಳಲ್ಲಿ ಉದಾಸೀನತೆಯು ಹುಟ್ಟಿದರೆ, ಬಂಧನದ ಎಳೆಗಳು ಕೂಡ ನಾಶವಾಗುತ್ತವೆ. ಆನಂತರ ಕೈವಲ್ಯ ಸ್ಥಿತಿಯು ಮನಸ್ಸಿಗೆ ದೊರೆಯುತ್ತದೆ.

**ಸ್ಥಾನಿ ಉಪನಿಮಂತ್ರಿಣೆ ಸಂಗಸ್ಮಯಾಕರಣಂ ಪುನಃ ಅನಿಷ್ಟಂ ಪ್ರಸಂಗಾತ್**

ಲಭಿಸಿದ ಸಿದ್ಧಿಗಳಲ್ಲಿ ಹೆಮ್ಮೆಯನ್ನಾಗಲೀ, ಆಸಕ್ತಿಯನ್ನಾಗಲೀ ಹೊಂದಿದರೆ, ಅನಿಷ್ಟವು ಪುನಃ ಸಂಭವಿಸಬಹುದು.

**ಕ್ಷಣ ತತ್ ಕ್ರಮಯೋಃ ಸಂಯಮಾತ್, ವಿವೇಕಜಂ ಜ್ಞಾನಂ**

ಕ್ಷಣಕಾಲದ ಮುಂದಿನ ಹಾಗೂ ಹಿಂದಿನ ಕ್ಷಣಗಳಲ್ಲಿ ಸಂಯಮವನ್ನು ರೂಢಿಸಿದರೆ ವಿವೇಕಪೂರಿತವಾದ ಜ್ಞಾನವು ಲಭಿಸುತ್ತದೆ.

**ಜಾತಿ ಲಕ್ಷಣ ದೇಶ್ಯಃ ಅನ್ಯತಾನ್ ಅವಚ್ಛೇದಾತ್ ತುಲ್ಯಯೋಃ ತತಃ ಪ್ರತಿಪತ್ತಿಃ**

ಜಾತಿ ಎಂದರೆ Species ಆಕಾರ, ರೂಪವಿಶೇಷಗಳು ; ಇವುಗಳೆಲ್ಲವೂ ಸಮಾನವಾಗಿರುವಂತೆ ಕಾಣಬಹುದು. ಸಂಯುಮವನ್ನು ಅವುಗಳಲ್ಲಿ

ಮಾಡುವುದರಿಂದ, ಅವುಗಳಲ್ಲಿರುವ ವ್ಯತ್ಯಾಸವು ಮತ್ತು ವಿವೇಕ ಜ್ಞಾನವು ಲಭಿಸುತ್ತದೆ.

**ತಾರಕಂ ಸರ್ವ ವಿಷಯಂ ಸರ್ವಥಾ ವಿಷಯಂ ಅಕ್ರಮಂ ಚ ಇತಿ ವಿವೇಕಜಂ ಜ್ಞಾನಂ**

ವಿವೇಕದಿಂದ ಹುಟ್ಟಿದ ಜ್ಞಾನಕ್ಕೆ ತಾರಕವೆಂದು ಹೆಸರು. ಸಮಸ್ತ ವಿಷಯಗಳೂ ಏಕಕಾಲದಲ್ಲಿ ಅರಿವಾದಾಗ ತಾರಕ ಎನ್ನುತ್ತಾರೆ. ಅರಿವನ್ನುಂಟುಮಾಡುವ ಸಾಮಾನ್ಯವಾದ ವಿಧಾನಗಳಿಂದ, ಈ ವಿಧಾನವು ಪ್ರತ್ಯೇಕವಾದುದು. ಈ ಜ್ಞಾನಕ್ಕೆ ಇಂತಹ ಕ್ರಮ ಎಂಬುದಿಲ್ಲ.

**ಸತ್ತ್ವ ಪುರುಷಯೋಃ ಶುದ್ಧಿ ಸಾಮ್ಯೆ ಕೈವಲ್ಯಂ**

ಸತ್ ಅಂಶವು ರಜಸ್ತಮಗಳಿಂದ ಶುದ್ಧಿಯಾಗಿ, ಮನಸ್ಸಿಗೆ ಆಧಾರವಾದ, ಮೂಲಭೂತವಾದುದರೊಂದಿಗೆ (ಅದನ್ನು 'ಪುರುಷ' ಎನ್ನುತ್ತಾರೆ) ಸಮಸಮವಾದಾಗ ಕೈವಲ್ಯ ಸ್ಥಿತಿಯು ಲಭಿಸುತ್ತದೆ.

**ಕೈವಲ್ಯ ಪಾದ**

ಸಂಯಮದಿಂದ, ಸಮಾಧಿ ಸ್ಥಿತಿಯನ್ನು ದೃಢಪಡಿಸಿದ ಮೇಲೆ, ಮನಸ್ಸಿನಲ್ಲಿ 'ಪ್ರಜ್ಞೆಯು ಕೇವಲ ಒಂದೇ ಶಾಶ್ವತವಾಗಿ ಅಸ್ತಿತ್ವದಲ್ಲಿರುವುದು' ಎಂಬ ಅರಿವು ಮೂಡುತ್ತದೆ. ಕೈವಲ್ಯ ಸ್ಥಿತಿಯ ವಿವರಣೆಗಳನ್ನು ಈ ಭಾಗದಲ್ಲಿ ಕೊಡಲಾಗಿದೆ. 'ಪುನರ್ಜನ್ಮವು ಖಂಡಿತ, ಒಂದು ಜನ್ಮದಲ್ಲಿ ನಡಸಿದ ಯೋಗ ಅಭ್ಯಾಸವು, ಸಮಾಧಿ ಸ್ಥಿತಿಯನ್ನು ಪಡೆಯದೆ ಇರಬಹುದು. ಸಂಯಮವು ಲಭಿಸದೆ ಇರಬಹುದು. ಮುಂದಿನ ಜನ್ಮದಲ್ಲಿ ಹಕ್ಕಿಯಾಗಿ ಹುಟ್ಟಿದರೆ, ಗಾಳಿಯಲ್ಲಿ ಹಾರಾಡುವ ಸಿದ್ಧಿಯನ್ನು ಪಡೆಯಬಹುದು. ಗೂಬೆಯಾಗಿ ಹುಟ್ಟಿದರೆ ಕತ್ತಲೆಯಲ್ಲಿ ಕಾಣುವ ಸಿದ್ಧಿಯನ್ನು ಹೊಂದಬಹುದು.' ಈ ವಿಷಯಗಳನ್ನು ನಿಸ್ಸಂಶಯವಾಗಿ ನಂಬಿದವರಿಗೆ ಕೈವಲ್ಯ ಪಾದದ ಸೂತ್ರಗಳು ಅರ್ಥವಾಗುತ್ತವೆ.

**ಜನ್ಮ, ಔಷಧಿ, ಮಂತ್ರ, ತಪಸ್, ಸಮಾಧಿ, ಜಾ ಸಿದ್ಧಯಃ**

ಐದು ಪ್ರಮುಖ ಭಾಗಗಳನ್ನಾಗಿ ಸಿದ್ಧಿಗಳನ್ನು ವಿಂಗಡಿಸಬಹುದು.

(ಅ) ಜನ್ಮಾದಿಗಳಿಗೆ ಅನ್ವಯಿಸುವಂತೆ ಆಕಾಶದಲ್ಲಿ ಸಂಚರಿಸುವಿಕೆ, ಪಕ್ಷಿಗಳಂತೆ ಅಥವಾ ಜಲಸ್ಥಂಭನವನ್ನು ಮೀನು ಮೊಸಳೆಗಳಂತೆ ಮಾಡುವಿಕೆ. ಊಸರವಳ್ಳಿಯಂತೆ ರೂಪವನ್ನು ಬದಲಾಯಿಸುವಿಕೆ, ಮರಗಳಂತೆ ಬಹುಕಾಲ ಬದುಕಿರುವಿಕೆ. ಇಂತಹ ಸಿದ್ಧಿಗಳು, ಆಯಾ ಪ್ರಾಣಿಗೆ ಹುಟ್ಟಿದಂದಿನಿಂದಲೇ ಲಭಿಸಿರುವ 'ಸಿದ್ಧಿಗಳು' ಪ್ರಾಣಿ ಜನ್ಮವು ಮುಗಿದ ನಂತರ ಹೊಸ ಜನ್ಮವನ್ನು ಪಡೆಯುವಾಗ, ಇತರ ರೀತಿಯ ಸಿದ್ಧಿಗಳು ಆಜನ್ಮ ಬಳುವಳಿಗಳಾಗಿರುತ್ತದೆ.

(ಆ) ಔಷಧಿಗಳು ಎಂದರೆ ಗಿಡ ಮರ ಬಳ್ಳಿಗಳಿಂದ ಉತ್ಪಾದಿತವಾದುವು.

ರಾಸಾಯನಿಕವಾಗಿ ತಯಾರಿಸಿದ ಸಿದ್ಧೌಷಧಿಗಳು. ಶೀತ, ಉಷ್ಣ, ಅಥವಾ ಕಾವು, ಥಂಡಿ ಇತ್ಯಾದಿ ಭೌತ ಪ್ರಕಾರಗಳನ್ನು ಬಳಸುವುದು. ಲೇಹ, ಚೂರ್ಣ ಗುಗ್ಗುಳ ಇತ್ಯಾದಿ ಮಿಶ್ರ ಔಷಧಿಗಳು ಕಾಯಕಲ್ಪವನ್ನು ಮಾಡುವ ಔಷಧಿಗಳು.

ಇಂತಹವುಗಳಲ್ಲಿ ಹಲವು 'ಸಿದ್ಧಿ'ಯನ್ನು ನೀಡುತ್ತದೆ. ಸೋಮರಸವೆಂಬ ವೇದದ ಕಾಲದಿಂದ ಪ್ರಸಿದ್ಧವಾಗಿರುವ ಔಷಧಿಯು, ಹಿಮಾಲಯದಲ್ಲಿ ಕೆಲವು ಗಿಡಗಳ ಎಲೆಗಳ ಮೇಲೆ ಬೆಳೆಯುವ ಬೂಷ್ಟು ಎಂದು, ವೈಜ್ಞಾನಿಕವಾಗಿ ಇಂದು ಅನುಮಾನಿಸಲ್ಪಟ್ಟಿದೆ. ಮೆಕ್ಸಿಕೋ ದೇಶದಲ್ಲಿ ಪುರಾತನ ಕಾಲದಿಂದಲೂ ಪಿಯೋಟಲ್ ಎಂಬ ಮೂಲಿಕೆಯನ್ನು ಪವಿತ್ರ ಕಾರ್ಯವೆಂದು ಸೇವಿಸುತ್ತಿದ್ದರು. ಮೆಸ್ಕಲಿನ್ ಎಂಬ ಔಷಧಾಂಶವು Peoytl ನಲ್ಲಿದೆ. ಭ್ರಮಾಕಾರಕ ಔಷಧಿ ಇದು. ಸೇವಿಸಿದ ನಂತರ ಮನಸ್ಸು ಈ ಲೋಕವನ್ನು ಮರೆತು, ಅತಿ ಸುಂದರವಾದ, ಅತಿ ಸುಖವೀವ ಇನ್ನಾವುದೋ ಭ್ರಮಾಲೋಕದಲ್ಲಿ ವಿಹರಿಸುತ್ತದೆ. ಆ ಸ್ಥಿತಿಯಲ್ಲಿ ಭ್ರಮಾಲೋಕವೇ ಸತ್ಯವಾದುದು, ಮಿಕ್ಕ ಬಾಳು ಮಿಥ್ಯ ಎಂದನಿಸುತ್ತದೆ. ಅಮಲು ಇಳಿದ ಮೇಲೆ, ಅತಿ ಸುಂದರ ಸುಖದ ಸ್ಮರಣೆಯು ಸ್ವಲ್ಪ ಉಳಿದಿರುತ್ತದೆ. ತಿರುಗಿ ಆ ಅನುಭವವನ್ನು ಪಡೆಯುವ ಎಂಬ ಹಂಬಲವಿರುತ್ತದೆ. ಅಮಲು ಕೈವಲ್ಯವನ್ನು ದೊರಕಿಸಿತು ಎನ್ನುವ ಭ್ರಮೆಯು ಇರುತ್ತದೆ.

ಸುಮಾರು ೨೩೦೦ ವರ್ಷಗಳ ಹಿಂದೆ, Hallucinogens ಎಂಬ ಹೆಸರು ಇರಲಿಲ್ಲ. ಆದರೂ ಔಷಧಿಗಳಿಂದ 'ಸಿದ್ಧಿ'ಯನ್ನು ಅಂದರೆ ಅಲೌಕಿಕ ಅನುಭವಗಳನ್ನು ಹೊಂದಬಹುದು ಎಂದು ಮಹರ್ಷಿಗಳು ಹೇಳಿದ್ದಾರೆ. ಅಂದರೆ ಆ ಕಾಲದಲ್ಲಿ ಇಂತಹ ಔಷಧಿಗಳ ಜ್ಞಾನವು ಇದ್ದಿರಲೇಬೇಕು. ಸೋಮ ಎಂಬುದನ್ನು ಬಿಟ್ಟರೆ ಈ ತೆರನ ಔಷಧಿಗಳು ಯಾವುವು ಇದ್ದುವು? ಗಾಂಜಾ, ಅಫೀಮು, ಹುದುಗುನೊರೆಗೂಡಿದ ದ್ರಾಕ್ಷಾರಸ, ಇತ್ಯಾದಿಗಳು ಇದ್ದುವು.

(ಇ) ಮಂತ್ರಗಳು :–ಬಾಲ್ಯದಿಂದಲೂ ಮನೆಯಲ್ಲಿ, ಕಲಿಕೆಯಿಂದ, ಹಾಗೂ ಮನನದಿಂದ, ಪ್ರತಿಯೊಬ್ಬ ವ್ಯಕ್ತಿಯೂ ಮನೆದೇವರು, ಕುಲದೇವತೆ ಎನ್ನುವ ಕಲ್ಪನೆಯನ್ನು ರೂಢಿಸಿಕೊಂಡಿರುತ್ತಾನೆ. ವಿಚಾರಪರ ಮನಸ್ಸಿಗೆ ಇದು ಒಪ್ಪದೆ ಇರಬಹುದು. ಆದರೆ ರೂಢಿಗತವಾದ ಈ ಕಲ್ಪನೆಯು ಸ್ಥಿರವಾಗಿರುತ್ತದೆ.

ಮನೆದೇವರು, ಇಷ್ಟದೇವತೆ, ಎಂದಮೇಲೆ ಅದನ್ನು ಆರಾಧಿಸಲು ಎರಡು ಮಾರ್ಗಗಳಿರುತ್ತವೆ. ಬಹಿರಂಗವಾಗಿ, ಕುಲದವರು ರೂಢಿಸಿಕೊಂಡು ಬಂದ ಪೂಜಾವಿಧಾನ. ಅಭಿಷೇಕ, ಅರ್ಚನೆ, ಬಲಿ, ನೈವೇದ್ಯ ಇತ್ಯಾದಿಗಳು.

ಅಂತರಂಗವಾಗಿ, ಗುರುಗಳಿಂದ ಅಥವಾ ತಂದೆಯಿಂದ ಗುಪ್ತವಾಗಿ ಕಲಿತುಕೊಂಡ ಮಂತ್ರದ ಜಪ. ಜಪಿಸಲ್ಪಡುವ ಮಂತ್ರಗಳು ಸೂತ್ರಗಳಂತೆ ಪುಟ್ಟದಾಗಿರುತ್ತವೆ. ಸಾಂಕೇತಿಕವಾಗಿಯೂ ಇರುತ್ತವೆ. ಮೇಲಿಂದ ಮೇಲೆ ಪುನಃ ಪುನಃ ಈ ಮಂತ್ರಗಳನ್ನು ಜಪಿಸಿದರೆ, ಆಗ ಮನಃಶಕ್ತಿಯು, ಚಂಚಲತೆಯನ್ನು ಸ್ವಲ್ಪ ಮಟ್ಟಿಗಾದರೂ ಕಳೆದುಕೊಳ್ಳುತ್ತದೆ. ದೃಢವಾಗುತ್ತದೆ. ವ್ಯಾಯಾಮವೆಂದಲ್ಲದಿದ್ದರೂ ಅಂಚೆಪೇದೆಯು ಆರೆಂಟು ಮೈಲಿಗಳು ದಿನಾಲೂ ನಡೆಯಬೇಕು. ಬೇಜಾರಿನಿಂದ ನಡೆದರೂ ಅವನ ಮಾಂಸಖಂಡಗಳು, ತೊಡೆಯ ಮಾಂಸಗಳು, ಬಲಗೊಳ್ಳುತ್ತದೆ. ಅದರಂತೆಯೇ ಮಂತ್ರಗಳನ್ನು ಅರ್ಥವಾಗಲೀ, ಆಗದೇ ಇರಲಿ, ಪುನಃ ಪುನಃ ಜಪಿಸಿದರೆ, ಮನಸ್ಸೆಂಬ ಶಕ್ತಿಯು ಬಲಗೊಳ್ಳುತ್ತದೆ.

ಧಾರಣ, ಧ್ಯಾನ ಇವುಗಳಿಗೆ ಸಮನಿಲ್ಲದಿದ್ದರೂ, ಮಂತ್ರ ಪಠಣವು, ಅದೇ ರೀತಿಯ ಫಲವನ್ನು ಅಲ್ಪ ಸ್ವಲ್ಪ ಪ್ರಮಾಣದಲ್ಲಿಯಾದರೂ ಖಂಡಿತವಾಗಿ ನೀಡುತ್ತದೆ.

ಅಂದ ಮೇಲೆ, ಬಾಲ್ಯದಿಂದಲೂ ಮನಸ್ಸಿನಲ್ಲಿ ನೆಲೆಸಿ ಪ್ರತಿಷ್ಠವಾಗಿರುವ, ಇಷ್ಟದೇವತೆಯೆಂಬುದು ಸಿದ್ಧಿಗಳನ್ನು ನೀಡಲೇಬೇಕು. ಏಕೆಂದರೆ ಮನಸ್ಸಿಗೆ ಇಷ್ಟು ದೇವತೆಯೆಂಬುದು ದೃಢವಾದ ಊರೆಗೋಲಾಗಿರುತ್ತದೆ. ಆಗ ಮನಸ್ಸು ತುಂಬು ನಂಬುಗೆಯಿಂದ ಯೋಚಿಸಿ, ನಿರ್ಧರಿಸಿ ಕಾರ್ಯವನ್ನು ಮಾಡಿಸುತ್ತದೆ. ಮನಸ್ಸಿಗೆ ಸ್ಥೈರ್ಯವು ಲಭಿಸಿರುತ್ತದೆ. ಚಂಚಲತೆಯು ಬಹಳಷ್ಟು ಕಡಿಮೆಯಾಗಿರುತ್ತದೆ, ಮನೆದೇವರು, ಇಷ್ಟದೇವತೆ, ಕುಲದೇವತೆ, ಇತ್ಯಾದಿಗಳಲ್ಲಿ ಎಷ್ಟು ನಂಬಿಕೆಯು ಇರುತ್ತದೆಯೋ, ಅದಕ್ಕೆ ಅನುಗುಣವಾಗಿ, ಆಯಾ ಮಂತ್ರಗಳ ಜಪವು ಮನಸ್ಸನ್ನು ಏಕಾಗ್ರ ಚಿತ್ತತೆಯತ್ತ ನಡಸುತ್ತದೆ. ಅದನ್ನನುಸರಿಸಿ ಇಷ್ಟಾರ್ಥಗಳ ಸಿದ್ಧಿಯೂ ಲಭಿಸುತ್ತದೆ.

ತಾಂತ್ರಿಕ ಸಾಧನೆಗಳಲ್ಲಿ ಮಂತ್ರ ಪಠಣ ಮತ್ತು ಜಪಗಳು ಮುಖ್ಯವಾದ ಒಂದು ಅಂಶ. ಬಹಿರಂಗವಾಗಿ ಪೂಜಾ ವಿಧಾನಗಳು, ಇತರರಿಗೆ ಬೀಭತ್ಸ್ಯವಾಗಿ ಕಾಣಬಹುದು. ಆದರೆ ಮನಸ್ಸು ತುಂಬು ನಂಬುಗೆಯಿಂದ ಸ್ಥೈರ್ಯವನ್ನು ಹೊಂದಿರುತ್ತದೆ. ಆದಕಾರಣ ಅವರುಗಳಿಗೂ ಇಷ್ಟಾರ್ಥವು ನೆರವೇರುತ್ತದೆ.

ತಪಸ್ಸು :–ತಪಃ ಎಂದರೆ ಕುದಿಯುವುದು, ಪರಿತಪಿಸುವುದು ಎಂದರೆ ತೀವ್ರವಾಗಿ ಹಂಬಲಿಸುವುದು. ತಪಸ್ ಎಂದರೆ, ಲೌಕಿಕವಾದ ಅಥವಾ ಅಲೌಕಿಕವಾದ ಯಾವುದಾದರೂ ಒಂದು ಸಾಧನೆಗೆ, ಮನಸ್ಸು ಕುತ ಕುತ ಕುದಿಯುವುದು. ಅಕ್ಕಿಯನ್ನು ಹಾಗೆಯೇ ತಿನ್ನಲಾಗುವುದಿಲ್ಲ. ಆದರೆ ನೀರಿನಲ್ಲಿ

ಸಳಮಳ ಕುದಿಸಿ ಅನ್ನವನ್ನು ಮಾಡಿದ ಮೇಲೆ ಉಣ್ಣಲು ಸುಲಭ.

ಆದರೆ ಕೆಲವು ಮಕ್ಕಳೂ ಅಕ್ಕಿಯನ್ನು, ಸೀಮೆಸುಣ್ಣವನ್ನೂ, ಗಾರೆಯನ್ನೂ ತಿನ್ನಲಾರಂಭಿಸುತ್ತವೆ. ಅಂತಹ ಮಕ್ಕಳಲ್ಲಿ ಕಬ್ಬಿಣದ ಅಂಶವು ಕಡಮೆಯಾಗಿರುತ್ತದೆ. ಆದುದರಿಂದ ಮಕ್ಕಳು ಹಾಗೆ ಮಾಡುತ್ತವೆ. ಬೆಳೆದವರಲ್ಲಿಯೂ ಕೂಡ, ಕೆಲವರಿಗೆ ಅಕ್ಕಿಯನ್ನು ಮುಕ್ಕುವ ಚಪಲವು ಉಂಟಾಗುತ್ತದೆ. ಬಯಕೆಯು ಉಂಟಾದವರಲ್ಲಿ ಚಪಲವು ವಿಚಿತ್ರವಾಗುತ್ತದೆ. ಕಬ್ಬಿಣದ ಅಂಶವು ಇವರಲ್ಲಿ ಕಡಿಮೆಯಾಗಿರುವುದರಿಂದ, ಮತ್ತು ಇತರ ಕಾರಣಗಳಿಂದಲೂ, ಹಾಗೆ ಮಾಡುತ್ತಾರೆ.

ಅದರಂತೆಯೇ ಮನಸ್ಸಿನಲ್ಲಿ ಯಾವುದೋ ಲೋಪವಿರುವುದರಿಂದ, ಚಪಲಚಿತ್ತರಾಗುತ್ತಾರೆ. ನಡವಳಿಕೆಯು ಕೂಡ ಅಸ್ತವ್ಯಸ್ತವಾಗಿರುತ್ತದೆ. ಆಗ ಮನಸ್ಸು ತಳಮಳಗೊಂಡು, ಸಳಮಳಮಾಡಿ, ತಪಿಸಿದರೆ, ಕುದಿಯತೊಡಗಿದರೆ, ಮನಸ್ಸು ಚಪಲತೆಯನ್ನು ಕಳೆದುಕೊಂಡು, ಹಸನಾಗುತ್ತದೆ. ಮನಸ್ಸು ಆಗ ವಿಹಿತವಾದ ನಿರ್ಣಯವನ್ನು ಮಾಡಿ, ಇಷ್ಟಾರ್ಥವನ್ನು ಪಡೆಯಲು ಸುಲಭವಾಗುತ್ತದೆ.

ಸಮಾಧಿ :– ಧಾರಣ, ಎಂದರೆ ಮನಸ್ಸನ್ನು ಒಂದು ವಿಷಯದಲ್ಲಿ ನಿರಂತರ ಮನನದಿಂದ ನಿಲ್ಲಿಸುವುದು. ನಂತರ ಧ್ಯಾನ, ಎಂದರೆ ಮತ್ತೆ ಯಾವ ವಿಷಯಗಳೂ ಮನಸ್ಸಿಗೆ ಬಾರದಂತೆ ಸಾಧಿಸುವುದು. ಇವೆರಡನ್ನೂ ದೃಢವಾಗಿಸಿದರೆ, ಸಮಾಧಿಯ ಸ್ಥಿತಿಯನ್ನು ಮನಸ್ಸು ಪಡೆಯುತ್ತದೆ. ಆಗ ಬಾಹ್ಯ ಪ್ರಪಂಚದ ಸೆಳೆತ ಬಹಳಷ್ಟು ಕ್ಷೀಣಿಸುತ್ತದೆ. ಅಂತರಂಗದಲ್ಲಿರಬಹುದಾದ, ಅಥವ ಇರಲೇಬೇಕಾದ, ಅರಿವು ಉಂಟಾಗತೊಡಗುತ್ತದೆ. ಇಂತಹ ಅಲೌಕಿಕ ಅರಿವು ಬ್ರಹ್ಮಾಂಡದ ಅರಿವು ಹಂತಹಂತವಾಗಿ ಅಭಿವೃದ್ಧಿಯಾಗುತ್ತದೆ. ಹಾಗೂ ಹೆಚ್ಚು ಹೆಚ್ಚು ಕಾಲ ಇರತೊಡಗುತ್ತದೆ. ಸಮಾಧಿ ಸ್ಥಿತಿಯನ್ನು ಮನಸ್ಸಿನಲ್ಲಿ, ಮನಸ್ಸಿನ ಮೂಲಕವೇ ಸಾಧಿಸಿಕೊಂಡರೆ, ಮನಸ್ಸಿನ ಆಟ ಅವತಾರಗಳೆಲ್ಲಾ ನಿರೋಧಿಸಲ್ಪಟ್ಟಾಗ, ಲಭಿಸುವ ಸಿದ್ಧಿಗಳನ್ನು ಮೊದಲ ಮೂರು ಪಾದಗಳ ವಿವರಣೆಯಲ್ಲಿ ತಿಳಿಸಲಾಗಿದೆ. ಇದೇ ಯೋಗ ಫಲಗಳು.

ಪೂರ್ವಜನ್ಮದಲ್ಲಿ ಸಾಧಿಸಿಕೊಂಡ, ಯಾವ ಹಂತದ ಅಥವಾ ಕಾಲ ಪರಿಮಿತಿಯ ಸಮಾಧಿಯು ಮುಂದಿನ ಜನ್ಮಗಳಲ್ಲಿ ಅಭಿವೃದ್ಧಿಯನ್ನು ಹೊಂದುತ್ತವೆ. ಹೀಗಂದಾಗ ಪುನರ್ಜನ್ಮವು ಇದ್ದೇಇರುತ್ತದೆ ಎಂಬುದನ್ನು ಒಪ್ಪಿಕೊಳ್ಳಬೇಕು. ಅನಂತರವೇ ಪತಂಜಲಿ ಮಹರ್ಷಿಗಳ ಯೋಗ ವಿಚಾರ ಸರಣಿಯನ್ನು ಅರ್ಥಮಾಡಿಕೊಳ್ಳಬಹುದು.

ಜನ್ಮ : ಪುನರ್‌ಜನ್ಮ ; ಇವುಗಳ ವಿಶ್ಲೇಷಣೆಯು ಇಲ್ಲಿ ಅಪ್ರಕೃತ. ಆದರೆ

ವೈಜ್ಞಾನಿಕವಾಗಿ ಪುನರ್‌ಜನ್ಮವನ್ನು ಸಿದ್ಧಾಂತ ಮಾಡಬಹುದು, ಎಂದು ಮಾತ್ರ ಹೇಳಿದರೆ ಸಾಕು.

**ಜಾತ್ಯಂತರ ಪರಿಣಾಮಃ ಪ್ರಕೃತಿ ಅಪರಾತ್**

ಜನ್ಮ ಒಂದರಲ್ಲೇ, ಪೂರ್ವಾಂತರ ಜನ್ಮಗಳ ಪರಿಣಾಮಗಳು ಪೂರ್ಣವಾಗಿ ಮುಗಿದುಹೋಗುವುದರಿಂದ, ಮನಸ್ಸು ಹೊಸ ಅರಿವು ಮತ್ತು ಧ್ಯೇಯಗಳನ್ನು Metamorphosis ಆದಂತೆ ಪಡೆಯಲು ಸಾಧ್ಯ. ಜಿಪುಣಾಗ್ರೇಸರನಾದ, ಕಾಸಿನ ಮೇಲಿನ ಕಿಲುಬನ್ನು ಪುನುಗು ಎಂದು ಶೇಖರಿಸುವವನು, ಯಾವುದೋ ಒಂದು ಘಟನೆಯಿಂದ, ಧನಕನಕಾದಿಗಳನ್ನೆಲ್ಲ ಸರ್ವರಿಗೂ ದಾನ ಮಾಡಿ, ಪುರಂದರದಾಸನಾದುದು ಈ ಸೂತ್ರಕ್ಕೆ ಸಾಕ್ಷಿ. ಜೀವನದ ಅಗತ್ಯ ಮೌಲ್ಯಗಳು ಎಂದು ದೃಢವಾಗಿ ನಂಬಿದ್ದವನು, ಹಠಾತ್ತನೆ, ಅಂತಹ ಮೌಲ್ಯಗಳನ್ನು ತೃಣೀಕರಿಸಿ, ತೀವ್ರ ವಿರುದ್ಧವಾದ ಮೌಲ್ಯಗಳನ್ನು ಕಾಯಾ ವಾಚಾ ಮನಸಾ ಸ್ವೀಕರಿಸುವುದನ್ನು ಇಂದಿನ ಜೀವನದಲ್ಲಿಯೂ ಕಾಣುತ್ತೇವೆ. ದೇಶಾದ್ಯಂತ ಸುಪ್ರಸಿದ್ಧನಾದ ವಿಜ್ಞಾನಿಯು, ನವ್ಯ ದೃಷ್ಟಿಯೊಂದನ್ನು ಪಡೆದು, ಮೌಢ್ಯ ಎಂದು ಅನ್ನಿಸಿಕೊಳ್ಳುವಂತೆ, ನಡೆದುಕೊಳ್ಳುತ್ತಾನೆ. ಸಹೋದ್ಯೋಗಿಗಳಿಗೆ ಅಚ್ಚರಿ ತಂದರೂ, ಹೀಗಾಗುವುದು ಪೂರ್ವಜನ್ಮಗಳ ಪರಿಣಾಮವು ಮುಗಿದುಹೋದದ್ದರಿಂದ. ಅದೂ ಈ ಜನ್ಮದ ಒಂದು ಹಂತದಲ್ಲಿ.

ಮನಸ್ಸಿನ ರೂಢಿಗತವಾದ ಗುರಿ ಮತ್ತು ಆಚರಣೆಗಳು ಒಂದು ಜಾತಿಯವು. ಹಠಾತ್ತನೆ ವಿರುದ್ಧವಾದ ಗುರಿ ಮತ್ತು ಆಚರಣೆಗಳನ್ನು ನಂಬತೊಡಗಿದಾಗ ಬೇರೆ ಜಾತಿಯೇ ಆರಂಭವಾದಂತಾಯಿತು. ಈಗಿನ ಕಾಲದಲ್ಲಿ 'ಜಾತಿ' ಎನ್ನುವ ಅರ್ಥಕ್ಕೂ ಪತಂಜಲಿಗಳ ಕಾಲದ ಜಾತಿ ಎಂಬ ಪದದ ಅರ್ಥಕ್ಕೂ ಅರ್ಥಾರ್ಥಕ ಸಂಬಂಧವಿಲ್ಲ ಎನ್ನುವುದನ್ನು ಮರೆಯಬಾರದು.

**ನಿಮಿತ್ತಂ ಅಪ್ರಯೋಜಕಂ ಪ್ರಕೃತೀನಾಂ ವರಣ ಭೇದಸ್ತು ತತಃ ಕ್ಷೇತ್ರಿಕವತ್**

ಒಂದೇ ಜನ್ಮದಲ್ಲಿ ಒಂದು ಹಂತದಲ್ಲಿ ಜಾತ್ಯಂತರವಾಗುವುದು, ಹಿಂದಿನ ಜನ್ಮಗಳ ಕರ್ಮಗಳಿಂದ ಮಾತ್ರವಲ್ಲ, ಕರ್ಮಗಳು ಬಂಧಿತವಾದ, ಎಲ್ಲೆಗಳು, ಅಡ್ಡಿ ತೊಡಕುಗಳೂ ಇರುವ ಮಾರ್ಗದಲ್ಲಿ ಮಾತ್ರ ಪರಿಣಾಮವನ್ನು ಬೀರುತ್ತವೆ. ಆದರೆ 'ಸಂಯಮ'ದಿಂದಾಗಿ, ಅಡ್ಡಿ ತೊಡಕುಗಳನ್ನು ಕಿತ್ತೊಗೆದು, ಇನ್ನೊಂದು ವಿಹಿತ ಮಾರ್ಗದಲ್ಲಿ ನಡೆಯುವಂತೆ ಮಾಡಬಹುದು.

**ನಿರ್ಮಾಣ ಚಿತ್ತಾನಿ ಅಸ್ಮಿತಾ ಮಾತ್ರಾತ್**

'ಸಂಯಮ'ದಿಂದಾಗಿ ಮನಸ್ಸನ್ನು ಸ್ಥಿರಗೊಳಿಸಿದ ಮೇಲೆ, ಪೂರ್ವ ಜನ್ಮಗಳ

ವಾಸನೆಗಳು ಉಳಿದಿರಬಹುದು. ಆಗ 'ಸಂಯಮ'ದಿಂದಾಗಿ ಯೋಗಿಯಾದವನು ಮನಸ್ಸನ್ನು ನಡಸುವ ಮಹತ್ ತತ್ತ್ವದಿಂದ ಸ್ಮರಿಸಿದ ತತ್‌ಕ್ಷಣ ಅನೇಕ ಮನಸ್ಸುಗಳನ್ನೂ, ಅವುಗಳಿರುವ ಅನೇಕ ದೇಹಗಳನ್ನೂ ಸೃಷ್ಟಿಸಬಲ್ಲನು. ಅವುಗಳ ಮೂಲಕ, ಪೂರ್ವಜನ್ಮಗಳಿಂದ ಉಳಿದಿರಬಹುದಾದ ವಾಸನೆಗಳನ್ನು ಪೂರೈಸಿ, ಏಕಕಾಲದಲ್ಲಿ ಅವುಗಳನ್ನು ನಾಶಪಡಿಸಬಹುದು.

**ಪ್ರವೃತ್ತಿ ಭೇದೇ ಪ್ರಯೋಜಕಂ ಚಿತ್ತಮೇಕಂ ಅನೇಕೇಷಾಂ**

ಅನೇಕ ಮನಸ್ಸು ಮತ್ತು ದೇಹಗಳಲ್ಲಿ, ಚಿತ್ತವೃತ್ತಿಗಳು ನಡೆಯುತ್ತಿದ್ದರೂ, ಯೋಗಿಯ ಚಿತ್ತವು ಸ್ಥಿರವಾಗಿ, ಸ್ವಯಂಪೂರ್ಣವಾಗಿ ಇರುತ್ತದೆ. ಅಂದರೆ ಸಂಯಮವನ್ನು ಸಾಧಿಸಿದ ಯೋಗಿಯು, ಮನಸ್ಸನ್ನು ಅತಿಕ್ರಮಿಸಿರುತ್ತಾದ್ದರಿಂದ, ಇತರ ಮನಸ್ಸು ಮತ್ತು ದೇಹಗಳನ್ನು ಸೃಷ್ಟಿಸಿದರೂ, ತಾನು ಒಂದೇ ರೀತಿಯಲ್ಲಿ ಸ್ಥಿರವಾಗಿರುತ್ತಾನೆ.

**ತತ್ರ ಧ್ಯಾನ ಜಂ ಅನಾಶಯಂ**

ಧ್ಯಾನ ಸಮಾಧಿಗಳಿಂದ ಅರಿಯಲ್ಪಟ್ಟ ಚಿತ್ತವು, ಹಿಂದಿನ ಜನ್ಮಗಳ ಕರ್ಮ ವಾಸನಾರಹಿತವಾಗಿರುತ್ತದೆ. ಜನ್ಮ, ಔಷಧಿ, ಮಂತ್ರ, ತಪಸ್ಸು, ಈ ಎಲ್ಲವುಗಳಿಂದಲೂ ಲಭಿಸಿದ ಸಿದ್ಧಿಗಳಿಗೆ ಕರ್ಮವಾಸನೆಗಳಿರುತ್ತವೆ. ಆದರೆ ಸಮಾಧಿಯಿಂದ ಲಭಿಸಿದ ಚಿತ್ತವು ಕರ್ಮವಾಸನಾ ರಹಿತವಾಗಿರುತ್ತದೆ.

**ಕರ್ಮಾ ಶುಕ್ಲ ಕೃಷ್ಣಂ ಯೋಗಿನಸ್ತ್ರಿವಿಧಂ ಇತರೇಷಾಂ**

**ತತಸ್ ತದ್ ವಿಪಾಕಾನು ಗುಣಾನಾಂ ಏವಾಭಿವ್ಯಕ್ತಿರ್ವಾಸನಾನಾಂ**

**ಜಾತಿ ದೇಶ ಕಾಲ ವ್ಯವಹಿತಾನಾಂ ಅಪಿ ಆನಂತರ್ಯಂ ಸ್ಮೃತಿ ಸಂಸ್ಕಾರಯೋಃ ಏಕ ರೂಪತ್ವಾತ್**

**ತಾಸಾಂ ಅನಾದಿತ್ವಂ ಚ ಆಶಿಷೋ ನಿತ್ಯತ್ವಾತ್**

**ಹೇತು ಫಲಾಶ್ರಯಾಲಂಬನೈ ಸಂಗ್ರಹೀತತ್ವಾದ್ ಏಷಂ ಅಭಾವೇ ತದಭಾವಃ**

**ಅತೀತಾನಾಗತಂ ಸ್ವರೂಪತೋಽ ಸ್ತ್ಯಧ್ವಭೇದಾತ್ ಧರ್ಮಾಣಾಂ**

ಈ ಸೂತ್ರಗಳಲ್ಲಿ, ಕರ್ಮಗಳು, ಅವುಗಳ ಮೂರು ಬೇಧಗಳು ; ಪುಣ್ಯ ಪಾಪ ಮಿಶ್ರ ಕರ್ಮಗಳು ; ಜನ್ಮಾದಿ ವಾಸನೆಗಳು ಚಿತ್ತದಲ್ಲಿದ್ದು ಸಮಾನ ದೇಹಗಳು ದೊರೆತಾಗ ಕಾಣಿಸಿಕೊಳ್ಳುವುದು ; ಸ್ಮೃತಿ ಸಂಸ್ಕಾರಗಳ ಪರಿಹಾರ ಮಾಡಿಕೊಳ್ಳುವ ಉಪಾಯಗಳು ; ಇತ್ಯಾದಿ ಇತ್ಯಾದಿ ವಿವರಿಸುತ್ತಾರೆ.

ಇಂದಿನ ಮನೋವೈಜ್ಞಾನಿಕ ಹಂತದಲ್ಲಿ ; ಜನ್ಮ ಜನ್ಮಾಂತರಗಳಲ್ಲಿ ಮಾಡಿದ ಕರ್ಮ ಫಲಗಳನ್ನು ನಿಖರವಾಗಿ ನಿರ್ಧರಿಸುವುದು ಸಾಧ್ಯವಾಗಿಲ್ಲ. ಆದರೆ

Hereditary characters ಎಂಬುವು ದೇಹದ ವಿಷಯದಲ್ಲಿ ಸಾಮಾನ್ಯ ಅನುಭವದಿಂದಲೂ ಹಾಗೂ ವೈಜ್ಞಾನಿಕವಾಗಿಯೂ ಸಮರ್ಥನೀಯವಾಗಿವೆ. Memory is the deified from of hereditary characteristics ಎಂದು ಥಾಮಸ್ ಮ್ಯಾನ್ ಹೇಳಿದ್ದಾನೆ. ಮನಸ್ಸು ಎಂಬ ಶಕ್ತಿಯ ವಿಚಾರವು ಇಂದಿನ್ನೂ ನಮಗೆ ವಿಶದವಾಗಿ ತಿಳಿದಿಲ್ಲ. ದೇಹವು ಇಲ್ಲವಾದಾಗ, ಮನಸ್ಸೂ ಶೂನ್ಯವಾಗುತ್ತದೆಯೇ? ಅಥವಾ ಇನ್ನೊಂದು ತರಹ ಶಕ್ತಿಯಾಗಿ ಪರಿವರ್ತನೆಯನ್ನು ಹೊಂದುತ್ತದೆಯೇ? ಯಾರೂ ತಿಳಿದಿಲ್ಲ. ಪುನರ್ಜನ್ಮವನ್ನು ನಂಬಿದವರು, ಸತ್ತವರ ಮನಸ್ಸು ಅಥವಾ ಅದರ ಮುಖ್ಯಾಂಶವೊಂದು ಉಳಿದಿರುತ್ತದೆ. ಆದರೆ ಅದಕ್ಕೆ ದೇಹವಿಲ್ಲದಿದುದರಿಂದ, ಇತರ ಲೌಕಿಕರ ಕಣ್ಣಿಗೆ ಕಾಣುವುದಿಲ್ಲ. ಇನ್ನೊಂದು ದೇಹವು, ಯಾವ ಪ್ರಾಣಿಯದೇ ಆಗಲಿ ದೊರೆತರೆ, ಅದರಲ್ಲಿ ಪ್ರತಿಷ್ಠಿತವಾಗಿ, ಆ ದೇಹದೊಂದಿಗೆ ಜನಿಸುತ್ತದೆ. ಇದನ್ನು ನಂಬುವುದಾದರೆ, ಹಿಂದಿನ ಜನ್ಮದ ಕರ್ಮಫಲಗಳು ಅಥವಾ ಸ್ಮರಣೆಗಳು, ಅಂತಹ ಮನಸ್ಸಿನಲ್ಲಿ ಉಳಿದಿರುವುದು ಸಮರ್ಥನೀಯ. ಈ ದೃಷ್ಟಿಯಿಂದ ನೋಡಿದರೆ ಮೇಲೆ ಉಲ್ಲೇಖಿಸಿರುವ ಸೂತ್ರಗಳು ಅರ್ಥಗರ್ಭಿತವಾಗಿರುತ್ತವೆ.

**ತೇ ವ್ಯಕ್ತ ಸೂಕ್ಷ್ಮ ಗುಣಾತ್ಮಾನಃ**

ತೇ, ಎಂದರೆ ಭೂತ, ವರ್ತಮಾನ, ಭವಿಷ್ಯ :–ವ್ಯಕ್ತವಾದುವು, ಮತ್ತು ಅವ್ಯಕ್ತವಾದುವು, ಅನುಭವಿಸಿದುದು, ಹಾಗೂ ಅತಿ ಸೂಕ್ಷ್ಮವಾಗಿದ್ದು ಇನ್ನೂ ಅನುಭವಕ್ಕೆ ಬಾರದೆ ಇರುವುವು, ಇವೆಲ್ಲವೂ ಸತ್ವ, ರಜಸ್, ತಮೋಗುಣಗಳ ವಿಧ ವಿಧವಾದ ಸಮ್ಮಿಶ್ರಣದ ಫಲಗಳು. ಮೂರೂ ಈ ಗುಣಗಳ ಮೊದಲ ಅವಸ್ಥೆಯು 'ಮಹತ್' ತತ್ತ್ವ ಎಂದು ಸಾಂಖ್ಯಕಾರಕರೂ, ಚಿತ್ತ ಎಂದು ಯೋಗವಾದಿಗಳೂ ಹೆಸರಿಸುತ್ತಾರೆ.

**ಪರಿಣಾಮೈಕತ್ವಾದ್ ವಸ್ತು ತತ್ತ್ವಂ**

ಮೂರು ಗುಣಗಳ ಪರಿಣಾಮದ ಐಕ್ಯದಿಂದ, ವಸ್ತುವು ಒಂದು ಎಂಬ ಭಾವನೆಯು ಮೂಡುತ್ತದೆ.

**ವಸ್ತು ಸಾಮ್ಯೇ ಚಿತ್ತ ಭೇದಾತ್ ತಯೋ ವಿಭಕ್ತಃ ಪಂಥಾಃ**

ಭೇದ ಭೇದವಾದ ಮನಸ್ಸುಗಳಿರುವುದರಿಂದ, ವಸ್ತುವು ಒಂದೇ ಆಗಿದ್ದರೂ, ಅದು ವಿಧವಿಧವಾಗಿ ಕಾಣಿಸುತ್ತದೆ ; ಅಥವಾ ಗ್ರಹಿಸಲ್ಪಡುತ್ತದೆ. ಸ್ತ್ರೀಯು ಒಬ್ಬಳೇ ಆಗಿದ್ದರೂ, ಪ್ರಿಯನ ಮನಸ್ಸಿನಲ್ಲಿ ಆಹ್ಲಾದವನ್ನುಂಟುಮಾಡಿ, ಸವತಿಯ ಮನಸ್ಸಿನಲ್ಲಿ ಮತ್ಸರವನ್ನು ಮಾಡಿ, ಸಂನ್ಯಾಸಿಯ ಮನಸ್ಸಿನಲ್ಲಿ ಯಾವ ಪರಿಣಾಮವನ್ನೂ

ಹೊಡದೆ ವಿಧವಿಧ ಪ್ರತಿಕ್ರಿಯೆಗಳನ್ನು ಉಂಟುಮಾಡುತ್ತಾಳೆ. ವಸ್ತುವು ಒಂದೇ ಆಗಿದ್ದರೂ, ನೋಡಿದವರ ಮನಸ್ಸು ವಿಧವಿಧವಾಗಿರುವುದರಿಂದ, ವಿಭಿನ್ನವಾದ ಪರಿಣಾಮಗಳು ಅವರುಗಳ ಮನಸ್ಸಿನಲ್ಲಿ ಉಂಟಾಗುತ್ತದೆ.

**ತತ್ ಉಪರಾಗಾ ಪ್ರೇಕ್ಷಿತ್ವಾತ್ ಚಿತ್ತಸ್ಯ ವಸ್ತು ಜ್ಞಾತ, ಅಜ್ಞಾತಂ**

ಯಾವುದಾದರೂ ವಸ್ತುವನ್ನು ನೋಡಿದರೆ, ಅದರ ರೂಪವನ್ನು ಮನಸ್ಸು ಆ ಕ್ಷಣಾವಧಿಯಲ್ಲಿ ಹೊಂದುತ್ತದೆ. ಮನಸ್ಸೆಂಬ ಶಕ್ತಿಯು ಸರ್ವಾಂತರ್ಯಾಮಿ ಯಾಗಿದೆ. ಅಂದರೆ ಪ್ರಪಂಚವೆಲ್ಲಾ ಮನಸ್ಸಿಗೆ ವ್ಯಕ್ತವಾಗಬೇಕು. ಆದರೆ ನೋಡಿದುದರಲ್ಲಿ ಸ್ವಲ್ಪ ಭಾಗವನ್ನು ಮಾತ್ರ ಗ್ರಹಿಸುತ್ತೇವೆ. ಏಕೆಂದರೆ ನೋಡುವುದರ ಜತೆಗೆ, ಉಪರಾಗ ಎಂದರೆ ಎಂತದಾದರೂ ತುಸು ಆಸಕ್ತಿ ಅಥವಾ ರಾಗ ಪ್ರಚೋದನೆಯನ್ನು ಮಾಡಬೇಕು, ಆಗ ಗ್ರಹಿಸಲು ಸಾಧ್ಯ. ಆಸಕ್ತಿಯು ಉಂಟಾಗಬೇಕಾದರೆ, ಮನಸ್ಸನ್ನು ತತ್ಕಾಲಾವಧಿಯಲ್ಲಿ, ಮತ್ತೊಂದು ಮನಸ್ಸಿನಲ್ಲಿ ಅಡಗಿರುವ ಶಕ್ತಿಯು ಪ್ರಚೋದಿಸಬೇಕು. Perception ಅಥವಾ ಗ್ರಹಿಸುವಿಕೆಗೆ, ಇತ್ತ ಇಂದ್ರಿಯಗಳು ಮತ್ತು ಇಂದ್ರಿಯಾರ್ಥಭ್ಯಗಳು ಇರಬೇಕು. ಮತ್ತೊಂದು ಕಡೆ ಮನಸ್ಸನ್ನು ಆಸಕ್ತಿ ವಹಿಸುವಂತೆ ಪ್ರಚೋದಿಸುವ ಶಕ್ತಿಯು ಇರಬೇಕು. ಹಾಗಾದಾಗ ಇವೆರಡರ ಮಧ್ಯದಲ್ಲಿರುವ ಮನಸ್ಸು ಕಂಡುದನ್ನು ಗ್ರಹಿಸುತ್ತದೆ. ಕಂಡುದು Conscious mind ಇಗೆ ವ್ಯಕ್ತವಾಗುತ್ತದೆ. ಹಾಗೆ ಪ್ರಚೋದನೆಯಾಗದಿದ್ದರೆ, ಮನಸ್ಸು, ಅಜ್ಞಾತಂ, ಗ್ರಹಿಸುವುದಿಲ್ಲ.

**ಸದಾ ಜ್ಞಾತಾಃ ಚಿತ್ತ ವೃತ್ತಯಃ ತತ್ ಪ್ರಭೋಃ ಪುರುಷಸ್ಯಾ ಪರಿಣಾಮಿತ್ವಾತ್**

ತತ್ ಪ್ರಭೋಃ, ಮನಸ್ಸಿನಲ್ಲಿ ಹುದುಗಿದ್ದುಕೊಂಡು, ಪ್ರಭುವಿನಂತೆ ಮನಸ್ಸನ್ನು ನಡಸುವ ಶಕ್ತಿಯು, ಸದಾ ಜ್ಞಾತಾಃ ಎಲ್ಲವನ್ನೂ ಎಲ್ಲ ಕಾಲದಲ್ಲೂ ಅರಿತಿರುತ್ತದೆ. ಚಿತ್ತವೃತ್ತಿಗಳ ಪರಿಣಾಮದಿಂದ ಆಗುವ ಗ್ರಹಿಸುವಿಕೆಯು ಆ ಶಕ್ತಿಯಿಂದಲೇ. ಆ ಶಕ್ತಿಯನ್ನು 'ಪುರುಷ' ಎಂದು ಹೆಸರಿಸಿದ್ದರು. 'ಪುರುಷ'ನು ಚಿತ್ತವೃತ್ತಿಗಳಿಗೆ ಪ್ರಚೋದಕನಾಗಿದ್ದರೂ, ಚಿತ್ತವೃತ್ತಗಳಿಗೆ ಸಾಕ್ಷಿಯಾಗಿದ್ದರೂ, ಅವುಗಳಿಂದ ಯಾವ ಸೋಂಕನ್ನೂ ಪಡೆಯುವುದಿಲ್ಲ. ಮೆದುಳಿನಲ್ಲಿರುವ ಆನಂದದ ಕೇಂದ್ರಗಳ ಪ್ರಚೋದನೆಯಿಂದ, ಇದು ಸಾಧ್ಯವಾಗುತ್ತದೆ ಎಂದು ಊಹಿಸಬಹುದು.

**ನ ತತ್ ಸ್ವಾಭಾಸಂ ದೃಶ್ಯತ್ವಾತ್**

ಮನಸ್ಸು ಎಂಬುದನ್ನು ಗ್ರಹಿಸಬಹುದು. ಆದರೆ ಮನಸ್ಸನ್ನು ಪ್ರಚೋದಿಸುವ 'ಪುರುಷ' ಎಂಬುದು ಮನಸ್ಸಿನ ಎಲ್ಲ ಪರಿವರ್ತನೆಗಳಿಗೆ ಸಾಕ್ಷಿಯಾಗಿರುತ್ತದೆ. ಕಾಣುತ್ತದೆ. ಆದಕಾರಣ ಮನಸ್ಸು. ಸ್ವಯಂಪ್ರಕಾಶಮಾನವಾದುದಲ್ಲ. 'ಪುರುಷ'

ಮಾತ್ರ ಸ್ವಯಂ ಪ್ರಕಾಶಮಾನವಾದುದು.

**ಏಕ ಸಮಯೇಚ ಉಭಯಾನ್ ಅವಧಾರಣಂ**

ಒಂದೇ ಕಾಲದಲ್ಲಿ ಚಿತ್ತವು ತನ್ನ ಸ್ವರೂಪವನ್ನೂ, ವಸ್ತುವನ್ನೂ ಕೂಡ ಗ್ರಹಿಸಲಸಾಧ್ಯ. ಆದಕಾರಣ ಚಿತ್ತವು ಸ್ವಪ್ರಕಾಶವಾದದ್ದಲ್ಲ. ಆದರೆ ದೃಶ್ಯವಾಗಬಹುದು. ಪುರುಷನ ಸ್ವಯಂ ಪ್ರಕಾಶದಿಂದ ಪ್ರಚೋದಿತವಾದಾಗ.

**ಚಿತ್ತಾಸ್ತರ ದೃಶ್ಯೇ ಬುದ್ಧಿ ಬುದ್ಧೇತ್ ಅತಿ ಪ್ರಸಂಗಃ ; ಸ್ಮೃತಿ ಸಂಕರಶ್ಚ**

ಮನಸ್ಸು ಸ್ವಯಂ ಪ್ರಕಾಶವಲ್ಲದಿದ್ದರೂ, ಬೇರೊಂದು ಮನಸ್ಸಿನಿಂದ ಪ್ರಕಾಶಗೊಳ್ಳಬಹುದು ಎಂದು ಅನ್ನಬಹುದು. ಆದರೆ ಈ ವಾದವು ಅತಿಪ್ರಸಂಗ. ಬೇರೊಂದು ಮನಸ್ಸನ್ನು ಪ್ರಚೋದಿಸಲು, ಮತ್ತೊಂದು ಮನಸ್ಸು ಅಗತ್ಯ. ಈ ತೆರನಾಗಿ ಇದಕ್ಕೆ ಆದಿಯಾದ ಮನಸ್ಸು ಯಾವುದು ಎಂದು ತಿಳಿಯಲಸಾಧ್ಯ. 'ಪುರುಷ'ನ ಪ್ರಚೋದನೆಯು ಎಲ್ಲ ಮನಸ್ಸುಗಳಿಗೂ ಆಧಾರ ಭೂತವಾದುದು ಎಂಬುದು ಖಚಿತವಾಗುತ್ತದೆ.

ಅಲ್ಲದೆ ಪ್ರತಿಯೊಂದು ಮನಸ್ಸಿನ ಸ್ಮರಣೆಗಳು ಕೂಡಿಕೊಂಡು, ಇನ್ನೊಂದು ಮನಸ್ಸನ್ನು ಪ್ರಚೋದಿಸುವಾಗ, ಭ್ರಮಣೆ ಮತ್ತು ಗೊಂದಲಗಳೂ ಉಂಟಾಗುತ್ತವೆ.

**ಚಿತೇರ್ ಅಪ್ರತಿ ಸಂಕ್ರಮಾಯಾಃ ತದಾ ಕಾರಾಪತ್ತೌ ಸ್ವಬುದ್ಧಿ ಸಂವೇದನಂ**

ಚಿತ್ತವು ಅಥವಾ ಮನಸ್ಸು ವೃತ್ತಿಗಳಿಂದ ಬಾಧಿಸಲ್ಪಡದಿದ್ದಾಗ, ಚಿತ್ತದಲ್ಲಿರುವ 'ಪುರುಷ'ನ ಅರಿವು ಉಂಟಾಗುತ್ತದೆ. 'ಪುರುಷ'ನಲ್ಲಿ ಎರಡು ತೆರನ ಅಂಶಗಳಿವೆ. ಒಂದು, ನಿತ್ಯೋದಿತ ; ಶಾಶ್ವತವಾಗಿರುವುದು. ಎರಡು, ಅಭಿವ್ಯಂಗ್ಯ. ಈ ಅಂಶವು ಮನಸ್ಸನ್ನು ವ್ಯಾವಹಾರಿಕವಾಗಿಯೂ ಹಾಗೂ ಪಾರಮಾರ್ಥಿಕವಾಗಿಯೂ, ಪ್ರಚೋದಿಸುತ್ತದೆ. ಪಾರಮಾರ್ಥಿಕವಾಗಿ ನಡೆಯತೊಡಗಿದರೆ, ಮನಸ್ಸು, ಹಸನಾದಾಗ 'ಪುರುಷ'ನನ್ನು ಅರಿಯುತ್ತದೆ.

**ದೃಷ್ಟೃ ದೃಶ್ಯೋ ಪರಕ್ತಂ ಚಿತ್ತಂ ಸರ್ವಾರ್ಥಂ**

ಮನಸ್ಸನ್ನು ಪ್ರಚೋದಿಸಿ ನಡಸುವ ಪುರುಷ : ಮತ್ತು ಮನಸ್ಸಿನಿಂದ ಬಾಹ್ಯ ಲೋಕದ ವಿಷಯಗಳನ್ನು ತಿಳಿದುಕೊಳ್ಳುವ ರೀತಿ ; ಇವೆರಡೂ ಯೋಗ ಅಥವಾ ಒಟ್ಟು ಗೂಡಿದರೆ ಸರ್ವ ವಿಷಯಗಳನ್ನೂ ತಿಳಿದುಕೊಳ್ಳಬಹುದು. ಆಗ ಬಾಹ್ಯ ಲೋಕದ ಭೋಗಗಳ ನಶ್ವರತ್ವವೂ, 'ಪುರುಷ'ನ ಅರಿವಿನ ಶಾಶ್ವತತ್ತ್ವವೂ, ಸ್ಪಷ್ಟವಾಗಿ ತಿಳಿಯುತ್ತದೆ. ಶಾಶ್ವತವಾದುದರತ್ತ ಸುಲಭವಾಗಿ ಮನಸ್ಸು ಹರಿಯತೊಡಗುತ್ತದೆ.

**ತತ್ ಅಸಂಖ್ಯೇಯ ವಾಸನಾಭಿಃ ಚಿತ್ರಮಪಿ ಪರಾರ್ಥಂ ಸಂಹತ್ಯೆ ಕಾರಿತ್ವಾತ್**

'ಪುರುಷ' ಎನ್ನುವ ಪರಮಶಕ್ತಿಯು ಮನಸ್ಸನ್ನು ನಡಸುತ್ತದೆ. ಮನಸ್ಸಾದರೋ ಬಾಹ್ಯ ಪ್ರಪಂಚದ ಸಂಪರ್ಕವನ್ನು ಹೊಂದಿ ಭೋಗ್ಯ ಕಾಮ್ಯಗಳನ್ನು ಅನುಭವಿಸಲು ಉತ್ಸುಕವಾಗಿರುತ್ತದೆ. ಇಂತಹ ಮನಸ್ಸುಗಳು ಅಸಂಖ್ಯಾತವೂ, ಸ್ಮರಣಾರೂಪಿಯಾದ ವಾಸನೆಗಳಿಂದಲೂ, ಚಿತ್ರಿಸಲ್ಪಡುತ್ತವೆ. ಆದರೂ ಮನಸ್ಸಿನ ಅಂತರಾಳದಲ್ಲಿ, ತೋರ ಮನಸ್ಸಿನ ಗಮನಕ್ಕೆ ಬರದೆ, ಬಹಳಷ್ಟು ಕಾರ್ಯಗಳು ನಡೆಯುತ್ತವೆ. ಇವೆಲ್ಲವೂ, ಮನಸ್ಸಿನ ಪ್ರಭುವಾದ, 'ಪುರುಷನ'ನ ಪ್ರಚೋದನೆಯಿಂದ ಸಾಧ್ಯವಾಗಿದೆ. ಹೀಗಾಗಿ ಭೋಗ ಕಾಮ್ಯಗಳಿಂದ ವಿಮುಕ್ತಿಯನ್ನು ಪುರುಷನು ಹೊಂದಿರುತ್ತಾನೆ. ಮನಸ್ಸಿನಲ್ಲಿರುವ ಪ್ರವೃತ್ತಿಗಳೆರಡು ; ನಿತ್ಯೋದಿತ ಮತ್ತು ಅಭಿವ್ಯಂಗ್ಯ ಎನ್ನುವುದರ ವಿವರಣೆಯಿದು.

**ವಿಶೇಷ ದರ್ಶಿನ ಆತ್ಮಭಾವ ಭಾವನಾವಿ ನಿವೃತ್ತಿಃ**

'ಪುರುಷ'ನ ಅರಿವು ಮೂಡಿದ ನಂತರ, ಪುರುಷ ಮತ್ತು ಚಿತ್ತ ಇವುಗಳ ವ್ಯತ್ಯಾಸವನ್ನು ತಿಳಿಯುವ ಆಸೆಯು ನಿವೃತ್ತಿಯಾಗುತ್ತದೆ. ಅನಂತರ ಯಾವ ಆಸೆಯೂ ಉಂಟಾಗುವುದಿಲ್ಲ.

**ತದಾಹಿ ವಿವೇಕ ನಿಮ್ನಂ ಕೈವಲ್ಯ ಪ್ರಾಗ್ಭಾರಂ ಚಿತ್ತಂ**

ಮೇಲೆ ಹೇಳಿದ ಸ್ಥಿತಿಯು ಉಂಟಾದಾಗ, ವಿವೇಕ (Discrimination) ಸ್ಫುಟವಾಗಿ ಮನಸ್ಸು, ಅಥವಾ ಚಿತ್ತವೇ ಎಲ್ಲವೂ ಎಂಬ ಭ್ರಾಂತಿಯು ಹೋಗಿ, ಕೈವಲ್ಯ ಸ್ಥಿತಿಯ ಹೊಸಿಲನ್ನು ದಾಟುತ್ತಾನೆ.

**ತತ್ ಛಿದ್ರೇಶು ಪ್ರತ್ಯಯಾಂತರಾಣಿ ಸಂಸ್ಕಾರೇಭ್ಯಃ**

ಹಾಗಾದರೂ, ಸ್ಮರಣ ಸಂಸ್ಕಾರಗಳಿಂದ, ನನಗೆ ಕೈವಲ್ಯ ಪದವಿಯು ಲಭಿಸಿದೆ ಎಂಬ ಲೌಕಿಕವಾದ ಅಭಿಮಾನವು ತುಸು ಕಾಣಿಸಿಕೊಳ್ಳಬಹುದು.

**ಹಾನ ಮೇಷಂ ಕ್ಲೇಶವತ್ ಉಕ್ತಂ**

ಇಂತಹ ಲೌಕಿಕ ಅಭಿಮಾನವನ್ನು, ಇತರ ಕ್ಲೇಶಗಳನ್ನು ಜ್ಞಾನಾರ್ಜನೆಯಿಂದ ತ್ಯಜಿಸಿದ ಹಾಗೆ, ವಿವೇಕಜ್ಞಾನದಿಂದ ನಿವೃತ್ತಿಗೊಳಿಸಬೇಕು.

**ಪ್ರಸಂಖ್ಯಾನೇಪಿ ಅಕುಸೀದಸ್ಯ ಸರ್ವಥಾ ವಿವೇಕ ಖ್ಯಾತೇಃ**

**ಧರ್ಮ ಮೇಘಃ ಸಮಾಧಿಃ**

ಪ್ರಸಂಖ್ಯಾನ ಎಂದರೆ (Illumination) 'ಪುರುಷ'ನ ಅರಿವಿನಿಂದ ಉಂಟಾಗುವ ಪರಮೋತ್ತಮ ವಿವೇಕ. ಯಾವ ಆಸೆಯನ್ನೂ ಹೊಂದದ ಇಂತಹವರಲ್ಲಿ, ವಿವೇಕದಿಂದಾಗಿ ಸಮಾಧಿಯು ದೊರಕುತ್ತದೆ. ಈ ತೆರನ ಸಮಾಧಿಯನ್ನು 'ಧರ್ಮ ಮೇಘ' ಎನ್ನುತ್ತಾರೆ. ಮೋಡಗಳು ಮಳೆಯನ್ನು

ಸುರಿಸಿ. ಸಸ್ಯಗಳನ್ನು ಪ್ರಚೋದಿಸಿ ಮೊಳಕೆ ಒಡೆದು ಬೆಳೆಸುವಂತೆ, ಈ 'ಧರ್ಮಮೇಘ'ವು 'ಸಮಾಧಿಸ್ಥಿತಿ'ಯನ್ನು ಪ್ರಚೋದಿಸಿ ಬೆಳೆಸಿ ಅಭಿವೃದ್ಧಿಸುತ್ತದೆ.

**ತತಃ ಕ್ಲೇಶ ಕರ್ಮ ನಿವೃತ್ತಿಃ**

'ಧರ್ಮಮೇಘ' ಸಮಾಧಿಯಿಂದ, ಕ್ಲೇಶ ಕರ್ಮಗಳು, ಎಂದರೆ ಅವಿದ್ಯಾ; ಪಾಪಪುಣ್ಯ ಕರ್ಮಗಳೆಂಬ ಭೇದ ; ಇತ್ಯಾದಿಗಳು ನಿವೃತ್ತಿಯಾಗುತ್ತವೆ. ಅಂದರೆ ಯಾವ ಲೌಕಿಕ ಕೆಲಸಗಳನ್ನು ಇಂತಹ ಯೋಗಿಯು ಮಾಡಿದರೂ, ಅವುಗಳ ಫಲಗಳು, ಅವನಿಗೆ ಅಂಟುವುದಿಲ್ಲ. ಇಂತಹ ಯೋಗಿಯು, ಸ್ವಾರ್ಥ ಫಲವೀಯು ವಂತಹ ಕಾರ್ಯಗಳನ್ನು ಮಾಡುವುದೇ ಇಲ್ಲ, ಏಕೆಂದರೆ 'ಆಸೆ'ಯೇ ಇರುವುದಿಲ್ಲವಾದ್ದರಿಂದ.

**ತದಾ ಸರ್ವಾವರಣ ಮಲಾಪೇತಸ್ಯ ಜ್ಞಾನ ಸ್ಯಾನಂತಾತ್ ಜ್ಞೇಯಂ ಅಲ್ಪಂ**

ಸರ್ವಾವರಣ ಮಲಾಪೇತಸ್ಯ, ಎಂದರೆ ಸುತ್ತಲೂ ಆವರಿಸಿಕೊಂಡಿರುವ, ಆಸೆಯಿಂದುಂಟಾದ ಕ್ಲೇಶಗಳು ಮತ್ತು ಕರ್ಮಗಳು, ಈ ಕಲ್ಮಷದಿಂದ ತೊಡೆದು ಹಾಕಲ್ಪಟ್ಟ ಜ್ಞಾನಕ್ಕೆ, ಆನಂತರ ಅರಿಯಬೇಕಾದುದು ಅತ್ಯಲ್ಪವಾಗಿರುತ್ತದೆ. ಅಂದರೆ ರಜಸ್ಸು ಮತ್ತು ತಮ, ಈ ಗುಣಗಳಿಂದ ಬಿಡುಗಡೆಯನ್ನು ಪಡೆದ ಮೇಲೆ, ಸತ್ವ ಗುಣಾಧಿಕ್ಯದಿಂದ, ಅತ್ಯಧಿಕವಾದ ಜ್ಞಾನವನ್ನು ಪಡೆಯಬಹುದು. ಲೌಕಿಕವಾಗಿ ಸಾಮಾನ್ಯ ಮನುಷ್ಯನು ಪಡೆಯುವ ಜ್ಞಾನವು, ಯೋಗಿಯು ಪಡೆಯುವ ಪರಮ ಜ್ಞಾನಕ್ಕೆ ಹೋಲಿಸಿದರೆ, ಅತ್ಯಲ್ಪವಾಗಿರುತ್ತದೆ. Insignificant ಎನ್ನಬೇಕು. ಯೋಗಿಯು ಈ ಹಂತದಲ್ಲಿ ಸರ್ವಜ್ಞನಾಗಿರುತ್ತಾನೆ.

**ತತಃ ಕೃತಾರ್ಥಾನಾಂ ಪರಿಣಾಮಕ್ರಮ ಸಮಾಪ್ತಿಃ ಗುಣಾನಾಂ**

ಧರ್ಮಮೇಘದ ಸಂಪ್ರೋಕ್ಷಣೆಯ ನಂತರ, ಮೂರೂ ಗುಣಗಳ ಚೆಲ್ಲಾಟವು ಸ್ತಬ್ಧವಾಗುತ್ತದೆ. ಅವುಗಳ ನಿಯಮಿತ ಕಾರ್ಯವು ನೆರವೇರಿಸಲ್ಪಟ್ಟಿರುವುದರಿಂದ, ಮೂರು ಗುಣಗಳು, ಸತ್ವ ರಜಸ್ ತಮಗಳು, 'ಪುರುಷ'ನ ; ಮನಸ್ಸಿನ ಪ್ರಭುವಿನ ಆಣತಿಯನ್ನು ನೆರವೇರಿಸಿದ ನಂತರ, ಸ್ತಬ್ಧವಾಗುತ್ತವೆ. ಮಾನವ ಮನಸ್ಸಿನ ಅಂತಹ ಸ್ಥಿತಿಯನ್ನು 'ತ್ರಿಗುಣಾತ್ಮಕ ಪ್ರಧಾನ'ವೆನ್ನುತ್ತಾರೆ. ಆಗ ಚಿತ್ತವು ಶಾಂತಿಯನ್ನು ಪಡೆಯುತ್ತದೆ. ಲೌಕಿಕದಲ್ಲಿ ಇದ್ದು ಬಾಳುತ್ತಿರುವಾಗಲೂ ಕೂಡ.

**ಕ್ಷಣ ಪ್ರತಿಯೋಗೀ ಪರಿಣಾಮಾಪರಾಂತ ನಿರ್ಗಾಹ್ಯ ಕ್ರಮಃ**

ಚಿತ್ತವು ಎಂದರೆ ಮನಸ್ಸು ವೃತ್ತಿಗಳನ್ನು ಹೊಂದುವಾಗ, ವೃತ್ತಿಯೊಂದೊಂದಕ್ಕೂ ಕಾಲಾವಧಿಯು ಇರಬೇಕು. ಅತ್ಯಂತ ಸೂಕ್ಷ್ಮವೂ, ವಿಭೇದಿಸಲಾಗದದೂ ಆದ ಕಾಲಾವಧಿಯನ್ನು ಸಾಂಖ್ಯಕಾರರು 'ಕ್ಷಣ' ಎಂದು

ಹೆಸರಿಸಿದ್ದರು. ಕ್ಷಣ ಕ್ಷಣವೂ ಆಗುವ ಮನಸ್ಸಿನ ಕ್ರಮವಾದ ಪರಿವರ್ತನೆಯನ್ನು, ಪರಿಣಾಮವಾದ ಮೇಲೆ ಗ್ರಹಿಸಲು, ಅಥವಾ ತಿಳಿಯಲು ಸಾಧ್ಯ. ದೈನಂದಿನ ಲೋಕಾನುಭವವು ಇದಕ್ಕೆ ಸಾಕ್ಷಿ.

**ಪುರುಷಾರ್ಥ ಶೂನ್ಯಾನಾಂ ಗುಣಾನಾಂ ಪ್ರತಿ ಪ್ರಸವಃ ಕೈವಲ್ಯಂ**
**ಸ್ವರೂಪ ಪ್ರತಿಷ್ಠಾ ವಾ ಚಿತಿ ಶಕ್ತಿಃ ಇತಿ**

ಪುರುಷಾರ್ಥವೆಂಬುದು, ತ್ರಿಗುಣಗಳು ಶೂನ್ಯವಾದಾಗ ಲಭಿಸುವ ಅರಿವು. ಇದರಿಂದ ಕೈವಲ್ಯವು, ಅಂದರೆ, ಆದಿ ಮೂಲವಾದ ಸ್ವ ಸ್ವರೂಪವು, ಸಾಕ್ಷಾತ್ ಆಗುತ್ತ, ಲಭಿಸುತ್ತದೆ. ಚಿತಿಶಕ್ತಿ ಅಥವಾ ಮನಸ್ಸೆಂಬ ಶಕ್ತಿಯನ್ನು, ವಿವೇಕ ಜ್ಞಾನದ ಮೂಲಕ ಬಳಸುವುದರಿಂದ, ಶಾಶ್ವತವಾದ, ತ್ರಿಗುಣಾತೀತವಾದ, ಕೈವಲ ಸ್ಥಿತಿಯನ್ನು ಲಭಿಸಿಕೊಳ್ಳಬಹುದು. ಕೈವಲ್ಯವೇ ಪುರುಷಾರ್ಥದ ಹೆಗ್ಗುರಿ.

ಓಂ ಶ್ಶಾಂತಿ, ಶ್ಶಾಂತಿ, ಶ್ಶಾಂತಿಃ